# ಭಕ್ತಿಮಾರ್ಗದಲ್ಲಿ ಮಹಿಳಾ ಕೀರ್ತನಕಾರರು

(ಪಿಎಚ್.ಡಿ. ಪದವಿಗಾಗಿ ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಮಹಾಪ್ರಬಂಧ)


ಸಂಶೋಧಕರು

ಕೆ.ಜಿ.ರುಕ್ಮಿಣಿ

ಮಾರ್ಗದರ್ಶಕರು

ಡಾ.ಮಂಜುನಾಥ ಬೇವಿನಕಟ್ಟಿ

ಪ್ರಾಧ್ಯಾಪಕರು

ಜಾನಪದ ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ







ಜಾನಪದ ಅಧ್ಯಯನ ವಿಭಾಗ

ಸಮಾಜ ವಿಜ್ಞಾನಗಳ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬

೨೦೧೨

# ಭಕ್ತಿಮಾರ್ಗದಲ್ಲಿ ಮಹಿಳಾ ಕೀರ್ತನಕಾರರು

(ಪಿಎಚ್.ಡಿ. ಪದವಿಗಾಗಿ ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಮಹಾಪ್ರಬಂಧ)

ಸಂಶೋಧಕರು
ಕೆ.ಜೆ.ರುಕ್ಮಿಣಿ

ಮಾರ್ಗದರ್ಶಕರು
ಡಾ.ಮಂಜುನಾಥ ಬೇವಿನಕಟ್ಟಿ
ಪ್ರಾಧ್ಯಾಪಕರು
ಜಾನಪದ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ



ಜಾನಪದ ಅಧ್ಯಯನ ವಿಭಾಗ
ಸಮಾಜ ವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬
೨೦೧೨



ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

## ಪ್ರಮಾಣ ಪತ್ರ

ಭಕ್ತಿಮಾರ್ಗದಲ್ಲಿ ಮಹಿಳಾ ಕೀರ್ತನಕಾರರು ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಲು ಡಾ.ಮಂಜುನಾಥ ಬೇವಿನಕಟ್ಟಿ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಲಾಗಿದೆ. ಈ ಸಂಶೋಧನ ಮಹಾಪ್ರಂಧವನ್ನು ಇಡಿಯಾಗಿ ಇಲ್ಲವೆ ಇದರ ಯಾವುದೇ ಭಾಗವನ್ನು ಈ ಮೊದಲು ಯಾವುದೇ ಪದವಿ ಅಥವಾ ಇತರೆ ಉದ್ದೇಶಗಳಿಗೆ ಬಳಸಿಕೊಂಡಿಲ್ಲವೆಂದು ಈ ಮೂಲಕ ಪ್ರಮಾಣೀಕರಿಸುತ್ತೇನೆ.

ಸಂಶೋಧಕರು
ಕೆ.ಜಿ.ರುಕ್ಮಿಣಿ
ಜಾನಪದ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩೨೭೬

ಸ್ಥಳ: ವಿದ್ಯಾರಣ್ಯ
ದಿನಾಂಕ:



**ಕನ್ನಡ ವಿಶ್ವವಿದ್ಯಾಲಯ, ಹಂಪಿ**
**ವಿದ್ಯಾರಣ್ಯ ೫೮೩ ೨೭೬**

---

## ದೃಢೀಕರಣ ಪತ್ರ

ಶ್ರೀಮತಿ ಕೆ.ಜೆ.ರುಕ್ಮಿಣಿ ಅವರು **ಭಕ್ತಿಮಾರ್ಗದಲ್ಲಿ ಮಹಿಳಾ ಕೀರ್ತನಕಾರರು** ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಲು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿರುತ್ತಾರೆ. ಈ ಮಹಾಪ್ರಬಂಧದ ಸಮಗ್ರ ವಿಷಯವನ್ನು ಅಥವಾ ಇದರ ಯಾವುದೇ ಭಾಗವನ್ನು ಈ ಮೊದಲು ಯಾವುದೇ ಪದವಿಗಾಗಲಿ ಅಥವಾ ಇತರೆ ಉದ್ದೇಶಗಳಿಗಾಗಲಿ ಇವರು ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ಮಾರ್ಗದರ್ಶಕರು

ಡಾ.ಮಂಜುನಾಥ ಬೇವಿನಕಟ್ಟಿ
ಪ್ರಾಧ್ಯಾಪಕರು
ಜಾನಪದ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩೨೭೬

ಸ್ಥಳ: ವಿದ್ಯಾರಣ್ಯ
ದಿನಾಂಕ:

# ಭಕ್ತಿಮಾರ್ಗದಲ್ಲಿ ಮಹಿಳಾ ಕೀರ್ತನಕಾರರು

# ಅಧ್ಯಾಯ-ಒಂದು

## ೧ ಅಧ್ಯಯನದ ವಸ್ತು

### ೧.೧. ಪೀಠಿಕೆ:

ಭಗವಂತನನ್ನು ಒಲಿಸಿಕೊಳ್ಳಲು ಭಕ್ತಿಯು ನೇರ ಹಾಗು ಸುಲಭ ಮಾರ್ಗ. ಭಕ್ತಿಯೆಂಬುದು ಒಂದು ಭಾವ. ನಾರದ ಭಕ್ತಿ ಸೂತ್ರವು 'ಸಾತ್ವಸ್ಮಿನ್ ಪರ(ಮ) ಪ್ರೇಮರೂಪಾ:' (ಭಕ್ತಿಯು ಪರಮ ಪ್ರೇಮ ಸ್ವರೂಪವಾದುದು) ಎಂದು ಹೇಳಿದೆ. ಶ್ರೀಕೃಷ್ಣನು ಭಗವದ್ಗೀತೆಯಲ್ಲಿ 'ಮಮಪ್ರಾಣಾಹಿ ಪಾಂಡವಾಹಃ' (ಪಾಂಡವರು ನನ್ನ ಪ್ರಾಣ) ಎನ್ನುತ್ತಾನೆ. ಇದು ಭಗವಂತನು ಭಕ್ತನಿಗೆ ಕೊಟ್ಟಿರುವ ಸ್ಥಾನ. ಭಕ್ತನು ಭಗವಂತನನ್ನು ಸೇರುವ ಹಂಬಲದಲ್ಲಿ ಆರಂಭವಾದದ್ದೇ ಭಕ್ತಿಪಂಥ.

ನಾವು, ಭಗವಂತನೂ ಬೇರೆ ಬೇರೆ ಅಥವಾ ನಾವೂ ಭಗವಂತನ ಅಂಶ ಅಥವಾ ನಾವೇ ಭಗವಂತ ಎನ್ನುವ ಭಾವಗಳು, ಭಗವಂತನಲ್ಲಿ ಶರಣಾಗುವುದರ ಜೊತೆಗೆ ತಾನೇ ಸೃಷ್ಟಿಸಿಕೊಂಡಿರುವ ಲೌಕಿಕ ಸಂಬಂಧಗಳಂತೆಯೇ ಭಗವಂತನೊಡನೆಯೂ ವ್ಯವಹರಿಸಿರುವುದರಿಂದ ಭಕ್ತಿ ಸಾಹಿತ್ಯ ರಚನೆಯಾಯಿತು. ಭಕ್ತರನ್ನು ಉದ್ಧರಿಸಲು ಭಗವಂತನು ದಶಾವತಾರಗಳನ್ನು ಎತ್ತಿರುವುದು ಭಕ್ತಿ ಸಾಹಿತ್ಯವು ವಿಫುಲವಾಗಿ, ವೈವಿಧ್ಯಮಯವಾಗಿ ಬೆಳೆಯಲು ಪುಷ್ಟಿ ನೀಡಿತು. ಕರ್ನಾಟಕದಲ್ಲಿ ಹನ್ನೆರಡನೆಯ ಶತಮಾನದಲ್ಲಿ ಶಿವಶರಣರು ವಚನಗಳಲ್ಲಿ ಅನುಭಾವದ ದಿವ್ಯಶಕ್ತಿಯನ್ನು ಹೊತ್ತು ತಂದರು. ಭಾಷೆ, ಭಾವ, ತತ್ವ, ಸರಳತೆಯ ದೃಷ್ಟಿಯಿಂದ ಕನ್ನಡ ಸಾಹಿತ್ಯದಲ್ಲಿ ಕ್ರಾಂತಿಯನ್ನುಂಟುಮಾಡಿದರು.

ಶಂಕರ, ರಾಮಾನುಜ ಹಾಗು ಮಧ್ವರ ಬೋಧನೆಗಳು, ಭಕ್ತಿಸೂತ್ರಗಳು, ಭಾಗವತ, ಪುರಾಣಗಳು ಭಕ್ತಿಗೆ ಆಧಾರ ಗ್ರಂಥಗಳು. ಅದರಂತೆ ಮಧ್ವಾಚಾರ್ಯ ವಿರಚಿತ 'ಓಂ ನಮೋ ಭಗವತೇ ವಾಸುದೇವಾಯ' ಎಂಬ ದ್ವಾದಶ ಸ್ತೋತ್ರವು ಹರಿದಾಸ ಸಾಹಿತ್ಯದ ಗಂಗೋತ್ರಿಯೇ ಆಯಿತು.

ಕರ್ನಾಟಕವು ವಿವಿಧ ಭಕ್ತಿಪಂಥಗಳ ನೆಲೆ. ಹಲವು ಕಾಲದಿಂದಲೂ ವಿವಿಧ ಧರ್ಮ, ಧರ್ಮೋಪದೇಶಕರು, ಮಹಾತ್ಮರು ಇಲ್ಲಿ ಜನಿಸಿದ್ದಾರೆ. ಜೀವನ ಮೌಲ್ಯಗಳನ್ನು ಎತ್ತಿಹಿಡಿದು ಸಮಾಜದ ಉನ್ನತಿಗೆ ಶ್ರಮಿಸಿದ್ದಾರೆ. ವೇದೋಪನಿಷತ್ತುಗಳು ಸಂಸ್ಕೃತದಲ್ಲಿ ತತ್ವೋಪದೇಶ ಮಾಡುತ್ತಿದ್ದ ಕಾಲದಲ್ಲಿ ಎಲ್ಲ ವರ್ಗದ ಜನರಿಗೂ ನಿಲುಕದಂತಾಗಿದ್ದವು. ಹೀಗಿರುವಾಗ ಕನ್ನಡ ದಾಸಸಾಹಿತ್ಯವು ವೇದಾಂತ ಸಾರತತ್ವವನ್ನು ಸರಳವಾಗಿ, ಸುಲಭವಾಗಿ ಅರ್ಥವಾಗುವಂತೆ ಬೋಧಿಸಲಾರಂಭಿಸಿತು. ವಿಜಯನಗರದ ಅರಸರ ಕಾಲವು ದಾಸಸಾಹಿತ್ಯದ ಚೈತ್ರಕಾಲ. ಕರ್ನಾಟಕದ ಪ್ರಥಮ ಹರಿದಾಸರು

ನರಹರಿತೀರ್ಥರೋ, ಶ್ರೀಪಾದರಾಜರೋ, ಅಚಲಾನಂದರೋ ಯಾರೆಂಬುದರ ಬಗ್ಗೆ ಭಿನ್ನಾಭಿಪ್ರಾಯಗಳಿವೆ. ಶ್ರೀಪಾದರಾಜರು (ಸು. ೧೪೨೨) ಕನ್ನಡದಲ್ಲಿ ಕೀರ್ತನೆಗಳನ್ನು ಮೊದಲ ಬಾರಿಗೆ ರಚಿಸಿದವರು.

ದಾಸಸಾಹಿತ್ಯ ಸಂಶೋಧಕರಾದ ಡಾ.ಆರ್.ಎಸ್.ಪಂಚಮುಖಿಯವರು 'ಕರ್ನಾಟಕ ಹರಿದಾಸ ಸಾಹಿತ್ಯ' ಕೃತಿಯಲ್ಲಿ ದಾಸಸಾಹಿತ್ಯವನ್ನು ನಾಲ್ಕು ಹಂತಗಳಾಗಿ ವಿಭಾಗಿಸಿದ್ದಾರೆ.

೧. ಶ್ರೀಮಧ್ವಾಚಾರ್ಯರು, ಅವರ ಶಿಷ್ಯರಾದ ನರಹರಿತೀರ್ಥರು (೧೨-೧೩ನೇ ಶತಮಾನ)

೨. ಪುರಂದರದಾಸರ ಗುಂಪು (೧೩ರಿಂದ ೧೬ನೇ ಶತಮಾನ)

೩. ವಿಜಯದಾಸರು, ಮೋಹನದಾಸರು, ಜಗನ್ನಾಥದಾಸರು

೪. ಪ್ರಾಣೇಶದಾಸರು, ಗುರು ಪ್ರಾಣೇಶದಾಸರು

ಇವರು ಗುರುತಿಸಿರುವ ನಾಲ್ಕನೆಯ ಘಟ್ಟದಲ್ಲಿ ಗುರುತಿಸಬಹುದಾದಂತಹ ಸಾಹಿತ್ಯ ರಚನೆಯು, ವೈವಿಧ್ಯತೆಯು ಕಂಡುಬರುವುದಿಲ್ಲ.

ರಂ.ಶ್ರೀ. ಮುಗಳಿಯವರ 'ಕನ್ನಡ ಸಾಹಿತ್ಯ ಚರಿತ್ರೆ'ಯಲ್ಲಿ ಕರ್ನಾಟಕ ಹರಿದಾಸರ ಪರಂಪರೆಯನ್ನು ಅಧ್ಯಯನ ದೃಷ್ಟಿಯಿಂದ ನಾಲ್ಕು ಘಟ್ಟಗಳಾಗಿ ವಿಭಾಗಿಸಿಕೊಳ್ಳಲಾಗಿದೆ.

ಕೇಶವದಾಸರು ಅಭಿಪ್ರಾಯಪಡುತ್ತಾರೆ.

ಈ ಎಲ್ಲ ಘಟ್ಟಗಳು ಹರಿದಾಸ ಸಾಹಿತ್ಯದ ಅಧ್ಯಯನ ಅನುಕೂಲಕ್ಕಾಗಿ ಮಾತ್ರ ಎಂಬುದನ್ನು ಗಮನಿಸಬೇಕು. ಇಂಥ ವಿಭಜನೆಗೆ ಹರಿದಾಸರ ಕಾಲ, ಸಾಹಿತ್ಯದ ವಿಪುಲತೆಗಳು ಮಾನದಂಡವಾಗುತ್ತವೆ.

ವಿಜಯನಗರದ ರಕ್ಕಸತಂಗಡಿಯ ಕಾಳಗದ ನಂತರ (ಕ್ರಿ.ಶ.೧೫೬೫) ವಿಜಯನಗರ ಸಾಮ್ರಾಜ್ಯ ಪತನದಿಂದಾಗಿ ಹರಿದಾಸರು ನಿರಾಶ್ರಿತರಾದರು. ಹಿಂದೂ ಧರ್ಮಕ್ಕೆ ಆಪತ್ತು ಬಂದಿತು. ಇಂಥ ಕಾಲದಲ್ಲಿ ಮಂತ್ರಾಲಯದ ಶ್ರೀರಾಘವೇಂದ್ರ ಸ್ವಾಮಿಗಳ ಆಶ್ರಯದಲ್ಲಿ ದಾಸಸಾಹಿತ್ಯಕ್ಕೆ ನೆಲೆ ದೊರೆಯಿತು. ನಂತರ ಒಂದೂವರೆ ಶತಮಾನಗಳ ಕಾಲ ಮಸುಕಾಗಿದ್ದ ದಾಸ ಸಾಹಿತ್ಯ ಮತ್ತೆ ವಿಜಯದಾಸರು, ಗೋಪಾಲದಾಸರು ಮತ್ತು ಜಗನ್ನಾಥ ದಾಸರ ಮೂಲಕ ಪ್ರಕಾಶಗೊಂಡಿತು. ಇವರ ನಡುವೆ ಹದಿನೇಳನೇ ಶತಮಾನದಲ್ಲಿಯೇ ವಿಜಯದಾಸರ ಸಮಕಾಲೀನರಾಗಿ ಗಲಗಲಿಅವ್ವ ಎಂಬ ಮಹಿಳಾಕೀರ್ತನಕಾರ್ತಿ ಕಂಡುಬರುತ್ತಾರೆ. ಇವರನ್ನು ಪ್ರಥಮ ಮಹಿಳಾ ಕೀರ್ತನಕಾರರೆಂದು ಗುರುತಿಸಲಾಗಿದೆ. ಹಾಗಾಗಿ ಮಹಿಳಾಕೀರ್ತನಕಾರರ ಅಧ್ಯಯನವು ಗಲಗಲಿ ಅವ್ವನವರಿಂದ ಪ್ರಾರಂಭವಾಗುತ್ತದೆ. ಈ ಪರಂಪರೆಯಲ್ಲಿ ಹೆಳವನಕಟ್ಟೆ ಗಿರಿಯಮ್ಮ, ಹರಪನಹಳ್ಳಿ ಭೀಮವ್ವ, ಯದುಗಿರಿಯಮ್ಮ, ನಾಡಿಗರ ಶಾಂತಾಬಾಯಿ, ಓರಾಬಾಯಿ ಲಕ್ಷ್ಮಿದೇವಮ್ಮ, ಸರಸೀಬಾಯಿ, ನಂಜನಗೂಡು ತಿರುಮಲಾಬಾಯಿ, ಬಳ್ಳಾರಿಯ ರಾಧಾಬಾಯಿ, ನಿಡಗುರಕಿಯ ಜೀವೂಬಾಯಿ, ಗುಂಡಮ್ಮ ಮುಂತಾದವರು ಕಾಣಸಿಗುತ್ತಾರೆ. ಇವರೊಂದಿಗೆ ಗಲಗಲಿಯ ಅವ್ವನವರ ಶಿಷ್ಯರಾದ

ಚ.ರಾ.ಚಲ್ಲಮ್ಮ, ಭಾಗಮ್ಮ (ಪ್ರಯಾಗಮ್ಮ), ಗಣಪಕ್ಕ, ಸುಂದರಬಾಯಿ, ಪನ್ನಿ ಲಕ್ಷ್ಮೀಬಾಯಿಯವರ ಹೆಸರು ಕೇಳಿ ಬರುತ್ತದೆ.

ಗಲಗಲಿಅವ್ವನವರು ಮುಯ್ಯದ ಹಾಡುಗಳು ಮತ್ತು ಜೋಗುಳದ ಹಾಡುಗಳನ್ನು ಬರೆದರೆ, ಗಿರಿಯಮ್ಮ ಆತ್ಮನಿವೇದನೆಯ ಹಾಡುಗಳು, ಹರಿಹರ ಭಾವ ತಾರತಮ್ಯ, ಕ್ಷೇತ್ರ ಮೂರ್ತಿಗಳು ಹಾಗೂ ಪುರಾಣಕಥೆಗಳನ್ನಾಧರಿಸಿ ಕಾವ್ಯಗಳನ್ನು ರಚನೆ ಮಾಡಿದ್ದಾರೆ. ಅವ್ವನವರನ್ನು ಗಿರಿಯಮ್ಮ ಅನುಸರಿಸಿದಂತೆ ಕಾಣುವುದಿಲ್ಲ. ಗೋಪಾಲದಾಸರ ಶಿಷ್ಯಪರಂಪರೆಗೆ ಸೇರಿದವರಾದ್ದರಿಂದ ಹಾಗು ಕಾಲದ ಅಂತರವಿರುವುದರಿಂದ ಅವ್ವನವರ ಪ್ರಭಾವ ಗಿರಿಯಮ್ಮನಲ್ಲಿ ಕಾಣಿಸುವುದಿಲ್ಲ. ಗಿರಿಯಮ್ಮ ಅವ್ವನವರಿಗಿಂತಲೂ ವೈವಿಧ್ಯಮಯ ಬಿಡಿ ಕೀರ್ತನೆಗಳನ್ನು ಹಾಗೂ ಕಥನ ಕೀರ್ತನೆಗಳನ್ನು ರಚಿಸಿ ಸ್ವಂತಿಕೆ ಮೆರೆದಿದ್ದಾಳೆ. ಇದು ಮುಂದುವರಿಕೆಯ ಹಂತ ಎಂದು ಪರಿಗಣಿಸಿದ್ದೇನೆ.

ಹರಪನಹಳ್ಳಿ ಭೀಮವ್ವನವರು ಗಿರಿಯಮ್ಮನವರ ವೈವಿಧ್ಯಮಯ ರಚನೆಗಳನ್ನು ಅನುಸರಿಸಿರುವುದರ ಜೊತೆಗೆ ವ್ರತಕಥೆಗಳನ್ನು ಹಾಡಾಗಿಸಿರುವುದು ಇವರ ಕೃತಿಗಳ ವೈಶಿಷ್ಟ್ಯತೆ. ಸಂಪ್ರದಾಯದ ಹಾಡುಗಳ ಜೊತೆಗೆ ಮುಂದಿನ ಕೀರ್ತನಕಾರರು ಭೀಮವ್ವನವರನ್ನು ಅನುಸರಿಸಿದ್ದಾರೆ. ನಂಜನಗೂಡು ತಿರುಮಲಾಂಬನವರು ಮತ್ತು ಯದುಗಿರಿಯಮ್ಮನವರು ವೈಷ್ಣವ ಸಂಪ್ರದಾಯ ಅನುಸರಿಸಿ ಶ್ರೀವೈಷ್ಣವ ಪಾರಿಭಾಷಿಕ ಪದಗಳನ್ನೇ ಬಳಸಿ ಕೃತಿ ರಚಿಸಿರುವುದನ್ನು ಬಿಟ್ಟರೆ, ಹರಪನಹಳ್ಳಿ ಭೀಮವ್ವನವರಿಗಿಂತ ಭಿನ್ನವಾಗಿ ನಿಲ್ಲುವುದಿಲ್ಲ. ಆಧುನಿಕ ಉಪಮೆಗಳನ್ನು ಬಳಸಿರುವುದರಲ್ಲಿ ಭಿನ್ನತೆ ಕಾಣಬಹುದು. ಆದ್ದರಿಂದ ಭೀಮವ್ವನವರ ರಚನೆಗಳು ಬೆಳವಣಿಗೆಯ ಹಂತ ಎಂದು ಗುರುತಿಸಿಕೊಂಡಿದೆ.

ಹೀಗೆ ಒಬ್ಬರೇ ಮಹಿಳಾ ಕೀರ್ತನಕಾರರು ಒಂದು ಕಾಲಘಟ್ಟವನ್ನು ಆಳುವಷ್ಟು ಸಮರ್ಥರೇ ಎಂಬ ಪ್ರಶ್ನೆಯನ್ನು ಗಮನದಲ್ಲಿಟ್ಟುಕೊಂಡೇ ಮಹಿಳಾ ಕೀರ್ತನಕಾರರನ್ನು ಅಧ್ಯಯನದ ದೃಷ್ಟಿಯಿಂದ, ಕೃತಿ ರಚನೆಯ ವೈವಿಧ್ಯತೆಯ ಆಧಾರದಿಂದ ಮೂರು ಹಂತಗಳನ್ನಾಗಿ ವಿಭಾಗಿಸಿದೆ.

ಮೊದಲ ಹಂತ – ಗಲಗಲಿ ಅವ್ವ.

ಮುಂದುವರಿಕೆ ಹಂತ – ಹೆಳವನಕಟ್ಟೆ ಗಿರಿಯಮ್ಮ

ಬೆಳವಣಿಗೆ ಹಂತ – ಹರಪನಹಳ್ಳಿ ಭೀಮವ್ವ ಮತ್ತು ಇತರರು.

**೧.೨. ಉದ್ದೇಶ ಮತ್ತು ವ್ಯಾಪ್ತಿ**

ಸಾಹಿತ್ಯವನ್ನು ಪುರುಷರ ಸಾಹಿತ್ಯ ಮತ್ತು ಮಹಿಳೆಯರ ಸಾಹಿತ್ಯ ಎಂದು ವಿಭಜಿಸುವುದು ಸರಿಯಲ್ಲ. ಆದರೂ ದಾಸಸಾಹಿತ್ಯದಲ್ಲಿ ಮಹಿಳಾಕೀರ್ತನಕಾರರು ಮತ್ತು ಅವರ ಕೃತಿಗಳು ಅವಜ್ಞೆಗೆ ಗುರಿಯಾಗಿರುವ ಈ ಕಾಲದಲ್ಲಿ ದಾಸಸಾಹಿತ್ಯ ಪರಂಪರೆಗೆ ಮಹಿಳಾಕೀರ್ತನಕಾರರ ವಿಶಿಷ್ಟ ಕೊಡುಗೆಯನ್ನು ಅವರು ರಚಿಸಿರುವ ಸಾಹಿತ್ಯವನ್ನು ನಿಯಂತ್ರಿಸುವ ಅಂಶಗಳೊಂದಿಗೆ ವಿವೇಚನೆಯಿಂದ ಪರಿಶೀಲಿಸಬೇಕಾದ ಅಗತ್ಯವಿದೆ ಎಂದು ನನಗನ್ನಿಸುತ್ತದೆ.

ಹದಿನಾರನೆಯ ಶತಮಾನದಿಂದಲೂ ಮಹಿಳಾ ಕೀರ್ತನಕಾರ್ತಿಯರು ರಚನೆಯಲ್ಲಿ ತೊಡಗಿದ್ದರೂ ಇಪ್ಪತ್ತನೆಯ ಶತಮಾನದ ಸಾಹಿತ್ಯ ಚರಿತ್ರೆಯಲ್ಲೂ ಹೆಳವನಕಟ್ಟೆ ಗಿರಿಯಮ್ಮ ಮತ್ತು ಹರಪನಹಳ್ಳಿ ಭೀಮವ್ವನವರ ಹೆಸರು ಮಾತ್ರ ಕೇಳಿ ಬರುತ್ತಿದೆ. ಮೊದಲ ಕೀರ್ತನಕಾರ್ತಿ ಗಲಗಲಿ ಅವ್ವನವರ ಹೆಸರು ಕೇಳಿಬರುವುದಿಲ್ಲ. ಗಲಗಲಿ ಅವ್ವನವರ ನಂತರ ಹದಿನೆಂಟನೆಯ ಶತಮಾನದ ಪೂರ್ವಾರ್ಧದಲ್ಲಿ ಹೆಳವನಕಟ್ಟೆ ಗಿರಿಯಮ್ಮನವರೆಗೂ ಯಾವ ಮಹಿಳಾಕೀರ್ತನಕಾರರ ಹೆಸರೂ ದಾಖಲಾಗಿಲ್ಲ. ಗಿರಿಯಮ್ಮನ ನಂತರ ದೀರ್ಘಕಾಲ ಅವಜ್ಞೆಗೆ ಗುರಿಯಾದ ಕೀರ್ತನಕಾರ್ತಿ ಹರಪನಹಳ್ಳಿ ಭೀಮವ್ವ.

೧೯೨೯ರಲ್ಲಿ ಪ್ರಕಟವಾದ 'ಕರ್ನಾಟಕ ಕವಿ ಚರಿತ್ರೆ'ಯ ಮೂರನೆಯ ಸಂಪುಟದಲ್ಲಿ ಗಿರಿಯಮ್ಮನ ಹೆಸರು ಮಾತ್ರ ಪ್ರಸ್ತಾಪಿಸಲಾಗಿದೆ. ಭೀಮವ್ವನವರ ಹೆಸರು ಪ್ರಸ್ತಾಪವಾಗಿಲ್ಲ.

೧೯೬೩ರಲ್ಲಿ ಪ್ರಕಟವಾದ ಬೇಲೂರು ಕೇಶವದಾಸರ 'ಭಕ್ತವಿಜಯ'ದಲ್ಲಿ ಹೆಳವನಕಟ್ಟೆ ಗಿರಿಯಮ್ಮನವರ ಹೆಸರು ಮಾತ್ರ ಪ್ರಸ್ತಾಪಿಸಲಾಗಿದೆ.

೧೯೬೪ರಲ್ಲಿ ಪ್ರಕಟವಾದ ಡಾ.ಸರೋಜಿನಿ ಮಹಿಷಿಯವರು ಬರೆದ 'ಕರ್ನಾಟಕ ಕವಯಿತ್ರಿಯ'ರು ಎನ್ನುವ ಸಂಶೋಧನಾತ್ಮಕ ಪ್ರಬಂಧದಲ್ಲಿ ಹರಪನಹಳ್ಳಿ ಭೀಮವ್ವನವರನ್ನು ಪ್ರಧಾನವಾಗಿ, ಜೊತೆಗೆ ಕೆಲವು ಅಜ್ಞಾತ ಕವಯಿತ್ರಿಯರನ್ನೂ ಗುರುತಿಸಿದ್ದಾರೆ.

೧೯೭೫ರಲ್ಲಿ ಬೆಂಗಳೂರು ವಿಶ್ವವಿದ್ಯಾಲಯವು ಪ್ರಕಟಿಸಿದ 'ಸಾಮಾನ್ಯರಿಗೆ ಸಾಹಿತ್ಯ ಚರಿತ್ರೆ'ಕೀರ್ತನಕಾರರು, (ಪುಟ.೪೬)ಯಲ್ಲಿ ಹೆಳವನಕಟ್ಟೆ ಗಿರಿಯಮ್ಮನವರ ಹೆಸರು ಮಾತ್ರ ಪ್ರಸ್ತಾಪಿಸಲಾಗಿದೆ.

'ಕತ್ಲೆ ರಾಯನ ಪತ್ನಿಯೀ ಸುಪುತ್ರನ್ನ ಪಡೆಯಲು' ಎನ್ನುವುದು ಓರಬಾಯಿ ಲಕ್ಷ್ಮಿದೇವಿಯವರು ಬರೆದ 'ದಿವಸಿ ವ್ರತ'ದ ಹಾಡು. ಹಾಸನ, ದಾವಣಗೆರೆ ಪ್ರಾಂತ್ಯದಲ್ಲಿ ಸಂಪ್ರದಾಯದ ಹಾಡಾಗಿ ಹೆಣ್ಣುಮಕ್ಕಳ ಬಾಯಲ್ಲಿ ಈ ಹಾಡು ನಲಿಯುತ್ತಿದ್ದರೂ ಅದನ್ನು ಬರೆದವರು ಯಾರೆಂದು ತಿಳಿಯದು. ಕೋಲಾರ ಪ್ರಾಂತ್ಯದಲ್ಲಿ 'ಗಣಪತಿ ಎನ್ನ ಪಾಲಿಸೋ' ಎನ್ನುವ ಅಂಬಾಬಾಯಿವರ ಕೀರ್ತನೆಯನ್ನು ದೇವರನಾಮವಾಗಿ ಹಾಡುತ್ತಿದ್ದರೂ 'ವೆಂಕಟವಿಠಲ' ಎಂಬ ಅಂಕಿತದ ಬಗ್ಗೆ ಕುತೂಹಲವಿಲ್ಲ. ಇವು ದಾಸಸಾಹಿತ್ಯದಲ್ಲಿ ಮಹಿಳೆಯರ ರಚನೆಗಳು ಅವಜ್ಞೆಗೆ ಗುರಿಯಾಗಿರುವುದಕ್ಕೆ ಒಂದೆರಡು ಉದಾಹರಣೆಗಳಷ್ಟೆ. ಹರಿದಾಸರ ಕೀರ್ತನೆಗಳ ನಡುವೆ ಮಹಿಳಾಕೀರ್ತನಕಾರರ ಕೀರ್ತನೆಗಳು ಸೇರಿಹೋಗಿವೆ.

'ಲೋಕಪ್ರಿಯ, ಲೋಕದುನ್ನತಿಯ ಕಾರ್ಯಗಳು ಸ್ತ್ರೀಯರ ಸಹಭಾಗಿತ್ವವಿಲ್ಲದೆ ಪರಿಪೂರ್ಣವೂ, ಸಮಗ್ರವೂ ಆಗಲಾರದು. ಹಾಗಾಗಿ ಸ್ತ್ರೀಯರನ್ನು ನಿಷೇಧಿಸಿಯೋ, ನಿರ್ಬಂಧಿಸಿಯೋ ಇಲ್ಲವೇ ಬಹಿಷ್ಕರಿಸಿಯೋ ರೂಪಿಸಿದ ಯಾವುದೇ ಮಾರ್ಗ, ಚಳುವಳಿಗಳು ಪುರೋಗಾಮಿಯಲ್ಲ, ಪ್ರತಿಗಾಮಿ'[1] ಅದಕ್ಕಾಗಿ ದಾಸಸಾಹಿತ್ಯ ಎಂದರೆ ಮಹಿಳಾ ಕೀರ್ತನಕಾರರನ್ನು ಒಳಗೊಂಡಂತೆ ಇಡಿಯಾದ ಕಲ್ಪನೆಯೊಂದು ಮೂಡಬೇಕಾದ ಅನಿವಾರ್ಯತೆ ಇದೆ.

'ಮಹಿಳಾ ಸಾಹಿತ್ಯ' ಎನ್ನುವ ಯಾವ ಮೀಸಲಾತಿಯ ನೆಲೆಯಲ್ಲೂ ಇವರ ಕೃತಿಗಳನ್ನು ನೋಡುವ ಕೃಪಾದೃಷ್ಟಿ ಬೇಕಿಲ್ಲ. ಈಗಾಗಲೇ ಡಾ.ಗಾಯಿತ್ರಿ ನಾವಡ (ಮಹಿಳಾ ಸಂಕಥನ), ಡಾ.ಹಾಲತಿ ಸೋಮಶೇಖರ್(ಮಹಿಳಾ ಚಳುವಳಿ: ಸಾಮಾಜಿಕ ಮತ್ತು ಸಾಂಸ್ಕೃತಿಕ ಹಿನ್ನೆಲೆ), ಡಾ.ಸರೋಜಿನಿ ಮಹಿಷಿ (ಕರ್ನಾಟಕದ ಕವಯಿತ್ರಿಯರು) ಮುಂತಾದವರು ತಮ್ಮ ಕೃತಿಗಳಲ್ಲಿ ಮಹಿಳಾಕೀರ್ತನಕಾರರ ಅಧ್ಯಯನದ ಅನಿವಾರ್ಯತೆಯನ್ನು ಗಟ್ಟಿಯಾದ ಧ್ವನಿಯಲ್ಲಿ ಹೇಳಿದ್ದಾರೆ.

ಹಣಮಂತ ತಾಸಗಾಂವಕರ (ಗಲಗಲಿ ಅವ್ವನವರು), ಟಿ.ಕೆ.ಇಂದೂಬಾಯಿ (ಹೆಳವನಕಟ್ಟೆ ಗಿರಿಯಮ್ಮ), ಡಾ.ಟಿ.ಎನ್.ನಾಗರತ್ನ (ಹರಪನಹಳ್ಳಿ ಭೀಮವ್ವನವರ ಹಾಡುಗಳು), ರುಕ್ಮಿಣಿ ಗಿರಿಮಾಜಿ (ಓರಾಬಾಯಿ ಲಕ್ಷ್ಮಿದೇವಮ್ಮನವರ ಜೀವನ ಚರಿತ್ರೆ) ಮುಂತಾದವರು ಮಹಿಳಾಕೀರ್ತನಕಾರರ ಕುರಿತು ಕೃತಿ ರಚಿಸಿದ್ದಾರೆ. ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯವು ದಾಸಸಾಹಿತ್ಯದ ಸಮಗ್ರ ಸಂಪುಟದಲ್ಲಿ ಮಹಿಳಾ ಕೀರ್ತನಕಾರರ ಕೀರ್ತನೆಗಳನ್ನು ದಾಖಲಿಸಿದೆ. ಆದರೆ ಮಹಿಳಾಕೀರ್ತನಕಾರರ ಬದುಕು ಬರಹವನ್ನು ಇಡಿಯಾಗಿ, ತುಲನಾತ್ಮಕವಾಗಿ ನೋಡುವ ಅನಿವಾರ್ಯತೆಯಿದೆ.

ಮಹಿಳಾ ಕೀರ್ತನಕಾರರ ರಚನೆಗಳು ಮೌಲಿಕವಾದದ್ದು. ಹರಿದಾಸರಿಂದ ಸಮಕಾಲೀನ ಕವಿಗಳಿಂದ, ಪುರಾಣಗಳಿಂದ ಪ್ರಭಾವಿತರಾದರೂ ಇವರ ಕೃತಿಗಳಲ್ಲಿ ಸ್ವಂತಿಕೆಯಿದೆ. ಜಾನಪದ ಸಂಸ್ಕೃತಿ ಕೆನೆಗಟ್ಟಿದೆ, ಕಾವ್ಯಶಕ್ತಿ ಸಾಬೀತಾಗಿದೆ, ಕೃತಿಗಳಲ್ಲಿ ಸಹಜ ಛಂದವಿದೆ. ಭಗವಂತನನ್ನು ಸಾಕ್ಷಾತ್ಕರಿಸಿಕೊಂಡ ಭಕ್ತಿಯ ವಿವಿಧ ಪರಿಭಾವಗಳಿವೆ. ದಶಾವತಾರದ ಸ್ತುತಿಗಳು, ಆತ್ಮನಿವೇದನೆಗಳು, ವಿಶೇಷ ರಚನೆಗಳು, ಅವತಾರತ್ರಯರ ನಿಂದಾಸ್ತುತಿಗಳು, ಲಾಲಿಹಾಡುಗಳಿವೆ. ಸಾಂಪ್ರದಾಯಿಕ ರಚನೆಗಳಿವೆ, ನಿಸರ್ಗ, ಜೀವಜಗತ್ತಿನ ವರ್ಣನೆ ತುಂಬಿ ತುಳುಕುತ್ತದೆ. ಸ್ತ್ರೀ ಪಾತ್ರಗಳಂತೂ ಇವರ ಅಂತರಂಗದ ಧ್ವನಿಯನ್ನು ಸಾಬೀತುಪಡಿಸುತ್ತವೆ. ವ್ರತಗಳನ್ನು ಕೀರ್ತನೆಗಳಾಗಿಸಿರುವುದು, ಸಂಪ್ರದಾಯದ ಹಾಡುಗಳ ಮೂಲಕ ಕನ್ನಡ ಸಂಸ್ಕೃತಿಯನ್ನು ಜೀವಂತವಿರಿಸಿರುವ ಇವರ ಕಾಣಿಕೆಯನ್ನು ಮರೆಯುವಂತಿಲ್ಲ.

ಹರಿಯುವ ನದಿಯು ಮಡಿವಂತಿಕೆಯನ್ನು ಅನುಸರಿಸಲು ಸಾಧ್ಯವಿಲ್ಲ. ಹರಿಯುವಾಗ ಎಲ್ಲ ಧಾತುಗಳನ್ನು ಒಳಗೊಳ್ಳುವಂತೆ ಇವರ ರಚನೆಗಳು ಮೌಲಿಕವಾಗಿವೆ. ಮಹಿಳಾಕೀರ್ತನಕಾರರಲ್ಲಿ ಮಾರ್ಗಪ್ರವರ್ತಕರಾದವರನ್ನು ಗುರುತಿಸಿ, ಪ್ರಧಾನವಾದದ್ದನ್ನು ನಿಷ್ಕರ್ಷೆಗೆ ಒಳಪಡಿಸಿ, ಕೃತಿಗಳ ವೈಶಿಷ್ಟ್ಯತೆಯನ್ನು ಅನಾವರಣಗೊಳಿಸಿ ಭಕ್ತಿಪಂಥದಲ್ಲಿ ಇವರ ಸ್ಥಾನಮಾನವನ್ನು ಗುರುತಿಸುವುದು ಈ ಸಂಪ್ರಬಂಧದ ಉದ್ದೇಶವಾಗಿದೆ.

**ವ್ಯಾಪ್ತಿ**

ಪ್ರಥಮ ಕೀರ್ತನಕಾರ್ತಿ ಗಲಗಲಿ ಅವ್ವ (೧೬೭೦ ರಿಂದ ೧೭೬೦)ನವರಿಂದ ಮೊದಲುಗೊಂಡು ಅಂಬಾಬಾಯಿ (೧೯೦೨-೪೫)ಯವರೆಗಿನ ಮಹಿಳಾಕೀರ್ತನಕಾರರವರೆಗೆ ಮಾತ್ರ ಅಧ್ಯಯನದ ವ್ಯಾಪ್ತಿ ಸೀಮಿತವಾಗಿದೆ. ಈ ಅವಧಿಯಲ್ಲಿ ಅಜ್ಞಾತರು, ಪ್ರಖ್ಯಾತರಲ್ಲದವರು

ಇಲ್ಲದೆ ಇಲ್ಲ. ಕೀರ್ತನೆಗಳ ವಸ್ತು, ವೈವಿಧ್ಯತೆ, ಪ್ರಯೋಗಶೀಲತೆಗಳನ್ನು ಗಮನಿಸಿ ಮಾರ್ಗಪ್ರವರ್ತಕರಾದ ಕೀರ್ತನಕಾರ್ತಿಯರು ಮತ್ತು ಕೃತಿಗಳನ್ನು ಗುರುತಿಸಲಾಗಿದೆ. ಅಂಬಾಬಾಯಿವರ ನಂತರ ಮಹಿಳಾಕೀರ್ತನಕಾರರ ಪರಂಪರೆ ನಿಂತು ಹೋಗಿದೆ ಎಂದರ್ಥವಲ್ಲ. ರಚನೆಗಳಲ್ಲಿ ಛಾಯಾನುವರ್ತತೆ ಕಂಡುಬಂದಿರುವುದರಿಂದ ಅಧ್ಯಯನದ ವ್ಯಾಪ್ತಿಯನ್ನು ಅಂಬಾಬಾಯಿವರೆಗೆ ಸೀಮಿತಗೊಳಿಸಲಾಗಿದೆ.

**ಅಡಿ ಟಿಪ್ಪಣಿಗಳು**

೧. ನಾರದ ಭಕ್ತಿ ಸೂತ್ರ: ಸೋಮನಾಥಾನಂದ, ಪ್ರ: ರಾಮಕೃಷ್ಣಾಶ್ರಮ, ಮೈಸೂರು.

೨. ಶ್ರೀಮದ್ಭಗವದ್ಗೀತೆ: ಗೀತಾ ಪ್ರೆಸ್, ಗೋರಖಪುರ, ಶ್ಲೋಕ ೧೮-೫೫

೩. ಜೊನ್ನಲ ರಾಶಿ. ಲೇ.ಸಂ., ಲೇ: ಸ.ರಘುನಾಥ, ಪು-೪೨.

# ಅಧ್ಯಾಯ–ಎರಡು

೨.೧ ಮಹಿಳಾಕೀರ್ತನಕಾರರ ಪರಿಚಯ

೨.೨ ಮಹಿಳಾಕೀರ್ತನಕಾರರು ಎದುರಿಸಿದ ಸಂಕಷ್ಟಗಳು ಮತ್ತು ದೊರೆತ ಆಶ್ರಯ–ಪ್ರೋತ್ಸಾಹ

೨.೩ ಮಹಿಳಾಕೀರ್ತನಕಾರರ ಬದುಕಿನಲ್ಲಿ ನಡೆಯಿತೆನ್ನಲಾದ ಪವಾಡ ಕಥೆಗಳು

೨.೪ ಸ್ವೀಕೃತಿ–ಅನುಕರಣೆ–ಪ್ರಭಾವ

೨.೫ ಮೆರೆದಿರುವ ಸ್ವಂತಿಕೆ

೨.೬ ಕಾವ್ಯಶಕ್ತಿ

೨.೭ ಕೀರ್ತನೆಗಳಲ್ಲಿ ಜನಪದ ಸಂಸ್ಕೃತಿ

೨.೮ ಭಕ್ತಿಯ ಪರಿಭಾವ

೨.೯ ಭಾಷಾ ವಿಶೇಷಗಳು

# ಅಧ್ಯಾಯ-ಎರಡು

## ಭಕ್ತಿ ಮಾರ್ಗದಲ್ಲಿ ಮಹಿಳಾಕೀರ್ತನಕಾರರು

ಶಾಸ್ತ್ರ ಪುರಾಣಗಳು 'ಮಾತೃ ದೇವೋ ಭವ' ಎಂದು ಮೇಲ್ನೋಟಕ್ಕೆ ಮಹಿಳೆಗೆ ಗೌರವದ ಸ್ಥಾನ ನೀಡಿದಂತೆ ಕಂಡರೂ, ಪ್ರಕೃತಿ, ಮಾಯೆ, ಭೂಮಾತೆ ಎಂದೆಲ್ಲಾ ಸ್ಮೃತಿ-ಪುರಾಣಗಳು ಹಾಡಿ ಹೊಗಳಿದ್ದರೂ, ಪ್ರಾಚೀನ ಕಾಲದಿಂದಲೂ ಪುರುಷನ ನಂತರದ ಸ್ಥಾನವನ್ನು ಮಹಿಳೆಗೆ ನೀಡಲಾಗಿದೆ. ಗೃಹಕೃತ್ಯ ಮತ್ತು ಸಂತಾನಾಭಿವೃದ್ಧಿಗೆ ಸೀಮಿತಗೊಳಿಸಿ ದಾಸಿಯಂತೆ ನಡೆಸಿಕೊಳ್ಳಲಾಗಿದೆ. ಮನುವು 'ನ ಸ್ತ್ರೀ ಸ್ವಾತಂತ್ರ್ಯಮನರ್ಹತಿ' ಎಂದಿದ್ದರೆ, ವಶಿಷ್ಠ ಧರ್ಮ ಸೂತ್ರವು, 'ಮಹಿಳೆಯು ಬಾಲ್ಯದಲ್ಲಿ ತಂದೆ, ಯೌವನದಲ್ಲಿ ಗಂಡ, ಮುಪ್ಪಿನಲ್ಲಿ ಮಕ್ಕಳ ಆಶ್ರಯವನ್ನು ಹೊಂದಬೇಕು' ಎಂದು ಹೇಳಿದೆ. ವೇದಗಳ ಕಾಲದಲ್ಲಿ ವೇದಾಧ್ಯಯನವು ಮಹಿಳೆಯರಿಗೆ ನಿಷಿದ್ಧವಾಗಿತ್ತು. ಆದರೂ ಲೋಪಾಮುದ್ರಾ, ರೋಮಷ, ಕಾಮಾಯಿನಿ, ಎಮಿ, ವೈವಶ್ವತಿ, ಪೌಲೋನಿ, ಶಚಿ, ಉಪನಿಷತ್ತಿನ ಕಾಲದಲ್ಲಿ, ಮೈತ್ರೇಯಿ, ಗಾರ್ಗಿ, ವಾಚಕ್ನವಿ, ವಢವಾ, ಪ್ರಾಥಿತೇಯಿ ಮುಂತಾದ ಮೇದಾ ಮಹಿಳೆಯರು ಇದ್ದರು. ವರ್ಣ ವ್ಯವಸ್ಥೆಯು ಮಹಿಳೆಯರ ಸ್ವಾತಂತ್ರ್ಯವನ್ನು ಮತ್ತಷ್ಟು ಮೊಟಕುಗೊಳಿಸಿತು. ಅವಳು ವಜ್ರದ ಸಂಕೋಲೆಯಲ್ಲಿ ಬಿಗಿಯಲ್ಪಟ್ಟಳು. ಇದರಿಂದ ಸಾಂಸ್ಕೃತಿಕ, ರಾಜಕೀಯ, ಸಾಮಾಜಿಕ ಕ್ಷೇತ್ರಗಳಲ್ಲಿ ಅವಳ ಪಾಲುಗಾರಿಕೆಯ ಅವಕಾಶಗಳು ಕ್ಷೀಣಗೊಂಡವು.

ಭಕ್ತಿಮಾರ್ಗದಲ್ಲಿ ಸ್ತ್ರೀ ವಿರೋಧ ಕಂಡುಬರುವುದಿಲ್ಲ. ಹಾಗೆಯೇ ನಿಂದೆಯೂ ಕಡಿಮೆಯೆ. ಯೋಗಮಾರ್ಗಿಗಳಂತೆ ಇವರು ಆತ್ಮೋನ್ನತಿಗೆ ಹೆಣ್ಣು ಅಡ್ಡಿಯೆಂದು ತಿಳಿದವರಲ್ಲ. ವಚನಕಾರರಂತೆ ಮಹಿಳೆಯರನ್ನು ತಮ್ಮೊಂದಿಗೆ ಇರಿಸಿಕೊಂಡು ಗೌರವಿಸಿ ಮುನ್ನಡೆಸಿದರು. 'ಜೈನ-ಬೌದ್ಧರ ಕಾಲದಲ್ಲಿ ಮಹಿಳೆಯರು ಜೈನ ಶ್ರಾವಕಿಯರಾಗಿ ಬೌದ್ದ ಭಿಕ್ಷುಣಿಯರಾಗಿ ದೀಕ್ಷೆ ಪಡೆದರು. ಥೇರೀ ಪಂಥದ ಎಪ್ಪತ್ತೂರು ಭಿಕ್ಷುಣಿಯರು ಸೇರಿ 'ಥೇರೀ ಗಾಥಾ' ಗೀತೆಗಳನ್ನು ರಚಿಸಿದ್ದರೆಂದು ತಿಳಿದು ಬರುತ್ತದೆ. ಸುಮೇಧಾ, ಇಸಿದಾಸೀ, ಉಪ್ಪಲವೇಣ್, ಅಂಬಾಪಾಲಿ ಮುಂತಾದ ರಾಜಪುತ್ರಿಯರು ಕೃತಿ ರಚನೆ ಮಾಡುತ್ತಿದ್ದರು. ಉತ್ತರದ ವಿರಹಿಣಿ ಎಂದೇ ಖ್ಯಾತಳಾದ ರಾಜಾಸ್ತಾನದ ಕೃಷ್ಣ ಭಕ್ತೆ ಮೀರಾ ಅಭಂಗಗಳನ್ನು ('ಮೀರಾ ಕೆ ಪ್ರಭು ಗಿರಿಧರ ನಾಗರ' ಅಂಕಿತದಲ್ಲಿ) ರಚಿಸಿದ್ದಳು. ಮಹಾರಾಷ್ಟ್ರದಲ್ಲಿ ಮುಕ್ತಾಬಾಯಿ, ಕಾನ್ಹೋಪಾತ್ರ, ಜನಾಬಾಯಿ ಮುಂತಾದವರು ಭಕ್ತಿ ರಚನೆಗಳನ್ನು, ತಮಿಳುನಾಡಿನ ಆಂಡಾಳಮ್ಮನ ಮೂವತ್ತು ಪಾಶಾರಗಳ ತಿರುಪ್ಪಾವೈ ಹಾಗು ನಾಚಿಯಾರ್ ತಿರುವಳಮೆ, ಆಂಧ್ರದ ಮೊಲ್ಲಳ ತೆಲುಗಿನ 'ಮೊಲ್ಲ ರಾಮಾಯಣಮು' ಪ್ರಸಿದ್ಧ ಕೃತಿಗಳು. ಮರಾಠಿಯಲ್ಲಿ, 'ವಾರಕರಿ ಮಹಿಳಾಸಂತ'ರೆಂದು ಜನಾಬಾಯಿ, ಬಹಿನಾಬಾಯಿ, ಕಾನ್ಹೋಹ ಪಾತ್ರ, ಸಕ್ಕೂಬಾಯಿ,

ಮುಕ್ತಾಬಾಯಿ ಮುಂತಾದವರು ಕಂಡುಬಂದರೆ, ತೆಲುಗಿನ ತಾಳ್ಳಪಾಕ ತಿಮ್ಮಕ್ಕ, ತರಿಗೊಂಡ ವೆಂಕಮಾಂಬ, ಜ್ಞಾನಮಾಂಬ, ಈಶ್ವರಮ್ಮ ಮುಂತಾದವರು ಈ ಭಕ್ತಿಮಾರ್ಗದಲ್ಲಿ ಪುರುಷರೊಂದಿಗೆ ಕಂಡುಬರುತ್ತಾರೆ'[7] ಭಕ್ತಿ ಮಾರ್ಗದ ಮಹಿಳೆಯರ ಪರಂಪರೆಯ ದಾಖಲೆಯೇ ಇದಾಗಿದೆ.

ಮಹಿಳೆಯರು ಸಂಸ್ಕೃತದಲ್ಲಿ ಕಾವ್ಯ ರಚಿಸಿ ಪ್ರಸಿದ್ಧರಾಗಿದ್ದಾರೆ. ವಿಜಯನಗರದ ತಿರುಮಲಾಂಬೆಯು ವರದಾಂಬಿಕಾ ಪರಿಣಯ, ತಂಜಾವೂರಿನ ರಾಮಭದ್ರಾಂಬೆಯು ರಘುನಾಥಾಭ್ಯುದೇಯ, ಗ್ವಾಲೇರ್ ಮಾನಸಿಂಹನ ಪತ್ನಿ ಮೃಗನಯನೆ ಕೆಲವು ಕೀರ್ತನೆಗಳನ್ನು ರಚಿಸಿದ್ದಾರೆ. ಕಂಪಣನ ಪತ್ನಿ ಗಂಗಾದೇವಿಯು ಮಧುರ ವಿಜೇಯ (ವೀರ ಕಂಪಣರಾಯ ಚರಿತೆ), ಮಾಳವ ರಾಣಿ ರೂಪವತಿಯು ಸಂಗೀತಕ್ಕಾಗಿ ಕೆಲವು ಕೀರ್ತನೆಗಳನ್ನು ರಚಿಸಿದ್ದರೆಂದು ತಿಳಿದುಬರುತ್ತದೆ. ವೆಂಕಟಸುಂದರ ಸಾನಿ ಎಂಬುವವಳು ರಚಿಸಿದ 'ರಸಿಕರ ಮನೋಲ್ಲಾಸಿನಿ ಸಾರ ಸಂಗ್ರಹ'ವು ಭರತ ನಾಟ್ಯ ಶಾಸ್ತ್ರ ಗ್ರಂಥವಾಗಿದೆ. ಪಂಡಿತೆ ರಮಾಬಾಯಿ ಸಂಸ್ಕೃತದಲ್ಲಿ 'ಲಕ್ಷ್ಮೀಶ್ವರ' ಚಂಪೂ ಕಾವ್ಯವನ್ನು ರಚಿಸಿದ್ದಾಳೆ. ಇವಳು ಬರೆದ 'ದೇವವಾಣಿ ಪರಿದೇವಿತಂ' ಎಂಬ ಕೃತಿಯನ್ನು ಮೋಲಿಯರ್ ವಿಲಿಯಂ ಎಂಬುವವರು ಆಂಗ್ಲ ಭಾಷೆಗೆ ಅನುವಾದ ಮಾಡಿದ್ದಾರೆ.

ಕರ್ನಾಟಕದ ಭಕ್ತಿ ಪರಂಪರೆಯಲ್ಲಿ ಕಂತಿ, ಅಕ್ಕಮಹಾದೇವಿ, ನೀಲಾಂಬಿಕೆ, ಗಂಗಾಂಬಿಕೆ, ನಾಗಲಾಂಬಿಕೆ, ಮುಕ್ತಾಯಕ್ಕ, ಸಂಚಿಯ ಹೊನ್ನಮ್ಮ ಹೀಗೆ ಹರಿದುಬಂದ ಭಕ್ತಿಪರಂಪರೆಯ ಮುಖ್ಯವಾಹಿನಿಗೆ ಹದಿನೆಂಟನೆ ಶತಮಾನದಲ್ಲಿ ಮಹಿಳಾ ಕೀರ್ತನಕಾರರೆಂಬ ಪ್ರವಂತಿಯೊಂದು ಸೇರ್ಪಡೆಯಾಗುತ್ತದೆ. ಇವರು ಗುಪ್ತಗಾಮಿನಿಯಾಗಿ ದಾಸಸಾಹಿತ್ಯವನ್ನು ಪೋಷಿಸಿದರು, ಸಂರಕ್ಷಿಸಿದರು ಜೊತೆಗೆ ರಚನೆಯಲ್ಲಿಯೂ ತಮ್ಮನ್ನು ತೊಡಗಿಸಿಕೊಂಡರು.

ಮಹಿಳಾಕೀರ್ತನಕಾರರ ರಚನೆಗಳು ವಚನಕಾರ್ತಿಯರ ರಚನೆಗಳ ಪ್ರೌಢಿಮೆಯನ್ನು ಮೆರೆಯುವುದಿಲ್ಲವೆಂಬ ಮಾತಿದೆ. ವಚನ ಮತ್ತು ಕೀರ್ತನೆಗಳು ಭಕ್ತಿಪಂಥಕ್ಕೆ ಸೇರಿದವಾದರೂ ಇವರೆಡೂ ಭಿನ್ನ ವ್ಯವಸ್ಥೆ, ಪರಿಸರ, ಉದ್ದೇಶ, ಸ್ವರೂಪದಲ್ಲಿ ಮೈದಳೆದಂತಹವು. ವಚನ ಸಾಹಿತ್ಯವು ಬಸವಾದಿ ಶರಣರ ವ್ಯವಸ್ಥಿತ ಸಂಘಟನೆ ರಚನಾಮಾರ್ಗ ಕಾಯಕದಲ್ಲಿ ಮಹದೇವಿಯಂತಹ ಹಲವು ಶರಣೆಯರಿಗೆ ಆಶ್ರಯ, ಮಾರ್ಗದರ್ಶನ ನೀಡಿತು. ಆದರೆ ಮಹಿಳಾಕೀರ್ತನಕಾರರು ದಾಸ ಚಳುವಳಿಯಲ್ಲಿ ತೊಡಗಿಕೊಂಡಿದ್ದರೂ ತಮ್ಮ ಕೌಟುಂಬಿಕ ಮತ್ತು ಸಾಂಪ್ರದಾಯಿಕ ಸಂಕೋಲೆಯೊಳಗೇ ಇದ್ದುಕೊಂಡು ಕೃತಿ ರಚನೆ ಮಾಡಬೇಕಾಗಿದ್ದಿತೆಂಬುದು ಗಮನಿಸಬೇಕಾದ ಸಂಗತಿಯಾಗಿದೆ.

ದಾಸ ಸಾಹಿತ್ಯದ ಕೊನೆಯ ಘಟ್ಟದಲ್ಲಿ ಮಾತ್ರ ಮಹಿಳಾಕೀರ್ತನಕಾರರು ಕಂಡುಬರುತ್ತಾರೆ. ವಾಸ್ತವವಾಗಿ ದಾಸ ಸಾಹಿತ್ಯವನ್ನು ಮಹಿಳೆಯು ಉಳಿಸಿದ್ದಾಳೆ, ಬೆಳೆಸಿದ್ದಾಳೆ, ಬೆಳೆಸುತ್ತಿದ್ದಾಳೆ. ಕನ್ನಡನಾಡಿನ ಮನೆ ಮನಗಳಲ್ಲಿ ಇಂದಿಗೂ ಹಾಡಿನ ರೂಪದಲ್ಲಿ ಸಂಪ್ರದಾಯದ ಹೆಸರಿನಲ್ಲಿ

ದಾಸಸಾಹಿತ್ಯ ಉಳಿದು ಬಂದಿರುವುದು ಪ್ರಧಾನವಾಗಿ ಮಹಿಳೆಯರಿಂದಲೇ ಎಂಬುದನ್ನು ಒಪ್ಪಬೇಕಾದೀತು. ಮಹಿಳಾಕೀರ್ತನಕಾರರ ಸಂಖ್ಯೆಯು ಹರಿದಾಸರ ಸಂಖ್ಯೆಗಿಂತ ಕಡಿಮೆ ಎಂಬ ಮಾತಿದೆ. ಆದರೆ ಅವರು ತಮ್ಮ ಮಿತಿಯಲ್ಲಿಯೇ ಅನನ್ಯ ಕೊಡುಗೆಯನ್ನು ಕೊಟ್ಟಿದ್ದಾರೆ.

ಇಂದಿಗೂ ಹರಿದಾಸ ಸಾಹಿತ್ಯಕ್ಕೆ ಸಿಗುತ್ತಿರುವ ಪ್ರಾಶಸ್ತ್ಯ ಮಹಿಳಾಕೀರ್ತನಕಾರರ ಸಾಹಿತ್ಯಕ್ಕೆ ಇಲ್ಲ. ಬಹುಪಾಲು ವಿಮರ್ಶೆ, ಹರಿಕಥೆ, ವಿಚಾರಸಂಕಿರಣಗಳು, ಗೋಷ್ಠಿಗಳು, ಚರ್ಚೆಗಳು, ಕಾರ್ಯಾಗಾರಗಳು ಪುರುಷ ಹರಿದಾಸರ ಬದುಕು ಬರಹಗಳ ಹಿನ್ನೆಲೆಯಲ್ಲಿಯೇ ಜರಗುತ್ತಿವೆ. ಈ ನಿಟ್ಟಿನಲ್ಲಿ ವಿಶೇಷವಾಗಿ ಮಹಿಳೆಯರು ಜಾಗೃತಿಯಿಂದ, ಅಭಿಮಾನದಿಂದ ಸಂಘಟನಾತ್ಮಕವಾಗಿ ಕಾರ್ಯ ನಿರ್ವಹಿಸಬೇಕಿದೆ.

ಕವಿ ಸ.ರಘುನಾಥರು 'ಆಂಧ್ರದಲ್ಲಿ ಮಹಿಳೆಯರು ಹಿಡಿದ ಭಕ್ತಿ ಮಾರ್ಗ-ಬೆಳೆದ ಬೆಳೆ' ಎಂಬ ಶೀರ್ಷಿಕೆಯಡಿಯಲ್ಲಿ, 'ಇಪ್ಪತ್ತನೆ ಶತಮಾನದ ಹಿಂದಿನ ಸಾಹಿತ್ಯ ಪರಿಶೀಲನೆಯಲ್ಲಿ ತಮ್ಮ ಇರುವಿಕೆಯನ್ನು ಸಾರುವ ಮಹಿಳೆಯರಲ್ಲಿ ಬಹುಪಾಲು ಮಂದಿ ಭಕ್ತಿಪಂಥದಲ್ಲಿ ಕಾಣಸಿಗುತ್ತಾರೆ. ಇದು ಗಮನಾರ್ಹವಾದ ಮತ್ತು ವಿಶೇಷವಾದ ಸಂಗತಿ, ಇದೇ ನಿಟ್ಟಿನಲ್ಲಿ ಯೋಚಿಸುವುದಾದರೆ ಭಕ್ತಿಪಂಥದಲ್ಲಿ ಏಕಿಷ್ಟು ಮಂದಿ ಮಹಿಳೆಯರು? ಭಕ್ತಿ ಪಂಥವು ಇಷ್ಟು ಗಾಢವಾಗಿ ಸೆಳೆದಿತ್ತೇ? ಈ ಸೆಳೆತಕ್ಕೆ ಕಾರಣವೇನು? ಭಕ್ತಿ ಸಾಹಿತ್ಯ ಅವರಿಗೆ ಸುಲಭವಾಗಿತ್ತೇ? ಅಥವಾ ಭಕ್ತಿಪಂಥ ಮಾತ್ರ ಸ್ತ್ರೀಯರಿಗೆ ಅವಕಾಶ ನೀಡಿತೇ? ಇಂತಹ ಹಲವಾರು ಪ್ರಶ್ನೆಗಳನ್ನು ಇವರು ಹುಟ್ಟಿಸುತ್ತಾರೆ. ಈ ಪ್ರಶ್ನೆಗಳಿಗೆ ಉತ್ತರ ವ್ಯವಸ್ಥೆಯಲ್ಲಿದೆ'[3] ಎಂದಿದ್ದಾರೆ. ಇದು ಈ ಸಂಪ್ರಬಂಧದ ಚರ್ಚೆಯ ವಿಷಯದಲ್ಲಿ ಬಹುಮುಖ್ಯವಾಗಿ ಗಮನಿಸಬೇಕಾದ ಅಂಶ.

ಹದಿನೇಳು ಮತ್ತು ಹದಿನೆಂಟನೇ ಶತಮಾನದಲ್ಲಿ ಬಾಲ್ಯ ವಿವಾಹ ಪದ್ಧತಿಗೆ ಬಲಿಯಾದವರಲ್ಲಿ ಮಹಿಳಾ ಕೀರ್ತನಕಾರರು ಬಹಳ ಮಂದಿಯಿದ್ದಾರೆ. ಸಮಾಜದ ಕಟ್ಟುಪಾಡುಗಳು ಬಾಲವಿಧವೆಯರಿಗೆ ಕಠಿಣವಾಗಿಯೇ ಇದ್ದವು. ಸಹಗಮನ ಪದ್ಧತಿಯ ನೆವದಲ್ಲಿ ಸಜೀವವಾಗಿಯೇ ದಹಿಸಲ್ಪಡುತ್ತಿದ್ದಳು. ಒಂದು ವೇಳೆ ಅವಳು ಪ್ರತಿಭಟಿಸಿದರೂ ಬಲವಂತವಾಗಿ ಚಿತೆಗೆ ನೂಕುತ್ತಿದ್ದರು. ಕಾಲ ಬದಲಾದಂತೆಲ್ಲಾ ಕಟ್ಟುಪಾಡುಗಳು ಸ್ವಲ್ಪ ಸ್ವಲ್ಪವಾಗಿ ಸಡಿಲಗೊಂಡರು, ಸತಿಯಾಗದೆ ಉಳಿದವರು ಗುಲಾಮರಂತೆ ಬದುಕಿದರು. ಅಲಂಕಾರವನ್ನು ಮಾಡಿಕೊಳ್ಳದೆ ಕೇಶಮುಂಡನ ಮಾಡಿಸಿಕೊಂಡು ಬದುಕಬೇಕಾಗುತ್ತಿತ್ತು. ತನ್ನ ನಿಸ್ಸಹಾಯ ಬದುಕಿನಲ್ಲಿ ಜೋರಾಗಿ ಒಂದು ನಿಟ್ಟುಸಿರನ್ನೂ ಬಿಡುವ ಸ್ವಾತಂತ್ರ್ಯ ಅವಳಿಗಿರಲಿಲ್ಲ. ಅದು ಕತ್ತಲೆಯ ಬದುಕು. ಇಂತಹ ಜೀವಗಳಿಗೆ ಬದುಕುವ ಅವಕಾಶ ನೀಡಿದ್ದು ಭಕ್ತಿಪಂಥ ಮಾತ್ರ. ತಮಗೆ ಸಿಕ್ಕ ಅವಕಾಶದಿಂದ ಸಡಿಲಗೊಂಡ ಸಾಮಾಜಿಕ ಸನ್ನಿವೇಶದಲ್ಲಿ ಬದುಕಿದ ಹೆಣ್ಣುಮಕ್ಕಳ ಬದುಕು ಹಿಂದಿನವರಂತೆ ಕಷ್ಟಕರವಾಗಿರಲಿಲ್ಲ. ಭಕ್ತಿಪಂಥದಲ್ಲಿ ಆಸರೆ ಪಡೆದ ಅವರು ಪರಂಪರೆಯನ್ನು ಬೆಳೆಸುತ್ತಾ ರಚನೆಯನ್ನು ಮುಂದುವರೆಸಿ ಭಕ್ತಿಯ ಸ್ಥಾನಕ್ಕೆ ಸ್ತ್ರೀಶಿಕ್ಷಣ, ಸಮಾಜ ಸುಧಾರಣೆ, ಕೀರ್ತನಗಳಲ್ಲಿ ಹೊಸ ಹೊಸ ಪ್ರಯೋಗಗಳಿಗೆ ಒಪ್ಪಿಕೊಳ್ಳುತ್ತ ಕೀರ್ತನೆಗಳನ್ನು ರಚಿಸಿದರಲ್ಲದೆ ಸಮಾಜಮುಖಿ ಚಿಂತನೆ ನಡೆಸಿದರು-ಅದಕ್ಕಾಗಿ ಶ್ರಮಸಿದರು.

ಗಲಗಲಿ ಅವ್ವನವರು. (ಕ್ರಿ.ಶ. ಸುಮಾರು ೧೬೭೦) ಭಾಗಮ್ಮ, ಚೆಲ್ಲಮ್ಮ, ಹೆಳವನಕಟ್ಟೆ ಗಿರಿಯಮ್ಮ (ಕ್ರಿ.ಶ.ಸು.೧೭೫೦), ಹರಪನಹಳ್ಳಿ ಭೀಮವ್ವ (ಕ್ರಿ.ಶ.ಸು. ೧೮೨೩), ಗಣಪಕ್ಕ (ಕ್ರಿ.ಶ.ಸು. ೧೮೭೦), ಸುಂದರಾಬಾಯಿ (ಕ್ರಿ.ಶ. ೧೮೭೫), ಪನ್ನಿ ಲಕ್ಷ್ಮಿಬಾಯಿ (ಕ್ರಿ.ಶ.ಸು.೧೮೮೦), ಓರಾಬಾಯಿ ಲಕ್ಷ್ಮಿದೇವಮ್ಮ (ಕ್ರಿ.ಶ.ಸು.೧೮೯೦), ನಿಡಗುರಕಿ ಜೀವೂಬಾಯಿ (ಕ್ರಿ.ಶ.ಸು. ೧೮೯೭), ಅಂಬಾಬಾಯಿ (ಕ್ರಿ.ಶ.ಸು. ೧೯೦೦) ಹಾಗೂ ಅಜ್ಞಾತರಾದ ಕೆಲವು ಮಹಿಳಾ ಕೀರ್ತನಕಾರರು ಮತ್ತು ಅವರ ಶಿಷ್ಯ ಪರಂಪರೆಯು ದಾಸಸಾಹಿತ್ಯವನ್ನು ಪಾಲನೆ-ಪೋಷಣೆ ಮಾಡುವುದಕ್ಕೆ ತಮ್ಮ ಬದುಕನ್ನೇ ಮುಡುಪಾಗಿಟ್ಟರು. ಇವರ ಬದುಕು-ಬರಹದ ವೈಶಿಷ್ಟ್ಯವನ್ನು ಇಲ್ಲಿ ಅನಾವರಣಗೊಳಿಸಲಾಗಿದೆ.

**೨.೧ ಮಹಿಳಾಕೀರ್ತನಕಾರರ ಪರಿಚಯ**

ಭಕ್ತಿಪಂಥದ ಸೆಳೆತಕ್ಕ ಸಿಕ್ಕ ಮಹಿಳೆಯರು ಆಧ್ಯಾತ್ಮಿಕ ಸಾಧನೆಯಲ್ಲಿ ತೊಡಗಿಕೊಂಡರು. ಸಾಹಿತ್ಯ ರಚನೆಯನ್ನು ಉಸಿರಾಗಿಸಿಕೊಂಡರು. ಸುಮಾರು ೧೮ನೆಯ ಶತಮಾನದಿಂದ ೧೯ನೆಯ ಶತಮಾನದ ಕೊನೆಯವರೆಗೂ ಮಹಿಳಾಕೀರ್ತನಕಾರರ ಬದುಕನ್ನು ಅವಲೋಕಿಸಿದಾಗ ಇದು ಒಂದು ವ್ಯವಸ್ಥೆಗೆ ವಿರುದ್ಧವಾಗಿ ಪ್ರತಿಭಟಿಸಲಾಗಿದ ಶರಣಾಗತಿ ಎಂದು ಅರ್ಥೈಸಬೇಕಿದೆ. ಬಾಲ್ಯವಿವಾಹದ ಪ್ರತಿಫಲವಾಗಿ ಬಂದ ವೈಧವ್ಯದಿಂದ ಬಹುಪಾಲು ಹರಿದಾಸಿಯರ ಬದುಕು ಸೂತ್ರಹರಿದ ಗಾಳಿಪಟದಂತಾಯಿತು. ಹೊಂದಿಕೊಳ್ಳುವ ಅನಿವಾರ್ಯದಲ್ಲಿ ಆರಿಸಿಕೊಂಡ ಮಾರ್ಗದಲ್ಲೇ ವಿಶಿಷ್ಟ ಸಾಧನೆ ಮೆರೆದರು. ಪೂಜೆ ಪುನಸ್ಕಾರಗಳಲ್ಲಿ ಸಂಸ್ಕೃತ ಪ್ರಭಾವ ದಟ್ಟವಾಗಿದ್ದ ವಾತಾವರಣದಲ್ಲಿ ಕನ್ನಡ ಕೀರ್ತನೆಗಳನ್ನು ರಚಿಸಿ ಅಭಿವ್ಯಕ್ತಿ ಸ್ವಾತಂತ್ರ್ಯ ಮೆರೆದರು. ಇವರು ಮಹದೇವಿಯಂತೆ ಚಳುವಳಿಯ ಬೆಂಬಲ ಪಡೆದವರಲ್ಲ, ಸಂಚಿಯ ಹೊನ್ನಮ್ಮನಂತೆ ರಾಜಾಶ್ರಯ ಪಡೆದವರೂ ಅಲ್ಲ. ತಮ್ಮ ಬದುಕಿನ ಕಟ್ಟುಪಾಡುಗಳ ಮಿತಿಗಳಲ್ಲಿಯೇ ಸಾಹಿತ್ಯ ರಚನೆಗೈದು ಒಂದು ಕಾಲಘಟ್ಟವನ್ನು ತಮ್ಮ ಹೆಸರಿನಲ್ಲಿ ನೋಂದಾಯಿಸಿಕೊಂಡಿದ್ದು ಇವರ ಹೆಗ್ಗಳಿಕೆ.

ಕನ್ನಡ ಸಾಹಿತ್ಯಕ್ಕೆ ಮಹಿಳಾಕೀರ್ತನಕಾರರ ಕೊಡುಗೆ ಅಪೂರ್ವವಾದದ್ದು. ಡಾ. ಶ್ರೀನಿವಾಸ ಹಾವನೂರ ಅವರು "ಪ್ರಥಮ ಹರಿದಾಸಿ ಯಾರು?" ಎಂಬ ತಮ್ಮ ಲೇಖನದಲ್ಲಿ ಪುರಂದರ ದಾಸರ ಪತ್ನಿ ಸರಸ್ವತಿ ಬಾಯಿ ಹಾಗು ಪುತ್ರಿ ರುಕ್ಮಿಣಿ ಬಾಯಿಯವರು ಮೊದಲ ಆರುಜನ ಹರಿದಾಸಿಯರಲ್ಲಿ ಆದ್ಯರು ಎಂದಿದ್ದಾರೆ. ಇವರ ಕೀರ್ತನೆಗಳು ಪುರಂದರದಾಸರ ಕೀರ್ತನೆಗಳಲ್ಲಿ ಸೇರಿಹೋಗಿರುವುದರಿಂದ ಇಂತಹ ಕೀರ್ತನೆಗಳು ಇವರವೇ ಎಂದು ಹೇಳಲು ಬರುವುದಿಲ್ಲ. ರಾಘವೇಂದ್ರಸ್ವಾಮಿಗಳ ತಾಯಿ ಕಾವ್ಯ ರಚನೆ ಮಾಡಿದ್ದರೆಂಬ ಮಾತಿದ್ದರೂ ಈಗ ಉಪಲಬ್ಧವಿರುವ ಮಹಿಳಾ ಕೀರ್ತನಕಾರರ ಪಟ್ಟಿಯಲ್ಲಿ ಗಲಗಲಿ ಅವ್ವನವರೇ ಮೊದಲಿಗರು. ಈ ಪರಂಪರೆಯಲ್ಲಿ ಹೆಳವನಕಟ್ಟೆ ಗಿರಿಯಮ್ಮ, ಹರಪನಹಳ್ಳಿ ಭೀಮವ್ವ, ಯದುಗಿರಿಯಮ್ಮ, ನಾಡಿಗರ ಶಾಂತಾಬಾಯಿ, ಓರಾಬಾಯಿ ಲಕ್ಷ್ಮಿದೇವಮ್ಮ, ಸರಸೀಬಾಯಿ, ನಂಜನಗೂಡು ತಿರುಮಲಾಬಾಯಿ, ಬಳ್ಳಾರಿಯ ರಾಧಾಬಾಯಿ, ನಿಡಗುರಕಿಯ ಜೀವೂಬಾಯಿ, ಗುಂಡಮ್ಮ ಮುಂತಾದವರು ಕಾಣಸಿಗುತ್ತಾರೆ. ಇವರೊಂದಿಗೆ ಗಲಗಲಿಯ ಅವ್ವನವರ ಶಿಷ್ಯರಾದ ಚ.ರಾ.ಚಲ್ಲಮ್ಮ, ಭಾಗಮ್ಮ (ಪ್ರಯಾಗಮ್ಮ), ಗಣಪಕ್ಕ, ಸುಂದರಬಾಯಿ, ಪನ್ನಿ ಲಕ್ಷ್ಮೀಬಾಯಿಯವರ ಹೆಸರು ಕೇಳಿ ಬರುತ್ತದೆ.

ಗಲಗಲಿ ಎಂಬ ಮನೆತನವು ನಿಜಾಮರು, ಪೇಶ್ವೆಗಳು, ಮೈಸೂರು ಅರಸರು ಹಾಗು ಭಾರತ ಸರ್ಕಾರದಿಂದಲೂ ಸನ್ಮಾನಗಳನ್ನು ಪಡೆದ ವಂಶ. ಈ ವಂಶಜರು ಶೌರ್ಯ ಮತ್ತು ಪಾಂಡಿತ್ಯಕ್ಕೆ ಹೆಸರಾದವರು. ಮುದ್ಗಲಚಾರ್ಯರೆಂಬುವವರು ಗಲಗಲಿಯ ಆಚಾರ್ಯ ವಂಶದ ಮಹರ್ಷಿಗಳು. ಈ ವಂಶದಲ್ಲಿ ಮೂರು ಜನ ಮುದ್ಗಲಾಚಾರ್ಯರು ಇದ್ದಾರೆ. ಇವರಲ್ಲಿ ಮೊದಲನೇ ಮುದ್ಗಲಾಚಾರ್ಯರೇ ಅವ್ವನವರ ಪತಿ ಎಂದು ಹೇಳಲಾಗುತ್ತದೆ. ಅವ್ವನವರ ಮೊದಲ ಹೆಸರು ರಮಾ. ಇವರು ಬೋಗಪುರ ಗ್ರಾಮದ ಶ್ಯಾನುಭೋಗರ ಮಗಳು. ಕ್ರಿ.ಶ. ೧೯೨೭ರಲ್ಲಿ ಬೆಳಗಾವಿಯ ಶ್ರೀ ರಾಮತತ್ವ ಪ್ರಕಾಶನದವರು ಪ್ರಕಟಿಸಿದ 'ಬಾಲಬೋಧ' ಪುಸ್ತಕದಲ್ಲಿ ರಮಾ ಮತ್ತು ಮುದ್ಗಲಾಚಾರ್ಯರ ವಿವಾಹದ ಉಲ್ಲೇಖವಿದೆ.

ಅವ್ವನವರ ಹಾಡಿನಿಂದ ಅವರ ಕಾಲವನ್ನು ಹೀಗೆ ಗುರುತಿಸಿಬಹುದು. ತಮ್ಮ ಮುಯ್ಯದ ಹಾಡಿನಲ್ಲಿ ಹಾಡು ಬರೆಸಿ ಮುಗಿದ ದಿನವನ್ನು ಹೇಳಿದ್ದಾರೆ. 'ಜ್ಯೇಷ್ಠ ಬಹುಳ ಉತ್ಕೃಷ್ಟ ಪಂಚಮಿತಿಥಿ, ಶ್ರೇಷ್ಠವಾಗಿದ್ದ ಬುಧವಾರ. ಈ ಕವನ ಶ್ರೀಕೃಷ್ಣಗರ್ಪಿಸಿದೆ. ಹರುಷಾಗಿ, ಭಾವ ಸಂವತ್ಸರದಿ ದೇವಾಧಿದೇವನ, ಪಾವನವಾದ ಚರಿತ್ರೆಯ ರಚಿಸಿದೆ'. ಅವ್ವನವರ ಕೃತಿ ರಚನೆಯ ಕಾಲದ ಈ ದಾಖಲೆ ೧೮೫೫ನೇ ಇಸವಿ ಮೇ ೨೨ನೇ ಬುಧವಾರಕ್ಕೆ ಸರಿಯಾಗುತ್ತದೆ. ಉಳಿದಂತೆ ಕೆಲವು ಪೂರಕ ಅಂಶಗಳು ಹೀಗಿವೆ. ೧) ಒಮ್ಮೆ ಶ್ರೀ ಮುದ್ಗಲಾಚಾರ್ಯರು ಉತ್ತರಾಧಿಮಠದ ಸ್ವಾಮಿಗಳಾಗಿದ್ದ ಶ್ರೀ ಸತ್ಯಪೂರ್ಣ ತೀರ್ಥರನ್ನು ಸುಧಾಮಂಗಳಕ್ಕೆ ಆಮಂತ್ರಿಸಿದಾಗ ಶ್ರೀಪಾದಂಗಳವರು ಒಂದು ನಿರೂಪ ಪತ್ರ ಬರೆದಿದ್ದು, ಅದರಲ್ಲಿ ಜಯ ಸಂವತ್ಸರದ ವೈಶಾಖ ಶುದ್ಧ ದಶಮಿ...'ಎಂಬ ಉಲ್ಲೇಖವಿದ್ದು, 'ಮಿಗಿಲಾದ ವರ್ತಮಾನ ವಿದ್ಯಾಧೀಶಾರ್ಯರು ಹೇಳಲಾಗಿ ಮನಸ್ಸಿಗೆ ಬಂದಿತು ಇತಿ ನಿರೂಪ' ಎಂದಿರುವರು. ಅಂದರೆ ಮುದ್ಗಲಾಚಾರ್ಯರು ತಮ್ಮ ಪುತ್ರ ವಿದ್ಯಾಧೀಶಾಚಾರ್ಯರೊಡನೆ ಶ್ರೀಗಳವರಿಗೆ ಹೇಳಿ ಕಳುಹಿಸಿದ್ದರೆಂಬುದು ಇಲ್ಲಿ ಸ್ಪಷ್ಟವಾಗಿದೆ. ಮಠಾಧೀಶರ ಮೂಲ ಪತ್ರದಿಂದ ಈ ವಿಚಾರ ತಿಳಿಯುತ್ತದೆ. ೨) ಪೇಶ್ವೆ ದರ್ಬಾರಿನಲ್ಲಿ ಅವ್ವನವರು ತಮ್ಮ ವಿದ್ವತ್ತನ್ನು ಪ್ರದರ್ಶಿಸಿ ಜಯಗಳಿಸಿಕೊಟ್ಟದ್ದಕ್ಕಾಗಿ, ವರ್ಷಾಸನ ಪಡೆದ ವಿಚಾರವನ್ನು ಪ್ರಸ್ತಾಪಿಸಲಾಗಿದೆಯಷ್ಟೆ. ಕ್ರಿ.ಶ.೧೭೪೦ರ ನಂತರ ಪೇಶವೆಗಳ ಆಳ್ವಿಕೆಯ ಅವಸಾನ ಪ್ರಾರಂಭವಾಗುವುದರಿಂದ ಅದಕ್ಕೆ ಮುಂಚೆಯೇ ಅವ್ವನವರು ಈ ವರ್ಷಾಸನವನ್ನು ಪಡೆದಿರಬೇಕು. ೩) ಮೈಸೂರಿನ ಅರಸರಾಗಿದ್ದ ದೊಡ್ಡ ಕೃಷ್ಣರಾಜ ಒಡೆಯರಿಂದಲೂ (೧೭೧೪) ಅವ್ವನವರಿಗೆ ಸನ್ಮಾನ ದೊರೆತಿದೆ. ಅರಸರು ಇವರಿಗೆ ಮೇಣೆ, ನಗನಾಣ್ಯ, ವಸ್ತ್ರಾಭರಣಗಳನ್ನಿತ್ತು ಗೌರವಿಸಿದರು. ಇವರ ವಿದ್ವತ್ತನ್ನು ಕಂಡು ಕೇಳಿದ್ದ ರಾಜರು ಸ್ವತಃ ಇವರನ್ನು ಪಲ್ಲಕ್ಕಿಯಲ್ಲಿ ಕೂರಿಸಿ ವೈಭವದಿಂದ ಅರಮನೆಗೆ ಕರೆದುಕೊಂಡು ಹೋದರೆನ್ನಲಾಗಿದೆ.

೪) ಬಾಗಲಕೋಟೆಯಲ್ಲಿ ಜನಿಸಿದ ಶ್ರೀ ಪ್ರಸನ್ನವೆಂಕಟದಾಸರು (ಕಿ.ಶ.೧೬೮೦/೧೭೫೨) ಈ ಮುದ್ಗಲಾಚಾರ್ಯರ ಶಿಷ್ಯರು. ಇವರಲ್ಲೇ ಶಾಸ್ತ್ರಾಭ್ಯಾಸ ಮಾಡಿದವರು, ಗುರುಗಳನ್ನು ಕುರಿತು 'ಭಜಸಿ ಬದುಕೆಲೋ ಮುದ್ಗಲಾಚಾರ್ಯರನು' ಎಂದು ಸ್ತುತಿಸಿರುವರು. ಅಲ್ಲದೆ 'ಸ್ತ್ರೀಯ ಪಾದ

ನೀರಜಾನುರಕ್ತ ಮುದ್ಗಲಾಸ್ಯಮೇ! ಶ್ರೀ ಗುರೋರು ಮಾನಸಾಂಬಾ ಜಾಲಯೋದದೋಷಧಿಃ' ಎಂದಿದ್ದಾರೆ.

ಮೇಲಣ ಈ ಕೆಲವು ಆಧಾರಗಳಿಂದ ಅವ್ವನವರು ಕ್ರಿ.ಶ.೧೬೭೦ ರಿಂದ ೧೭೫೦ರ ಕಾಲದಲ್ಲಿ ಜೀವಿಸಿದ್ದರೆನ್ನಬಹುದು. ಅವರು ತಮ್ಮ ಕೊನೆಗಾಲವನ್ನು ತಮ್ಮ ಹಿರಿಯರು ಬಾಳಿ ಬದುಕಿದ್ದ ಶೂರ್ಪಾಲಿ ಗ್ರಾಮದಲ್ಲೇ ಕಳೆದು ಅಲ್ಲಿಯೇ ಹರಿಪಾದವನ್ನು ಸೇರಿದ್ದರು. ಇನ್ನೊಂದು ಸ್ವಾರಸ್ಯವಾದ ವಿಚಾರವೆಂದರೆ ಅವ್ವನವರು ತಮ್ಮ ಹಾಡಿನಲ್ಲಿ ಗುರುಪರಂಪರೆ ಹೇಳುತ್ತಾ ಕ್ರಿ.ಶ. ೧೮೯೭ರಲ್ಲಿದ್ದ ಶ್ರೀ ಸತ್ಯಧರ್ಮ ತೀರ್ಥರನ್ನೂ ಸ್ತುತಿಸಿದ್ದಾರೆ. ಬಹುಶಃ ಈ ಹೆಸರನ್ನು ಅಂದು ಹಾಡನ್ನು ಪ್ರತಿ ಮಾಡಿದವರು ಬರೆದು ಸೇರಿಸಿರಬೇಕು; ಅಥವಾ ಅವ್ವನವರು ದೀರ್ಘಾಯುಷಿಗಳಾಗಿದ್ದು ಸುಮಾರು ೧೨೫ ವರ್ಷಗಳ ಕಾಲ ಬಾಳಿ ಬದುಕಿದ್ದಿರಬೇಕು.

ಅವ್ವನವರ ತಂದೆ-ತಾಯಿಯರ ಹೆಸರು ಅವರ ಕೃತಿಯಿಂದಲಾಗಲೀ, ಸಮಕಾಲೀನರಿಂದಾಗಲೀ ಇತರ ದಾಖಲೆಗಳಿಂದಾಗಲೀ ತಿಳಿದುಬರುವುದಿಲ್ಲ. ಅವ್ವನವರಿಗೆ ಭಾಗಮ್ಮ, ಚ.ರಾ.ಚಲ್ಲಮ್ಮ, ಗಣಪಕ್ಕ, ಸುಂದರಾಬಾಯಿ, ಪನ್ನಿ ಲಕ್ಷ್ಮೀಬಾಯಿ ಎನ್ನುವ ಶಿಷ್ಯರಿದ್ದರು ಎಂದು ತಿಳಿದುಬರುತ್ತದೆಯಾದರೂ ಇವರ ಕಾಲದ ಬಗ್ಗೆ ತಿಳಿಯುವುದಿಲ್ಲ.

ಅವ್ವನವರ ನಂತರ ನಮಗೆ ಸಿಗುವ ಮಹಿಳಾಕೀರ್ತನಕಾರ್ತಿ ಎಂದರೆ ಹೆಳವನಕಟ್ಟೆ ಗಿರಿಯಮ್ಮ. ಈಕೆ ಹುಟ್ಟಿದ್ದು ಧಾರವಾಡ ಜಿಲ್ಲೆಯ ರಾಣಿಬೆನ್ನೂರಿನಲ್ಲಿ. ತಂದೆಯ ಹೆಸರು ಬಿಷ್ಟಪ್ಪ ಜೋಯಿಸರು. ೧) ಗಿರಿಯಮ್ಮ ತನ್ನ ಕೃತಿಗಳಲ್ಲಿ ಶ್ರೀ ರಾಘವೇಂದ್ರ ಮಠಾಧೀಶರಾಗಿದ್ದ ಸುಮತೀಂದ್ರ ತೀರ್ಥರನ್ನು, ಉತ್ತರಾದಿ ಮಠಾಧೀಶರಾಗಿದ್ದ ಸತ್ಯಬೋಧ ತೀರ್ಥರನ್ನು ನೆನೆಯುತ್ತಾಳೆ. ೨) ಶ್ರೀ ಗೋಪಾಲದಾಸರಿಂದ ಬಾಲ ಗೋಪಾಲರ ವಿಗ್ರಹವನ್ನು ಮತ್ತು ಮುದ್ರಿಕೆಯನ್ನು ಪಡೆದು ಅನುಗ್ರಹಿತಳಾಗಿದ್ದಳೆಂದು ತಿಳಿದುಬರುತ್ತದೆ. ೩) ಕ್ರಿ.ಶ. ಸುಮಾರು ೧೭೦೦ರಲ್ಲಿ ಇದ್ದ ಕವಿ ಲಕ್ಷ್ಮೀಶನ ಜೈಮಿನಿ ಭಾರತದ ಚಂದ್ರಹಾಸನ ಕಥೆಯನ್ನೇ 'ಚರಿತೆಯ ಮಾಡಿ ವರ್ಣಿಸುವೆ' ಎಂದು ಹೇಳಿಕೊಂಡಿರುವುದರಿಂದ (ಸುಮತೀಂದ್ರ ತೀರ್ಥ ೧೬೯೧-೧೭೨೫, ಸತ್ಯಬೋಧ ಕ್ರಿ.ಶ. ೧೭೪೪-೧೮೯೩, ಗೋಪಾಲದಾಸ ಕ್ರಿ.ಶ.೧೭೨೧-೧೭೬೩). ಗಿರಿಯಮ್ಮನ ಕಾಲ ೧೮ನೇ ಶತಮಾನದ ಪೂರ್ವಾರ್ಧ ಎಂದು ತಿಳಿದುಬರುತ್ತದೆ.

ಗಿರಿಯಮ್ಮನ ನಂತರ ಬರುವ ಹರಿದಾಸಿಯೇ ಹರಪನಹಳ್ಳಿ ಭೀಮವ್ವ. ಈಕೆಯ ಮೊದಲ ಹೆಸರು ಕಮಲಾಕ್ಷಿ. ಇವರು ೧೮೨೩ನೇ ಇಸವಿ ಜುಲೈ ತಿಂಗಳ ೬ನೇ ತಾರೀಕು ನಾರಾಯಣದೇವರ ಕೆರೆ ಎಂಬ ಸ್ಥಳದಲ್ಲಿ ಹುಟ್ಟಿದರು. ನರೆಭಟ್ಟ ವಂಶದ ರಘುನಾಥಾಚಾರ್ಯ ಮತ್ತು ರಾಧಮ್ಮ ದಂಪತಿಗಳ ಜೇಷ್ಠಪುತ್ರಿ ಎಂದು ದೊರೆತ ದಾಖಲೆಗಳ ಪ್ರಕಾರ ದೃಢಪಡುತ್ತದೆ.

ಅವಿಭಜಿತ ಕೋಲಾರ ಜಿಲ್ಲೆಯ ಚಿಂತಾಮಣಿ ತಾಲ್ಲೂಕಿನ ನಿಡಗುರಕಿ ಎಂಬಲ್ಲಿ ಜನಿಸಿದ ನಿಡಗುರಕಿ ಜೀವೂಬಾಯಿ ಕಾಲಗಣನೆಯಲ್ಲಿ ಗಿರಿಯಮ್ಮನವರ ನಂತರ ಕಂಡುಬರುವ ಹರಿದಾಸಿ. ಕೋಲಾರ ಜಿಲ್ಲೆಗೆ ಸೇರಿದ್ದ ಈ ಗ್ರಾಮವು ಈಗ ಚಿಕ್ಕಬಳ್ಳಾಪುರ ಜಿಲ್ಲೆಗೆ ಸೇರಿದೆ. ಇವರ ತಂದೆ

ಶಾನುಭೋಗರಾಗಿದ್ದ ದೇಶಮುಖ ರಾಮಚಂದ್ರರಾಯರು. ತಾಯಿ ರಮಾಬಾಯಿ. ಶಾಲಿವಾಹನ ಶಕ ೧೮೮೯ನೇ ಹೇವಿಳಂಬಿ ನಾಮ ಸಂವತ್ಸರದ ಕಾರ್ತೀಕ ಬಹುಳ ನವಮಿ, ೧೮೯೭ನೇ ನವೆಂಬರ್ ೧೮ರಂದು ಗುರುವಾರಕ್ಕೆ ಇವರ ಜನ್ಮ ದಿನಾಂಕವು ಸರಿಹೊಂದುತ್ತದೆ.

ಜೀವೂಬಾಯಿಯವರ ಜನ್ಮಸ್ಥಳ ಚಿಕ್ಕಬಳ್ಳಾಪುರ ಜಿಲ್ಲೆಯ ಚಿಂತಾಮಣಿ ತಾಲ್ಲೂಕಿನಲ್ಲಿದೆ. ಇದು ಹಿರೇಕಟ್ಟಿಗೇನಹಳ್ಳಿ ಪಂಚಾಯಿತಿಗೆ ಸೇರಿದೆ. ಈ ಗ್ರಾಮದಲ್ಲಿ ಪ್ರಸ್ತುತ 'ಜೀವಮ್ಮಬಾವಿ' ಎಂದು ಕರೆಯಲ್ಪಡುವ ಎರಡು ಬಾವಿಗಳಿವೆ. ಒಂದು ಗ್ರಾಮದ ನಡುವೆ ಇದೆ. ಇದು ಆಕೆ ವಾಸಿಸುತ್ತಿದ್ದ ಮನೆಯ ಹಿತ್ತಲಿನಲ್ಲಿದ್ದಂತಹ ಬಾವಿ. ಇದು ಮುಚ್ಚಿಹೋಗಿ ಸ್ವಲ್ಪ ಮಟ್ಟಿನ ತಗ್ಗು ಮಾತ್ರ ಉಳಿದಿದೆ. ಇದರ ಸುತ್ತಲೂ ದಟ್ಟವಾಗಿ ಕಳ್ಳಿ ಬೆಳೆದು ಜನ ವೀಕ್ಷಣೆಗೆ ದೂರಾಗಿದೆ. ಇನ್ನೊಂದು ಬಾವಿ ಊರಿನ ಆಚೆ ಹೊಲದ ಬಯಲಲ್ಲಿದ್ದು ಸದಾ ನೀರಿನಿಂದ ಕೂಡಿರುತ್ತದೆ. ಅದರ ನೀರನ್ನು ಬೆಳೆಗೆ ಉಪಯೋಗಿಸಲಾಗುತ್ತಿದೆ.

ಜೀವಮ್ಮ ಮತ್ತು ಅವರ ಕುಟುಂಬ ವಾಸಿಸುತ್ತಿದ್ದ ಮನೆ ಪಾಳು ಬಿದ್ದು, ಅಲ್ಲಿ ಈಗ ಯಾವ ಅವಶೇಷಗಳೂ ಕಾಣಸಿಗುವುದಿಲ್ಲ. ಜೀವೂಬಾಯಿಯ ಅಣ್ಣ ಶ್ರೀ ನಾಗೇಶರಾವ್ ಮನೆ ಮತ್ತು ಜಮೀನು ಮಾರಿಕೊಂಡು ಬೆಂಗಳೂರಿಗೆ ಹೋದರೆಂದು ತಿಳಿದುಬರುತ್ತದೆ. ಜೀವಮ್ಮನವರು ಶಾ.ಶಕೆ ೧೯೦೫ ಶ್ರೀ ರುಧಿರೋದ್ಗಾರಿ ಸಂವತ್ಸರ ಉತ್ತರಾಯಣ ವೈಶಾಖ ಬಹುಳ ಚತುರ್ದಶಿ ಗುರುವಾರ ದಿನಾಂಕ ೦೯-೦೬-೧೯೮೩ ರಂದು ನಿಧನ ಹೊಂದಿದರು.

ಯದುಗಿರಿಯಮ್ಮ ಕ್ರಿ.ಶ. ೧೮೨೮ ರಿಂದ ೧೯೦೮ರವರೆಗೆ ಬದುಕಿದ್ದರು. ಕೀರ್ತನೆಗಳ ರಚನಾ ಶೈಲಿಯಿಂದಲೂ ಈ ಕಾಲವು ಸರಿಹೊಂದುತ್ತದೆ. ವಿದ್ವಾನ್ ರಘುಸುತರು ಇದನ್ನೇ ಹೇಳುತ್ತಾರೆ. ಯದುಗಿರಿಯಮ್ಮ ಎಂಬ ಹೆಸರಿನವರು ಇಬ್ಬರು ಇದ್ದು, ಇವರಲ್ಲಿ ಕೀರ್ತನಕಾರರು ಯಾರೆಂಬ ಪ್ರಶ್ನೆ ಎದುರಾಗುತ್ತದೆ. ಈ ಇಬ್ಬರಲ್ಲಿ ರಘುಸುತರ ದೊಡ್ಡಮ್ಮ ಒಬ್ಬರಾದರೆ ಇನ್ನೊಬ್ಬರು ಮಂಡ್ಯದ ಯದುಗಿರಿಯಮ್ಮ. (ಯದುಗಿರಿಯಮ್ಮ ಟ್ರಸ್ಟ್ –ಶ್ರೀ ವೈಷ್ಣವ ಸಾಹಿತ್ಯ ಪ್ರಕಟಣೆಯ ಸಂಸ್ಥೆ) ರಘುಸುತರ ದೊಡ್ಡಮ್ಮ ಯದುಗಿರಿಯಮ್ಮನವರು ಬೆಂಗಳೂರಿನ ಅರಳೇಪೇಟೆ (ಕಾಟನ್‌ಪೇಟೆ) ಗಲ್ಲಿಯೊಂದರಲ್ಲಿ ವಾಸವಾಗಿದ್ದರು. ಇವರು ಭಜನ ಮಂದಿರ ಒಂದನ್ನು ಕಟ್ಟಿದರು. ಇವರೇ ಕೀರ್ತನಕಾರ್ತಿ ಯದುಗಿರಿಯಮ್ಮ ಎಂದು ರಘುಸುತ ಅಭಿಪ್ರಾಯಪಟ್ಟಿದ್ದಾರೆ.

ನಾಡಿಗರ ಶಾಂತಬಾಯಿಯವರು ಶಿವಮೊಗ್ಗ ಜಿಲ್ಲೆಯ ಸಾಗರದವರು. ಇವರ ಕಾಲ ಕ್ರಿ.ಶ. ೧೮೬೧-೧೯೦೧. ತಂದೆಯ ಹೆಸರು ಕೊಪ್ಪ ವೆಂಕಟೇಶಯ್ಯ.

ಓರಾಬಾಯಿ ಲಕ್ಷ್ಮೀದೇವಮ್ಮನವರು ಬಳ್ಳಾರಿ ಜಿಲ್ಲೆಯ ಸಂಡೂರಿನವರು. ಇವರ ತಂದೆ ಸಂಡೂರಿನ ದಿವಾನರಾಗಿದ್ದ ಲಕ್ಷ್ಮಣರಾಯರು. ತಾಯಿ ಗೋದಾವರಿ ಬಾಯಿ. ಇವರ ಕಾಲ ಕ್ರಿ.ಶ.೧೮೬೫.

ಸರಸೀಬಾಯಿಯವರು ಗೌಡಗೆರೆ ಎಂಬಲ್ಲಿ ಜನಿಸಿದರು. ತಂದೆ ಹನುಮಂತರಾಯ. ತಾಯಿ ಕಾವೇರಿ ಬಾಯಿ. ಇವರ ಕಾಲ ಕ್ರಿ.ಶ. ೧೮೮೨.

ನಂಜನಗೂಡು ತಿರುಮಲಾಂಬ ಪ್ರಸಿದ್ಧ ಬರೆಹಗಾರರು. ಇವರು ಅನೇಕ ಕೀರ್ತನೆಗಳನ್ನು ರಚಿಸಿದ್ದಾರೆ. ಇವರ ಕಾಲ ಕ್ರಿ.ಶ. ೧೮೮೭-೧೯೮೨. ಇವರ ತಂದೆ ಕೃಷ್ಣಪ್ಪ ಅಯ್ಯಂಗಾರ್, ತಾಯಿ ಅಲಮೇಲಮ್ಮ.

ರಾಧಾಬಾಯಿಯವರ ಕಾಲ ೧೮೮೯. ಜನ್ಮಸ್ಥಳ ಆಂಧ್ರಪ್ರದೇಶದ ಮದನಪಲ್ಲಿ. ತಂದೆ ಅನಂತರಾಯ, ತಾಯಿ ಇಂದಿರಾಬಾಯಿ. ಇವರ ಸ್ವಂತ ಸ್ಥಳ ಬಂಕಾಪುರ. ಸಾಹಿತಿ ನವರತ್ನರಾಯರು ಇವರ ಸಂಬಂಧಿಕರು.

ಕಳಸದ ಸುಂದರಮ್ಮನವರ ಕಾಲ ಸ್ಪಷ್ಟವಾಗಿ ತಿಳಿದು ಬಂದಿಲ್ಲ. ಚಿಕ್ಕಮಗಳೂರು ಜಿಲ್ಲೆಯಲ್ಲಿ ಕಳಸ ಮತ್ತು ಕಳಸಾಪುರ ಎಂಬ ಎರಡು ಗ್ರಾಮಗಳು ಬರುತ್ತವೆ. ಈಗಿನ ಕಳಸ ಎಂದು ಕರೆಯಲ್ಪಡುವ ಊರು ಹೊರನಾಡಿನ ಸಮೀಪದಲ್ಲಿರುವುದು. ಇಲ್ಲಿ ಕಳಸದ ಸುಂದರಮ್ಮನವರು ಇದ್ದರೆಂಬುದಕ್ಕೆ ಯಾವ ದಾಖಲೆಗಳು ಸಿಕ್ಕಲಿಲ್ಲ, ಬದಲಾಗಿ ಕಳಸಾಪುರ ಎಂದೇ ಪ್ರಸಿದ್ಧವಾಗಿರುವ ಊರು ಹಿಂದೆ ಕಳಸ ಎಂದೇ ಕರೆಯಲ್ಪಡುತ್ತಿತ್ತು. ಸುಂದರಮ್ಮ ಆ ಊರಿನವರೇ ಇರಬೇಕೆಂದು ಅನಿಸುತ್ತಿದೆ; ಅವರ ತಂದೆ ತಾಯಿ ಮತ್ತಿತರ ವಿವರಣೆಗಳು ತಿಳಿದು ಬಂದಿಲ್ಲ.

ಶ್ರೀಮತಿ ಗುಂಡಮ್ಮನವರು ೧೯ನೇ ಶತಮಾನದ ಉತ್ತರಾರ್ಧದಲ್ಲಿದ್ದವರು. ಇವರ ತಂದೆ ಸುಬ್ಬರಾಯ ದಾಸವಯ್ಯ (ಅಂಕಿತ-ಮುದ್ದು ಮೋಹನ ವಿಠಲ). ಸ್ಥಳ ಈಗಿನ ತುಮಕೂರು ಜಿಲ್ಲೆಯ ದೇವರಾಯನ ದುರ್ಗ.

ಸರಸ್ವತಿ ಬಾಯಿಯವರ ಕಾಲ ಕ್ರಿ.ಶ. ೧೯೦೦. ಇವರ ಮೊದಲ ಹೆಸರು ತುಳಸೀಬಾಯಿ. ಸ್ಥಳ ನೆಲಮಂಗಲ. ತಂದೆಯ ಹೆಸರು ವಾಸುದೇವಾಚಾರ್ಯ. ತಾಯಿ ರುಕ್ಮಿಣೀಬಾಯಿ. ಇವರಿಗೆ ವೇದವ್ಯಾಸಾಚಾರ್ಯ ಮತ್ತು ಭೀಮಾಚಾರ್ಯ ಎಂಬ ಸಹೋದರರಿದ್ದರು.

ಅಂಬಾಬಾಯಿ ಎನ್ನುವವರು ಕ್ರಿ.ಶ. ೧೯೦೨ ಸುಮಾರಿಗೆ ಕಂಡುಬರುತ್ತಾರೆ. ಇವರೇ ತಮ್ಮ ಕೀರ್ತನೆಯಲ್ಲಿ (ಅನಂತ ಪದ್ಮನಾಭ ಕಥಾಸಾರ) 'ಧರೆಯೊಳಗೆ ಪುಟ್ಟಿ ೩೬ ಸಂವತ್ಸರವು ಸರಿದುದೀ ಬಹುಧಾನ್ಯಕೆ' ಎಂದು ಹೇಳಿಕೊಂಡಿದ್ದಾರೆ. ತಮಗೆ ಮೂವತ್ತಾರು ವರ್ಷ ವಯಸ್ಸಾದುದರ ನೆನಪಿಗಾಗಿ ೩೬ ಪದ್ಯಗಳನ್ನು ಬರೆದಿರುವುದಾಗಿ ತಿಳಿದುಬರುತ್ತದೆ. ಹಾಗೆಯೇ ಬಹುಧಾನ್ಯ ಸಂವತ್ಸರದ ವಿಜಯದಾಸರ ಆರಾಧನೆಯ ದಿನಕ್ಕೆ ತಮಗೆ ೩೬ ಸಂವತ್ಸರಗಳು ಸರಿದವು ಎಂದು ಹೇಳಿಕೊಂಡಿದ್ದಾರೆ. ಈ ಆಧಾರಗಳ ಅನ್ವಯ ಇವರ ಜನ್ಮದಿನ ಶೋಭನ ಕೃತ ಸಂವತ್ಸರದ ಕಾರ್ತೀಕ ಶುದ್ದ ನವಮಿ (೧೯೦೨) ಎಂದು ಸ್ಪಷ್ಟವಾಗಿ ದಾಖಲಿಸಬಹುದು.

## ಈ ಕೀರ್ತನಕಾರರ ವಿವರಗಳನ್ನು ಕೋಷ್ಟಕದ ಮೂಲಕ ಹೀಗೆ ಸೂಚಿಸಬಹುದು:

| ಕ್ರ . ಸಂ. | ಹರಿದಾಸರ ಹೆಸರುಗಳು | ಸ್ಥಳ | ಕಾಲ ಕ್ರಿ .ಶ. ಸು: | ತಂದೆ– ತಾಯಿಯ ಹೆಸರು | ಪತಿಯ ಹೆಸರು ಮತ್ತು ಸ್ಥಳ | ಅಂಕಿತ ನಾಮ | ಕೃತಿ |
|---|---|---|---|---|---|---|---|
| ೧ | ಗಲಗಲಿ ಅವ್ವ | ಭ 'ೀಗಾಪುರ | ೧೬೭೦– ೧೭೬೦ | ಲಭ 'ವಿಲ್ಲ | ಮುದ್ಗಲಾ ಚಾರ್ಯ, ಬಾಗಲಕೋಟೆ | ರಾಮೇಶ ರಮಿಅರಸು | ಮುಯ್ಯದ ಹಾಡುಗಳು, ಜೋಗುಳದ ಹಾಡುಗಳು, ಸೇತುಬಂಧ 'ದ ಹಾಡುಗಳು, ಮೋರೆಗೆ ನೀರು ತಂದ ಹಾಡು, ಶೃಂಗಾರ ತಾರತಮ್ಯ |
| ೨ | ಹೆಳವನಕಟ್ಟೆ ಗಿರಿಯಮ್ಮ | ರಾಣೆಬೆನ್ನೂರು | ೧೮ನೇ ಶತಮಾನದ ಪೂರ್ವಾರ್ಧ 'ೞ | ಭಿ ಷ್ಟಪ್ಪ ಜೋಯಿಸ | ತಿಪ್ಪರಸ ಮಲೆಬೆನ್ನೂರು | ಹೆಳವನಕಟ್ಟೆ ರಂಗ ಹೆಳವನಕಟ್ಟೆ ವೆಂಕಟ | ಉದ್ಧಾಳಿಕನ ಕಥೆ, ಶಂಕರ ಗಂಡನ ಹಾಡು, ಸೀತಾ ಕಲ್ಯಾಣ, ಚಂದ್ರ ಹಾಸನ ಕಥೆ, ಬ್ರ ಹ್ಮಕೊರವಂಜಿ, ಲವಕುಶರ ಕಾಳಗ ಮತ್ತು ಬಿಡಿ ಕೀರ್ತನೆಗಳು |
| ೩ | ಹರಪನಹಳ್ಳಿ ಭಿ ೀಮವ್ವ (ಕಮಲಾಕ್ಷಿ) | ನಾರಾಯಣ ದೇವರ ಕೆರೆ | ೬–೭–೧೮೨೩ | ರಘುನಾಥಾ ಚಾರ್ಯ ರಾಘಮ್ಮ | ಮುನಿಯಪ್ಪ ಹರಿಸಮುದ್ರ | ಭಿ ೀಮೇಶ ಕೃಷ್ಣ | ನಳಚರಿತ್ರೆ , ಮುಯ್ಯಿ ಕೊಟ್ಟದ್ದು, ಪತಿದಾನ ಕೊಟ್ಟದ್ದು, ಶಕುಂತಲಾ– ದುಷ್ಯಂತರ ಕಥೆ, ರತಿಕಲ್ಯಾಣ, ಸುಭ 'ದ್ರ ಕಲ್ಯಾಣ, ಮತ್ತು ಇತರ ಬಿಡಿ ಕೀರ್ತನೆಗಳು ಮತ್ತು ವ್ರ ತ ಕಥೆಗಳು |
| ೪ | ಯದುಗಿರಿಯವ ್ಮ | ಬೆಂಗಳೂರು | ೧೮೨೮– ೧೯೦೮ | – | ಲಭ 'ವಿಲ್ಲ | ಮುದ್ದು ವೆಂಕಟ, ವೆಂಕಟಕೃಷ್ಣ | ಬಿಡಿ ಕೀರ್ತನೆಗಳು |
| ೫ | ನಾಡಿಗರ ಶಾಂತಾಬಾಯಿ | ಕೊಪ್ಪ (ಶಿವಮೊಗ್ಗ) | ೧೮೬೦– ೧೯೦೧ | ವೆಂಕಟೇಶಯ್ಯ – | ಅಪ್ಪಯ್ಯ, ಭ 'ಟ್ಕಳ | | ಬಿಡಿ ಕೀರ್ತನೆಗಳು |
| ೬ | ಓರಾಬಾಯಿ ಲಕ್ಷ್ಮಿದೇವಮ್ಮ (ಗುತ್ತ್ಯೆವ್ವ) | ಸಂಡೂರು | ೧೮೬೫– | ಲಕ್ಷ್ಮಣ ರಾಯ ಗೋದಾವರಿ ಬಾಯಿ | ಮಧ 'ರಾಯ, ಗುತ್ತಿ | ನರಸಿಂಹ ವಿಠಲ | ದ್ರೌ ಪತೀ ವಸ್ತ್ರಾಪಹರಣ, ರಾಮದೇವರ ಹಾಡು, ಸೌಗಂದಿ , ಕಾ ಪುಷ್ಪ, ಸಕ್ಕೂಬಾಯಿ ಹಾಡು, ಗೊಲ್ಲತಿ ಹಾಡು, ಚೇಳಿನ ಹಾಡು, ಸ್ವರ್ಣಗೌರಿ ಕಥೆ, ಶ್ರಿ ೀಸತ್ಯ ನಾರಾಯಣ ಕಥೆ, ಶ್ರಿ ೀಕೃಷ್ಣ ಬಾಲಲೀಲೆ, ಮಂಗಳಗೌರಿ ಹಾಡು, ಜಲಕ್ರಿ ೀಡೆ ಹಾಡು, ಇತರ ಬಿಡಿ ಕೀರ್ತನೆಗಳು ಮತ್ತು ವ್ರ ತ ಕಥೆಗಳು |
| ೭ | ಸರಸಾ ಬಾಯಿ | ಗೌಡಗೆರೆ | ೧೮೮೨ | ಬಾಪು ಹ ನುಮಂತ ರಾಯ ಕಾವೇರಿ | ಎಂ. ಬಿ.ಕೃಷ್ಣ ರಾಯ,ಚಿ ತ್ರ ದುರ್ಗ | ರಮಾವಲ್ಲಭ ' ವಿಠಲ | ಬಿಡಿ ಕೀರ್ತನೆಗಳು |
| ೮ | ನಂಜನಗೂಡು ತಿರುಮಲಾಂಬ | ನಂಜನ ಗೂಡು | ೧೮೮೭– ೧೯೮೨ | ವೆಂಕಟಕೃಷ್ಣ ಅಯ್ಯಂಗಾರ್ ಅಲಮೇಲಮ್ಮ | ಲಭ 'ವಿಲ್ಲ | ಶೇಷಗಿರೀಶ, ಶೇಷಶೈಲಾವಾಸ, ಶೇಷಗಿರಿವಿರ, ಶೇಷಾದ್ರಿ ನಾಥ, ಶೇಷಶೈಲಧ ಾಮ, ಶೇಷಾಚಲ ನಿಲಯ, ಶೇಷಶಯನ, | ಭ 'ದ್ರ ಗೀತಾವಳಿ(ಮದುವೆ ಹಾಡುಗಳು), ಮತ್ತು ಇತರ ಬಿಡಿ ಕೀರ್ತನೆಗಳು |
| ೯ | ಬಳ್ಳಾರಿ ರಾಧ ಾಬಾಯಿ | ಮದನಪಲ್ಲಿ (ಆಂ.ಪ್ರ ) | ೧೮೮೯ | ಅನಂತ ರಾಯರು ಇಂದಿರಾಬಾಯಿ | ಶ್ರಿ ೀನಿವಾಸ, ಹರ ಪನಹಳ್ಳಿ | ವೆಂಕಟವಿಠಲ, ಶ್ರಿ ೀರಾಘವೇಂದ | ಬಿಡಿ ಕೀರ್ತನೆಗಳು, |
| ೧೦ | ನಿಡಗುರ್ಕಿ ಜೀವೂಬಾಯಿ | ನಿಡಗುರ್ಕಿ | ೧೮–೧೧– ೧೯೯೭ | ರಾಮಚಂದ್ರ ರಾಯ ರಮಾಬಾಯಿ | ಲಭ 'ವಿಲ್ಲ | ಶ್ರಿ ೀಕಮಲನಾಭ ' ವಿಠಲ | ಶ್ರಿ ೀಹರಿಲೀಲ, ಶ್ರಿ ೀರಾಮ ಜನನ ಮತ್ತು ಸೀತಾ ಕಲ್ಯಾಣ, ಶ್ರಿ ೀಕೃಷ್ಣ ಲೀಲಾ, ಸಮುದ್ರ ಮಥ ನ, ಶ್ರಿ ೀಪುರಂದರ ವಿಠಲ ದಾಸರ ಚರಿತ್ರೆ , ಶ್ರಿ ೀಹರಿ ಮಾನಸಪೂಜಾ, ಗಾವಲಚರಿತ್ರೆ , ಶ್ರಿ ೀ ವರ ಮಹಾಲಕ್ಷ್ಮಿಯ ಕಥೆ, ಶ್ರಿ ೀ ಪಾಂಡುರಂಗ ಚರಿತ್ರೆ , ರಾಧ ಾಮಾಧ 'ವ ವಿಲಾಸ, ಬಿಡಿ ಕೀರ್ತನೆಗಳು |
| ೧೧ | ಕಳಸದ ಸುಂದರಮ್ಮ | | | | ಲಭ 'ವಿಲ್ಲ | ಕಾಳಿಮಧ 'ೞ ನಕೃಷ್ಣ | ಬಿಡಿ ಕೀರ್ತನೆಗಳು, |
| ೧೨ | ಗುಂಡಮ್ಮ | ದೇವರಾಯನ ದುರ್ಗ | ೧೯ನೇ ಶತಮಾನದ ಉತ್ತರಾಧ 'ೞ | ಮುದ್ದು ಮೋಹನ ವಿಠಲ ದಾಸ | ಪೆನುಗೊಂಡೆ ಪುಟ್ಟಾ ಚಾರ್ಯ, | ರುಕ್ಮಿಣೀ ವಿಠಲ | ಬಿಡಿ ಕೀರ್ತನೆಗಳು |
| ೧೩ | ಸರಸ್ವತೀ ಬಾಯಿ (ತುಳಸೀ ಬಾಯಿ) | ನೆಲಮಂಗಲ | ೧೯೦೦ | ವಾಸುದೇವಾ ಚಾರ್ಯ ರುಕ್ಮಿಣೀಬಾಯಿ | ವ್ಯಾಸಾಚಾರ್ಯ, | ಶ್ರಿ ೀ ಶ್ರಿ ೀನಿವಾಸ | ಕೃಷ್ಣ ಲೀಲೆ, ಪ್ರ ಹ್ಲಾದ ಚರಿತ್ರೆ , ಕೃಷ್ಣ ನ ಕಥೆ, ಪ್ರ ಮೀಳೆ ಕಾಳಗ, ಶ್ರಿ ೀನಿವಾಸ ಕಲ್ಯಾಣ, ಮತ್ತು ಬಿಡಿ ಕೀರ್ತನೆಗಳು |
| ೧೪ | ಅಂಬಾಬಾಯಿ | ಚಿತ್ರ ದುರ್ಗ | ೧೯೦೨– ೧೯೪೫ | ಭಿ ೀಮಸೇನ ರಾಯ ಭ ಾರತೀಬಾಯಿ ು(ವೆಂಕಮ್ಮ) | ಹನುಮಂತಾ ಚಾರ್ಯ, ಗೋ ಪಾಲಪುರ | ಗೋಪಾಲಕೃಷ್ಣ ವಿಠಲ | ಶ್ರಿ ೀಕೃಷ್ಣ ಬಾಲಲೀಲೆ ಜೋಗುಳ,ಶ್ರಿ ೀವೆಂಕಟೇಶ ಸ್ತೋತ್ರ (೧) (೨), ಸೀತಾಪತಿ ವಿಠಲದಾಸಳ ನಿರ್ಯಾಣ ಪದ ಮತ್ತು ಬಿಡಿ ಕೀರ್ತನೆಗಳು, ವ್ರ ತಕಥೆಗಳು |

**೨.೨ ಮಹಿಳಾಕೀರ್ತನಕಾರರು ಎದುರಿಸಿದ ಸಂಕಷ್ಟಗಳು ಮತ್ತು ದೊರೆತ ಆಶ್ರಯ-ಪ್ರೋತ್ಸಾಹ:**

**ಎದುರಿಸಿದ ಸಂಕಷ್ಟಗಳು:** ಹಿಂದೂ ಸ್ತ್ರೀಯರು ಒಳ್ಳೆಯ ಗಂಡನನ್ನು ಪಡೆಯಬೇಕೆಂದು ಅನೇಕ ದೇವರನ್ನು ಪೂಜಿಸುತ್ತಾರೆ, ವ್ರತಗಳನ್ನು ಆಚರಿಸುತ್ತಾರೆ. ಸ್ಕಂದ ಪುರಾಣವು "ಸ್ತ್ರೀಗೆ ಪತಿಯೇ ಪರದೈವ, ಗುರು, ಬಂಧು, ಪುಣ್ಯಕ್ಷೇತ್ರ, ಪ್ರಾಣಕ್ಕಿಂತ ಹೆಚ್ಚು" ಎಂದಿದೆ. "ತಂತಿಯಿಲ್ಲದೆ ವೀಣೆ ನುಡಿಸಲಾಗದು, ಚಕ್ರವಿಲ್ಲದ ಬಂಡಿ ಸಾಗಲಾಗದು, ನೂರು ಮಕ್ಕಳನ್ನು ಹೆತ್ತಿದ್ದರೂ ಪತಿಯಿಲ್ಲದೆ ಪತ್ನಿ ಸುಖ ಹೊಂದುವುದಿಲ್ಲ" ಎಂದು ವಾಲ್ಮೀಕಿ ರಾಮಾಯಣದ ಅಯೋಧ್ಯಾ ಕಾಂಡದ ೩೯ನೇ ಸಂಧಿಯ ೨೯ನೇ ಶ್ಲೋಕದಲ್ಲಿ ಹೇಳಿದೆ. ಪತ್ನಿಯ ಪಾಲಿಗೆ ಪತಿಯು ಇಷ್ಟೊಂದು ಪ್ರಮುಖನಾಗಿರುವಾಗ ಅವನ ಆಯ್ಕೆಯ ವಿಷಯದಲ್ಲಿ ಮಾತ್ರ ಸ್ವಾತಂತ್ರ್ಯ ನೀಡಲಿಲ್ಲ. ವಿಧಿ-ಋಣಾನುಬಂಧದ ನೆಪದಲ್ಲೇ ಸ್ತ್ರೀಯು ಹಸೆಮಣೆ ಏರುವಂತಾಗಿದೆ.

ಮಹಿಳೆಯು ಬಾಲ್ಯ ವಿವಾಹದ ಕಪಿಮುಷ್ಟಿಗೆ ಸಿಕ್ಕಿ ಋತುಮತಿಯಾಗುವ ಮುನ್ನವೇ ವಿವಾಹ ಬಂಧನಕ್ಕೆ ಸಿಲುಕುತ್ತಿದ್ದಳು. ಮಹಿಳೆ ಶಿಕ್ಷಣ ವಂಚಿತ ವರ್ಗಕ್ಕೆ ಪ್ರತಿನಿಧಿ ಎಂದು ಹೇಳಬಹುದಾಗಿತ್ತು. ವಿವಾಹಾನಂತರವಂತೂ ಅವರಿಗೆ ಶಿಕ್ಷಣದ ಅವಕಾಶಗಳೇ ಇರಲಿಲ್ಲ. ಅವಳ ಒಂದು ಮುಟ್ಟು ಕೂಡ ಸಂತಾನಾಭಿವೃದ್ಧಿಯಿಲ್ಲದೆ ವ್ಯರ್ಥವಾಗಬಾರದೆಂದು ಭಾವಿಸಿದ್ದರು. ಇದರಿಂದಾಗಿ ಮಹಿಳಾಕೀರ್ತನಕಾರರು ಪಟ್ಟಪಾಡು ಹೇಳತೀರದು. ಇವರು ಬಾಲ್ಯದ ಸಹಜ ಸವಿಯನ್ನೇ ಕಾಣದಾದರು. ಹೀಗೆ ಬಾಲ್ಯ ವಿವಾಹಕ್ಕೆ ಸಿಲುಕಿಕೊಂಡ ಹೆಚ್ಚಿನವರು ಶಿಕ್ಷಣ ವಂಚಿತರು, ಕೆಲವರು ಹೆಚ್ಚೆಂದರೆ ಪ್ರಾಥಮಿಕ ಶಿಕ್ಷಣವನ್ನು ಪಡೆದಿದ್ದರು.

ಗಲಗಲಿ ಅವ್ವನವರಿಂದೇ ಇದರ ಮೊದಲ ಅಧ್ಯಾಯವೆಂದರೆ ಸರಿಯಾದೀತು. ಇವರದು ಒಂದು ವಿಚಿತ್ರ ಕೌಟುಂಬಿಕ ಸನ್ನಿವೇಶ. ಬಾಗಲಕೋಟೆಯ ಪಂಡಿತರಾದ ಮುದ್ಗಲಾಚಾರ್ಯರು ವಿದ್ವಾಂಸರಾದ ತಮ್ಮ ಐದು ಜನ ಗಂಡು ಮಕ್ಕಳೊಡನೆ ಮೈಸೂರಿನ ರಾಜಾಸ್ಥಾನಕ್ಕೆ ಹೋಗಿದ್ದರಂತೆ. ವಾದ ವಿವಾದದಲ್ಲಿ ಮೈಸೂರ ವಿದ್ವಾಂಸರನ್ನು ಮಣಿಸಿ ಆಸ್ಥಾನದಿಂದ ಸನ್ಮಾನಿತರಾಗಿ ಹಿಂದಿರುಗಿ ಬರುವಾಗ ಭೋಗಾಪುರ ಎಂಬ ಗ್ರಾಮದ ಭೋಗಾಪರೇಶ್ವರ ದೇವಸ್ಥಾನದಲ್ಲಿ ಉಳಿದುಕೊಂಡಿದ್ದರು. ಆ ಊರಿನ ಶಾನುಭೋಗರ ಮಗಳಾದ ಹನ್ನೆರಡು ವರ್ಷದ ಗಲಗಲಿ ಅವ್ವನವರು ತಂದೆಯೊಂದಿಗೆ ದೇವಸ್ಥಾನದಲ್ಲಿ ಓಡಾಡಿಕೊಂಡಿದ್ದರು. ಅವರನ್ನು ನೋಡಿ ಮದುವೆಯಾಗಲು ನಿರ್ಧರಿಸಿದ ಮುದ್ಗಲಾಚಾರ್ಯರು ಮಕ್ಕಳ ಅನುಮತಿ ಪಡೆದು ಅವ್ವನವರ ತಂದೆ ಶಾನುಭೋಗರಿಗೆ ಸಾವಿರದ ಇನ್ನೂರು ರೂಗಳನ್ನು ವಧುದಕ್ಷಿಣೆಯಾಗಿ ಕೊಟ್ಟು ಮದುವೆಯಾದರು. ಆಗ ಮುದ್ಗಲಾಚಾರ್ಯರಿಗೆ ತೊಂಬತ್ತು ವರ್ಷ ಅವ್ವನವರಿಗೆ ಹನ್ನೆರಡು. ಈ ಮದುವೆಯು ಆ ಕಾಲಕ್ಕೆ ಅಸಹಜವಾಗಿ ತೋರಿರಲಿಲ್ಲ. ಹೆಣ್ಣಿನ ಭಾವನೆಗಳಿಗೆ, ಅಂತರಂಗದ ಧ್ವನಿಗಳಿಗೆ ಹೆಚ್ಚು ಪ್ರಾಧಾನ್ಯತೆ ನೀಡುತ್ತಿರಲಿಲ್ಲವಾದ್ದರಿಂದ ಬಾಲ್ಯ ವಿವಾಹವು ಸಹಜವಾಗಿತ್ತು. ಮದುವೆಯಾದ ಎಂಟು ದಿನಕ್ಕೆ ಮುದ್ಗಲಾಚಾರ್ಯರು ಹರಿಪಾದ ಸೇರಿದರು. ಮರಣಹೊಂದುವ ಮುಂಚೆ ತಮ್ಮ ಮಕ್ಕಳನ್ನು ಕರೆದು 'ವಿಧವೆ ಹೆಂಡತಿಗೆ ನೀವೇ ವಿದ್ಯಾಭ್ಯಾಸ ಮಾಡಿಸಬೇಕು' ಎಂದು ಹೇಳಿದರು.

ಹೆಳವನಕಟ್ಟೆ ಗಿರಿಯಮ್ಮನವರದು ಭಿನ್ನವಾದ ಬದುಕು. ಸಾಂಸಾರಿಕ ಬದುಕಂತೂ ವಚನಕಾರ್ತಿ ಮಹದೇವಿಯನ್ನು ನೆನಪಿಸುತ್ತದೆ. ಆದರೆ ಇವಳದ್ದು ಪ್ರತಿಭಟನೆಯ ಧ್ವನಿಯಿಲ್ಲದ, ತನ್ನ ಮಿತಿಯಲ್ಲಿಯೇ ಪರಿಹಾರವನ್ನು ಕಂಡುಕೊಂಡ ಬದುಕು. ಗಿರಿಯಮ್ಮನ ಕೃತಿಗಳಲ್ಲಿ ಅವಳ ಬದುಕಿನ ಚಿತ್ರಣಗಳು ಕಂಡುಬರುವುದಿಲ್ಲ.

ತಂದೆ-ತಾಯೆಂಬುದನು ನಾನೊಂದು

ಗುರುತನವನರಿಯೇ ನಿಮ್ಮ ಕಂದಳೆನೆಸಿ

ಕಡೆಹಾಯಿಸು ಹೆಳವನಕಟ್ಟೆ ರಂಗ

ಎನ್ನುವ ಸಾಲುಗಳಲ್ಲಿ ಚಿಕ್ಕ ವಯಸ್ಸಿನಲ್ಲಿಯೇ ತಬ್ಬಲಿಯಾದಳೆಂಬುದು ಸ್ಪಷ್ಟವಿದೆ. ತಂದೆ-ತಾಯಿಯನ್ನು ಕಳೆದುಕೊಂಡ ಇವಳು ತೀವ್ರ ಯಾತನೆಯನ್ನು ಅನುಭವಿಸಿದ್ದಾಳೆ. ತಂದೆಯಂತಹ ಚಿಕ್ಕಪ್ಪನ ಆಶ್ರಯ ಅವಳಿಗೆ ದೊರೆಯುತ್ತದೆ. ಆತ ದೈವಭಕ್ತ. ಮನೆಯ ವಾತಾವರಣವು ದೇವರೆಡೆಗೆ ಅವಳ ಒಲವು ಹರಿಯುವಂತೆ ಮಾಡಿರಬೇಕು.

ಗಿರಿಯಮ್ಮನಿಗೆ ೧೦-೧೨ ವರ್ಷವಾದಾಗ ಮಲೆಬೆನ್ನೂರಿನ ಶಾನುಭೋಗ ಕೃಷ್ಣಪ್ಪನವರ ಮಗ ತಿಪ್ಪರಸನೊಡನೆ ವಿವಾಹವಾಗುತ್ತದೆ. ಪ್ರತಿಭಟಿಸದ ಗಿರಿಯಮ್ಮ ಮದುವೆಯಾಗಿ ಸ್ವಲ್ಪ ಕಾಲಾನಂತರ ಸಂಸಾರದಲ್ಲಿ ವಿರಕ್ತಳಾಗಿ ಒಂದು ನಿರ್ಧಾರಕ್ಕೆ ಬರುತ್ತಾಳೆ. ಮನೆಯಲ್ಲಿ ಗಂಡನನ್ನೂ ಅತ್ತೆ ಮಾವಂದಿರನ್ನೂ ಒಪ್ಪಿಸಿ ಆ ವಂಶದ ಉದ್ಧಾರಕ್ಕೋಸ್ಕರ ಪತಿಗೆ ಇನ್ನೊಂದು ಮದುವೆ ಮಾಡಿಸಿ ಮನೆಯಲ್ಲಿ ಹಿರಿಯಕ್ಕನಂತೆ ಬಾಳಿದಳು. ಭಗವಂತನ ನಾಮಸ್ಮರಣೆ, ಸಾಹಿತ್ಯ ರಚನೆಯಲ್ಲಿ ತೊಡಗಿಕೊಂಡಳು. ಇಂತಹ ಸಾಂಸಾರಿಕ ಪರಿಸಿತ್ಥಿಯ ಹೆಣ್ಣುಮಗಳ ಮಾನಸಿಕ ಹೋರಾಟ, ಸಮಾಜದ ನೋಟ, ಎದುರಿಸಬೇಕಾದ ಪ್ರಶ್ನೆಗಳು, ಸಂಕಷ್ಟಗಳನ್ನು ಯಾರೂ ಕಲ್ಪಿಸಿಕೊಳ್ಳಬಹುದಾಗಿದೆ.

ಹರಪನಹಳ್ಳಿ ಭೀಮವ್ವನರಿಗೆ ಹನ್ನೊಂದನೇ ವಯಸ್ಸಿನಲ್ಲೇ ರಾಯದುರ್ಗ ತಾಲ್ಲೂಕು ಹರೇಸಮುದ್ರ ಗ್ರಾಮದ ಕುಲಕರ್ಣಿ ವಂಶಸ್ಥರಾದ ಮುನಿಯಪ್ಪ ಎಂಬುವರೊಡನೆ ವಿವಾಹವಾಯಿತು. ಜನ್ಮಸ್ಥಳವಾದ ನಾರಾಯಣದೇವರ ಕೆರೆಯನ್ನು ಬಿಟ್ಟು ಹರಪನಹಳ್ಳಿಗೆ ಬಂದರು. ಭೀಮವ್ವನವರಿಗೆ ಹನ್ನೊಂದು ವರ್ಷವಾದರೆ ಪತಿಗೆ ನಲವತ್ತೈದು ವರ್ಷ. ಮದುವೆಯಾದ ಹದಿನಾಲ್ಕು ವರ್ಷಗಳು ಅವರಿಗೆ ಮಕ್ಕಳಿರಲಿಲ್ಲ. ನಂತರ ಇಬ್ಬರು ಮಕ್ಕಳಾದರೂ ಕಷ್ಟ ಪರಂಪರೆಗಳು ಬೆನ್ನುಹತ್ತಿದವು. ಅವರು ಮೂವತ್ತೈದನೇ ವಯಸ್ಸಿಗೆ ಪತಿಯನ್ನು ಕಳೆದುಕೊಂಡರು. ಅವರ ಕನಸಿನಲ್ಲಿ ಕಂಡಂತೆ ಮನೆಯಲ್ಲಿ ಕಳ್ಳತನವಾಗಿ ಎಲ್ಲವನ್ನೂ ಕಳೆದುಕೊಂಡರು. ಚಿಕ್ಕ ಮಕ್ಕಳನ್ನು ಸಂರಕ್ಷಣೆ ಮಾಡುತ್ತಾ ವ್ರತಾಚರಣೆ, ಸಾಹಿತ್ಯ ರಚನೆಯಲ್ಲಿ ಬದುಕು ನಡೆಸಿದರು.

ಯದುಗಿರಿಯಮ್ಮನವರು ಹುಟ್ಟಿದ್ದು-ಸೇರಿದ್ದು ಕೂಡ ದೊಡ್ಡ ಕುಟುಂಬ. ಯಾವಾಗಲೂ ಮನೆಗೆಲಸ ಹೆಚ್ಚು. ವೈಧವ್ಯ ಇವರನ್ನೂ ಕಾಡಿದೆ. ಇಬ್ಬರು ಹೆಣ್ಣು ಮಕ್ಕಳಿದ್ದರೂ ಗಂಡು ಸಂತಾನವಿಲ್ಲವೆಂಬ ಕೊರಗು ಅಮ್ಮನವರಿಗೆ ಇತ್ತು. ಇವರೆಡೂ ದೇವರತ್ತ ಅವರ ಒಲವು

ಹರಿಯುವಂತೆ ಮಾಡಿತು. ಮಕ್ಕಳ ಮೊಮ್ಮಕ್ಕಳ ಪಾಲನೆ, ಮನೆಗೆಲಸ, ತುಳಸೀತೋಟದ ಪ್ರವಚನ ಹರಿಕೀರ್ತನೆಗಳಲ್ಲಿಯೇ ಬದುಕನ್ನು ಸವೆಸಿದರು.

ನಾಡಿಗರ ಶಾಂತಾಬಾಯಿ ಎಂಬ ಹರಿದಾಸಿಯು ಸಾಕಷ್ಟು ಸಾಂಸಾರಿಕ ಕಷ್ಟ ಕೋಟಲೆಗಳನ್ನು ಎದುರಿಸಿದರು ಇದರಿಂದಾಗಿಯೇ ಅವರ ಮನಸ್ಸು ಆಧ್ಯಾತ್ಮಿಕದ ಕಡೆ ತಿರುಗಿತು. ಈ ಬಗ್ಗೆ ದಾಖಲೆಗಳು ಇಲ್ಲದಿದ್ದರೂ ಅವರು ಬರೆದಿರುವ ಸಾಕಷ್ಟು ಪದ್ಯಗಳಲ್ಲಿ ಇದರ ಚಿತ್ರಣವಿದೆ.

ಓರಾಬಾಯಿ ಲಕ್ಷ್ಮಿದೇವಮ್ಮನವರು ತಮ್ಮ ಐದನೇವಯಸ್ಸಿನಲ್ಲಿ ಸೋದರಮಾವನ ಮಗ ೧೧ವರ್ಷದ ಮಧ್ವರಾಯನನ್ನು ವಿವಾಹವಾದರು. ಆಡಿಕೊಂಡಿರಬೇಕಾದ ವಯಸ್ಸಿನಲ್ಲಿ ಮದುವೆ, ಪೂಜೆ–ಮನಸ್ಕಾರ, ವ್ರತ–ನೇಮ, ಇತ್ಯಾದಿಗಳನ್ನು ಅನುಸರಿಸಬೇಕಾಗುತ್ತದೆ. ಮಗು ಹುಟ್ಟಿದರೂ ಉಳಿಯುವುದಿಲ್ಲ. ಮಧ್ವರಾಯನ ತಂಗಿ ಭಾಗ್ಯಮ್ಮನವರ ಮಗ ಕೃಷ್ಣಮೂರ್ತಿಯನ್ನು ದತ್ತು ತೆಗೆದುಕೊಳ್ಳುತ್ತಾರೆ. ಆದರೆ ಪುತ್ರಶೋಕ ನಿರಂತರವಾಗುತ್ತದೆ. ಇದು ಆಧ್ಯಾತ್ಮಕ್ಕೆ ಮೊರೆ ಹೋಗುವಂತೆ ಮಾಡುತ್ತದೆ. ತಮ್ಮ ಐವತ್ತೆರಡನೆಯ ವಯಸ್ಸಿನಲ್ಲಿ ಪತಿಯನ್ನು ಕಳೆದುಕೊಳ್ಳುತ್ತಾರೆ.

ಸರಸ್ವತಿಬಾಯಿಯವರ ಪತಿ ಎಂ.ಬಿ. ಕೃಷ್ಣರಾಯ ನ್ಯಾಯಾಧೀಶರು. ಸರಸ್ವತಿಬಾಯಿ ಇವರ ಮೂರನೇ ಹೆಂಡತಿ. ಎಂಟು ಮಕ್ಕಳು. ಐವತ್ತೆರಡನೆ ವಯಸ್ಸಿನಲ್ಲಿ ಪತಿಯ ನಿಧನ. ಸಂಸಾರದ ಕೋಟಲೆಗಳನ್ನು ನುಂಗಿಕೊಂಡು ಶತಾಯುಷಿಗಳಾಗಿ ಬದುಕಿದರು. ಐದು ತಲೆಮಾರನ್ನು ಕಂಡ ಮಕ್ಕಳು, ಮೊಮ್ಮಕ್ಕಳು, ಮರಿಮಕ್ಕಳೊಂದಿಗೆ ಬದುಕಿದ ತುಂಬು ಜೀವ.

ನಂಜನಗೂಡು ತಿರುಮಲಾಂಬನವರು ಚಿಕ್ಕ ವಯಸ್ಸಿನಲ್ಲಿಯೇ ಮದುವೆಯಾಗಿ ಹದಿನಾಲ್ಕನೇ ವಯಸ್ಸಿನಲ್ಲಿ ವಿಧವೆಯಾದರು. ತಂದೆಯ ಆಶ್ರಯದಲ್ಲಿ ಬೆಳೆದರು. ಅವರ "ಭಕ್ತಿ ಗೀತಾವಳಿ" ಎಂಬ ಕಾವ್ಯ ನೊಂದ ಸ್ತ್ರೀಯೊಬ್ಬಳು ತನ್ನ ಜೀವನವನ್ನೆಲ್ಲಾ ಪರಮಾತ್ಮನ ದಿವ್ಯ ಸಾನಿಧ್ಯಕ್ಕಾಗಿ ಹಂಬಲಿಸುವ ಸುಂದರ ಕೀರ್ತನೆಗಳನ್ನೊಳಗೊಂಡಿದೆ. ಇದು ತಿರುಮಲಾಂಭರವರ ಮನಸ್ಥಿತಿಗೆ ಸಾಕ್ಷಿಯಾಗುತ್ತದೆ. ಹಲವು ಬಾರಿ ತನ್ನನ್ನು 'ಸಲಹೋ' ಎಂದು ಪರಮಾತ್ಮನನ್ನು ಬೇಡಿಕೊಂಡಿದ್ದಾರೆ.

ನಿಡಗುರ್ಕಿ ಜೀವೂಬಾಯಿ ಸಂಪ್ರದಾಯಸ್ಥ ಕುಟುಂಬದ ಹೆಣ್ಣುಮಗಳು. ಆಗಿನ ಸಂಪ್ರದಾಯದಂತೆ ಅವರ ಹತ್ತನೆಯ ವರ್ಷದಲ್ಲಿ ಸೋದರಮಾವನೊಂದಿಗೆ ಬಾಲ್ಯವಿವಾಹವಾಯಿತು. ಆದರೆ ಹನ್ನೊಂದನೇ ವಯಸ್ಸಿನಲ್ಲೇ ವಿಧವೆಯಾದರು. ಶಾಶ್ವತವಾಗಿ ತವರಲ್ಲೇ ನೆಲೆಸಿದರು. ಮದುವೆಯಾದರೂ ಗಂಡನ ಮನೆ ಕಾಣದಾದರು. ಮದುವೆ ಎನ್ನುವುದರ ಅರ್ಥ ತಿಳಿಯುವುದರೊಳಗೆ ವಿಧವೆಯಾದರು. ತಲೆ ಬೋಳಿಸಿಕೊಂಡು ಕೆಂಪು ಸೀರೆಯುಟ್ಟು 'ಮಡಿಯಾದರು'. ದೊಡ್ಡವಳಾದಂತೆ ಮನೆಗೆಲಸ ದುಡಿಮೆಗಳು ಹೆಚ್ಚಾದವು. ದೊಡ್ಡ ಕುಟುಂಬವಾದ್ದರಿಂದ ಬಂದು ಹೋಗುವವರು, ಹೆಣ್ಣು ಮಕ್ಕಳ ಬಸಿರು ಬಾಣಂತನಗಳು, ಮನೆಯಲ್ಲಿ ತುಂಬಿದ ಗೋವುಗಳ ಸೇವೆಯಲ್ಲಿ ದಣಿವೆನ್ನದೆ ದುಡಿದರು. ತಾಯಿಯ ಮರಣದವರೆಗೂ ಅದೇ ಪರಿಸ್ಥಿತಿ ಮುಂದುವರೆಯಿತು. ಅವರ ಮರಣಾನಂತರ ತಂದೆಯೊಂದಿಗೆ ಬೆಂಗಳೂರು ಸೇರಿದರು. ಅಣ್ಣ ತಮ್ಮಂದಿರ ಮನೆಯಲ್ಲೂ ಬದುಕು ಸವೆಸಿದರು.

ಹದಿನೈದನೇ ವಯಸ್ಸಿನಲ್ಲಿ ಶ್ರೀನಿವಾಸರೊಡನೆ ಮದುವೆಯಾದ ಬಳ್ಳಾರಿ ರಾಧಾಬಾಯಿಯವರದು ಸುಖೀಸಂಸಾರ. ಆರು ಗಂಡು, ಮೂರು ಹೆಣ್ಣು ಮಕ್ಕಳು ಇವರ ಸಂತಾನ. ಕಳಸದ ಸುಂದರಮ್ಮ ಮತ್ತು ಗುಂಡಮ್ಮನವರಿಗೂ ಲೌಕಿಕ ಕಷ್ಟಗಳು ಕಾಡಿದ ದಾಖಲೆಗಳಿಲ್ಲ. ನಾಕು ಗಂಡು, ನಾಕು ಹೆಣ್ಣು ಮಕ್ಕಳು ಇವರ ಸಂತಾನ ಭಾಗ್ಯ.

ಬಳ್ಳಾರಿ ರಾಧಾಬಾಯಿ, ಕಳಸದ ಸುಂದರಮ್ಮ ಹಾಗು ಗುಂಡಮ್ಮನವರ ಜೀವನ ಇತರೆ ಮಹಿಳಾ ಕೀರ್ತನಕಾರರಿಗಿಂತ ಸುಖಮಯವಾದುದೆಂದು ತಿಳಿಯಬಹುದು.

ಸರಸ್ವತೀಬಾಯಿ (ತುಳಸೀಬಾಯಿ) ಚಿಕ್ಕವಯಸ್ಸಿಗೆ ತಂದೆಯನ್ನು ಕಳೆದುಕೊಂಡಿದ್ದರಿಂದ ಸೀತಾಬಾಯಿ ಎಂಬುವವರ ಮನೆಯಲ್ಲಿ ಆಶ್ರಯ ಪಡೆದರು. ಇದನ್ನು ತಮ್ಮ "ಭಕ್ತ್ಯಾಷ್ಟಕ" ಎಂಬ ಕೃತಿಯಲ್ಲಿ ಹೇಳಿಕೊಂಡಿದ್ದಾರೆ. ಅವರಿಗೆ ಎಂಟನೇ ವಯಸ್ಸಿನಲ್ಲಿ ವ್ಯಾಸಾಚಾರ್ಯರೊಂದಿಗೆ ವಿವಾಹವಾಯಿತು. ಆರು ಮಕ್ಕಳು. ಇಪ್ಪತ್ತೈದನೇ ವಯಸ್ಸಿನಲ್ಲಿ ಮಗುವೊಂದನ್ನು ಕಳೆದುಕೊಂಡಿದ್ದು ಆ ದುಃಖದಿಂದ ಹೊರಬರಲು ಮನಸ್ಸು ಆಧ್ಯಾತ್ಮದ ಕಡೆಗೆ ಹೊರಳಿತು.

ಅಂಬಾಬಾಯಿ ತಮ್ಮ ಹತ್ತನೇ ವಯಸ್ಸಿನಲ್ಲಿ ಗೋಪಾಲಪುರದ ಹನುಮಂತಾಚಾರ್ಯರೊಡನೆ ಮದುವೆಯಾಗುತ್ತಾರೆ. ಪ್ಲೇಗಿನಿಂದ ತಂದೆ ಮತ್ತು ಗಂಡನನ್ನು ಒಂದೇ ದಿನದಲ್ಲಿ ಕಳೆದುಕೊಳ್ಳುತ್ತಾರೆ. ಗಂಡನ ಮನೆಯವರು ಪುಟ್ಟ ವಿಧವೆಗೆ ಕೇಶಮುಂಡನ ಮಾಡಿಸಿ ತವರಿಗೆ ಅಟ್ಟುತ್ತಾರೆ. ಅಂಬಾಬಾಯಿಯವರು ಅನಾಥರಾಗುತ್ತಾರೆ. ತಂಗಿ ಮತ್ತು ತಮ್ಮನ ಮನೆಯಲ್ಲಿ ಬದುಕು ಸವೆಸುತ್ತಾರೆ. ತಮ್ಮನ ಮನೆಯಲ್ಲಿ ಇದ್ದ ಇಬ್ಬರು ಮಡಿ ಹೆಂಗಸರೊಂದಿಗೆ ಮೂರನೆಯವರಾಗುತ್ತಾರೆ. ಮನೆಗೆಲಸ, ದೇವರಪೂಜೆ, ವ್ರತ ಉಪವಾಸ, ಪಾರಾಯಣ, ಮಕ್ಕಳ ಆರೈಕೆ ಇವೇ ಅವರ ಬದುಕಾಗುತ್ತದೆ. ಲೌಕಿಕ ಸುಖದಿಂದ ವಂಚಿತಳಾದೆನೆಂಬ ಕೊರಗು ಅಂಕಿತ ಪಡೆಯುವವರೆಗೂ ಇವರಿಗೆ ಇದ್ದೇ ಇರುತ್ತದೆ. ಇವರು ಹರಿದಾಸರಂತೆ ಕಾಲಿಗೆ ಗೆಜ್ಜೆ ಕಟ್ಟಿ ಗೋಪಾಳ ಬುಟ್ಟಿ ಹೊತ್ತು, ತಾಳ ತಂಬೂರಿ ಹಿಡಿದು ಮನೆ ಮನೆಗೆ ಉಂಛ ವೃತ್ತಿಗೆ ಹೋಗುತ್ತಾರೆ. ತುಚ್ಛವಾದ ಮಾತುಗಳಿಗೆ ಮನಸ್ಸು ಕೊಡದೆ ಸ್ತುತಿ ನಿಂದನೆಗಳನ್ನು ಸಮವಾಗಿ ಸ್ವೀಕರಿಸುತ್ತಾರೆ. 'ಭೋಗದಲ್ಲಿ ವೈರಾಗ್ಯ ನೀಡು, ಭಾಗವತರ ಸಂಗ ಕೊಡು' ಎಂದು ಭಗವಂತನನ್ನು ಬೇಡಿಕೊಳ್ಳುತ್ತಾರೆ.

ತಮ್ಮ ದಿನಚರಿಯಲ್ಲಿ, ಕಷ್ಟದಲ್ಲಿ ತಲೆತಪ್ಪಿಸಿಕೊಳ್ಳುವುದು ವೈರಾಗ್ಯವಲ್ಲ ಪರರ ಬಲವಂತಕ್ಕೆ ವಹಿಸುವುದು ವೈರಾಗ್ಯವಲ್ಲ, ಬಂದಂತಹ ಕಷ್ಟ ನಿಷ್ಠುರಗಳನ್ನು ಜಯಿಸಿ ಪರಿಣಾಮವನ್ನು ಪರೀಕ್ಷಿಸಿ ಸರ್ವರೂ ಸಂತೋಷದಿಂದ ಅಭಿಮಾನಿಸುತ್ತಿದ್ದ ಕಾಲಕ್ಕೆ ಸಂತೋಷದಿಂದ ನೈಜಾಭಿಮಾನ ತ್ಯಾಗಪೂರ್ವಕ ಶ್ರೀ ಹರಿಗುರು ಚರಣಾರಾಧಕ ತತ್ಪರರಾಗಬೇಕು. ಇದೇ ಶ್ರೀ ಹರಿಗುರು ಪ್ರೀತಿಕರವಾದ ವೈರಾಗ್ಯ' ಎಂದು ಬರೆಯುವಷ್ಟರ ಮಟ್ಟಿಗೆ ಪೂರ್ಣ ರೀತಿಯ ಕೀರ್ತನಕಾರರಾಗಿ ಮೈದೋರಿದ್ದಾರೆ.

೧) ಮರುಗಿದನು ಸಂಸಾರ ಗಣಿಸಲಾಗದ ಕರ್ಮ

ಫಣಿಶಾಹಿ ಕಡೆಮಾಡಿ ಕರವ ಪಿಡಿದು

ಧಣಿಸು ನಿನ್ನ ದಾಸತ್ವ ಧರೆಯಮೇಲ್ದಂಗುರ

ಫಣಿಶಾಹಿ ಗೋಪಾಲಕೃಷ್ಣ ವಿಠಲ ಕೈಪಿಡಿದು

೨) ದಾಸತನದಿ ಮೆರೆವುದೊಂದು

ಆಸೆಯಿಲ್ಲದಿನ್ನುಬೇರೆ

ಆಸೆಯೊಂದು ಇಲ್ಲ ಕೇಳು ನಾಶರಹಿತನೆ

ಪಾಶಕರ್ಮ ಹರಿಸಿ ನಿನ್ನ

ದಾಸಳೆಂದು ಮರೆಸೆ ಜಗಕೆ

ಈಶನೆಂದು ನಿನ್ನ ಮೆರೆಸಿ ಆಸೆ ಪೂರೈಸಿಕೊಂಬೆ

೩) ಉಡಲು ಉಣಲು ಆಸೆಯಿಲ್ಲ

ತೊಡಲುಯಿಡಲು ಆಸೆಯಿಲ್ಲ

ಎಡದಬಲದ ನೆಂಟರಭಿಮಾನವಿಲ್ಲವೋ

ಎಡರು ಬರಲು ಭಯವುಯಿಲ್ಲ

ಬಿಡಲು ದೇಹ ಅಂಜಿಕಿಲ್ಲ

ಎಂಬ ಕೀರ್ತನೆಯ ಸಾಲುಗಳಲ್ಲಿ ಅವರ ಬದುಕಿನ ರೀತಿಯ ಚಿತ್ರಣವಿದೆ. ಇನ್ನೊಂದು ಕೀರ್ತನೆಯಲ್ಲಿ 'ನಿನ್ನವಳೆನಿಸೋ ಎನ್ನ ಘನ್ನಗೋಪಾಲ, ಅನ್ಯರೊಬ್ಬರ ಕಾಣೆ ಮನ್ನಿಸು ಜಗದಿ' ಎಂದಿರುವಲ್ಲಿ ಆಕೆಗೆ ಲೌಕಿಕ ಬದುಕಿನ ಮೇಲಿರುವ ವೈರಾಗ್ಯ ಪ್ರತಿಧ್ವನಿಸುತ್ತದೆ. ಶರಣಾಗತಿಯ ಭಾವವು ಮನಸ್ಸನ್ನು ಸದಾ ಅರಳಿಸುತ್ತದೆ.

ಪ್ರಾಪ್ತವಾದ ವೈಧವ್ಯದ ಬಗ್ಗೆ ಅವರಿಗಿದ್ದ ನೋವು ಈ ಪದ್ಯದಲ್ಲಿ ವ್ಯಕ್ತವಾಗಿದೆ. ಗುರುಗಳಿಂದ ಅಂಕಿತ ದೊರೆತಾಗ 'ಮುತ್ತೈದೆಯಾದೆ ನಾ ಮುರುವೈರಿ ದಯದಿ ನಿತ್ಯ ತೃಪ್ತನು ಎನ್ನ ನಿಜ ಕರವ ಪಿಡಿಯೆ' ಎಂದಿದ್ದಾರೆ. ತನ್ನ ಮುತ್ತೈದೆ ತನದ ಎಲ್ಲ ಸಂಕೇತಗಳು ಗುರುಕರುಣೆಯಿಂದ ಮರುಪ್ರಾಪ್ತಿಯಾದುವೆಂದು ಭಾವಿಸಿದ್ದಾರೆ. ನಾಮವೇ ತಿಲಕ, ಗುರುಕರಣವೇ ಕವಚ, ಗುರುಪ್ರೀತಿಯೇ ವಚನ, ಭಕ್ತಿ, ಜ್ಞಾನ, ವೈರಾಗ್ಯಗಳೇ ಮೂರು ಕಾಲಿನ ಜಡೆ, ತತ್ವಗಳೇ ಚೌರಿ, ರಾಗುಟೆ, ಗೊಂಡೆಗಳು, ಶ್ರವಣವೇ ಕರ್ಣಕುಂಡಲ, ನಿರ್ಮಾಲ್ಯವೇ ನಾಸಿಕಾಭರಣ, ಭಕ್ತಿಯೇ ನಡುವಿನೊಡ್ಯಾಣ, ಸದ್ಗುಣಗಳೇ ಪಾದಾಭರಣ, ಗುರುವಿನ ಅನುಗ್ರಹವೇ ಮಂಗಳದ್ರವ್ಯಗಳು – ಹೀಗೆ ಸರ್ವಾಲಂಕಾರ ಭೂಷಿತಳಾದ ನನ್ನನ್ನು ಶ್ರೀಹರಿಗೆ ಧಾರೆಯೆರೆದು ಕೊಡಲಾಯಿತು ಎಂದಿದ್ದಾರೆ. ಅಕ್ಕಮಹಾದೇವಿಯನ್ನು ಇದು ನೆನಪಿಸುತ್ತದೆ.

**ದೊರೆತ ಸಹಕಾರ, ಪ್ರೋತ್ಸಾಹಗಳು:**

೫ ವರ್ಷದ ಹುಡುಗಿಯೊಂದಿಗೆ ಮದುವೆಯಾದ ಮುದ್ಗಲಾಚಾರ್ಯರಿಗೆ ತಮ್ಮ ತಪ್ಪಿನ ಅರಿವಾಗದಿರಲಿಲ್ಲ ಹಾಗಾಗಿ ವಿಧವೆಯಾದ ನನ್ನ ಹೆಂಡತಿಗೆ ನೀವೇ ವಿದ್ಯಾಭ್ಯಾಸ ಮಾಡಿಸಿ ಎಂದು ಮರಣ ಸಮಯದಲ್ಲಿ ತಮ್ಮ ಮಕ್ಕಳಿಗೆ ಹೇಳಿದ್ದರು. ಮಕ್ಕಳು ತಂದೆಯ ಮಾತನ್ನು ಶ್ರದ್ಧೆಯಿಂದ ನಡೆಸಿಕೊಟ್ಟಿದ್ದರಿಂದ ಅವ್ವನವರ ಬದುಕಿನ ದಾರಿಯೇ ಬದಲಾಯಿತು. ಮಕ್ಕಳೇ

ಅಪ್ಪನಿಗೆ ವಿದ್ಯಾಗುರುಗಳಾದರು. ವಿದ್ಯಾಭ್ಯಾಸದಲ್ಲಿ ಶ್ರದ್ಧೆಯಿಂದ ನ್ಯಾಯಶಾಸ್ತ್ರದಲ್ಲಿ ಪರಿಣಿತಿಯನ್ನು ಪಡೆದರು. ಒಮ್ಮೆ ಅವರ ಬುದ್ಧಿ ಸಾಮರ್ಥ್ಯ ಪ್ರಕಟವಾಗುವ ಸಂದರ್ಭ ಒದಗಿ ಬಂದಿತು. ಪುಣೆಯ ಪೇಶ್ವೆ ದರ್ಬಾರಿನಲ್ಲಿ ಉತ್ತರದ ವಿದ್ವಾಂಸರುಗಳು ವಾದ ವಿವಾದದಿಂದ ದಕ್ಷಿಣ ವಿದ್ವಾಂಸರನ್ನು ಸೋಲಿಸಿದರು. ಮುದ್ಗಲಾಚಾರ್ಯರ ಮಕ್ಕಳು ಸೋಲುವ ಸ್ಥಿತಿ ಬಂದೊದಗಿತು. ಆಗ ಅಪ್ಪನವರು ಮಕ್ಕಳ ಬೆಂಬಲಕ್ಕೆ ನಿಂತರು. ಅಪ್ಪನವರಿಗೆ ವಾದದಲ್ಲಿ ಪ್ರೌಢಿಮೆ ಇತ್ತು, ವಾದಿಸಲು ಪಾಂಡಿತ್ಯವಿತ್ತು. ಇದನ್ನು ಮುಯ್ಯದ ಹಾಡುಗಳಲ್ಲಿ ಬರುವ ದ್ರೌಪದಿ, ಸುಭದ್ರೆ, ರುಕ್ಮಿಣಿ, ಸತ್ಯಭಾಮೆ ಮೊದಲಾದವರ ವಾಗ್ವಾದಗಳಲ್ಲಿ ಗುರುತಿಸಬಹುದು. ಇವರ ಬೆಂಬಲದಿಂದ ಮಕ್ಕಳು ವಾದದಲ್ಲಿ ಗೆದ್ದರು. ಸಂತೋಷಚಿತ್ತರಾದ ಪೇಶ್ವೆಯವರು ಬಾಗಲಕೋಟೆ ಜಿಲ್ಲೆಯ ಬೀಳಗಿ ಟ್ರೆಶರಿಯಿಂದ ವಾರ್ಷಿಕ ಪಿಂಚಣಿ ಬರುವಂತೆ ಮಾಡಿ ಅಪ್ಪನವರನ್ನು ಗೌರವಿಸಿದರು.

ಮೈಸೂರಿನ ಅರಸರಾದ ಕೃಷ್ಣರಾಜ ಒಡೆಯರು ಅಪ್ಪನವರ ವಿದ್ವತ್ತನ್ನು ಕಂಡಿದ್ದರು. ಅವರೇ ಮುಂದೆ ನಿಂತು ಅಪ್ಪನವರನ್ನು ಪಲ್ಲಕ್ಕಿಯಲ್ಲಿ ಕೂರಿಸಿ ಮೆರವಣಿಗೆಯಲ್ಲಿ ಅರಮನೆಗೆ ಕರೆದುಕೊಂಡು ಹೋಗಿ ಮೇನೆ, ಆಭರಣ, ಹಣ, ಬೆಲೆಬಾಳುವ ವಸ್ತುಗಳನ್ನಿತ್ತು ಗೌರವಿಸಿದರು.

ತಮಗೆ ದೊರೆತ ಅವಕಾಶಗಳೆಲ್ಲವನ್ನೂ ಬಳಸಿಕೊಂಡು ಸಂಸ್ಕೃತ ವಾತಾವರಣದಲ್ಲಿಯೂ ಕನ್ನಡ ಕೃತಿ ರಚನೆ ಗೈದದ್ದು, ಹೆಣ್ಣುಮಕ್ಕಳಿಗಿದ್ದ ಸಾಮಾಜಿಕ ಕಟ್ಟುಪಾಡುಗಳ ನಡುವೆಯೂ ಅಭಿವ್ಯಕ್ತಿ ಸ್ವಾತಂತ್ರ್ಯ ಗಳಿಸಿದ್ದು ಒಂದು ದೊಡ್ಡ ಸಾಧನೆ.

ಹೆಳವನಕಟ್ಟೆ ಗಿರಿಯಮ್ಮ ತಿಳುವಳಿಕೆ ಬರುವ ಮುಂಚೆಯೇ ತಂದೆ ತಾಯಿಯನ್ನು ಕಳೆದುಕೊಂಡಿದ್ದಳು. ಚಿಕ್ಕಪ್ಪನ ಆಶ್ರಯದಲ್ಲಿ ಬೆಳೆದಳು. ಆತ ಮಹಾನ್ ದೈವಭಕ್ತ. ಪ್ರತಿದಿನವೂ ಗಿರಿಯಮ್ಮನಿಗೆ ಪುರಾಣದ ಕಥೆಗಳನ್ನು ಹೇಳುತ್ತಿದ್ದ. ಇದು ಗಿರಿಯಮ್ಮನು ದೈವಭಕ್ತಳಾಗಿ ರೂಪುಗೊಳ್ಳಲು ಕಾರಣವೂ, ಪ್ರೇರಣೆಯೂ ಆಯಿತು. ಮೆಟ್ಟಿದ ಮನೆಯಲ್ಲೂ ಗಿರಿಯಮ್ಮ ಸಂಸಾರದ ಬಗೆಗಿನ ತನ್ನ ವೈರಾಗ್ಯವನ್ನು ಗಂಡ ತಿಪ್ಪರಸನಲ್ಲಿ ಮತ್ತು ಅತ್ತೆ ಮಾವಂದಿರ ಬಳಿ ಹೇಳಿಕೊಂಡಾಗ, ದೈವಭಕ್ತರಾದ ಅವರು ಗಿರಿಯಮ್ಮನ ನಿರ್ಧಾರವನ್ನು ಗೌರವಿಸಿದರು. ಗಿರಿಯಮ್ಮನ ಸಲಹೆಯಂತೆ ತಿಪ್ಪರಸನಿಗೆ ಇನ್ನೊಂದು ಮದುವೆ ಮಾಡಿದರು. ಹಿರಿಯಕ್ಕನಾಗಿ ಗಿರಿಯಮ್ಮ ಮನೆಯಲ್ಲಿಯೇ ಉಳಿದುಕೊಂಡಳು. ನೆರೆಹೊರೆಯವರು ಮತ್ತು ಸಮಾಜದ ದೃಷ್ಟಿಕೋನವನ್ನು ಎದುರಿಸಲು ಅವರ ಗಂಡ ತಿಪ್ಪರಸ ಮತ್ತು ಕುಟುಂಬದವರು ಬೆಂಬಲಕ್ಕೆ ನಿಂತರು.

ಗಿರಿಯಮ್ಮನವರದು ಕಾರಣ ಜನ್ಮವೆಂದು ತಿಳಿಯಲಾಗಿದೆ. ಅವಳ ಭಕ್ತಿಗೆ ಭಗವಂತನೇ ಒಲಿದು ಬಂದಂತೆ ಒಬ್ಬ ಹೆಳವನಿಂದ ನಿರ್ಮಿತವಾದ ಕಟ್ಟೆಯ (ದನಕರುಗಳಿಗೆ ಬೇಸಿಗೆಯಲ್ಲಿ ಸಮೃದ್ಧವಾಗಿ ನೀರು ಸಿಗಲು ಹೆಳವನೊಬ್ಬ ಕಟ್ಟಿಸಿದ ಕಟ್ಟೆ) ಸಮೀಪದ ಹುತ್ತಕ್ಕೆ ಹಸುವೊಂದು ಹಾಲನ್ನು ಕರೆಯುತ್ತಿತ್ತು. ಕುತೂಹಲಗೊಂಡ ಜನರು ಅಗೆದು ನೋಡಿದಾಗ ಅಲ್ಲಿ ರಂಗನಾಥಸ್ವಾಮಿಯ ವಿಗ್ರಹವೊಂದು ಕಂಡು ಬಂದಿತು. ಈ ರಂಗನಿಂದ ಪ್ರಭಾವಿತಳಾದ ಗಿರಿಯಮ್ಮ ಅವನನ್ನೇ ಆರಾಧ್ಯ ದೈವವಾಗಿಸಿಕೊಂಡಳು. ಹೆಳವನಟ್ಟೆ ರಂಗ, 'ಹೆಳವನಕಟ್ಟೆ ವೆಂಕಟ' ಎಂಬ ಅಂಕಿತವನ್ನು

ಬಳಸಿ ಕಾವ್ಯ ರಚಿಸಿದಳು. ಬದುಕಿನಲ್ಲಿ ನಡೆದ ಪವಾಡಗಳಿಂದಲೂ ಜನ ಬೆಂಬಲ ದೊರೆತು ಆಕೆ ಪೂಜ್ಯಳಾದಳು. ಬ್ರಿಟೀಶ್ ಸರ್ಕಾರವು ಗಿರಿಯಮ್ಮನನ್ನು ಗೌರವಿಸಲಿಕ್ಕೆಂದೇ ಆ ಶಾನುಭೋಗರ ಮನೆತನಕ್ಕೆ ದೇಶಪಾಂಡೆ ಎಂಬ ಬಿರುದನ್ನು ಕೊಟ್ಟು ಸ್ವಗ್ರಾಮದ ಸ್ವತ್ತನ್ನು ಅನುಭವಿಸುವ ಅಧಿಕಾರ ನೀಡಿದರು. ಗಿರಿಯಮ್ಮ ತೀರ್ಥಯಾತ್ರೆಯನ್ನು ಮಾಡಿದ್ದ ಅನುಭವದಿಂದಾಗಿ ಅವಳ ಕಾವ್ಯ ರಚನೆಗೆ ಇನ್ನಷ್ಟು ಪುಷ್ಟಿ ದೊರೆಯಿತು.

ಹರಪನಹಳ್ಳಿ ಭೀಮವ್ವನವರ ಸಾಹಿತ್ಯ ರಚನೆಯಲ್ಲಿ ಸ್ಫೂರ್ತಿ ತರುತ್ತಿದ್ದುದು ಪವಾಡ ಎಂಬಂತಹ ಅತ್ಯಂತ ವಿಚಿತ್ರವಾದ ಸನ್ನಿವೇಶಗಳು. ಅವರಿಗೆ ಬೀಳುತ್ತಿದ್ದ ಕನಸುಗಳು ನಿಜವಾಗುತ್ತಿದ್ದವು. ಹಾಡುಗಳು ಉಕ್ಕಿಬಂದು 'ಹೇಳು' ಎಂದು ಒತ್ತಾಯಿಸುತ್ತಿದ್ದವು. ಹೇಳಿದರೆ ಏನೆಂದುಕೊಂಡಾರೋ ಎಂಬ ನಾಚಿಗೆಯಿಂದ ಅವರು ಸುಮ್ಮನಿದ್ದುಬಿಟ್ಟರೆ, ಹೊಟ್ಟೆ ನೋವು ಪ್ರಾರಂಭವಾಗುತ್ತಿತ್ತು. ಹಾಡನ್ನು ಹೊರಹಾಕುವವರೆಗೂ ಅದು ನಿಲ್ಲುತ್ತಿರಲಿಲ್ಲ. ಒಂದು ದಿನ ಮಧ್ಯಾಹ್ನ ಕಂಡ ಸ್ವಪ್ನದಿಂದ ಬರವಣಿಗೆ ಆರಂಭವಾಯಿತು. ಕನಸಿನಲ್ಲಿ ಬ್ರಾಹ್ಮಣನು ಕೃಷ್ಣಸರ್ಪದೊಂದಿಗೆ ಬಂದ. ಮರದ ಕೆಳಗೆ ಮಲಗಿದ್ದ ಭೀಮಾಬಾಯಿಯವರ ನಾಲಗೆಯ ಮೇಲೆ ಮೂರಕ್ಷರ ಬರಿ ಎಂದು ಸರ್ಪಕ್ಕೆ ಹೇಳಿದ, ಅದು ಬರೆಯಿತು. ಅಂದಿನಿಂದ ಹಾಡುಗಳು ಬರಲಾರಂಭಿಸಿದವು. ಅನಿವಾರ್ಯವಾಗಿ ಭೀಮಾಬಾಯಿ ಹಾಡಲು ಪ್ರಾರಂಭಿಸಿದರು. ದೀರ್ಘ ಕೀರ್ತನೆಗಳನ್ನೇ ಹೇಳಿದರು. ಹೆಣ್ಣುಮಕ್ಕಳಿಗೂ ಕಲಿಸಿದರು. ಮದುವೆ ಮುಂತಾದ ಸಂಪ್ರದಾಯಗಳಲ್ಲಿ ಭೀಮವ್ವನವರ ಹಾಡು ಅನಿವಾರ್ಯವಾಯಿತು. ಮುಯ್ಯ ಕೊಡುವ ಮತ್ತು ಹಿಂದಿರುಗಿಸುವ ಹಾಡುಗಳ ಸಂಪ್ರದಾಯವನ್ನೇ ಆ ಪ್ರಾಂತ್ಯದಲ್ಲಿ ಹುಟ್ಟು ಹಾಕಿತು. ಇಂದಿಗೂ ಅಲ್ಲಿ ಜನರು ಭೀಮವ್ವನವರ ಹಾಡುಗಳನ್ನೇ ಹಾಡುತ್ತಾರೆ. ಹೀಗೆ ಜನರ ಬಾಯಿಂದ ಬಾಯಿಗೆ ಭೀಮವ್ವನವರ ಹಾಡುಗಳು ಹರಿದಾಡಿದವು. ಭೀಮವ್ವ ಪುಣ್ಯಕ್ಷೇತ್ರಗಳನ್ನು ಸಂದರ್ಶಿಸಿದ್ದು ಅವರ ಹಾಡುಗಳಲ್ಲಿ ಇನ್ನಷ್ಟು ಅನುಭವ ಸಾರವನ್ನು ತುಂಬಿತು.

ಯದುಗಿರಿಯಮ್ಮನವರು ಬೆಂಗಳೂರಿನಲ್ಲಿ ವಾಸವಾಗಿದ್ದರು. ಬೆಂಗಳೂರು ಈಗಿನಷ್ಟು ಜನ–ಗದ್ದಲದಿಂದ ಕೂಡಿರಲಿಲ್ಲ. ಅಂದೂ ಇದು ಸಂಸ್ಕೃತಿಯ ಪ್ರಸಾರ ಕೇಂದ್ರವಾಗಿತ್ತು. ತುಳಸೀತೋಟದಲ್ಲಿ ಆಧ್ಯಾತ್ಮಿಕ ಸಾಧನೆಗೆ ಪೂರಕ ವಾತಾವರಣವಿತ್ತು. ಅಲ್ಲಿಗೆ ಹೋಗುತ್ತಿದ್ದ ಯದುಗಿರಿಯಮ್ಮ ಹಾಡುತ್ತಿದ್ದರು. ಅದನ್ನು ಕೇಳಿ ಜನರು ತಮ್ಮ ಮನೆಯ ಸಮಾರಂಭಗಳಿಗೂ ಬಂದು ಹಾಡುವಂತೆ ಆಹ್ವಾನಿಸುತ್ತಿದ್ದರು. ಅದೊಂದು ಸಂಸ್ಕೃತಿಯನ್ನೇ ಹುಟ್ಟು ಹಾಕಿತು. ಭಜನಾಮಂದಿರಗಳನ್ನು ಹುಟ್ಟುಹಾಕಿದ ತುಳಸೀರಾಮದಾಸರ ಪ್ರಭಾವ ಅವರ ಮೇಲೆ ಅಪಾರವಾಗಿತ್ತು. ಕನ್ನಡ, ತೆಲುಗು, ತಮಿಳು ಭಾಷೆಗಳನ್ನು ಅವರು ಬಲ್ಲವರಾಗಿದ್ದರು. ಸ್ವಲ್ಪ ಸಂಸ್ಕೃತ ಭಾಷೆಯ ಪರಿಚಯವೂ ಇತ್ತು. ನಾಲಾಯಿರಾ ದಿವ್ಯ ಪ್ರಬಂಧದ (ತಿರುವಾಯ್ಮೊಳಿ) ಪೂರ್ಣ ಪಾಠವಾಗಿತ್ತು. ತಿರುಪ್ಪಾವೈ ಅನ್ನು ದಿನವೂ ಕೇಳಿಸಿಕೊಳ್ಳುತ್ತಿದ್ದರು. ಭಾರತದ ಪುಣ್ಯಕ್ಷೇತ್ರಗಳನ್ನೆಲ್ಲಾ ಸಂದರ್ಶಿಸಿ ಬಂದರು. ಅದರ ಅನುಭವವಗಳನ್ನು ಕೀರ್ತನೆಗಳಲ್ಲಿ ಹೇಳಿಕೊಂಡಿದ್ದಾರೆ. ಕೊನೆಗಾಲದಲ್ಲಿ ತಮ್ಮ ರಚನೆಗಳನ್ನೆಲ್ಲಾ ಮೊಮ್ಮಕ್ಕಳಿಂದ ಬರೆಸಿಟ್ಟರು. ಇದು ಕನ್ನಡ ಸಾಹಿತ್ಯದ ಭಕ್ತಿ ಪರಂಪರೆಗೆ ದೊರೆತ ನಿಧಿ.

ಇದರಿಂದಾಗಿಯೇ ಯದುಗಿರಿಯಮ್ಮ ಹರಿದಾಸಿಯಾಗಿ ಕನ್ನಡ ದಾಸಸಾಹಿತ್ಯ ಪರಂಪರೆಗೆ ಸೇರಿದವರಾದರು.

ಶಾಂತಾಬಾಯಿಯವರ ತಂದೆ ಕೊಪ್ಪ ವೆಂಕಟೇಶಯ್ಯನವರು. ಸಂಗೀತ ಮತ್ತು ಕಲೆಯಲ್ಲಿ ಆಸಕ್ತಿ ಹೊಂದಿದ್ದರು. ಅವನ್ನು ಮಗಳಿಗೂ ಕಲಿಸಿದರು. ಮದುವೆಯಾಗಿ ಶಾಂತಾಬಾಯಿ ನಾಡಿಗೇರ ವಂಶ ಸೇರಿದರು. ಅವರು ಸತ್ಪುರುಷರೂ ಕವಿಗಳೂ ಆಗಿದ್ದರು. ಸಂಸಾರದಲ್ಲಿ ನೋವನ್ನು ಅನುಭವಿಸಿದರೂ ಆಧ್ಯಾತ್ಮಿಕ ಸೆಳೆತಕ್ಕೆ ಒಳಗಾದರು. ಭಗವಂತನ ಸಾನ್ನಿಧ್ಯಕ್ಕಾಗಿ ಹಂಬಲಿಸಿದ್ದರಿಂದ ಕೀರ್ತನಾ ರಚನೆಗೆ ಬಾಗಿಲು ತೆರೆದುಕೊಂಡಿತು.

ಓರಾಬಾಯಿ ಲಕ್ಷ್ಮಿದೇವಮ್ಮನವರ ತವರು ಮನೆಯಲ್ಲಿ ಸಾಂಪ್ರದಾಯಿಕ ವಾತಾವರಣವಿತ್ತು. ತಾಯಿ ಗೋದಾವರಿ ಬಾಯಿ ಪೂಜೆ ಪುನಸ್ಕಾರಗಳನ್ನು ಮಗಳಿಗೆ ಕಲಿಸಿದರು. ತಂದೆ ಲಕ್ಷ್ಮಣರಾಯರು ಕನ್ನಡ ಮತ್ತು ಸಂಸ್ಕೃತವನ್ನು ಹೇಳಿಕೊಟ್ಟರು. ಇಷ್ಟೊತ್ತಿಗಾಗಲೇ ಆ ಪ್ರಾಂತ್ಯದಲ್ಲಿ ಹರಪನಹಳ್ಳಿ ಭೀಮವ್ವನವರ ಹಾಡುಗಳು ಮನೆಮಾತಾಗಿದ್ದವು. ಲಕ್ಷ್ಮೀದೇವಮ್ಮನವರೂ ಅದನ್ನು ಹಾಡಿಕೊಳ್ಳುತ್ತಿದ್ದರು. ಇವರಿಗೆ ಭೀಮವ್ವನವರು ಸ್ಫೂರ್ತಿಯಾದರು. ಇದ್ದ ಒಬ್ಬ ಮಗನನ್ನು ಕಳೆದುಕೊಂಡ ಮೇಲೆ ಮನಸ್ಸು ಆಧ್ಯಾತ್ಮಿಕದತ್ತ ಮುಖಮಾಡಿತು. ಕೀರ್ತನೆಗಳ ರಚನೆ ಆರಂಭವಾಯಿತು.

ಯಾದಗಿರಿಯೆಂದೇ ಪ್ರಸಿದ್ಧವಾದ ಆದವಾನಿಯಲ್ಲಿ ನೆಲೆಸಿದ ಮೇಲೆ ಅಲ್ಲಿ ನಡೆಯುವ ಮಂಗರಾಯನ ಜಾತ್ರೆಯಲ್ಲಿ ಪತಿ ಮದ್ದರಾಯರು ಹರಿಕಥೆಗಳನ್ನು, ನಾಟಕಗಳನ್ನು ಏರ್ಪಡಿಸುತ್ತಿದ್ದರು. ಅನುರೂಪನಾದ ಪತಿಯ ಪ್ರತಿಯೊಂದು ಕೆಲಸದಲ್ಲಿಯೂ ಬೆಂಬಲ ನೀಡಿ ಅನುಭವವನ್ನು ತಮ್ಮದಾಗಿಸಿಕೊಂಡರು. ಅನೇಕ ಕುಟುಂಬಗಳು ಅವರ ನೆರಳಿನಲ್ಲಿ ಬಾಳಿ ಬದುಕುತ್ತಿದ್ದವು. ಪಾಕಶಾಸ್ತ್ರದಲ್ಲಿ ಪ್ರವೀಣೆಯಾದಂತೆ ಲಲಿತಕಲೆಗಳಲ್ಲೂ ಪ್ರಾವೀಣ್ಯತೆಯನ್ನು ಪಡೆದಿದ್ದರು. ಗೃಹವೈದ್ಯವನ್ನು ಕಲಿತು ಇವರು ಹಲವು ಖಾಯಿಲೆಗಳಿಗೆ ಉಚಿತವಾಗಿ ಔಷಧಿ ನೀಡುತ್ತಿದ್ದರು. ಲಕ್ಷ್ಮಿದೇವಮ್ಮನವರ ಮನೆ ಅನ್ನದಾನ ಮತ್ತು ವಿದ್ಯಾದಾನಗಳ ಕೇಂದ್ರವೇ ಆಗಿತ್ತು. ಮಂತ್ರಾಲಯ ರಾಘವೇಂದ್ರ ಸ್ವಾಮಿಗಳ ಅನನ್ಯ ಭಕ್ತರಾಗಿದ್ದರು. ಹಲವರು ಯತಿಗಳು ಅವರ ಮನೆಯಲ್ಲಿ ವಿದ್ವತ್‌ಗೋಷ್ಠಿ ನಡೆಸುತ್ತಿದ್ದರು. ಶಾಸ್ತ್ರ ಗ್ರಂಥಗಳ ಪಠಣವಾಗುತ್ತಿತ್ತು. ಮುಂದಿನ ಸಾಹಿತ್ಯ ಕೃಷಿಗಾಗಿ ಹದವಾದ ವೇದಿಕೆ ಅಂತರಂಗದಲ್ಲಿ ನಿರ್ಮಾಣವಾಗುತ್ತಿತ್ತು. ಒಮ್ಮೆಯಂತೂ ಸೋದೆ ಮಠದ ಸ್ವಾಮಿಗಳು ಆರಾಧನೆಗಾಗಿ ಹೋಗಿದ್ದಾಗ, ರಾಶಿ ರಾಶಿ ಬಂದು ಬೀಳುತ್ತಿದ್ದ ತರಕಾರಿಗಳನ್ನು ವಿಂಗಡಿಸಿ ಹೆಂಗಸರು ಅವುಗಳನ್ನು ಹಚ್ಚುತ್ತಿದ್ದಾಗ ಅಮ್ಮನವರು ತಕ್ಷಣವೇ ತರಕಾರಿಗಳ ಮೇಲೆ ಆಶು ಕವಿತೆ ರಚಿಸಿ ಹಾಡಿದರು. ಇದರಿಂದ ಶ್ರೀಗಳವರೆಗೆ ಸಂತೋಷವಾಯಿತು. ಆ ದಿನ ಸಾಯಂಕಾಲ ನಡೆದ ಗೋಷ್ಠಿಯಲ್ಲಿ ಲಕ್ಷ್ಮಿದೇವಮ್ಮನವರಿಂದಲೇ ಆ ತರಕಾರಿಯ ಹಾಡನ್ನು ಮತ್ತೆ ಮತ್ತೆ ಹಾಡಿಸಿ, ಪ್ರೋತ್ಸಾಹಿಸಿ ಮಂತ್ರಾಕ್ಷತೆ ನೀಡಿ ಆಶೀರ್ವದಿಸಿರು.

ಪತಿಯ ಮರಣಾನಂತರವೂ ದೇವಾಲಯ ನಿರ್ಮಾಣದಂತಹ ಸಮಾಜಸೇವಾ ಕಾರ್ಯವನ್ನು ಲಕ್ಷ್ಮಿದೇವಮ್ಮ ಮುಂದುವರೆಸಿದರು. ಅವರು ಭಾವುಕ ಹೃದಯದವರು. ಶಾಸ್ತ್ರಗಳ ಪಠಣ, ಮನನಗಳಿಂದ ಮನಸ್ಸು ಹದಗೊಂಡಿತು. ವ್ರತಗಳ ಆಚರಣೆ, ದೇವತಾರ್ಚನೆ ಮತ್ತು ಸಮಾಜಸೇವೆಗಳಿಂದ ಸಂಸ್ಕಾರವು ತುಂಬಿಕೊಂಡಿತು. ಯತಿಗಳ ಅನುಗ್ರಹದಿಂದ ಆತ್ಮವಿಶ್ವಾಸವು ತುಂಬಿ ತುಳುಕುತ್ತಿತ್ತು. ಬಳ್ಳಾರಿಯಲ್ಲಿ ದೇವಸ್ಥಾನ ನಿರ್ಮಾಣ ಕೈಂಕರ್ಯ ಹಿಡಿದಾಗಿನಿಂದ ಇವರು ಕೂತರೆ, ನಿಂತರೆ, ನೋಡಿದರೆ, ಕೇಳಿದರೆ ಕಾವ್ಯ ರಚಿಸುತ್ತಿದ್ದರು. ಈ ಮೊದಲೇ ಹೇಳಿದಂತೆ ಹರಪನಹಳ್ಳಿ ಭೀಮವ್ವನವರೇ ಇವರಿಗೆ ಸ್ಫೂರ್ತಿಯಾಗಿದ್ದರು. ಭೀಮವ್ವನವರ ಪದ್ಯಗಳಂತೆ ಲಕ್ಷ್ಮೀದೇವಮ್ಮನವರ ಪದ್ಯಗಳು ಕೂಡಾ ಬಾಯಿಂದ ಬಾಯಿಗೆ ಬಂದು ಆ ಪ್ರಾಂತ್ಯದ ಸಾಂಪ್ರದಾಯಿಕ ಹಾಡುಗಳಾಗಿ ಉಳಿದುಕೊಂಡಿವೆ. ಗುತ್ತೆವ್ವನವರ ಮೇಲಿನ ಜನರ ಪ್ರೀತಿ ಮತ್ತು ಸಹಕಾರವನ್ನು ಇದು ಸಾಕ್ಷೀಕರಿಸುತ್ತದೆ. ಕೊನೆಗೆ ಇವರ ಹಾಡುಗಳನ್ನು ಅವರಿವರು ಬರೆದಿಟ್ಟರು. ಕೆಲವು ಇನ್ನೂ ಮೌಖಿಕವಾಗಿ ಉಳಿದುಕೊಂಡಿವೆ.

ಪತಿಯ ನಿಧನದ ನಂತರ ಸರಸಬಾಯಿಯವರು ಆಧ್ಯಾತ್ಮಿಕದ ಕಡೆಗೆ ಒಲಿದರು. ಗುರುಮುಖೇನ (ತಂದೆ ಮುದ್ದುಮೋಹನದಾಸರಿಂದ) ಅಂಕಿತ ದೊರೆತಿದ್ದರಿಂದ ಮನಸ್ಸಿನ ತೊಳಲಾಟವು ನಿಂತು ಪರಿಪಕ್ವವಾಗಿ ಭಗವಂತನ ಕಡೆಗೆ ಹರಿಯಿತು. ಚಿತ್ರದುರ್ಗದಲ್ಲಿ ಹರಿನಾಮ ಸಂಕೀರ್ತನೆ ಮತ್ತು ಭಜನೆಗಳನ್ನು ನಡೆಸುತ್ತಿದ್ದದ್ದು ಇವರ ರಚನೆಗೆ ಪುಷ್ಟಿ ದೊರೆಯಿತು. ಇವರದು ತುಂಬು ಸಂಸಾರ, ಮಕ್ಕಳು, ಮೊಮ್ಮಕ್ಕಳು, ಮರಿಮಕ್ಕಳೊಂದಿಗೆ ಬದುಕುತ್ತಿದ್ದರು. ಎಲ್ಲರು ಇವರ ಸಾತ್ವಿಕ ಬದುಕನ್ನು ಗೌರವಿಸುತ್ತಿದ್ದರು.

ನಂಜನಗೂಡು ತಿರುಮಲಾಂಭರವರು ಪ್ರಾಥಮಿಕ ಶಿಕ್ಷಣನ್ನು ಪಡೆದಿದ್ದರು. ಪತಿಯ ಮರಣಾನಂತರ ತಂದೆಯವರು ಇವರ ಗುರುವಾಗಿ ಪ್ರೋತ್ಸಾಹಿಸಿದರು. ಗ್ರಂಥಗಳನ್ನು ಓದಲು ಆಸಕ್ತಿ ಹುಟ್ಟಿಸಿದರು. ನಂಜನಗೂಡು ತಿರುಮಲಾಂಭ ಅವರು ಕನ್ನಡ ಲೇಖಕಿ, ಪತ್ರಕರ್ತೆ, ಸಂಪಾದಕಿ, ಸಮಾಜಸೇವಕಿಯಾಗಿ ರೂಪಗೊಳ್ಳುವ ಹಿಂದೆ ಅವರ ತಂದೆಯ ಅಪಾರ ಬೆಂಬಲವಿದೆ. ೧೯೧೬ರ ದಶಕದಲ್ಲಿ ಮೈಸೂರು, ಮುಂಬೈ ಮತ್ತು ಮದ್ರಾಸು ಸರ್ಕಾರವು ಬಹುಮಾನಗಳನ್ನು ನೀಡುವುದರ ಮೂಲಕ ಇವರನ್ನು ಪ್ರೋತ್ಸಾಹಿಸಿವೆ. ೧೯೮೦ರಲ್ಲಿ ಕನ್ನಡ ಸಾಹಿತ್ಯ ಪರಿಷತ್ತಿನ ಪ್ರಶಸ್ತಿ, ೧೯೮೧ರಲ್ಲಿ ಕರ್ನಾಟಕ ಸಾಹಿತ್ಯ ಅಕಾಡೆಮಿಯ ಪ್ರಶಸ್ತಿ ದೊರಕಿವೆ.

ನಿಡಗುರ್ಕಿ ಜೀವೂಬಾಯಿ ಸಂಪ್ರದಾಯಸ್ಥ ಮನೆತನದವರು. ಆಚರಣೆಯಲ್ಲಿದ್ದ ಸಂಪ್ರದಾಯಗಳು ಇವರ ಮನಸ್ಸಿನ ಮೇಲೆ ಅಗಾಧ ಪರಿಣಾಮವನ್ನು ಬೀರಿದವು. ಶಾಲೆಗೆ ಕಳಿಸದಿದ್ದರೂ ತಂದರೆ ರಾಮಚಂದ್ರರಾಯರು ಮಗಳಿಗೆ ಓದು ಬರೆಹ ಕಲಿಸಿದರು. ಸ್ವತಃ ಪಿಟೀಲು ವಿದ್ವಾಂಸರಾದ್ದರಿಂದ ದೇವರನಾಮಗಳನ್ನು ಹೇಳುವ ಅಭ್ಯಾಸ ಮಾಡಿಸಿದರು. ತಾಯಿ ರಮಾಬಾಯಿ ಆಚಾರವಂತರು. ದೇವರನಾಮಗಳನ್ನು ಮಗಳಿಗೆ ಬಾಯಿಪಾಠ ಮಾಡಿಸಿದರು. ಗೋಕುಲದಂತಹ ಅವರ ಮನೆಯಲ್ಲಿ ಸದಾ ನೆಂಟರಿಷ್ಟರು ತುಂಬಿರುತ್ತಿದ್ದರು.ತಾಯಿ ಮತ್ತು

ಅಜ್ಜಿ ಸದಾ ಹಾಡುತ್ತಿದ್ದ ಒಂದು ದೊಡ್ಡ ಹಾಡನ್ನು ಕೇಳಿ ಕೇಳಿ ರೂಢಿಯಾಗಿ ಅದನ್ನೇ ಹೋಲುವ 'ಹರಿಮಾನಸ ಪೂಜಾ' ಎನ್ನುವ ಕೃತಿಯೊಂದನ್ನು ಜೀವೂಬಾಯಿ ರಚಿಸುತ್ತಾರೆ. ಕೃತಿ ರಚನೆಯ ಪ್ರಾರಂಭದಲ್ಲಿ ಈ ವಿಷಯವನ್ನು ಜೀವೂಬಾಯಿ ಹೇಳಿಕೊಂಡಿದ್ದಾರೆ.

ಜೀವೂಬಾಯಿಯವರಿಗೆ ವೈಧವ್ಯ ಪ್ರಾಪ್ತವಾದ ಮೇಲೆ ತವರಲ್ಲೇ ಉಳಿದಾಗ ಹಳ್ಳಿಯ ವಾತಾವರಣದಂತೆ ಯಾರ ಸಂಗಡವೂ ಹೋಗಲಿಲ್ಲ. ಏಕಾಂತ ಬದುಕನ್ನು ಅಭ್ಯಾಸ ಮಾಡಿಕೊಂಡರು. ಆಗೆಲ್ಲ ಕಥೆ ಪುಸ್ತಕಗಳನ್ನು ಓದುತ್ತಿದ್ದರು. 'ಸುಂದರ ರಾಜ', 'ತಾರಾಮುಖಿ', 'ನಿರುಪಮ' ಮುಂತಾದ ಹಾಸ್ಯ ಕಥೆಗಳನ್ನು ಬರೆದಿದ್ದರೂ ಅವರಿಗೇ ಅವು ಇಷ್ಟವಾಗಲಿಲ್ಲ. ಭಾರತ, ಭಾಗವತ, ರಾಮಾಯಣವನ್ನು ಓದತೊಡಗಿದ ಮೇಲೆ ಆಧ್ಯಾತ್ಮಿಕ ಆಕರ್ಷಣೆಗೆ ಒಳಗಾದರು. ಪೌರಾಣಿಕ ವಸ್ತು-ವಿಷಯಗಳ ಹಾಡುಗಳನ್ನು ಅದ್ಭುತವಾಗಿ ಹಾಡಲು ಕಲಿತರು. ಮನೆಗೆ ಬಂದವರೂ ಹಾಡು ಹೇಳುವಂತೆ ಒತ್ತಾಯಿಸುತ್ತಿದ್ದರು. ಹಾಡಿನ ಜೊತೆಗೆ ಅರ್ಥವನ್ನೂ ಹೇಳುತ್ತಿದ್ದರು.

ತಂದೆ-ತಾಯಿಯ ಮರಣಾನಂತರ ಪಟ್ಟಣದ ವಾಸ ಅವರಿಗೆ ಅನಿವಾರ್ಯವಾಯಿತು. ಅಲ್ಲಿನ ಅವಕಾಶಗಳನ್ನು ಉಪಯೋಗಿಸಿಕೊಂಡ ಜೀವೂಬಾಯಿ, ಬೆಂಗಳೂರು ಮೈಸೂರುಗಳಲ್ಲಿ ನಡೆಯುತ್ತಿದ್ದ ಹರಿಕಥೆ, ಪುರಾಣ ಪ್ರವಚನ, ಭಾಗವತ ಸಪ್ತಾಹಗಳಂತಹ ಕಾರ್ಯಕ್ರಮಗಳಿಗೆ ತಪ್ಪದೆ ಹೋಗುತ್ತಿದ್ದರು. ಅಲ್ಲೂ ಹಾಡಲು ಪ್ರಾರಂಭಿಸಿದರು. ಪುಸ್ತಕದ ನೆರವಿಲ್ಲದೆ ಹೀಗೆ ನೂರಾರು ಕೀರ್ತನೆಗಳನ್ನು ಹಾಡಿರುವುದು ಇವರ ವಿಶೇಷ. ಅವರದು ಹಸುವಿನಂತಹ ಸ್ವಭಾವ. ಅವರ ಸ್ವಭಾವಕ್ಕೆ ಹೊಂದಿಕೊಳ್ಳುವ ಸ್ನೇಹಿತೆಯರು ದೊರೆತರು. ದೈವಕೃಪೆಯಿಂದ ಉರಗಾದ್ರಿ ವಿಠಲದಾಸರು, ಜಗನ್ನಾಥವಿಠಲರ ಹರಿಕಥಾಸಾರ ಕೃತಿಯ ಬಗ್ಗೆ ಹಾಸನದಲ್ಲಿ ಪ್ರವಚನ ನೀಡುವಾಗ ಜೀವೂಬಾಯಿ ಅಲ್ಲಿದ್ದರು. ಕಾರ್ಯಕ್ರಮದಲ್ಲಿ ಆಸಕ್ತಿಯಿಂದ ಭಾಗವಹಿಸಿ ದಾಸರ ಮೆಚ್ಚುಗೆ ಗಳಿಸಿದರು. 'ಶ್ರೀ ಕಮಲನಾಭ ವಿಠಲ' ಎಂಬ ಅಂಕಿತವನ್ನು ನೀಡಿ ದಾಸರು ಅನುಗ್ರಹಿಸಿದ ಮೇಲೆ ಕೀರ್ತನೆಗಳ ರಚನೆ ಆರಂಭವಾಯಿತು. ವಯೋಧರ್ಮಕ್ಕೆ ಅನುಗುಣವಾಗಿ ದೃಷ್ಟಿ ಕಳೆದುಕೊಂಡ ಮೇಲೆ ಅವರ ಸಹೋದರ ನಾಗೇಶರಾಯರು ಅವರ ಹಾಡುಗಳನ್ನು ಬರೆದುಕೊಳ್ಳುತ್ತಿದ್ದರು.

ಬಳ್ಳಾರಿ ರಾಧಾಬಾಯಿಯವರು ಶಾಲೆಯ ಮೆಟ್ಟಿಲು ಹತ್ತಿಲ್ಲದಿದ್ದರೂ ಮನೆಯಲ್ಲಿಯೇ ಕನ್ನಡ ಮತ್ತು ಸಂಸ್ಕೃತ ಹಾಗೂ ಸಂಗೀತವನ್ನು ಅಭ್ಯಾಸ ಮಾಡುವಷ್ಟರ ಮಟ್ಟಿಗೆ ಮನೆಯ ವಾತಾವರಣವಿತ್ತು. ಗೃಹ ವೈದ್ಯದಂತಹ ಕರ-ಕುಶಲ ಕಲೆಗಳಲ್ಲಿ ಪ್ರವೀಣೆಯಾಗಿದ್ದರು. ಸಾಮಾಜಿಕ ಕಾರ್ಯಗಳಲ್ಲಿ ತಮ್ಮನ್ನು ತೊಡಗಿಸಿಕೊಂಡು ಜನಮನ್ನಣೆ ಗಳಿಸಿದ್ದರು. ಅವರ ೮೦ನೇ ವಯಸ್ಸಿನಲ್ಲಿ ಒಂದು ದಿನ ಕನಸಿನಲ್ಲಿ ದೇವರನಾಮಗಳನ್ನು ಬರೆಯುವಂತೆ ಯಾರೋ ಪ್ರೇರಣೆ ನೀಡಿದಂತಾಯ್ತು. ಅಲ್ಲದೇ ಹೆಳವನಕಟ್ಟೆ ಗಿರಿಯಮ್ಮ ಮತ್ತು ಭೀಮವ್ವನವರ ಹಾಡುಗಳು ಆ ಪ್ರಾಂತ್ಯದಲ್ಲಿ ಪ್ರಚಲಿತವಾದುದು ಭೀಮವ್ವನವರನ್ನು ಅನುಸರಿಸಿಯೇ ಬರೆಯಲು ಪ್ರೇರಣೆಯಾಯಿತು.

ಕಳಸದ ಸುಂದರಮ್ಮನವರು ಕೂಡಾ ಸಂಪ್ರದಾಯಸ್ಥ ಕುಟುಂಬದಲ್ಲಿ ಜನಿಸಿದವರು. ಭಗವದ್ಭಕ್ತರು ಆಗಿದ್ದರು. ಶ್ರೀಮತಿ ಗುಂಡಮ್ಮನವರಿಗೂ ತಂದೆ ಮುದ್ದುಮೋಹನ ವಿಠಲದಾಸರಿಂದ ಅಂಕಿತ

ದೊರೆತು ಬರೆಯಲು ಪ್ರೋತ್ಸಾಹ ದೊರೆತಿತ್ತು. ಪತಿ ಪೆನುಗೊಂಡ ಪುಟ್ಟಾಚಾರ್ಯರು ಅನುರೂಪವಾಗಿದ್ದರು. ದಂಪತಿಗಳಿಬ್ಬರೂ ಸದಾ ದೇವತಾಕಾರ್ಯದಲ್ಲಿ ತಲ್ಲೀನರಾಗಿರುತ್ತಿದ್ದರು. ಉರುಗಾದ್ರಿ ವಿಠಲದಾಸ ದಂಪತಿಗಳು ಒಂದೇ ಮನೆಯವರೆನೋ ಎಂಬಂತೆ ಒಡನಾಟದಲ್ಲಿದ್ದರು. ಹರಿಭಜನೆ ದೇವರ ಪೂಜೆಗಳು ಪ್ರತಿದಿನ ನಡೆಯುತ್ತಿದ್ದವು. ಉರುಗಾದ್ರಿ ವಿಠಲದಾಸರ ಪತ್ನಿ ತುಂಗಾಬಾಯಿ ಜೊತೆ ಪ್ರತಿದಿನ ಸಂಜೆ ದೇವರನಾಮಗಳನ್ನು ಹೇಳಿಕೊಳ್ಳುತ್ತಿದ್ದರು. ಜೊತೆಗೆ ಸುತ್ತ-ಮುತ್ತಲಿನ ಮಕ್ಕಳಿಗೂ ಹೇಳಿಕೊಡುತ್ತಾ ಒಂದು ಸಾಂಸ್ಕೃತಿಕ ವಾತಾವರಣವನ್ನೇ ನಿರ್ಮಾಣ ಮಾಡಿಕೊಂಡಿದ್ದರು.

ಸರಸ್ವತಿ ಬಾಯಿಯವರು ಜನಿಸಿದ್ದು ಕೂಡಾ ಸಂಪ್ರದಾಯಸ್ಥ ಕುಟುಂಬದಲ್ಲೇ. ಸಾಹಿತ್ಯ ಅಧ್ಯಯನ ಮತ್ತು ರಚನೆಗೆ ಉತ್ತಮ ಪರಿಸರವು ಮನೆಯಲ್ಲೇ ಇದ್ದಿತು. ಸರಸ್ವತಿ ಬಾಯಿಯವರ ಸಹೋದರರಾದ ವೇದ ವ್ಯಾಸಾಚಾರ್ಯ ಮತ್ತು ಭೀಮಾಚಾರ್ಯರು ಸಂಸ್ಕೃತದಲ್ಲಿ ಪ್ರಕಾಂಡ ಪಂಡಿತರಾಗಿದ್ದರು. ಬಾಲ್ಯದಿಂದಲೇ ಪೂಜೆ, ಪುರಾಣ ಶ್ರವಣ, ಸರಸ್ವತಿಯವರಿಗೆ ಲಭ್ಯವಾಗಿತ್ತು. ತಂದೆಯ ಮರಣಾನಂತರವೂ ರಾಮರಾಯರು ಮತ್ತು ಸೀತಾಬಾಯಿ ಎಂಬ ದಂಪತಿಗಳು ಇವರಿಗೆ ಆಶ್ರಯವನ್ನು ನೀಡಿದರು. ಇವರು ವಿವಾಹವಾಗಿದ್ದು ಸಂಸ್ಕೃತ ವಿದ್ವಾಂಸದ ಮನೆತನದವರನ್ನೇ. ಹಾಗಾಗಿ ಅವರ ಅಧ್ಯಯನಕ್ಕೆ ಮತ್ತಷ್ಟು ಪ್ರೋತ್ಸಾಹ ದೊರೆಯಿತು. ೨೫ನೇ ವಯಸ್ಸಿನಲ್ಲಿ ಮಗುವನ್ನು ಕಳೆದುಕೊಂಡರೂ ಭಗವಂತನ ಕಡೆಗೆ ಮನಸ್ಸು ಹರಿಸಿದರು. ತಮ್ಮ ದಿನನಿತ್ಯದ ಕೆಲಸಗಳಲ್ಲಿ ಮತ್ತು ಪೂಜಾಕಾರ್ಯಗಳಲ್ಲಿ ತೊಡಗಿದಾಗಲೂ ಹಾಡುತ್ತಿದ್ದ ಹಾಡುಗಳನ್ನು ಕೇಳಿ ಅವರ ಪತಿ ವ್ಯಾಸಾಚಾರ್ಯರು ಅವುಗಳನ್ನು ಬರೆದಿಟ್ಟರು. ಬೆಂಗಳೂರಿನಂತಹ ಪ್ರದೇಶದಲ್ಲಿಯೂ ಆಕೆ ಪ್ರಖ್ಯಾತರಾದರು. ಸುತ್ತಮುತ್ತಲ ಮಹಿಳೆಯರೆಲ್ಲ ಒಟ್ಟಾಗಿ ಸೇರಿ ಪುರಾಣ ಶ್ರವಣ, ಹರಿಕಥೆಗಳ ಜೊತೆಗೆ ದೇವರನಾಮಗಳನ್ನು ಹಾಡುತ್ತ ಕರಕುಶಲ ಕಲೆ ಮತ್ತು ನಾಟಿವೈದ್ಯ ವಿದ್ಯೆಯನ್ನು ಹೇಳಿಕೊಡುತ್ತ ಜನಪ್ರಿಯರಾಗಿ ಉತ್ತಮ ಸಾಂಸ್ಕೃತಿಕ ವಾತಾವರಣವನ್ನು ನಿರ್ಮಾಣಮಾಡಿದರು. ಇವರು ಹಿಂದಿ, ಮರಾಠಿ, ತೆಲುಗು, ತಮಿಳು ಭಾಷೆಗಳನ್ನು ಬಲ್ಲವರಾಗಿದ್ದರು. ಅನೇಕ ತೆಲುಗು ಹಾಡುಗಳನ್ನೂ ರಚಿಸಿದ್ದಾರೆ. ಅವರ ೪೫ನೇ ವಯಸ್ಸಿನಲ್ಲಿ ಸಾಗರಕಟ್ಟೆ ಮಠಾಧೀಶರಿಂದ ಶ್ರೀ ಶ್ರೀನಿವಾಸ ಎಂಬ ಅಂಕಿತ ದೊರೆಯಿತು. ಭಗವಂತನ ಮೇಲಿನ ಅನನ್ಯ ಭಕ್ತಿ ಅವರ ರಚನೆಗಳಿಗೆ ಮೂಲ ಪ್ರೇರಣೆಯಾಯಿತು. ಕುಟುಂಬದ ಸದಸ್ಯರು ಮಕ್ಕಳು, ಮೊಮ್ಮಕ್ಕಳು, ಕಥೆ-ಹಾಡುಗಳನ್ನು ಹೇಳುವಂತೆ ಕೇಳಿಕೊಳ್ಳುತ್ತಿದ್ದರು. ಅಂತಹ ಸಂದರ್ಭದಲ್ಲಿ ಸರಸ್ವತಿಬಾಯಿಯವರು ವಿಶೇಷವಾಗಿಯೇ ಅವರಿಗೋಸ್ಕರ ಹಾಡುಗಳನ್ನು ಬರೆದುಕೊಡುತ್ತಿದ್ದರು. ಆಗೆಲ್ಲಾ ಅವರು ಜನಪ್ರಿಯವಾಗಿರುವ ಧಾಟಿಯಲ್ಲಿಯೇ ಹಾಡುಗಳನ್ನು ಬರೆದು ಕೊಡುತ್ತಿದ್ದರಂತೆ.

ಅಂಬಾಬಾಯಿಯೆಂಬ ಹರಿದಾಸಿ ತವರಿನಲ್ಲಿಯೇ ಪ್ರಾಥಮಿಕ ಶಿಕ್ಷಣ ಮುಗಿಸಿದರು. ವೈಧವ್ಯದಿಂದ ಬಂದ ಅನ್ಯಾಶ್ರಯದಲ್ಲಿಯೂ ಕಷ್ಟಗಳನ್ನು ಮರೆಯಲು ಪೂಜೆ, ಉಪವಾಸ, ವ್ರತ, ಅಧ್ಯಯನ, ಪಾರಾಯಣದಂತಹ ಧಾರ್ಮಿಕ ಪ್ರವೃತ್ತಿಯನ್ನು ಬೆಳೆಸಿಕೊಂಡರು. ಇದು ಅವರಿಗೆ

ಮನಸ್ಥೈರ್ಯವನ್ನು ತಂದುಕೊಟ್ಟಿತು. ಇಂತಹ ಸಂದರ್ಭದಲ್ಲಿಯೇ ಮುದ್ದುಮೋಹನ ದಾಸರಿಂದ 'ಗೋಪಾಲ ಕೃಷ್ಣ ವಿಠಲ' ಎಂಬ ಅಂಕಿತ ಪಡೆದು ದಾಸರಿಂದ ಹರಸಲ್ಪಟ್ಟರು.

ಅಂಬಾಬಾಯಿಯ ಕುಟುಂಬ ವರ್ಗದವರೆಲ್ಲ ಅಂಕಿತವನ್ನು ಸ್ವೀಕರಿಸಿದ್ದರು. ಅಜ್ಜಿಯವರು ಸೀತಾಪತಿವಿಠಲ, ತಾಯಿ ಯಾದವೇಂದ್ರ ವಿಠಲ, ತಮ್ಮ ರಮಕಾಂತ ವಿಠಲ, ತಮ್ಮನ ಪತ್ನಿ ಸುರೇಶ ವಿಠಲ, ತಂಗಿ ಪರಮಾನಂದ ವಿಠಲ, ತಂಗಿಯ ಗಂಡ ನಿತ್ಯಾನಂದ ವಿಠಲ ಹೀಗೆ ಅಂಕಿತ ಪಡೆದವರ ನಡುವೆಯೇ ಇವರು ಬದುಕು ಸಾಗಿಸಿದವರು. ಪರಿಶುದ್ಧ ಜೀವನ, ತೀರ್ಥಕ್ಷೇತ್ರಗಳ ಸಂದರ್ಶನ, ಭಜನೆ ಅಂಬಾಬಾಯಿವರ ಬದುಕಿನ ಭಾಗವೇ ಆದವು. ಕಾಲಿಗೆ ಗೆಜ್ಜೆ ಕಟ್ಟಿ ಕುಣಿದು ಊಂಛವೃತ್ತಿಯನ್ನು ಮಾಡಿದರು. ಅತ್ತೆ ಮನೆಯಿಂದ ದೊರೆತ ಕೃಷ್ಣನ ವಿಗ್ರಹವೇ ಅವರ ಆರಾಧ್ಯ ದೈವವಾಯಿತು. ಜೀವನ ದೃಷ್ಟಿಯೇ ಬದಲಾಯಿತು. ತಾನು ಪರಾಶ್ರಯದಲ್ಲಿದ್ದೇನೆ ವೈಧವ್ಯದ ಬಾಳು ಬಾಳುತ್ತಿದ್ದೇನೆ ಎಂಬ ಸಂಕೋಚಗಳು ದೂರವಾದವು. ಹರಿಯ ಅನುಗ್ರಹದಿಂದ ಕಷ್ಟಗಳನ್ನು ಗೆದ್ದು ಮನದ ಬೇಗೆಯನ್ನು ಶಾಂತಗೊಳಿಸಿಕೊಂಡು ಶ್ರೀಹರಿಗೆ ನನ್ನನ್ನು ಧಾರೆಯೆರೆದು ಕೊಟ್ಟಿದ್ದಾರೆ ಎಂದು ಭಾವಿಸಿ ಬದುಕಿದರು. ಅಂಬಾಬಾಯಿಯವರ ತಂಗಿ ಪಕ್ಕದ ಮನೆ ಗೃಹಿಣಿಯನ್ನು ಲಾಲಿ ಹಾಡನ್ನು ಹೇಳಿಕೊಡುವಂತೆ ಕೇಳಿದಳು. ಯಾವುದೋ ನೆಪವೊಡ್ಡಿ ಆಕೆ ತಿರಸ್ಕರಿಸಿದಳು. ಇದನ್ನು ತಂಗಿ ಅಂಬಾಬಾಯಿಯವರಲ್ಲಿ ಹೇಳಿಕೊಂಡಾಗ ಅಂದು ಮಧ್ಯರಾತ್ರಿಯೇ ಎದ್ದು ಪ್ರಾರಂಭಿಸಿದ್ದ ಲಾಲಿಹಾಡು ೩೮೯ ನುಡಿಗಳ ದೀರ್ಘ ರಚನೆಯದಾಗಿದೆ. ಅಕ್ಕ ತಂಗಿಯರಿಬ್ಬರೂ ಅದನ್ನು ಪ್ರತಿನಿತ್ಯ ಹಾಡುತ್ತಿದ್ದರಂತೆ. ಅಂಬಾಬಾಯಿಯವರ ತಮ್ಮ ಕೃಷ್ಣರಾಯರು ಆಧ್ಯಾತ್ಮದಲ್ಲಿ ಆಸಕ್ತಿಯುಳ್ಳವರಾಗಿದ್ದರು. ಅಕ್ಕನಿಂದ ಪ್ರೇರಣೆ ಪಡೆದು ಮುದ್ದುಮೋಹನ ದಾಸರಿಂದ ಅಂಕಿತ ಪಡೆದಿದ್ದರು.

ಒಮ್ಮೆ ಗುರುಗಳೊಬ್ಬರು ಗಂಡಸರಿಗೆ ಗಾಯತ್ರಿ ಮಂತ್ರ, ಪುರುಷಸೂಕ್ತ ವಾಯುಸ್ತುತಿಗಳಿವೆ. ದೇವತಾರ್ಚನೆ ವೇಳೆಯಲ್ಲಿ ಇವನ್ನು ಹೇಳಿಕೊಡುತ್ತಾರೆ. ಹೆಣ್ಣುಮಕ್ಕಳಿಗೆ ಮನೆ ಕೆಲಸವೇ ದೇವರ ಪೂಜೆ. ಮನೆಗೆಲಸ ಮಾಡಿಕೊಳ್ಳುತ್ತಲೇ ಹಾಡಿಕೊಳ್ಳಬಹುದಾದ ಧೀರ್ಘ ಕೃತಿಗಳನ್ನು ರಚನೆ ಮಾಡು ಎಂದು ಪ್ರೋತ್ಸಾಹದ ನುಡಿಗಳನ್ನಾಡಿದರು. ಅಂಬಾ ಅವರಿಗೆ ಹೊಸ ಹೊಳವು ಮೂಡಿ ಸಂತೋಷದಿಂದ ದೀರ್ಘ ಕೃತಿಗಳನ್ನು ರಚಿಸಲು ಪ್ರಾರಂಭಿಸಿದರು. ತಾವು ಹೋದ ಕಡೆಯೆಲ್ಲಾ ಹೆಣ್ಣುಮಕ್ಕಳಿಗೆ ಹಾಡುಗಳನ್ನು ಹೇಳಿಕೊಡುತ್ತಿದ್ದರು. ಇವರು ಹಾಡುವ ಸುಂದರಕಾಂಡವನ್ನು ಕೇಳಿ ಸುತ್ತ-ಮುತ್ತಲ ಮಹಿಳೆಯರು ಇವರಿಂದ ಸುಂದರಕಾಂಡದ ಪ್ರವಚನದ ಸಪ್ತಾಹವನ್ನೇ ಏರ್ಪಡಿಸುತ್ತಿದ್ದರು. ಅಂಬಾಬಾಯಿ ಅವರಿಂದ ಸುಂದರಕಾಂಡವನ್ನು ಹೇಳಿಸಿದರೆ ಮನೆಗೆ ಶುಭವಾಗುತ್ತದೆ ಎಂಬ ನಂಬಿಕೆಯು ಅವರು ಬದುಕಿದ್ದಾಗಲೇ ಪ್ರಚಲಿತವಾಗಿತ್ತು. ಜನರ ಪ್ರೋತ್ಸಾಹವು ಎಷ್ಟರ ಮಟ್ಟಿಗಿತ್ತೆಂದರೆ ಆಕೆಯನ್ನು ಸುಂದರಕಾಂಡದ ಅಂಬಾಬಾಯಿಯೆಂದೇ ಕರೆಯುತ್ತಿದ್ದರು. ಬದುಕಿನ ಎಲ್ಲಾ ಭರವಸೆಗಳನ್ನು ಕಳೆದುಕೊಂಡು ಪರಿತಪಿಸುತ್ತಿದ್ದ ಅಂಬಾಬಾಯಿಯವರಿಗೆ ದಾಸಪಂಥ ಬೆಳಕು ತೋರಿಸಿತು. ತಂದೆ ಮುದುಮೋಹನ ವಿಠಲದಾಸರ ಸ್ವಭಾವ, ವಿದ್ವತ್ತು,

ನಿಷ್ಠೆ ಅವರ ಮೇಲೆ ಗಾಢ ಪ್ರಭಾವ ಬೀರಿದ್ದು, ಅವರ ಪ್ರೇರಣೆಗೆ ಒಳಗಾಗಿ ಸ್ಫೂರ್ತಿಯಿಂದಲೇ ಬದುಕಿನಿಂದ ಬದುಕುತ್ತಿದ್ದ ಅಂಬಾಬಾಯಿ, ಪತಿಯ ಮರಣಾನಂತರ ವಿರಾಗಿಣಿಯಾದರು. ಅವರ ಕೀರ್ತನೆಗಳು ಮುದ್ರಣ ಕಾಣುವುದಕ್ಕಿಂತ ಹೆಚ್ಚು ಜನರ ಬಾಯಿಯಲ್ಲೇ ಉಳಿದಿವೆ.

**೨.೩ ಮಹಿಳಾಕೀರ್ತನಕಾರರ ಬದುಕಿನಲ್ಲಿ ನಡೆಯಿತೆನ್ನಲಾದ ಪವಾಡ ಕಥೆಗಳು**

ಮಹಿಳಾಕೀರ್ತನಕಾರರ ಬದುಕಿನಲ್ಲಿ ನಡೆಯಿತೆನ್ನಲಾದ ಪವಾಡಗಳು ಜನರು ಅವರ ಮೇಲಿಟ್ಟಿರುವ ನಂಬಿಕೆ, ಗೌರವ, ನೀಡಿರುವ ಸ್ಥಾನಮಾನಗಳ ಪ್ರತೀಕವಾಗಿ ಉಳಿದಿವೆ. ಈ ಪವಾಡದ ಕಥೆಗಳನ್ನು ಅಧ್ಯಯನ ದೃಷ್ಟಿಯಿಂದ ಅವರ ಬದುಕಿನ ಮತ್ತು ರಚನೆಯ ಕುರಿತಾದ ಪವಾಡಗಳೆಂದು ವಿಭಾಗಿಸಿಕೊಂಡಿದ್ದೇನೆ.

**ಬದುಕಿನಲ್ಲಿ ನಡೆದ ಪವಾಡ**

ಗಿರಿಯಮ್ಮನ ಆರಾಧ್ಯದೈವವಾದ ಹೆಳವನಕಟ್ಟೆ ರಂಗನ ಬಗೆಗಿನ ಕಥೆಯೊಂದು ಹೀಗಿದೆ: ರಂಗನಾಥನ ಕ್ಷೇತ್ರವಾಗಿರುವ ಹೆಳವನಕಟ್ಟೆ ಇರುವ ಸ್ಥಳದಲ್ಲಿ ಹೆಳವನೊಬ್ಬ ವಾಸಿಸುತ್ತಿದ್ದ. ಅಲ್ಲಿದ್ದ ದಿಬ್ಬದ ಪಕ್ಕದಲ್ಲಿ ಹರಿಯುತ್ತಿದ್ದ ಹಳ್ಳದ ನೀರನ್ನು ಜನ ಉಪಯೋಗಿಸುತ್ತಿದ್ದರು. ಅಲ್ಲಿಗೆ ಬರುತ್ತಿದ್ದ ಗೊಲ್ಲರಿಗೆ ಹೆಳವನು ದೇವರ ಕಥೆಗಳನ್ನು ಹೇಳುತ್ತಾ ವಿಶ್ವಾಸದಿಂದಿದ್ದ. ಬೇಸಿಗೆಯಲ್ಲಿ ಹಳ್ಳದ ನೀರು ಬತ್ತಿ ಹೋಗುತ್ತಿತ್ತು. ಇದರಿಂದ ಜನ ಜಾನುವಾರುಗಳಿಗೆ ತೊಂದರೆಯಾಗುತ್ತಿತ್ತು. ಇದನ್ನು ನೀಗಿಸಲು ಹೆಳವನು ಜನರ ಸಹಕಾರದಿಂದ ಕಟ್ಟಿದ ಕಟ್ಟೆಯೇ ಹೆಳವನಕಟ್ಟೆ ಎಂದು ಪ್ರಸಿದ್ಧಿಯಾಯ್ತು. ಅದರ ಸಮೀಪದಲ್ಲಿದ್ದ ಹುತ್ತಕ್ಕೆ ಹಸುವೊಂದು ಬಂದು ಪ್ರತಿದಿನವು ಹಾಲನ್ನು ಕರೆಯುತ್ತಿತ್ತು. ಕುತೂಹಲಗೊಂಡ ಜನ ಅಗೆದು ನೋಡಲು ರಂಗನಾಥಸ್ವಾಮಿಯ ವಿಗ್ರಹ ಸಿಕ್ಕಿತು. ಅದನ್ನು ಅಲ್ಲೇ ಪ್ರತಿಷ್ಠಾಪನೆ ಮಾಡಿದರು. ಅಂದಿನಿಂದ ರಂಗನಾಥಸ್ವಾಮಿ ಹೆಳವನಕಟ್ಟೆ ರಂಗನಾಥನೆಂದೇ ಪ್ರಸಿದ್ಧಿಯಾದನು.

ಗಿರಿಯಮ್ಮನ ಬದುಕಿನಲ್ಲಿ ನಡೆದ ಅನೇಕ ಕಥೆಗಳು ಪ್ರಚಾರದಲ್ಲಿವೆ.

ಮದುವೆಯ ಮೊದಲ ದಿನ ರಾತ್ರಿ ಅವಳ ಗಂಡ ತಿಪ್ಪರಸನು ಮಲಗುವ ಕೋಣೆಯಲ್ಲಿ ಗಿರಿಯಮ್ಮನನ್ನು ಕಾಳಿಂಗಸರ್ಪವೊಂದು ಸುತ್ತಿಕೊಂಡಿತ್ತು. ಆಶ್ಚರ್ಯಚಕಿತನಾದ ತಿಪ್ಪರಸ ತನ್ನ ತಾಯಿ ಮತ್ತು ತಂದೆಯರನ್ನು ಕರೆದು ತೋರಿಸಿದಾಗ ಅವರ ಕಣ್ಣಿಗೆ ಸರ್ಪ ಕಂಡು ಬರಲಿಲ್ಲ. ಆದರೆ ತಿಪ್ಪರಸನಿಗೆ ಮಾತ್ರ ಪ್ರತಿದಿನ ಇದು ಹೀಗೇ ಆಗುತ್ತಿತ್ತು. ಇದು ದೈವ ಸಂಕಲ್ಪವೆಂದು ಭಾವಿಸಿ ಗಿರಿಯಮ್ಮನನ್ನು ಪೂಜ್ಯ ಭಾವನೆಯಿಂದ ನೋಡುತ್ತಿದ್ದ. ದಿನಗಳು ಹೀಗೆ ಕಳೆಯುತ್ತಿತ್ತು, ಗಿರಿಯಮ್ಮನ ದೈವಭಕ್ತಿ ಪ್ರಚಾರವಾಯಿತು. ಅನೇಕರು ಕಷ್ಟ ಪರಿಹಾರಕ್ಕಾಗಿ ಗಿರಿಯಮ್ಮನನ್ನು ಆಶ್ರಯಿಸತೊಡಗಿದರು. ಪುಂಗನೂರಿನ ರಾಜಕುಮಾರನಿಗೆ ಕಣ್ಣು ಹೋಗಿತ್ತು. ತಿರುಪತಿಯ ವೆಂಕಟೇಶನ ಆರಾಧನೆಯಿಂದ ಒಂದು ಕಣ್ಣು ಮಾತ್ರ ಬಂದಿತು. ಇನ್ನೊಂದನ್ನು ಕಣ್ಣನ್ನು ಭಕ್ತೆ ಗಿರಿಯಮ್ಮ ದಯಪಾಲಿಸುವಳೆಂದು ವೆಂಕಟೇಶನು ಸೂಚನೆ ನೀಡಿದ. ಅದರಂತೆ ರಾಜನು ಗಿರಿಯಮ್ಮನನ್ನು ಬೇಡಿದಾಗ, ದೇವರನ್ನು ಪ್ರಾರ್ಥಿಸಿ ಇನ್ನೊಂದು ಕಣ್ಣು ಬರುವಂತೆ ಮಾಡಿದಳು.

ಇನ್ನೊಮ್ಮೆ ಬರಗಾಲ ಬಂದಾಗ ಮಳೆ ಬರಿಸುವಂತೆ ಜನರು ಗಿರಿಯಮ್ಮನನ್ನು ಕೋರುತ್ತಾರೆ, ಹಠ ಹಿಡಿಯುತ್ತಾರೆ. ಅವರ ಕೋರಿಕೆಗೆ ಮಣಿದ ಗಿರಿಯಮ್ಮ ಆರ್ತಳಾಗಿ ದೇವರನ್ನು ಸ್ತುತಿಸಿದಾಗ ಮಳೆ ಸುರಿಯುತ್ತದೆ. ಬರ ನೀಗುತ್ತದೆ.

ಗಿರಿಯಮ್ಮನನ್ನು ತಂದೆಯ ಸ್ಥಾನದಲ್ಲಿ ನಿಂತು ಸಾಕಿ ಸಲಹಿದ ಚಿಕ್ಕಪ್ಪನಿಗಿದ್ದ ಒಂದೇ ಒಂದು ಗಂಡು ಮಗು ಆಕಸ್ಮಿಕವಾಗಿ ತೀರಿಕೊಂಡಿತು. ದೇವರನ್ನು ಮೊರೆಹೊಕ್ಕ ಗಿರಿಯಮ್ಮ ಮಗುವನ್ನು ಬದುಕಿಸಿಕೊಟ್ಟಳು.

ಕಂದಾಯದ ವಿಚಾರದಲ್ಲಿ ಮೈದುನನ ಮೇಲೆ ಹಣದ ಅವ್ಯವಹಾರದ ಆರೋಪ ಬಂತು. ನಿರಪರಾಧಿಯಾದ ಮೈದುನನ ರಕ್ಷಣೆಗೆ ನಿಂತ ಗಿರಿಯಮ್ಮ ಅಧಿಕಾರಿಗಳನ್ನು ಕಾಣಲು ಕೃಷ್ಣ ನದಿಯನ್ನು ದಾಟಿ ಹೋಗಬೇಕಾಗಿತ್ತು. ನದಿ ಉಕ್ಕಿ ಹರಿಯುತ್ತಿತ್ತು. ತುರ್ತಾಗಿ ಹೋಗಲೇಬೇಕಾಗಿದ್ದ ಗಿರಿಯಮ್ಮ ದಾರಿ ಮಾಡಿಕೊಡುವಂತೆ ನದಿಯನ್ನು ಪ್ರಾರ್ಥಿಸುತ್ತಾಳೆ. ನದಿ ದ್ವಾಪರದಲ್ಲಿ ಕೃಷ್ಣನನ್ನು ಹೊತ್ತ ವಸುದೇವನಿಗೆ ದಾರಿ ಮಾಡಿಕೊಟ್ಟಂತೆ ಗಿರಿಯಮ್ಮನಿಗೂ ದಾರಿ ಬಿಡುತ್ತದೆ.

ಈಕೆಯ ಮಹಿಮೆಯನ್ನು ತಿಳಿದ ಆಂಗ್ಲ ಸರದಾರನೊಬ್ಬ ಅವಳ ದರ್ಶನ ಮಾಡಿ ಆಕೆಯ ದೈವಭಕ್ತಿಗೆ ಶರಣಾಗುತ್ತಾನೆ. ಆಕೆಯಮನೆತನಕ್ಕೆ 'ದೇಶಪಾಂಡೆ' ಎಂಬ ಬಿರುದು ನೀಡಿ, ಆ ಗ್ರಾಮದ ಸ್ವತ್ತನ್ನು ಅನುಭವಿಸುವಂತೆ ಅವರಿಗೇ ಅಧಿಕಾರ ನೀಡಿ ಗೌರವಿಸುತ್ತಾನೆ.

ಮುಂದೆ ಹೆಳವನಕಟ್ಟೆ ರಂಗನ ಉಂಗುರವೊಂದು ಕಾಣೆಯಾಗುತ್ತದೆ. ಅದರ ಅಪವಾದ ಅರ್ಚಕನ ಮೇಲೆ ಬರುತ್ತದೆ. ಅಮಾಯಕನಾದ ಅವನ ಪರವಾಗಿ ಗಿರಿಯಮ್ಮ ದೇವರನ್ನು ಪ್ರಾರ್ಥಿಸುತ್ತಾಳೆ. 'ಹೊನ್ನ ತಾ ಗುಬ್ಬಿ ಹೊನ್ನ ತಾ.....' ಎಂಬ ಪ್ರಸಿದ್ಧ ಗೀತೆ ಈ ಸಂದರ್ಭದಲ್ಲಿಯೇ ರಚಿತವಾದದ್ದು. ಆಗ ಗುಬ್ಬಿಯೊಂದು ಬಂದು ಬಿದ್ದಿದ್ದ ಉಂಗುರವನ್ನು ಹುಡುಕಿ ತರುತ್ತದೆ. ಈ ಮೂಲಕ ಅರ್ಚಕನ ಮೇಲಿನ ಅಪವಾದ ಗಿರಿಯಮ್ಮನಿಂದ ದೂರವಾಗುತ್ತದೆ.

ಗಿರಿಯಮ್ಮನು ತನ್ನ ಕಡೆಯ ದಿನಗಳಲ್ಲಿ ತೀರ್ಥಕ್ಷೇತ್ರಗಳನ್ನು ಸಂದರ್ಶನ ಮಾಡಿ ತುಂಗಭದ್ರೆಯ ಪೂರ್ಣ ಪ್ರವಾಹದಲ್ಲಿ ಐಕ್ಯಳಾದಳು.

ಹರಪನಹಳ್ಳಿ ಭೀಮವ್ವನವರ ಎಳವೆಯಲ್ಲಿ ಭಗವದ್ಲೀಲಾ ಸರಣಿಯೇ ಕಂಡು ಬರುತ್ತದೆ. ಹರಪನಹಳ್ಳಿ ಭೀಮವ್ವನವರು ಹುಟ್ಟಿದ ನಂತರ ಕೆಲವು ದಿನಗಳವರೆಗೂ ಮೈತುಂಬಾ ಚಕ್ರಗಳು, ಎರಡೂ ಕಾಲುಗಳಲ್ಲಿ ಪದ್ಮಗಳು ಕಾಣಿಸುತ್ತಿದ್ದವಂತೆ. ತೊಟ್ಟಿಲು ತೂಗುವಾಗ ಬರಿ ಹರಿಯ ನಾಮಗಳನ್ನು ಹಾಡಿದರೆ ಮಾತ್ರ ಮಗು ನಿದ್ರಿಸುತ್ತಿತ್ತು, ಇಲ್ಲದಿದ್ದರೆ ಅಳುತ್ತಿತ್ತು.

ಮಗುವಿಗೆ ಒಂದು ವರ್ಷವಾಗಿದ್ದಾಗ ಒಂದು ದಿನ ಏಕಾದಶಿಯಂದು ತೊಟ್ಟಿಲಲ್ಲಿ ಮಲಗಿದ್ದ ಮಗುವಿನ ಮೇಲೆ ಕಾಳಿಂಗ ಸರ್ಪವೊಂದು ಮಲಗಿತ್ತು. ಇದನ್ನು ಕಂಡ ತಂದೆ ರಘುನಾಥಾಚಾರ್ಯರು ಭಯದಿಂದ ಚೀರಿಕೊಂಡಾಗ ಹಾವು ಅದೃಶ್ಯವಾಯಿತಂತೆ!

ಎರಡನೇ ವರ್ಷದಲ್ಲಿ ಹುಟ್ಟು ಹಬ್ಬಕ್ಕೆಂದು ಮಗುವಿಗೆ ಬಂಗಾರದ ಮುಂದಲೆ ಹೂ ತೊಡಿಸಿದ್ದರು. ಕಾರ್ಯಕ್ರಮವು ಮುಗಿದು ರಾತ್ರಿ ಹಾಗೇ ಮಲಗಿಸಿದ್ದಾಗ ನಡುರಾತ್ರಿ ಎದ್ದ ಮಗು 'ನನ್ನ ಮುಂದಲೆ ಹೂವಿನ ಕೆಳಗೆ ಚೇಳು ಇದೆ' ಎಂದಿತು. ನೋಡಿದರೆ ಅಲ್ಲಿ ಚೇಳು ಕಂಡುಬಂದಿತಂತೆ!

ಭೀಮವ್ವ ನಾಲ್ಕು ವರ್ಷದ ಕೂಸಾಗಿದ್ದಾಗ ಹರಪನಹಳ್ಳಿಗೆ ಬಂದ ಸೈನಿಕರ ಪೈಕಿ ಒಬ್ಬ ಅವಳ ಮೈಮೇಲಿನ ಒಡವೆಗೆ ಆಸೆಪಟ್ಟು ಹೊತ್ತುಕೊಂಡು ಹೋದ. ಒಂದು ಫರ್ಲಾಂಗು ದೂರ ಹೋಗಿದ್ದನೋ ಇಲ್ಲವೋ ಅವನು ಕುರುಡಾದನು. ಹಿಂದಿರುಗಿ ಬಂದು ಹುಡುಗಿಯನ್ನು ಮನೆಯಲ್ಲಿ ಬಿಟ್ಟು ಕ್ಷಮೆ ಕೇಳಿದ ಮೇಲೆ ಅವನಿಗೆ ದೃಷ್ಟಿ ಬಂತು.

ಆರು ವರ್ಷವಾಗಿದ್ದಾಗ ಭೀಮವ್ವನ ತಾಯಿಯ ತಂದೆ ವೆಂಕಪ್ಪಾಚಾರ್ಯರು ಒಂದು ದ್ವಾದಶಿಯ ದಿನ ಮಧ್ಯಾಹ್ನ ಊಟದ ನಂತರ ಮಲಗಿದ್ದಾಗ ವೇದವ್ಯಾಸರ ದಿವ್ಯ ಬೆಳಕೊಂದು ಬಂದು ಭೀಮವ್ವನ ಮೇಲೆ ಬಿತ್ತು. ಅಂದಿನಿಂದ ಅವರ ಆಟ ಕಡಿಮೆಯಾಗಿ ಯಾರಾದರೂ ಕೀರ್ತನೆ ಹಾಡಿದರೆ ತಕ್ಷಣ ಅದನ್ನು ಹಾಗೆಯೇ ಹಾಡಿಬಿಡುತ್ತಿದ್ದರು.

ಓರಾಬಾಯಿ ಲಕ್ಷ್ಮೀದೇವಮ್ಮನವರು ವ್ರತಗಳನ್ನು ಶ್ರದ್ಧಾಭಕ್ತಿಗಳಿಂದ ಆಚರಿಸುತ್ತಿದ್ದರು. ವರಮಹಾಲಕ್ಷ್ಮಿಯ ಕಲಶ ಸ್ಥಾಪಿಸಿ ಹಬ್ಬ ಮಾಡುವ ಸಂಪ್ರದಾಯ ಅವರ ಮನೆಯಲ್ಲಿ ಇರಲಿಲ್ಲ. ಬೇರೆಯವರ ಮನೆಗೆ ಹೋಗಿ ಪೂಜೆ ಮಾಡುತ್ತಿದ್ದರು. ಸಂಪ್ರದಾಯವಿಲ್ಲದ ಆಚರಣೆಗಳನ್ನು ಮಾಡಿದರೆ ಏನಾಗುತ್ತದೆಯೋ ಎಂಬ ಭಯ ಮನೆಯವರಲ್ಲಿತ್ತು. ಆದರೆ ಲಕ್ಷ್ಮೀದೇವಮ್ಮನವರು ಭಕ್ತವತ್ಸಲೆಯಾದ ಮಾತೆಯ ಕಲಶ ಸ್ಥಾಪಿಸಿ ಪೂಜಿಸಿದರೆ ಕೇಡಾಗುವುದುಂಟೆ? ಎಂದು ಕಲಶ ಸ್ಥಾಪನೆ ಮಾಡಿ ಪೂಜೆ ಮಾಡಿದರು. ಸ್ವಲ್ಪ ಹೊತ್ತಿನ ನಂತರ ಸರ್ವಾಲಂಕಾರ ಭೂಷಿತೆಯಾದ ಸ್ತ್ರೀಯೊಬ್ಬಳು ದೇವರ ಮನೆಯಿಂದ ಹೊರಹೊರಟ್ಟಿದ್ದನ್ನು ಕಂಡು ಬಾಗಿಲಿಗೆ ಕೈ ಅಡ್ಡವಿಟ್ಟು ಯಾಕಮ್ಮಾ ಎಂದು ಕೇಳಿದರು. 'ಪೂಜೆ ಸಾಂಗವಾಗಿ ನಡೆಯಿತಲ್ಲ.. ಇನ್ನೇನು ನಾನು ಬರುತ್ತೇನೆ' ಎಂದ ಲಕ್ಷ್ಮಿಯ ಮಾತನ್ನು ಕೇಳಿ, ನಮ್ಮ ಮನೆಯಲ್ಲಿಯೇ ನೆಲೆಸಿರಬೇಕೆಂದು ಬೇಡಿಕೊಂಡರು. ಅವರ ಬೇಡಿಕೆಗೆ ಒಲಿದ ಲಕ್ಷ್ಮಿ ಅಲ್ಲಿ ನೆಲೆಸಿದಳು. ಈ ಪ್ರಸಂಗ ಕಾಳಿದಾಸನು ದೇವಿಯನ್ನು ಒಳಬರಲು ಬಿಡದೆ ಒಲಿಸಿಕೊಂಡ ಪ್ರಸಂಗವನ್ನು ನೆನಪಿಸುತ್ತದೆ. ಅಂತೆಯೇ ತೆನಾಲಿರಾಮಕೃಷ್ಣನ ಬದುಕಿನಲ್ಲಿಯೂ ಇಂತಹ ಘಟನೆ ನಡೆದಿದೆ ಎನ್ನಲಾಗುತ್ತದೆ.

ಮಂತ್ರಾಲಯದ ರಾಘವೇಂದ್ರ ಸ್ವಾಮಿಗಳು ಆಗಾಗ ಕನಸಿನಲ್ಲಿ ಲಕ್ಷ್ಮೀದೇವಮ್ಮನವರಿಗೆ ದರ್ಶನ ಕೊಡುತ್ತಿದ್ದರಂತೆ. ಮಂತ್ರಾಲಯದಲ್ಲೊಮ್ಮೆ ಕಾಲರಾ ರೋಗದಿಂದಾಗಿ ಜನ ಊರು ಬಿಡುತ್ತಿದ್ದರು. ಬೆಳಗಿನ ಜಾವ ಮನೆಯ ಕಿಟಕಿಯೊಂದರಲ್ಲಿ ಕಾಣಿಸಿಕೊಂಡ ರಾಘವೇಂದ್ರ ಸ್ವಾಮಿಗಳು 'ನಾವಿದ್ದೇವೆ ಧೈರ್ಯವಾಗಿ ಕೆಲಸ ನಡೆಸು' ಎಂದ ಹಾಗೆ ಆಯಿತು. ಆದರೂ ಅವರಿಂದ ಫಲ ಮಂತ್ರಾಕ್ಷತೆಗಾಗಿ ಲಕ್ಷ್ಮೀದೇವಮ್ಮನವರು ಹಂಬಲಿಸುತ್ತಿದ್ದಾಗ ಎಂಟು ವರ್ಷದ ವಟುವೊಬ್ಬನು ಫಲ ಮಂತ್ರಾಕ್ಷತೆಯೊಂದಿಗೆ ಒಂದು ಪತ್ರವನ್ನು ತಂದುಕೊಟ್ಟು ಅದೃಶ್ಯನಾದನು. ಅದರ ಮೇಲೆ ಇವರ ಹೆಸರೇ ಬರೆದಿತ್ತು.

ಲಕ್ಷ್ಮೀದೇವಮ್ಮನವರ ಮನೆದೇವರು ನೀರಾ ನರಸಿಂಹ ದೇವಸ್ಥಾನವನ್ನು ಬಳ್ಳಾರಿಯಲ್ಲಿ ನಿರ್ಮಿಸುತ್ತಿದ್ದಾಗ ವಿಗ್ರಹ ಪ್ರತಿಷ್ಠಾಪನಾ ಒಂದೆರಡು ದಿನ ಉಳಿದಿತ್ತು. ಆಗ ಗರ್ಭಗುಡಿಯಲ್ಲಿ ಬೆಂಕಿ ಕಾಣಿಸಿಕೊಂಡಿತು. ಗರ್ಭಗುಡಿಯನ್ನು ಪವಿತ್ರಗೊಳಿಸಲೆಂದು ಹೀಗಾಗಿದೆ ಎಂದು ಜನರು ಮಾತಾಡಿಕೊಂಡರು. ಆಗ ಅಮ್ಮನವರು, 'ನಿನ್ನ ವಂಶದವರು ನಿನ್ನನ್ನು ಸೇವಿಸುತ್ತ ನಿನ್ನ ಅನುಗ್ರಹವನ್ನು ಪಡೆಯಲೆಂದಲ್ಲವೇ ನಿನ್ನನ್ನು ಪ್ರತಿಷ್ಠಾಪಿಸುತ್ತಿರುವುದು. ನೀನು ಈ ರೀತಿ ಉಗ್ರನಾಗಿದ್ದಲ್ಲಿ ಅರ್ಚಕರು ಹೇಗೆ ಪೂಜಿಸುತ್ತಾರೆ?' ಎಂದು ಕೇಳಿಕೊಂಡಾಗ ನರಸಿಂಹನು 'ನೀನು ಉಗ್ರನರಸಿಂಹನ ರೂಪವನ್ನು ನೋಡಬೇಕೆಂದು ಬಯಸುತ್ತಿದ್ದುದರಿಂದ ದರ್ಶನ ಕೊಟ್ಟಿದ್ದೇನೆ. ಇನ್ನು ಮುಂದೆ ಸೌಮ್ಯ ರೂಪದಲ್ಲಿಯೇ ಇರುತ್ತೇನೆ' ಎಂದಂತಾಯಿತು. ಮಾರನೇ ದಿವಸದಿಂದ ಜ್ವಾಲೆಯು ಕಾಣಿಸಿಕೊಳ್ಳಲಿಲ್ಲ.

ಲಕ್ಷ್ಮೀದೇವಮ್ಮನವರು ಮನೆಯಲ್ಲಿ ಓಡಾಡಿಕೊಂಡಿದ್ದರೆ ಜ್ಯೋತಿಯು ನಡೆದಾಡಿದಂತೆ ಭಾಸವಾಗುತ್ತಿತ್ತಂತೆ. ಒಂದು ದಿನ ಮನೆಯ ಅಂಗಳದಲ್ಲಿ ಹೆಂಗಸರು ಭತ್ತ ಕುಟ್ಟುತ್ತಿದ್ದರು. ಅಮ್ಮನವರು ಹೂಬತ್ತಿ ಹೊಸೆಯುತ್ತಿದ್ದರು. ಏನೋ ಕೆಲಸವನ್ನು ನೆನಪಿಸಿಕೊಂಡು ಎದ್ದು ಹೊರಟ ಲಕ್ಷ್ಮೀದೇವಮ್ಮನವರು ಭತ್ತ ಕುಟ್ಟುತ್ತಿದ್ದವರ ಕಣ್ಣಿಗೆ ಎರಡು ಜ್ಯೋತಿಗಳು ನಡೆದು ಹೋದಂತೆ ಕಾಣಿಸಿತಂತೆ.

ಆದವಾನಿಯಲ್ಲಿ ಒಂದು ವರ್ಷದ ಕಾಲ ಜನರಿಗೆ ಸಂಕಷ್ಟಗಳು ಭಾದಿಸಿದವು. ಅವ್ವನವರ ಮಾತಿನಂತೆ ಜನ ಅಲ್ಲಿನ ಮಂಗರಾಯನಿಗೆ ಜಪ–ಪಾರಾಯಣ ಮಾಡಿ ಕರಿಗಡುಬಿನ ಹಾರವನ್ನು ಹಾಕಿ ಅನ್ನ ಸಂತರ್ಪಣೆ ಮಾಡಿದ ಮೇಲೆ ಗ್ರಾಮಕ್ಕೆ ಒದಗಿದ ಸಂಕಷ್ಟಗಳು ದೂರವಾದವು ಎಂದು ಹೇಳಲಾಗುತ್ತಿದೆ.

ಸರಸಾಬಾಯಿ, ನಂಜನಗೂಡು ತಿರುಮಲಾಂಬ, ಬಳ್ಳಾರಿಯ ರಾಧಾಬಾಯಿ, ಕಳಸದ ಸುಂದರಮ್ಮ, ಗುಂಡಮ್ಮ, ಸರಸ್ವತೀಬಾಯಿ, ಅಂಬಾಬಾಯಿ ಮತ್ತು ಮುಂದಿನ ಮಹಿಳಾ ಕೀರ್ತನಕಾರರ ಬದುಕಲ್ಲಿ ಪವಾಡಗಳು ಕಂಡುಬರುವುದಿಲ್ಲ. ಸ್ತ್ರೀ ಶಿಕ್ಷಣ, ಬದಲಾದ ಸಾಮಾಜಿಕ ವ್ಯವಸ್ಥೆ, ಬದಲಾದ ಜನರ ದೃಷ್ಟಿಕೋನಗಳು, ವೈಜ್ಞಾನಿಕ ಮನೋಭಾವನೆಗಳು ಇದಕ್ಕೆ ಕಾರಣವಾಗಿದೆ ಎನ್ನಬಹುದು.

**ರಚನೆಯ ಕುರಿತು ನಡೆಯಿತೆನ್ನಲಾದ ಪವಾಡಗಳು:** ಗಿರಿಯಮ್ಮನ ಕೀರ್ತನೆಗಳಲ್ಲಿ, 'ತೋರಬಾರದೆ ನಿಮ್ಮ ಚರಿತೆಯನು' ಎನ್ನುವ ಹೆಳವನಕಟ್ಟೆಯ ರಂಗನ ಕುರಿತಾದ ಹಾಡು ಹೆಳವನಕಟ್ಟೆ ರಂಗನು ಗಿರಿಯಮ್ಮನ ಅನನ್ಯ ಭಕ್ತಿಗೆ ಒಲಿದ ಕಥೆಯನ್ನು ಹೇಳಿದರೆ, 'ಮಳೆಯ ದಯ ಮಾಡೋ ರಂಗಯ್ಯ' ಎನ್ನುವ ಕೀರ್ತನೆಯನ್ನು ಹಾಡಿ ಗಿರಿಯಮ್ಮ ಬರಗಾಲದಲ್ಲಿ ಮಳೆ ತರಿಸಿದಳು ಎನ್ನುವ ಪವಾಡದ ಕಥೆಯಿದೆ. 'ಹೊನ್ನು ತಾ ಗುಬ್ಬಿ ಹೊನ್ನು ತಾ' ಎನ್ನುವ ಕೀರ್ತನೆ ಹಾಡಿ ಕಳೆದು ಹೋಗಿದ್ದ ರಂಗನಾಥನ ಹೊನ್ನನ್ನು ಗುಬ್ಬಿಯಿಂದ ತರಿಸಿದಳೆಂದು ಪ್ರತೀತಿಯಿದೆ. 'ಬಟ್ಟೆಯ ನೆವದಿಂದ ಬಂದು' ಎನ್ನುವ ಕೃಷ್ಣವೇಣಿ ನದಿಯ ಕುರಿತಾದ ಹಾಡು ಕೃಷ್ಣೆಯ ಪ್ರವಾಹ ಕಾಲದಲ್ಲಿ

ನಡೆದು ಬರುತ್ತಿದ್ದ ಗಿರಿಯಮ್ಮನಿಗೆ ನದಿಯು ದಾರಿ ಬಿಟ್ಟುಕೊಟ್ಟಿತೆಂದು ಹೇಳುವ ಪ್ರಸಂಗಗಳು ಪವಾಡಗಳಿಗೆ ಸಾಕ್ಷಿಯಾಗಿವೆ.

ಒಂದು ದಿನ ಭೀಮವ್ವ ಮಧ್ಯಾಹ್ನ ಒಬ್ಬರೇ ಮಲಗಿದ್ದಾಗ ಕನಸು ಬಿದ್ದಿತು. ನಾರದರು ಕೃಷ್ಣಸರ್ಪದೊಂದಿಗೆ ಬಂದು 'ಈಕೆಯ ನಾಲಗೆಯ ಮೇಲೆ ಮೂರು ಅಕ್ಷರ ಬರೆ' ಎಂದು ಸರ್ಪಕ್ಕೆ ಹೇಳಿದರು. ಸರ್ಪವು ಬರೆಯಿತು. ಅಂದಿನಿಂದ ಭೀಮವ್ವನ ನಾಲಗೆಯ ಮೇಲೆ ಹಾಡುಗಳು ನಲಿದಾಡಿದವು. ಈ ಘಟನೆಯು ಕಾಳಿದಾಸನ ಬದುಕಿನಲ್ಲಿ ನಡೆದ ಕಾಳಿಯು ಕಾಳಿದಾಸನ ನಾಲಗೆಯ ಬೀಜಾಕ್ಷರ ಬರೆದ ಪ್ರಸಂಗವನ್ನು ನೆನಪಿಸುತ್ತದೆ. ಪವಾಡಗಳ ವಿಷಯದಲ್ಲಿ ಇಂತಹ ಪುನರಾವರ್ತನೆಗಳು ಸಾಮಾನ್ಯ. ಈ ಘಟನೆ ನಡೆದ ಮೇಲೆ ಅವರು ನಾಚಿಕೆಯಿಂದಾಗಿ ಹಾಡುಗಳನ್ನು ಯಾರ ಮುಂದೆಯೂ ಹೇಳುತ್ತಿರಲಿಲ್ಲ. ಇದರ ಫಲವಾಗಿ ಅವರಿಗೆ ಹೊಟ್ಟೆ ನೋವು, ತಲೆ ನೋವು ಕಾಣಿಸಿಕೊಂಡಿತು. ಮತ್ತೊಂದು ದಿನ ಕನಸಿನಲ್ಲಿ ಬಂದ ನಾರದರು 'ನಾನು ಹೇಳುವ ಹಾಡನ್ನು ನೀನೇಕೆ ಹೇಳುವುದಿಲ್ಲ' ಎಂದು ಗದರಿಸಿದರು. ಆಗ ಭೀಮವ್ವ ಅಂಕಿತವಿಲ್ಲದ ತಮ್ಮ ಕೊರತೆಯನ್ನು ತೋಡಿಕೊಂಡರು. ಇನ್ನೊಂದು ದಿನ ಕನಸಿನಲ್ಲಿ ಬಂದ ಬ್ರಾಹ್ಮಣ ಅವರ ಅಪೇಕ್ಷೆಯಂತೆ 'ಭೀಮೇಶ ಕೃಷ್ಣ' ಎಂಬ ಅಂಕಿತವನ್ನು ಮೈದುನನ ಮೂಲಕ ಸೂಚಿಸಿದರಂತೆ. ಮತ್ತೆ ಹಾಡುಗಳ ಸ್ರವಂತಿಯೇ ಹರಿಯಿತು. ಭೀಮವ್ವ ಸಂಕಟವನ್ನು ಅನುಭವಿಸಿದರು. ಒಂದು ದಿನ ರಾತ್ರಿ ಮೂವತ್ಮೂರು ನುಡಿಗಳ ದೀರ್ಘ ಕೀರ್ತನೆಯೊಂದು ಬಂದಿತು. ಭೀಮವ್ವ ಯಾರೊಡನೆಯೂ ಹೇಳದೆ ಸುಮ್ಮನಿದ್ದರು. ಮೂರು ದಿನದ ನಂತರ ಭೀಮವ್ವನವರ ತಮ್ಮನ ಹೆಂಡತಿಗೆ ಒಂದು ಕನಸು ಬಿತ್ತು. ಬ್ರಾಹ್ಮಣನೊಬ್ಬ 'ನಿನ್ನ ಅತ್ತಿಗೆಗೆ ಹಾಡು ಬಂದಿದೆ ಹೇಳಿಸಿಕೊ, ಹಾಗೆ ಬಂದದ್ದನ್ನು ಅಲಕ್ಷ ಮಾಡಬಾರದು' ಎಂದ ಹಾಗಾಯಿತು. ಮುಂದೊಂದು ದಿನ ನಾರದರೇ ಸ್ವಪ್ನದಲ್ಲಿ ಬಂದು ಅಷ್ಟಮಹಿಷಿಯರೊಂದಿಗೆ ಶ್ರೀಕೃಷ್ಣನು ದ್ವಾರಕೆಯಲ್ಲಿ ಆಡುತ್ತಿದ್ದುದನ್ನು ನೋಡಿದೆನೆಂದು ಹೇಳಿದ ಹಾಗಾಯಿತು. ತಕ್ಷಣ ಹಾಡು ಮೂಡಿತು. ಭೀಮವ್ವ ಕನಸಿನಲ್ಲಿ ಏನು ಕಂಡರೋ ಅವುಗಳಿಗೆಲ್ಲ ಕೀರ್ತನೆಯ ರೂಪ ಕೊಟ್ಟರು.

ಅಂಬಾಬಾಯಿಯವರು ಅಧಿಕ ಚೈತ್ರಮಾಸದಲ್ಲಿ ಶ್ರೀಮದ್ಭಾಗವತ ಸಪ್ತಾಹ ಕೇಳುತ್ತಿದ್ದಾಗ ಮನಸ್ಸಿನಲ್ಲಿಯೆ ಅವರಿಗೆ ಒಂದು ವಿಚಾರವು ಸುಳಿದು ಸುತ್ತುತ್ತಿತ್ತು. ಚೈತ್ರ ಶುದ್ಧ ನವಮಿಯಂದು ಶ್ರೀಮದ್ಭಾಗವತ ಸಪ್ತಾಹ ಮಹಾಮಂಗಳವಾಯಿತು. ಏಕಾದಶಿಯ ಸಾಯಂಕಾಲ ಹರಿಕಥೆ ಕೇಳುತ್ತಿದ್ದಾಗ 'ಈ ಉದ್ಯೋಗ ಪರ್ವ ಕೇಳತಕ್ಕವರು ಅವರವರ ಮನಸ್ಸಿನಲ್ಲಿ ಯಾವ ಕಾರ್ಯ ಮಾಡಬೇಕೆಂದು ಉದ್ದೇಶ ಮಾಡಿಕೊಂಡಿರುತ್ತಾರೋ, ಅವರ ಕಾರ್ಯಗಳನ್ನು ಶ್ರೀಹರಿವಾಯುಗಳು ನಿಂತು ನಡೆಸಿಕೊಡುತ್ತಾರೆ ಸಂದೇಹವಿಲ್ಲ' ಎಂದು ದಾಸರು ಹೇಳುತ್ತಾರೆ. ಇದಾದ ಎರಡು ಮೂರು ದಿನಗಳಲ್ಲಿ ಅಂಬಾಬಾಯಿಯವರಿಗೆ ಒಂದು ಸ್ವಪ್ನವಾಯಿತು. ಬಾಳಗಾರ ಮಠದ ಶ್ರೀಗಳ ಎಡಬಲ ಸೇವೆ ಮಾಡತಕ್ಕವರಲ್ಲಿ ಒಬ್ಬರು ಗ್ರಂಥಗಳ ದೊಡ್ಡ ಗಂಟನ್ನು ತಲೆಯ ಮೇಲೆ ಹೊತ್ತುಕೊಂಡು ಶೇಷವಸ್ತ್ರವನ್ನು ಹೊದ್ದು ಮನೆಗೆ ಬಂದರು. ಅವರನ್ನು ಕಂಡೊಡನೆ

ಅತಿಸಂಭ್ರಮದಿಂದ ಗೋಡೆಯ ಹತ್ತಿರದ ಒಂದು ಮಣೆಯ ಮೇಲೆ ಪುಸ್ತಕಗಳ ಗಂಟನ್ನು ಇಡಬಹುದು ಎಂದರೆ, ಅವರು ನಗುತ್ತಾ ಹಾಗಾಗುವುದಿಲ್ಲ, ಇದನ್ನು ಅಲ್ಲಿ ಇಡಬಾರದು ಎಂದು ಹೇಳಿದರು. ನಂತರ ಗೋಡೆಯ ಅಂಚಿನಿಂದ ಒಳಗಡೆ ಮೂರು ಪ್ರದಕ್ಷಿಣೆ ಹಾಕಿ ಕೊನೆಗೆ ಮಧ್ಯದಲ್ಲಿ ಗಂಟನಿಟ್ಟು ನಗುನಗುತ್ತಾ ಕೂತುಕೊಂಡರು. ಅಷ್ಟು ಹೊತ್ತಿಗೆ ಬೆಳಗಿನಜಾವ ಐದು ಗಂಟೆಯಾಗಿತ್ತು. ಅಂಬಾಬಾಯಿಯವರಿಗೆ ಎಚ್ಚರವಾಯಿತು. ಶ್ರೀಹರಿವಾಯುಗುರುಗಳ ಪ್ರೇರಣೆಯಾಯಿತೆಂದು ಬರೆದ ಕೃತಿಯನ್ನು ಗುರುಗಳಿಗೆ ಸಮರ್ಪಿಸಿದರು.

ರಚನೆಯ ಕುರಿತಾದ ಈ ರೀತಿಯ ಪವಾಡಗಳು ಉಳಿದ ಕೀರ್ತನಕಾರ್ತಿಯರಲ್ಲಿ ಕಂಡುಬರುವುದಿಲ್ಲ. ಬದಲಾದ ಸಾಮಾಜಿಕ ಸನ್ನಿವೇಶಗಳು, ಸ್ತ್ರೀಶಿಕ್ಷಣ, ವೈಜ್ಞಾನಿಕ ಮನೋಧರ್ಮವು ಇದಕ್ಕೆ ಕಾರಣವಿರಬಹುದು.

**೨.೪ ಸ್ವೀಕೃತಿ–ಅನುಕರಣೆ–ಪ್ರಭಾವ**

ಭಕ್ತಿ ಮಾರ್ಗದಲ್ಲಿ ನಡೆದ ಮಹಿಳಾಕೀರ್ತನಕಾರರ ರಚನೆಗಳೆಲ್ಲವೂ ಭಕ್ತಿ ಪ್ರಧಾನವಾದವು. ಭಕ್ತಿಯೇ ಅದರ ಮೂಲ ಸೆಲೆ. ಸಹಜವಾಗಿಯೇ ಪುರಾಣ ಪ್ರಸಂಗಗಳು, ಕಥೆಗಳು, ಹಿರಿಯ ಕವಿ, ಶರಣರ, ಹರಿದಾಸರ ಅನುಕರಣೆ, ಪ್ರಭಾವ, ಸ್ವೀಕೃತಿಗಳು ಕಂಡುಬರುತ್ತವೆ. ಅಲ್ಲದೆ ಜನಪದದಿಂದಲೂ ಅವರು ಪ್ರಭಾವಿತರಾಗಿದ್ದಾರೆ.

ಗಲಗಲಿ ಅವ್ವನವರ ಮುಯ್ಯದ ಹಾಡುಗಳು ಮಹಾಭಾರತ ಮತ್ತು ರಾಮಾಯಣದ ಪ್ರಸಂಗಗಳ ಚೌಕಟ್ಟಿನಲ್ಲಿ ರಚಿತವಾಗಿದ್ದರೂ ಮುಯ್ಯ ಕೊಡುವ ಸಂಪ್ರದಾಯವನ್ನು ಹಿಂಜಿ ಹಿಂಜಿ ವರ್ಣಿಸಲಾಗಿದೆ.

ಅವ್ವನವರ ನಂತರ ಬರುವ ಮೋಹನದಾಸ ಎಂಬ ಹರಿದಾಸರ 'ಕೋಲು ಹಾಡಿನ' ೨೧೭ ನುಡಿಗಳಲ್ಲಿ ೭೦ಕ್ಕೂ ಹೆಚ್ಚು ನುಡಿಗಳು ಅವ್ವನವರ ಮುಯ್ಯದ ಹಾಡುಗಳಲ್ಲಿ ಬರುವ ತ್ರಿಪದಿಗಳನ್ನು ಹೋಲುತ್ತವೆ. ಉದಾಹರಣೆಗಾಗಿ ನೋಡುವುದಾದರೆ:

**ಗಲಗಲಿ ಅವ್ವನವರ ಪದ್ಯ**

ನಾರುವ ಮಯ್ಯುವ ನೀರೊಳು ಅಡಗಿದ
ಹಂದಿ ಮೈಯವನೇ ಮಹಾಕೋಪಿ ಕೋಲೆ
ಹಂದಿ ಮೈಯವನೇ ಮಹಾಕೋಪಿ ತಿರುತಿಂಬೋ
ಹಾರುವನಗೊಡವೆ ನಮಗ್ಯಾಕೊ/ (ಮುಯ್ಯದ ಹಾಡುಗಳು–ಪು–೧೧೫, ಪದ್ಯ–೮೭–೪)

**ಮೋಹನದಾಸರ ಪದ್ಯ**

ನಾರುವ ಮಯ್ಯುವ ನೀರೊಳಡಗಿದ
ಮೋರೆ ಹಂದಿಯವ ಬಲುಕೋಪಿ

ಮೋರೆ ಹಂದಿಯವ ಬಲುಕೋಪಿ ತಿರಿತಿಂಬ
ಹಾರುವನ ಗೊಡವೆ ನಮಗೇಕೆ ಕೋಲೇ/ (ಪುಟ-೨೨೫, ಪದ್ಯ-೧೭೦)

ಇವು ಮೋಹನದಾಸರ 'ಕೋಲುಪದ'ಗಳೆಂದೇ ಪ್ರಖ್ಯಾತವಾಗಿದ್ದರೂ ಅವ್ವನವರ 'ಮುಯ್ಯದ ಹಾಡು'ಗಳಲ್ಲಿ ಬರುವ ಕೋಲುಪದಗಳನ್ನು ಹೋಲುತ್ತವೆ. ಮೋಹನದಾಸರ ಕೋಲುಪದಗಳು ಅವ್ವನವರ ಕೋಲುಪದಗಳು ರಚಿತವಾದ ಸುಮಾರು ೫೦ ವರ್ಷಗಳ ನಂತರವೇ ರಚಿತವಾಗಿವೆ. ಆದ್ದರಿಂದ ಮೋಹನದಾಸರ ಕಾಲಕ್ಕಾಗಲೇ ಜನರ ಬಾಯಲ್ಲಿ ನಲಿಯುತ್ತಿದ್ದ ಅವ್ವನವರ ಹಾಡುಗಳು ಪ್ರಭಾವ ಬೀರಿರಬಹುದು. ಅಥವಾ ಇವರಿಬ್ಬರ ಕಾಲದಲ್ಲೂ ಪ್ರಸಿದ್ಧವಾಗಿದ್ದ ಜನಪದ ಗೀತೆಯು ಇಬ್ಬರಿಗೂ ಆಧಾರವಾಗಿರಬಹುದು.

ಗಿರಿಯಮ್ಮನು ಬರೆದಿರುವ 'ಸೀತಾ ಕಲ್ಯಾಣ' ರಾಮಾಯಣದ ಸೀತಾ ರಾಮರ ಮದುವೆಯ ವಸ್ತುವನ್ನು ಒಳಗೊಂಡಿದೆ. 'ಚಂದ್ರಹಾಸನ ಕಥೆ' ಮಹಾಭಾರತದ್ದು. ಈ ಕಾವ್ಯದ ಪ್ರಾರಂಭದಲ್ಲಿ

ಸುರಪುರವಾಸ ಲಕ್ಷ್ಮೀಕಾಂತ ಭಕ್ತರ್ಗೆ
ಒರೆದಂತ ಜೈಮಿನಿಯೊಳಗೆ
ಪರಮಭಕ್ತ ಚಂದ್ರಹಾಸನ
ಕಥೆಯನು ಚರಿತೆಯ ಮಾಡಿ ವರ್ಣಿಸುವೆ – ಎಂದಿದೆ.

ಜೈಮಿನಿ ಭಾರತದಲ್ಲಿ ಬರುವ ಚಂದ್ರಹಾಸನ ಕಥೆಯನ್ನೇ ಮೂಲವಾಗಿಟ್ಟುಕೊಂಡು ಕಾವ್ಯ ರಚಿಸಿರುವುದಾಗಿ ಗಿರಿಯಮ್ಮ ಹೇಳಿಕೊಂಡಿದ್ದಾಳೆ. ಬಾಲಕ ಚಂದ್ರಹಾಸನು ಅನಾಥನಾಗಿ ಕಾಡಿನಲ್ಲಿರಲು ಪಕ್ಷಿಗಳು ಉಪಚರಿಸುವ ಬಗೆಯನ್ನು ಹೀಗೆ ವರ್ಣಿಸುತ್ತಾಳೆ. ಕುಂತಳ ಪಕ್ಷಿಗಳು ಶಕುಂತಲೆಗೆ ನೀಡಿದ ನೆರವನ್ನು ಇದು ನೆನಪಿಸುತ್ತದೆ. ಇದು ಸಾಂಗತ್ಯವಾಗಿದ್ದು ಛಂದಸ್ಸಿನ ದೋಷವಿರುವುದು ಕಂಡುಬರುತ್ತದೆ. ಇದನ್ನು 'ಭಾಷಾ ವಿಶೇಷ' ಅಧ್ಯಾಯದಲ್ಲಿ ಚರ್ಚಿಸಲಾಗಿದೆ. ಕೀರ್ತನೆಯನ್ನು ಇಲ್ಲಿ ಯಥಾವತ್ತಾಗಿ ನೀಡಿದೆ.

ಅಳುವ ಧ್ವನಿಯ ಆಲಿಸುವ ತುಂಬಿಯು
ಅರಗಿಳಿ ನುಡಿಸುತ್ತಲಿಹವು
ಎಳೆದಳರನೆ ತಂದು ಹಾಸುವ ಗಿಳಿಗಳ ಸುಳಿಗಾಳಿ
ಬೀಸುವ ಖಗನು
ಪಸರಿಸಿ ಹರಿಯ ಮಯೂರ ಪಕ್ಷಿಗಳೆಲ್ಲ ಬಿಸಿಲಿಗೆ
ಮರೆಯ ಮಾಡುವವು
ಒಸರುವ ಕಣ್ಣೀರು ಒರೆಸುವ ಕಪಿಗಳ ಬಸ
ವಳಿದಿರ್ದ ಬಾಲಕಗೆ
ಪರಿಪರಿ ಪಕ್ಷಿ ಮೃಗಾದಿಗಳೆಲ್ಲವೂ

ನೆರೆದುಪಚಾರ ಮಾಡುವುವು
ಧರೆಗಿಳಿದನು ಚಂದ್ರ ಎನುತ ಗಾಯವ

ಹುಲ್ಲೆಮರಿಗಳು ಜಿಹ್ವೆಯಿಂದೊರೆಸಿ – ಎನ್ನುವ ಸಾಲುಗಳಲ್ಲಿ ಲಕ್ಷ್ಮೀಶನ ಕಾವ್ಯದ ಪ್ರಭಾವವನ್ನು ಕಾಣಬಹುದು. ಗರ್ಭಿಣಿ ಸೀತೆಯನ್ನು ಲಕ್ಷ್ಮಣನು ಕಾಡಿನಲ್ಲಿ ಬಿಟ್ಟು ಬಂದಾಗ, ಪಕ್ಷಿಗಳು ಮಾಡುವ ಉಪಚಾರವನ್ನು ಕವಿ ಲಕ್ಷ್ಮೀಶ ಹೀಗೆ ವರ್ಣಿಸುತ್ತಾನೆ.

ಬೀಸಿದುವು ಬಾಲದೊಳ್ ಚಮರಿಗಳ್ ಚಮರಮಂ
ಪಾಸಿದವು ಕರಿಗಳೆಳೆದಳಿರ ಮೃದುತಲ್ಪಮಂ
ಸೂಸಿದುವು ಸಾರಸಂಗಳ್ ತಮ್ಮ ಗರಿಗಳಂ ತೋದು ತಂದಂಬುಗಳನು
ಆ ಸಿರಿಮೊಗಕ್ಕೆ ಬಿಸಿಲಾಗದಂತಾಗಸದೊ
ಳೋಸರಿಸದಂಚೆಗಳೆರಂಕೆಯನಗಲ್ಚಿನೆಳ
ಲಾಸೆಗೈದುವು ರಾಘವನ ರಾಣಿ ದುಃಖಸಂತಪ್ತೆಯಾಗುತಿರಲ್ಕೆ[೩]

'ಕಥಾ ನಿರೂಪಣೆ, ವರ್ಣನೆಗಳಲ್ಲಿ ಈ ಹಾಡು ಮೂಲಕ್ಕೆ ತುಂಬ ನಿಕಟವಾಗಿ ಸಾಗುತ್ತದೆ, ಮೂಲದಲ್ಲಿ ನಾಲ್ಕು ಸಂಧಿಗಳಿರುವಂತೆ (೨೮, ೨೯, ೩೦, ೩೧) ಇಲ್ಲಿಯೂ ನಾಲ್ಕು ಸಂಧಿಗಳಿವೆ. ಇಲ್ಲಿ ಸಂಧಿಯ ಪ್ರಾರಂಭದಲ್ಲಿ ಸೂಚನಾ ಪದ್ಯವಿರುವಂತೆ ಇಲ್ಲಿಯೂ ಇದೆ. (ಇವಳ ಇನ್ಯಾವ ದೊಡ್ಡ ಹಾಡಿನಲ್ಲಿಯೂ ಈ ಬಗೆಯ ಸಂಧಿ ವಿಂಗಡಣೆ ಇಲ್ಲ ಎನ್ನುವುದನ್ನು ಗಮನಿಸಬೇಕು) ಮೂಲದಲ್ಲಿ ವಾರ್ಧಕ ಷಟ್ಪದಿಯಲ್ಲಿ ಈ ಭಾಗ ರಚಿತವಾಗಿದ್ದರೆ ಇಲ್ಲಿ ೩೫೫ ಸಾಂಗತ್ಯ ಪದ್ಯಗಳಲ್ಲಿವೆ. ಮೂಲದಲ್ಲಿ ವಾರ್ಧಕ ಷಟ್ಪದಿಯ ಧೀರ ಗಂಭೀರ ಗತಿಯಲ್ಲಿ ಸಾಗುವ ಕಥೆ, ಇಲ್ಲಿ ಸಾಂಗತ್ಯದ ಚಿಕ್ಕ ಚಿಕ್ಕ ಪದ್ಯಗಳಲ್ಲಿ ಸರಳವಾಗಿ ಸುಲಲಿತವಾಗಿ ಸಾಗುತ್ತವೆ. ಮೂಲ ಕಾವ್ಯವನ್ನು ಗಿರಿಯಮ್ಮ ಎಷ್ಟು ನಿಕಟವಾಗಿ ಹೀಗೆ ಅನುಸರಿಸಿದ್ದಾಳೆಂಬುದಕ್ಕೆ ಕೆಳಗಿನ ಪದ್ಯ ನಿದರ್ಶನ'.[೪]

ಎಳೆಯರಿಗೆ ಬೇಕಾದುದಿಲ್ಲದಿರೆ ಮರುಗುವ
ಳ್ವೊಳಲೊಳಗೆ ತಿಂದು ಹೊರದಳಲುವಳ್ಮುದಿಸಿ ಪ
ಸುಳೆಯಧಿಯಂಗಳ್ಗೆ ಹಿಗ್ಗಿ ಬಿಸುಸುಯ್ವಳವಳನುದಿನದೊಳಾರ್ತೆಯಾಗಿ
(ಜೈಮಿತಿ ಭಾರತ, ೨೮–೨೯ ಉತ್ತರಾರ್ಧ)
ತಿರಿದು ಹಾಕುವಳು ಪಾಲ್ಬೆಣ್ಣೆಯ ಶಿಶುವಿಗೆ
ಎರೆದು ಪೋಷಣೆಯ ಮಾಡುವಳು
ತರಳಗೆ ಬೇಕಾದುದಿಲ್ಲದಿರಲು ದಾಸಿ
ಮರುಗುತಿರ್ದಳು ಮನದೊಳು (ಚಂದ್ರಹಾಸನ ಕಥೆ, ೧–೨೩) –ಎಂದು

ವರ್ಣಿಸಿದ್ದಾಳೆ.

ಅಶ್ವಮೇಧಯಾಗದ ಸಂದರ್ಭದಲ್ಲಿ ಕುದುರೆ ಕಾಣದಾದಾಗ ಚಿಂತಿತನಾದ ಅರ್ಜುನನಿಗೆ ನಾರದನು ಚಂದ್ರಹಾಸನು ಕುದುರೆ ಕಟ್ಟಿರುವನೆಂದು ಹೇಳಿ ಅವನ ಕಥೆಯನ್ನು ವಿವರಿಸುತ್ತಾನೆ

ಎನ್ನುವಂತೆ ಗಿರಿಯಮ್ಮ ಕಥೆಯನ್ನು ಆರಂಭಿಸಿದ್ದಾಳೆ. ಮೂಲದಲ್ಲಿಯೂ ಕೂಡ ಕಥೆ ಹೀಗೇ ಆರಂಭಗೊಂಡಿದೆ. ಗಿರಿಯಮ್ಮನ ಅನುಸರಣೆಯನ್ನಿಲ್ಲಿ ಕಾಣಬಹುದು.

ಶಿವ ಶರಣರ ಹಾಡುಗಳಲ್ಲಿ ತಾತ್ವಿಕ ನಿರೂಪಣೆಗೆ ಕಣಿ ಹೇಳುವ ತಂತ್ರವನ್ನು ಬಳಸಿಕೊಂಡರೆ ಹರಿದಾಸರು ಕೆಲವೊಂದು ಕಥಾಸಂದರ್ಭಗಳ ನಿರೂಪಣೆಗೆ ಈ ತಂತ್ರವನ್ನು ಬಳಸಿಕೊಂಡಿರುವುದನ್ನು ಕಾಣಬಹುದು. ಇಲ್ಲಿ ವಚನಕಾರರ ಮತ್ತು ಹರಿದಾಸರರ ಪ್ರಭಾವವನ್ನು ಗುರುತಿಸಬಹುದು. 'ಬ್ರಹ್ಮ ಕೊರವಂಜಿ'ಯಲ್ಲಿನ ಕೊರವಂಜಿಯ ಪಾತ್ರ ಕಲ್ಪನೆ ಇದಕ್ಕೆ ನಿದರ್ಶನವಾಗಿದೆ.

ಕೃಷ್ಣ ಕೊರವಂಜಿಯಲ್ಲಿ ಕೃಷ್ಣನ ಬಾಲಲೀಲೆಯಿಂದ ಕಂಸನ ವಧೆಯವರೆಗೆ ಭಾಗವತದ ದಶಮಸ್ಕಂದದಲ್ಲಿ ಬರುವ ಘಟನೆಗಳನ್ನು ಹೇಳಿದೆ. ಕೃಷ್ಣನೇ ಕೊರವಂಜಿಯಾಗಿ ಬಂದು ರುಕ್ಮಿಣಿಗೆ ಭರವಸೆ ಮೂಡಿಸುತ್ತಾನೆ. ಇದೊಂದು ಬದಲಾವಣೆಯನ್ನು ಮಾತ್ರ ಗಿರಿಯಮ್ಮ ಮಾಡಿಕೊಂಡಿದ್ದಾಳೆ.

'ಹೆಳವನಕಟ್ಟೆ ಗಿರಿಯಮ್ಮನ ಹಾಡುಗಳು' ಎನ್ನುವ ಟಿ.ಕೆ.ಇಂದೂಬಾಯಿಯವರ ಕೃತಿಯಲ್ಲಿ 'ವಾದಿರಾಜರಲ್ಲಿ ಹಾಗು ಪ್ರಸನ್ನ ವೆಂಕಟದಾಸರಲ್ಲಿ ನಾರದನು ಕೊರವಂಜಿಯಾಗಿ ಬಂದು ರುಕ್ಮಿಣಿಗೆ ಸಮಾಧಾನ ನೀಡುವ 'ನಾರದ ಕೊರವಂಜಿ' ಹಾಡುಗಳಿವೆ. ಈ ಕೊರವಂಜಿಯ ಹಾಡುಗಳನ್ನು ಗಮನಿಸಿದರೆ ಕಥೆ, ವ್ಯಕ್ತಿ, ಸಂದರ್ಭಗಳಲ್ಲಿ ಒಂದಕ್ಕೊಂದಕ್ಕೆ ವ್ಯತ್ಯಾಸಗಳು ಕಂಡುಬಂದರೂ ಮೂಲ ಚೌಕಟ್ಟು ರೀತಿನೀತಿಗಳು ಒಂದೇ ಇರುವುದು ಕಾಣಿಸುತ್ತದೆ. ಕೊರವಂಜಿಯ ವೇಷಭೂಷಣಗಳು, ಮಗುವನ್ನು ಬೆನ್ನಿನಲ್ಲಿ ಕಟ್ಟಿಕೊಂಡು ಬರುವುದು, ಮಾತುಗಾರಿಕೆಯ ರೀತಿಯಲ್ಲಿರುವ ಸಾಮ್ಯ, ಅವರೆಲ್ಲ ಚಪ್ಪನ್ನಾರು ದೇಶಗಳನ್ನು ಸುತ್ತಿ ಬಂದವರೆ ಆಗಿರುವುದು ಇತ್ಯಾದಿ ಅಂಶಗಳಲ್ಲಿ ಇವುಗಳಲ್ಲಿರುವ ಸಾಮ್ಯವನ್ನು ಗಮನಿಸಬಹುದಾಗಿದೆ' ಎಂದಿರುವಲ್ಲಿ ಗಿರಿಯಮ್ಮನ ಬರವಣಿಗೆಯಲ್ಲಿ ಹರಿದಾಸರ ಪ್ರಭಾವವನ್ನು ಕಾಣಬಹುದಾಗಿದೆ.

'ಲವಕುಶರ ಕಾಳಗವು ರಾಮಾಯಣದ ಉತ್ತರಕಾಂಡದ ವಸ್ತುವೇ. ಇಲ್ಲಿನ ಲವಕುಶ ಮತ್ತು ಶತ್ರುಘ್ನರಿಗೆ ನಡೆಯುವ ಸಂಭಾಷಣೆಯಲ್ಲಿ ಭವಭೂತಿಯ ಉತ್ತರರಾಮಚರಿತೆಯ ಪ್ರಭಾವವನ್ನು ಗುರುತಿಸಬಹುದಾಗಿದೆ'[8]

ಹರಪನಹಳ್ಳಿ ಭೀಮವ್ವನವರು ಹರಿದಾಸರ ಸಂಪ್ರದಾಯದಂತೆ ಕೀರ್ತನೆ, ಉಗಾಭೋಗ, ಸುಳಾದಿ ಎಂಬ ಮೂರು ಪ್ರಕಾರಗಳಲ್ಲಿ ಕೃತಿ ರಚನೆ ಮಾಡಿದ್ದಾರೆ. ಹರಿದಾಸರನ್ನು ಅನುಸರಿಸಿ ಸಂಪ್ರದಾಯದಂತೆ ಪ್ರಾಣದೇವರ ಸ್ತುತಿ ಹನುಮ–ಮಧ್ವ–ಭೀಮ ಅವತಾರ ತ್ರಯರ ಸ್ತುತಿಗಳು, ಪಂಚವಿಧ ಭಾವ ತುಂಬಿರುವ ಕೀರ್ತನೆಗಳು ಕಂಡುಬರುತ್ತವೆ. 'ದಾಸರಂಗಳದಲ್ಲಿ ಬೀಸಿ ಬಿಸಾಕೊ ಎನ್ನನು' ಎನ್ನುತಾರೆ ಭೀಮವ್ವ, 'ಹೊನ್ನ ತಾ ಗುಬ್ಬಿ ಹೊನ್ನ ತಾ ಗುಬ್ಬಿ, ತಾರಮ್ಮಯ್ಯ' ಎನ್ನುತಲಿ ಗೋಪಿ ಕೃಷ್ಣನನ್ನಾಡಿಸಿದಳೆಂದು ಭೀಮವ್ವ ಬರೆದಿದ್ದರೂ ಗಿರಿಯಮ್ಮನ 'ಹೊನ್ನು ತಾ ಗುಬ್ಬಿ' ಎನ್ನುವ ಪದವನ್ನು ನೆನಪಿಸುತ್ತದೆ. ಗೃಹಿಣಿಯರಿಗಾಗಿ ಆಗ್ಗೆ ಪ್ರಚಲಿತದಲ್ಲಿದ್ದ ವ್ರತದ ಕಥೆಗಳಿಗೆ ಹಾಡುಗಳ ರೂಪ ಕೊಟ್ಟಿದ್ದಾರೆ. 'ಭೀಮವ್ವನ 'ನಳಚರಿತೆ' ಕೃತಿ ಮಹಾಭಾರತದ ಅರಣ್ಯಪರ್ವದ ನಳೋಪಾಖ್ಯಾನದ ಕಥೆ. ಇದನ್ನು ಚೌಂಡರಸ ಚಂಪೂವಿನಲ್ಲೂ ಕನಕದಾಸರು ಷಟ್ಪದಿಯಲ್ಲೂ

ಹೇಳಿದ್ದಾರೆ. ಕನಕದಾಸರು ರೋಮಶಮುನಿ ಧರ್ಮರಾಯನಿಗೆ ಈ ಕಥೆ ಹೇಳಿದನೆಂದರೆ ಭೀಮವ್ವ ಮೂಲ ಮಹಾಭಾರತವನ್ನು ಅನುಸರಿಸಿ ಬೃಹದಶ್ವನು ಹೇಳಿದನೆಂದು ಹೇಳಿದ್ದಾರೆ. ಕಥೆಯ ಬೆಳವಣಿಗೆಯು ಇಬ್ಬರಲ್ಲೂ ಒಂದೇ ರೀತಿ ಇದೆ'.[೬] 'ಪತಿ ದಾನ ಕೊಟ್ಟ ಹಾಡು' ಹರಿವಂಶ ಪುರಾಣದಲ್ಲಿ ಬರುವ ಕೃಷ್ಣದಾನ ವ್ರತದ ಕಥೆಯೆ ಆಗಿದೆ. ಭೀಮವ್ವನವರ 'ಶಕುಂತಲೆ ದುಷ್ಯಂತ ಮಹಾರಾಜನ ಹಾಡು' ಮಹಾಭಾರತದ್ದೇ. ಕಾಳಿದಾಸನ ಶಾಕುಂತಲ ನಾಟಕದ ಪ್ರಭಾವವೂ ಇದರಲ್ಲಿ ದಟ್ಟವಾಗಿ ಕಾಣುತ್ತದೆ. ದೂರ್ವಾಸ ಮುನಿ ಶಕುಂತಲೆಗೆ ಶಾಪ ನೀಡುವುದು ಮೂಲದಲ್ಲಿ ಇಲ್ಲದಿದ್ದರೂ ಕಾಳಿದಾಸನಿಂದ ಅದನ್ನು ತೆಗೆದುಕೊಂಡಿದ್ದಾರೆ. ಸುಭದ್ರಾ ಕಲ್ಯಾಣವು ಮಹಾಭಾರತದಲ್ಲಿದೆ ಹಾಗು ಭಾಗವತದ ದಶಮಸ್ಕಂದದಲ್ಲಿದೆ. ಕೃಷ್ಣಲೀಲೆಗಳು ಮತ್ತು ಗೋಪಿ ಗೀತೆಗಳಲ್ಲಿ ಹರಿದಾಸರ ಕೀರ್ತನೆಗಳ ನಿಕಟ ಪ್ರಭಾವವನ್ನು ಕಾಣಬಹುದು.

ಜೀವೂಬಾಯಿಯವರು 'ಪುರಂದರದಾಸರ ಚರಿತ್ರೆ' ಬರೆಯುವಾಗ ಬೇಲೂರು ಕೇಶವದಾಸರು ಬರೆದಿರುವ 'ಶ್ರೀ ಕರ್ನಾಟಕ ಭಕ್ತ ವಿಜಯ'ವನ್ನು ಅನುಸರಿಸಿದ್ದಾರೆ. ಕೃತಿಯ ಕೊನೆಯಲ್ಲಿ ದಿನಾಂಕ ೨೮-೦೧-೧೯೪೬ರ ಪುರಂದರದಾಸರ ಆರಾಧನೆಯಲ್ಲಿ ಶ್ರೀ ಪೂಜ್ಯ ಗುರುಗಳಿಗೆ ಸಮರ್ಪಿಸಿರುವುದಾಗಿ ಹೇಳಿಕೊಂಡಿದ್ದಾಳೆ. 'ಶ್ರೀರಾಮಜನನ ಸೀತಾ ಕಲ್ಯಾಣ' ರಾಮಾಯಣದ ಕಥಾವಸ್ತು. 'ಗಾಲವ ಚರಿತ್ರೆ' ಯಕ್ಷಗಾನದಲ್ಲಿ 'ಕೃಷ್ಣಾರ್ಜುನರ ಕಾಳಗ' ಎಂದು ಪ್ರಸಿದ್ಧವಾಗಿದೆ. ಜೀವೂಬಾಯಿ ಈ ಕಥೆಯನ್ನು ಹರಿಕಥೆಯಲ್ಲಿ ಕೇಳಿ ಅದೇ ಧಾಟಿಯನ್ನು ಅನುಸರಿಸಿ ಬರೆದಿದ್ದಾರೆ ಎಂದು ಲೀಲಾವತಿ ಎಸ್.ರಾವ್ ಅಭಿಪ್ರಾಯ ಪಟ್ಟಿದ್ದಾರೆ. ಭೀಮವ್ವನನ್ನು ಅನುಸರಿಸಿ ಪೂಜೆಯ ಹಾಡುಗಳನ್ನು ಮದುವೆಯ ಸಂಪ್ರದಾಯದ ಹಾಡುಗಳನ್ನು, ವ್ರತದ ಹಾಡುಗಳನ್ನು ರಚಿಸಿದ್ದಾಳೆ. 'ರಾಧಾ ಮಾಧವ ವಿಲಾಸ' ಭಾಗವತದ್ದು. ಇವರ ಕೀರ್ತನೆಗಳು ಹರಿಕಥೆಯ ಧಾಟಿಯಲ್ಲಿವೆ. ಇವು ಗದ್ಯ ಪದ್ಯ ಮಿಶ್ರಿತ ಹಾಡುಗಳು.

ಅಂಬಾಬಾಯಿಯವರು ಹರಿದಾಸರನ್ನು ಅನುಸರಿಸಿ ಕಾಲಿಗೆ ಗೆಜ್ಜೆ ಕಟ್ಟಿ ತಂಬೂರಿ ಹಿಡಿದು ಗೋಪಾಳಬುಟ್ಟಿ ಹಿಡಿದು ತೀರ್ಥಕ್ಷೇತ್ರಗಳನ್ನು ಸುತ್ತಿದರು. ಹೀಗೆಂದು ಅವರ ದಿನಚರಿಯಿಂದಲೇ ತಿಳಿದುಬರುತ್ತದೆ. ಗುರು ಮುದ್ದು ಮೋಹನದಾಸರ ವಿದ್ವತ್ತು ಮಹಿಮೆ, ಸ್ವಭಾವ, ಬೋಧನೆ, ಹರಿದಾಸ ನಿಷ್ಠೆಯು ಅಂಬಾಬಾಯಿಯ ಮೇಲೆ ಅಪಾರ ಪ್ರಭಾವ ಬೀರಿದವು. ಇವೆಲ್ಲವನ್ನು ತಮ್ಮ ಗುರುಸ್ತುತಿಯಲ್ಲಿ ನಿರೂಪಿಸಿದ್ದಾರೆ. (ಕೀ. ೧೮೨, ತೋರೆನೆಗೆ ಶ್ರೀಕೃಷ್ಣ ತೋಯಜಾಂಬಕ) ಮೇಲ್ನೋಟಕ್ಕೆ ಇದು ಹರಿಯನು ಸ್ತುತಿಸಿರುವ ಹಾಗೆ ಕಂಡುಬಂದರೂ ಅದರಲ್ಲಿರುವ ೧೬೧ ಹರಿನಾಮಗಳು ಮುದ್ದು ಮೋಹನದಾಸರು ತಮ್ಮ ಪ್ರಿಯ ಶಿಷ್ಯರಿಗೆ ನೀಡಿದ ಅಂಕಿತಗಳೇ ಆಗಿವೆ.

ಯದುಗಿರಿಯಮ್ಮನವರು ಶ್ರೀವೈಷ್ಣವ ಧರ್ಮದವರು. ಇವರ ವಿಶೇಷ ಕೀರ್ತನೆಗಳಲ್ಲಿ ತಮ್ಮ ಧರ್ಮದ ಸಂಪ್ರದಾಯಗಳನ್ನು ಆಚರಣೆಗಳನ್ನು ಕುರಿತು ಬರೆದಿದ್ದಾರೆ. ವಿಶಿಷ್ಟಾದ್ವೈತ ಪ್ರತಿಪಾದನೆ ಇವರ ರಚನೆಗಳ ವಸ್ತುಸಾರ. ಇವು ವೈಷ್ಣವ ಪರಿಭಾಷೆಯಲ್ಲಿಯೇ ಇವೆ. ಜೊತೆಗೆ ರಾಮಾಯಣ ಮಹಾಭಾರತದ ಸನ್ನಿವೇಶಗಳನ್ನು ಕೃತಿಗೆ ತಂದುಕೊಂಡಿರುವರು.

ಓರಾಬಾಯಿ ಲಕ್ಷ್ಮಿದೇವಮ್ಮನವರು ಭೀಮವ್ವನ ಛಾಯಾನುವರ್ತಿಯೇ ಆಗಿದ್ದಾರೆ ಎಂದು ಹೇಳಬಹುದು. ಸ್ವಲ್ಪ ಬದಲಾವಣೆಯೊಂದಿಗೆ ಪುರಾಣ ಪಾತ್ರಗಳನ್ನು ಬಳಸಿಕೊಂಡಿದ್ದಾರೆ. (ಉದಾ. ದ್ರೌಪದಿಯ ವಸ್ತ್ರಾಪಹರಣ). 'ದ್ರೌಪದಿ ವಸ್ತ್ರಾಪಹರಣ' ಕೃತಿಯಲ್ಲಿ ದ್ರೌಪದಿ ಎರಡನೆ ಬಾರಿ ಜೂಜಿಗೆ ಕುಳಿತು ತನ್ನ ಸಕಲ ಸಂಪತ್ತನ್ನು ಜಯಿಸುತ್ತಾಳೆಂಬ ಬದಲಾವಣೆ ಮಾಡಿಕೊಂಡಿದ್ದಾರೆ. 'ಜನಪದ ಗೀತೆಗಳಲ್ಲಿ ಮಹಾಭಾರತ' ಎನ್ನುವ ಕೃತಿಯಲ್ಲಿ ಬರುವ ಜನಪದ ಗೀತೆಯೊಂದರಲ್ಲಿ ದ್ರೌಪದಿಯು ದ್ಯೂತವಾಡಿ ಮತ್ತೆ ಎಲ್ಲವನ್ನು ಗೆಲ್ಲುವ ಪ್ರಸಂಗವಿದೆ.

ಇದಿರು ಬೆಳೆಯೋದು ನಾಡು ಬಿದಿರು ಬೆಳೆಯೋದು ನಾಡು

ಮದರಂಗಿ ಬೆಳೆಯೋ ಮಲೆನಾಡು। ರಾಜ್ಯೇವ

ಮತ್ತೆ ಗೆದ್ದಾಳೆ ದೊರೆಮಗಳು॥[೭] –ಎಂದಿದೆ. ಇಂತಹ ಜನಪದ ಗೀತೆಯೇ ಓರಾಬಾಯಿ ಲಕ್ಷ್ಮಿದೇವಮ್ಮನವರಿಗೆ ಸ್ಫೂರ್ತಿಯಾಗಿರಬೇಕು.

ನಂಜನಗೂಡು ತಿರುಮಲಾಂಬರ 'ಕೈಯ ತೋರೊ ರಂಗ ಕೈಯ ತೋರೊ' ಎನ್ನುವ ಕೀರ್ತನೆ ಪರಮಾತ್ಮನ ಅಭಯಹಸ್ತವನ್ನು ಕೀರ್ತಿಸುತ್ತಲೇ ಆತನ ಲೀಲೆಯನ್ನು ಹೇಳುತ್ತದೆ. ಈ ಕೀರ್ತನೆ ಹೆಳವನಕಟ್ಟೆ ಗಿರಿಯಮ್ಮನ 'ಹೊನ್ನು ತಾ ಗುಬ್ಬಿ ಹೊನ್ನು ತಾ ನಮ್ಮ ಚಿನುಮಯ ಮೂರುತಿ ರಂಗನ ಕೈಗೆ' ಎನ್ನುವ ಕೀರ್ತನೆಯನ್ನು ನೆನಪಿಸುತ್ತದೆ. ಇವರು ರಚಿಸಿರುವ ಉರುಟಣೆಯ ಹಾಡು, ನಿಂದಾಸ್ತುತಿಗಳು ಹಿಂದಿನ ಕೀರ್ತನಕಾರರ ರಚನೆಯನ್ನೇ ಹೇಳುತ್ತದೆ. ಬಳ್ಳಾರಿ ರಾಧಾಬಾಯಿ ಉಳಿದ ಕೀರ್ತನಕಾರರು ಗಿರಿಯಮ್ಮ ಮತ್ತು ಭೀಮವ್ವನವರ ಜಾಡಿನಲ್ಲಿ ಕೀರ್ತನೆಗಳನ್ನು ರಚಿಸಿದ್ದಾರೆ.

ಸರಸ್ವತಿಬಾಯಿಯವರು 'ಪ್ರಮೀಳೆಯ ಕಾಳಗ' ಕೃತಿಯ ಮಂಗಳಪದ್ಯದ ಪಲ್ಲವಿಯಲ್ಲಿ 'ಗದುಗಿನ ವೀರನಾರಾಯಣನಿಗೆ ಮಂಗಳ ಜಯಮಂಗಳ' ಎಂದಿದ್ದಾಳೆ. ಈ ಕೃತಿ ರಚನೆಗೆ ತನ್ನನ್ನು ಪ್ರಭಾವಿಸಿದ ಕುಮಾರವ್ಯಾಸನನ್ನು ಕೊನೆಯಲ್ಲಿ ಕೊಂಡಾಡಿರುವುದನ್ನು ಕಾಣಬಹುದು.

**೨.೫ ಮೆರೆದಿರುವ ಸ್ವಂತಿಕೆ**

ಮಹಿಳಾಕೀರ್ತನಕಾರರ ಕೀರ್ತನೆಗಳಲ್ಲಿ ಹರಿದಾಸರ, ವಚನಕಾರರ, ಪೂರ್ವ ಕವಿಗಳ ಪ್ರಭಾವವಿದ್ದರೂ ಇವರಲ್ಲಿ ಪ್ರತಿಭಾವಂತರಾದ ಕೆಲವರು ಸ್ವಂತಿಕೆಯನ್ನು ಮೆರೆದಿದ್ದಾರೆ. ಇದನ್ನು ಗಮನಿಸಿದಾದ ಇವರ ಪುರಾಣ ಪ್ರಜ್ಞೆ, ವರ್ಣನಾ ಚಾತುರ್ಯ, ಪದಕಟ್ಟುವ ಕ್ರಮಗಳಲ್ಲಿ ಚಮತ್ಕಾರವನ್ನು ಕಾಣಬಹುದು. ಪುರಾಣದ ಕಥೆಗಳನ್ನು ತಮ್ಮ ಆಶಯದಂತೆ ಹೊಂದಿಸಿಕೊಳ್ಳುವಲ್ಲಿ, ಹೊಸಹಾಡುಗಳನ್ನು ಕಟ್ಟುವಲ್ಲಿ ಇವರ ಸ್ವೋಪಜ್ಞತೆ ಕಂಡು ಬರುತ್ತದೆ.

ಗಲಗಲಿ ಅವ್ವನವರು ಬರೆದಿರುವ 'ಮುಯ್ಯದ ಹಾಡುಗಳು' ಕೃತಿಯ ವಸ್ತು ಮಹಾಭಾರತದ್ದೇ. ಮುಯ್ಯ ಕೊಡುವ, ಮುಯ್ಯ ಹಿಂದಿರುಗಿಸುವ ನೆಪದಲ್ಲಿ ಮಹಾಭಾರತದ ಪ್ರಸಂಗಗಳನ್ನು, ಬಗೆ ಬಗೆಯ ಪಾತ್ರಗಳ ಮನೋಧರ್ಮಗಳನ್ನು ಚಿತ್ರಿಸಿದ್ದಾರೆ. ಪುರವರ್ಣನೆ, ನಿಂದಾಸ್ತುತಿ, ಹಾಸ್ಯ, ವಿಡಂಬನೆಗಳಿಂದ ಮದುವೆಯ ಸಂಭ್ರಮ ಸಡಗರಗಳನ್ನು ಮನೋಜ್ಞವಾಗಿ ವರ್ಣಿಸಿದ್ದಾರೆ.

ಮುಯ್ಯ ಕೊಡುವ ಹಾಡುಗಳನ್ನು ಮುಯ್ಯ ಕೊಡುವ ಮತ್ತು ಮುಯ್ಯ ಹಿಂದಿರುಗಿಸುವ ಹಾಡುಗಳೆಂದು ಎರಡು ನೆಲೆಗಳಲ್ಲಿ ಪರಿಭಾವಿಸಬಹುದು. ಮೊದಲು ಸುಭದ್ರೆ ದ್ರೌಪದಿಯರು ತವರಿಗೆ ಮುಯ್ಯ ಕೊಡಲು ಹೋಗುತ್ತಾರೆ. ಪರಸ್ಪರರನ್ನು ಮೂದಲಿಸಿ ಹಾಸ್ಯ ಮಾಡಿ, ಉಡುಗೊರೆಗಳನ್ನು ವಿನಿಮಯ ಮಾಡಿಕೊಂಡು ಧನ್ಯತೆಯಿಂದ ಬೀಗುತ್ತಾರೆ. ಮುಯ್ಯ ಹಿಂದಿರುಗಿಸಿದ ಹಾಡುಗಳಲ್ಲಿಯೂ ಇವೇ ಸನ್ನಿವೇಶಗಳು ವರ್ಣಿತವಾಗಿವೆ. ಜೊತೆಗೆ ಜೀವಜಗತ್ತು, ಪ್ರಕೃತಿ, ವೇಷಭೂಷಣಗಳು, ಅಲಂಕಾರ, ಒಡವೆ ವಸ್ತುಗಳ ವರ್ಣನೆಯು ಅದ್ಭುತವಾಗಿ ಮೂಡಿ ಬಂದಿವೆ. ಬಳಸಿರುವ ಭಾಷೆ, ಅಲಂಕಾರ, ಪದಪುಂಜಗಳು ಅವ್ವನವರು ಮೆರೆದಿರುವ ಸ್ವಂತಿಕೆಗೆ ಸಾಕ್ಷಿಯಾಗಿವೆ.

ಜೋಗುಳದ ಹಾಡು ಭಾಗವತದ ವಸ್ತು. ಅವ್ವನವರು ಕೃಷ್ಣನ ಹುಟ್ಟು, ಜಾತಕರ್ಮ, ತೊಟ್ಟಿಲಿಡುವ ಶಾಸ್ತ್ರವನ್ನು ಹಂತ ಹಂತವಾಗಿ ವರ್ಣಿಸಿ ತಮ್ಮ ಚಾತುರ್ಯ ಮೆರೆದಿದ್ದಾರೆ.

ಸೇತುಬಂಧದ ಹಾಡು ಸಂಪೂರ್ಣವಾಗಿ ಅವ್ವನವರದ್ದೇ ಕಲ್ಪನೆ. ರಾಮಭಕ್ತ ಹನುಮಂತ ಕೃಷ್ಣ ಭಕ್ತ ಪಾರ್ಥನ ನಡುವೆ ರಾಮ ಹೆಚ್ಚೋ ಕೃಷ್ಣ ಹೆಚ್ಚೋ ಎನ್ನುವ ವಾಗ್ವಾದ ನಡೆಯುತ್ತದೆ. ಇದೇ ನೆಪದಲ್ಲಿ ರಾಮಕೃಷ್ಣರ ಲೀಲಾವಿನೋದಗಳನ್ನು, ಮಹಿಮೆಯನ್ನು ವರ್ಣಿಸುವ ಅವಕಾಶ ಕಲ್ಪಿಸಿಕೊಂಡಿದ್ದಾರೆ. ಕೊನೆಗೆ ಪಾರ್ಥ ಸೋತರೂ ಹನುಮನು ಅವನ ಧ್ವಜದಲ್ಲಿ ನೆಲೆಸುತ್ತಾನೆ.

ಹೆಳವನಕಟ್ಟೆ ಗಿರಿಯಮ್ಮನವರು ಬರೆದಿರುವ 'ಉದ್ಧಾಳಿಕನ ಹಾಡು' ಳಳಲ ನುಡಿಗಳ ಸಾಂಗತ್ಯದ ಮಟ್ಟಿನಲ್ಲಿದೆ. ಮೂಲ ಯಾವುದು ಎಂದು ತಿಳಿದುಬಂದಿಲ್ಲ. ಬೆನಗಲ್ ರಾಮರಾವ್, ಪಾಣ್ಯಂ ಸುಂದರ ಶಾಸ್ತ್ರಿಗಳು ಸಂಪಾದಿಸಿರುವ 'ಪುರಾಣ ನಾಮ ಚೂಡಾಮಣಿ'ಯಲ್ಲಿ ಉದ್ದಾಲಕ ಎಂಬ ಮುನಿ ಪುರಾಣದಲ್ಲಿ ಆಪೋದ ಮುನಿಯ ಪುತ್ರನಾದ ಧೌಮ್ಯ ಮುನಿಯ ಶಿಷ್ಯ, ಇನ್ನೊಬ್ಬ ಉದ್ದಾಲಕ ಋಷಿ, ಚಂಡಿ ಎಂಬ ಹೆಂಗಸನ್ನು ಮದುವೆಯಾಗಿದ್ದವನು. ಈ ಎರಡೂ ಪಾತ್ರಳಿಗೂ ಗಿರಿಯಮ್ಮನ ಉದ್ಧಾಳಿಕನ ಪಾತ್ರಕ್ಕೂ ಸಂಬಂಧವಿಲ್ಲ.

ಉದ್ಧಾಳಿಕನು ಅನಾಥನಾದ್ದರಿಂದ ವೈರಾಗ್ಯ ಹೊಂದಿ ತಪಸ್ಸಿಗೆ ಹೋಗುತ್ತಾನೆ, ಅಜ ಹರಿ ಹರರನ್ನು ಮೆಚ್ಚಿಸುತ್ತಾನೆ. ಒಮ್ಮೆ ಕೌಶಿಕ ಮುನಿಯು ಸಂಚಾರ ಮಾಡುತ್ತಾ ಯಮಪುರಕ್ಕೆ ಬಂದಾಗ ಉದ್ಧಾಳಿಕನ ಪಿತೃಗಳು ನರಕದಲ್ಲಿ ನರಳುತ್ತಿರುತ್ತಾರೆ. ಉದ್ಧಾಳಿಕನನ್ನು ಭೇಟಿ ಮಾಡಿ ತಮಗೆ ಮುಕ್ತಿ ದೊರಕಿಸಿಕೊಡಬೇಕೆಂದು ಉದ್ಧಾಳಿಕನಿಗೆ ತಿಳಿಸಲು ಕೌಶಿಕನಲ್ಲಿ ಬೇಡುತ್ತಾರೆ. ಪುತ್ರನು ಹುಟ್ಟಿದ ಏಳು ವರ್ಷಗಳ ನಂತರ ಉದ್ಧಾಳಿಕನಿಗೆ ಪತ್ನಿ ಯಾರೆಂಬುದು ತಿಳಿಯುತ್ತದೆ ಎಂದು ಹೇಳುತ್ತಾರೆ. ಆದರೆ ಏಳು ವರ್ಷಗಳನ್ನೇ ಯಾಕೆ ಹೇಳಿದನೆಂಬುದಕ್ಕೆ ಕಥಾನಕದಲ್ಲಿ ಯಾವ ಹಿನ್ನೆಲೆಯೂ ನಿರೂಪಿತವಾಗಿಲ್ಲ.

ಕೌಸಲ್ಯ ದೇಶದ ರಾಜ ರಘುರಾಯ ಪುತ್ರಿ ಚಂದ್ರಾವತಿ. ಈಕೆ ಗೆಳತಿಯರೊಂದಿಗೆ ಜಲಕ್ರೀಡೆಗೆ ಬಂದಾಗ ಇವಳನ್ನು ನೋಡಿ ಮೋಹಿತನಾಗಿ ಉದ್ಧಾಳಿಕನಿಗೆ ವೀರ್ಯಸ್ಖಲನವಾಗುತ್ತದೆ. ಅವನು ವೀರ್ಯವನ್ನು ಬಾಳೆ ಕುಡಿಯಲ್ಲಿ ಸುತ್ತಿ ಕಮಲದ ಹೂನಲ್ಲಿಟ್ಟು ತೇಲಿಬಿಡುತ್ತಾನೆ. ಚಂದ್ರಾವತಿ ಅದನ್ನು ಆಘ್ರಾಣಿಸಿ ಗರ್ಭ ಧರಿಸುತ್ತಾಳೆ. ರಘುರಾಯನು ರಾಜ್ಯದ ನಿಯಮದಂತೆ ಮಗಳ

ಶಿರಚ್ಛೇದನಕ್ಕೆ ಆಜ್ಞಾಪಿಸುತ್ತಾನೆ. ಕಟುಕರು ಗರ್ಭಿಣಿಯನ್ನು ಕೊಲ್ಲಬಾರದೆಂದು ಬಿಟ್ಟುಬಿಡುತ್ತಾರೆ. ಚಂದ್ರಾವತಿ ಮುನಿಯೊಬ್ಬನ ಪೋಷಣೆಯಲ್ಲಿ ಗಂಡುಮಗುವಿಗೆ ಜನ್ಮ ನೀಡುತ್ತಾಳೆ. ಅವಿವಾಹಿತಳಾದ ಅವಳು ಮಗುವನ್ನು ನದಿಯಲ್ಲಿ ತೇಲಿಬಿಡುತ್ತಾಳೆ. ಇದು ಕುಂತಿಯ ವಿವಾಹಪೂರ್ವ ತಾಯ್ತನದ ಪ್ರಕರಣವನ್ನು ನೆನಪಿಸುತ್ತದೆ. ಹಾಗೆ ತೇಲಿ ಬಂದ ಮಗು ಉದ್ಧಾಳಿಕನಿಗೆ ದೊರೆಯುತ್ತದೆ. ಅವನ ಪಿತೃಗಳಿಗೆ ಮುಕ್ತಿ ಸಿಗುತ್ತದೆ. ಏಳು ವರ್ಷಗಳ ನಂತರ ಉದ್ಧಾಳಿಕ-ಚಂದ್ರಾವತಿಯರ ಸಮಾಗಮವಾಗುತ್ತದೆ. ಕಾವ್ಯದಲ್ಲಿ ಬರುವ ವನವರ್ಣನೆ, ಜಲಕ್ರೀಡೆ, ಚಂದ್ರಾವತಿಯ ಮಾತೃಹೃದಯದ ಮಮಕಾರಗಳು, ಆತಂಕಗಳು, ಉದ್ಧಾಳಿಕನ ಪಿತೃವಾತ್ಸಲ್ಯಗಳನ್ನು ಗಿರಿಯಮ್ಮ ಸೊಗಸಾಗಿ ಚಿತ್ರಿಸಿದ್ದಾಳೆ. ಸಾಂಪ್ರದಾಯಿಕ ಆಚರಣೆಗಳನ್ನು ಹೇಳಿದ್ದಾಳೆ. ಚಂದ್ರಾವತಿ ಒಬ್ಬಳು ರಾಜಕುಮಾರಿ ಅವಳ ಮುಂದೆ ಹಸನಾದ ಬದುಕಿತ್ತು, ಯಾವ ತಪ್ಪೂ ಇಲ್ಲದೆ ತನ್ನ ನಿರಪರಾಧಿತ್ವವನ್ನು ಸಮರ್ಥಿಸಿಕೊಳ್ಳಲೂ ಆಗದೆ ಕಾಡು ಪಾಲಾದಳು. ಮನುಷ್ಯನ ಬದುಕಿನಲ್ಲಿ ವಿಧಿಯು ತೋರುವ ಕೈಚಳಕ ಎಷ್ಟೆಂಬುದು ಈ ಕತೆಯಲ್ಲಿ ನಿರೂಪಿತವಾಗಿದೆ.

'ಶಂಕರಗಂಡನ ಹಾಡು' ಗಿರಿಯಮ್ಮನವರ ಸ್ವಯಂ ಕಲ್ಪಿತ ಕತೆ. ಶಿವನು ತನ್ನ ತಂಗಿ ರತಿಗೆ ಮನ್ಮಥನೇ ಗಂಡನೆಂದು ನಿರ್ಧರಿಸಿ ಮದುವೆ ಮಾಡಿಕೊಡುತ್ತಾನೆ. ರತಿ ಬಯಸಿದಾಗೆಲ್ಲ ತವರು ಮನೆಗೆ ಕಳುಹಿಸಬೇಕೆಂದು ಮನ್ಮಥನಿಗೆ ಹೇಳುತ್ತಾನೆ. ಆದರೆ ಒಮ್ಮೆ ಶಿವನು ರತಿಯನ್ನು ಕರೆಯಲು ಹೋದಾಗ ಮನ್ಮಥನು ಕೊಟ್ಟ ಮಾತನ್ನು ತಪ್ಪುವನು. ನಮ್ಮ ಮನೆಯಲ್ಲಿ ಹೂವಿನ ಮಂಚ, ಪಂಚ ಭಕ್ಷ್ಯ ಪರಮಾನ್ನ ಇದೆ. ಈಗವಳು ನಿಮ್ಮ ಮನೆಯ ಜೋಳದ ಅನ್ನವನ್ನು ಉಣ್ಣುವುದಿಲ್ಲ, ನಾನೀಗ ಅವಳನ್ನು ಕಳುಹಿಸುವುದಿಲ್ಲ ಎಂದು ಶಿವನನ್ನು ಅವಮಾನ ಮಾಡುತ್ತಾನೆ. ಅವನಿಗೆ ತಕ್ಕ ಪಾಠ ಕಲಿಸಬೇಕೆಂದು ಶಿವನು ಮನ್ಮಥನನ್ನು ನಿರ್ಗತಿಕನನ್ನಾಗಿ ಮಾಡುತ್ತಾನೆ. ರತಿಯು ದೈನ್ಯದಿಂದ ಬೇಡಿಕೊಳ್ಳಲು ಮತ್ತೆ ಸಕಲೈಶ್ವರ್ಯವನ್ನು ನೀಡುತ್ತಾನೆ. ಈ ಕತೆಯು ಪುರಾಣದಲ್ಲೆಲ್ಲೂ ಕಂಡುಬರುವುದಿಲ್ಲ. ಶಿವ ಮನ್ಮಥರ ಮಾತಿನ ಚಕಮಕಿ ಚುರುಕಾಗಿದೆ. ಶಿವನು, ಲಕ್ಷ್ಮಿ ಭಾರತಿ ಗೌರಿಯರು ತೌರು ಮನೆಯನ್ನು ಬಯಸುವರು. ನಮ್ಮ ಮನೆಯಲ್ಲಿ ಅಂಬಲಿಯನ್ನೆ ಉಂಡು ರತಿ ಸಂಭ್ರಮಿಸುತ್ತಾಳೆ ಕಳುಹಿಸಿಕೊಡು ಎನಲು ಮನ್ಮಥನು ನಿನ್ನ ಸಿರಿಮುಡಿಯ ಮೇಲೆ ಹುಲ್ಲು ಹೊರೆಸುವೆನು ನಮ್ಮ ಮನೆಯ ಕರುವನ್ನು ಕಾಯಿ, ಅರಿವೆ ಉಡಿಸಿ ಮೂರು ಬೊಗಸೆ ಅಂಬಲಿಯನ್ನು ಮರೆಯದೆ ಹೊಯ್ಯುವೆನು ಎನ್ನುತ್ತಾನೆ. ದೈವ ಕೃಪೆಯಿಂದಲೆ ಬದುಕು ನಡೆಯುವಂತದ್ದು. ದುರಹಂಕಾರ ಒಳ್ಳೆಯದಲ್ಲವೆಂಬುದನ್ನು ಈ ಕತೆ ಹೇಳುತ್ತದೆ.

ಸೀತಾ ಕಲ್ಯಾಣವು ೬೨ ನುಡಿಗಳ ಹಾಡು. ಮದುವೆಯ ಸಮಾರಂಭದಲ್ಲಿ ಬರುವ ಉರುಟಣೆ ಶಾಸ್ತ್ರವನ್ನು ಇಲ್ಲಿ ವರ್ಣಿಸಲಾಗಿದೆ. ಅರಿಶಿಣ್ಣೆಯ ಶಾಸ್ತ್ರದ ನೆವದಲ್ಲಿ ರಾಮನ ದಶಾವತಾರಗಳನ್ನು ವರ್ಣಿಸಿದೆ. ಗಿರಿಯಮ್ಮನ ಕಾಲದ ಮದುವೆಯ ಶಾಸ್ತ್ರ ಸಂಪ್ರದಾಯಗಳ ಪರಿಚಯವೂ ಇದರಲ್ಲಿ ಕಾಣುತ್ತದೆ. ಪ್ರತಿ ನುಡಿಯು ಜಯ ಜಯ ಎಂಬ ಸೊಲ್ಲಿನಿಂದು ಮುಗಿಯುತ್ತದೆ. ಚಂದ್ರಹಾಸನ ಕತೆಯಲ್ಲಿ ಲಕ್ಷ್ಮೀಶನ ಜೈಮಿನಿ ಭಾರತವನ್ನು ಅನುಸರಿಸಿದರೂ ಮೂಲವು ವಾರ್ಧಕ ಷಟ್ಪದಿಯಲ್ಲಿದ್ದರೆ,

ಇದು ಸಾಂಗತ್ಯದಲ್ಲಿದೆ. ಕಾವ್ಯ ಸೌಂದರ್ಯ ಸಹಜವಾಗಿ ಮೂಡಿದೆ. ವಿಷಯೆಯ ಪ್ರಸಂಗಗಳಲ್ಲಿ ಭಾವಪೂರ್ಣ ನಿರೂಪಣೆಯಿದೆ.

'ಬ್ರಹ್ಮ ಕೊರವಂಜಿ' ಕೃತಿಯಲ್ಲಿ ಬ್ರಹ್ಮನು ಕೊರವಂಜಿಯ ವೇಷದಲ್ಲಿ ಬಂದು ಕೃಷ್ಣನ ಅವತಾರವನ್ನು ಸೆರೆಯಲ್ಲಿದ್ದ ವಸುದೇವ–ದೇವಕಿಗೆ ಹೇಳುತ್ತಾನೆ. ಭಾಗವತದಲ್ಲಿಲ್ಲದ ಕೊರವಂಜಿಯ ಕಲ್ಪನೆ ಗಿರಿಯಮ್ಮನದೇ ಆಗಿದೆ. ಕೊರವಂಜಿಯ ವೇಷ ವರ್ಣನೆ ಭಾಗವತದ ಕೃಷ್ಣನ ಬಾಲಲೀಲೆಗಳ ಪ್ರಸಂಗಗಳನ್ನು ಕಂಸನ ವಧೆಯವರೆಗೂ ವರ್ಣಿಸಿದ್ದಾಳೆ. ದೇವಕಿ ಕೊಟ್ಟ ವೀಳ್ಯವನ್ನು ತೆಗೆದುಕೊಂಡ ಕೊರವಂಜಿ ಸತ್ಯಲೋಕಕ್ಕೆ ಹೊರಡುತ್ತಾಳೆ ಎನ್ನುವಲ್ಲಿಗೆ ಹಾಡು ಮುಗಿಯುತ್ತದೆ. ಭಾಷೆಯಲ್ಲಿ ಜನಪದದ ಸೊಗಡಿದೆ, ಲವಲವಿಕೆಯಿದೆ. ಕೃಷ್ಣ ಭಕ್ತೆ ಗಿರಿಯಮ್ಮ ಭಕ್ತಿಯನ್ನು ತನ್ಮಯತೆಯಲ್ಲಿ ಕಾವ್ಯಮಯಗೊಳಿಸಿದ್ದಾರೆ.

'ಕೃಷ್ಣ ಕೊರವಂಜಿ' ಅಪೂರ್ಣ ಕೃತಿ. ಕೃಷ್ಣ ರುಕ್ಮಿಣಿಯ ಮದುವೆಯ ಪ್ರಸಂಗವನ್ನು ಇಲ್ಲಿ ಹೇಳಿದೆ. ರುಕ್ಮಿ ತನ್ನ ತಂಗಿಯನ್ನು ಶಿಶುಪಾಲನಿಗೆ ಕೊಡಬೇಕೆಂದು ತೀರ್ಮಾನಿಸುತ್ತಾನೆ. ಕೃಷ್ಣನನ್ನು ಪ್ರೇಮಿಸುತ್ತಿದ್ದ ರುಕ್ಮಿಣಿಯು ಮದುವೆಯ ದಿನಗಳು ಹತ್ತಿರ ಬರಲು ಆತಂಕಗೊಳ್ಳುತ್ತಾಳೆ. ಆಗ ಕೃಷ್ಣನೇ ಕೊರವಂಜಿಯ ವೇಷದಲ್ಲಿ ಬಂದು ರುಕ್ಮಿಣಿಗೆ ಕಣಿ ಹೇಳುವ, ಅವಳಲ್ಲಿ ಧೈರ್ಯ ತುಂಬುವ ಪ್ರಸಂಗವನ್ನು ಇದು ಒಳಗೊಂಡಿದೆ. ಕೃಷ್ಣ ರುಕ್ಮಿಣಿಯರ ವಿವಾಹ ಭಾಗವತದ ವಸ್ತುವಾದರೂ ಕೊರವಂಜಿಯ ಪಾತ್ರ ಕಲ್ಪನೆ ಗಿರಿಯಮ್ಮನದು. ಕೊರವಂಜಿಯ ವೇಷಭೂಷಣ, ಮಾತುಗಾರಿಕೆ, ಸಹಜ ಜಾನಪದ ಸೊಗಡಿನಿಂದ ಮೂಡಿ ಬಂದಿದೆ.

'ಲವಕುಶರ ಕಾಳಗ'ವು ಉತ್ತರ ರಾಮಾಯಣದ ಕಥಾವಸ್ತುವಾದರೂ ರಾಮನು ಗರ್ಭಿಣಿ ಸೀತೆಯನ್ನು ಕಾಡಿಗೆ ಕಳುಹಿಸುವಾಗ ಕಾರಣವಾಗುವ ಅಗಸನ ಮಾತುಗಳು ಇಲ್ಲಿ ಬರುವುದಿಲ್ಲ. ಬದಲಾಗಿ ರಾಮ ಲಕ್ಷ್ಮಣರು ಬೇಟೆಗೆ ಹೋಗಿದ್ದಾಗ ರಾಮನಿಗೂ ಅರಮನೆಯಲ್ಲಿದ್ದ ಸೀತೆಗೂ ಅಪಶಕುನಗಳಾಗುತ್ತವೆ. ಸೀತೆ ಒಂಟಿಯಾಗಿದ್ದನ್ನು ಗಮನಿಸಿ ತಾಟಕಿ ಬಂದು ಸೀತೆಯ ಕೈಯಿಂದ ರಾವಣನ ಚಿತ್ರ ಬರೆಸುತ್ತಾಳೆ. ಅದನ್ನು ನೋಡಿದ ರಾಮ 'ಏಸು ದಿವಸ ಭೋಗಿಸಿದೆ' ಎಂದು ಬಿರುನುಡಿಯುತ್ತಾನೆ. ಅವಳ ಶಿರಚ್ಛೇಧನ ಮಾಡಿ ಬರುವಂತೆ ಲಕ್ಷ್ಮಣನಿಗೆ ಆಜ್ಞಾಪಿಸುತ್ತಾನೆ. ಗರ್ಭಿಣಿಯನ್ನು ಕೊಲ್ಲಬಾರದೆಂದು ಲಕ್ಷ್ಮಣ ಉಳಿಸಿ ಬರುತ್ತಾನೆ. ಕಾಡಿನಲ್ಲಿ ರೋಧಿಸುತ್ತಿದ್ದ ಸೀತೆಯನ್ನು ನೀರಿಗೆ ಬಂದ ನಾರಿಯರು ನೋಡಿ ವಾಲ್ಮೀಕಿಗೆ ವಿಷಯ ತಿಳಿಸುತ್ತಾರೆ. ವಾಲ್ಮೀಕಿಯ ಆಶ್ರಮದಲ್ಲೇ ಲವಕುಶರ ಜನನವಾಗುತ್ತದೆ. ಇಲ್ಲಿಂದ ಮುಂದೆ ಯಜ್ಞಾಶ್ವವನ್ನು ಲವಕುಶರ ಕಟ್ಟುವ ಪ್ರಸಂಗ. ಯುದ್ಧದಲ್ಲಿ ರಾಮ ಮೂರ್ಛಿತನಾಗುತ್ತಾನೆ. ವಾಲ್ಮೀಕಿಯ ಉಪಚಾರದಿಂದ ಎಚ್ಚರಗೊಳ್ಳುತ್ತಾನೆ. ವಾಲ್ಮೀಕಿಯು ಸೀತೆಯನ್ನು ರಾಮನಿಗೆ ಒಪ್ಪಿಸುತ್ತಾನೆ. ಲಕ್ಷ್ಮಣನು ತಾನು ರಾಮಾಜ್ಞೆಯನ್ನು ಮೀರಿದ ಪ್ರಸಂಗವನ್ನು ಅಣ್ಣನಿಗೆ ಹೇಳುತ್ತಾನೆ. ಸೀತೆಯು ಎಲ್ಲರೊಂದಿಗೆ ಅಯೋಧ್ಯೆಗೆ ಹೊರಡವಲ್ಲಿಗೆ ಕಥೆ ಸುಖಾಂತ್ಯವಾಗುತ್ತದೆ. ರಾಮಾಯಣದಲ್ಲಿರುವಂತೆ ಸೀತೆಯು ಭೂಗರ್ಭವನ್ನು ಸೇರುವುದಿಲ್ಲ. ಭವಭೂತಿಯ 'ಉತ್ತರರಾಮ ಚರಿತ್ರ'ದ ತೃತೀಯಾಂಕದಲ್ಲಿ

ಚಿತ್ರಪಟ ಪ್ರಸಂಗ ಹಾಗು ರಾಮ-ಸೀತೆಯರ ಸಮಾಗಮದ ವೃತ್ತಾಂತವು ಬರುತ್ತದೆ. ವ್ಯತ್ಯಾಸವೆಂದರೆ ಸೀತಾದೇವಿಯನ್ನು ರಾಮನಲ್ಲಿಗೆ ಕರೆತಂದದ್ದು ಪೃಥ್ವಿ ಮತ್ತು ಭಾಗೀರಥಿಯರು. ದಿಙ್ನಾಗಾಚಾರ್ಯನ ಸಂಸ್ಕೃತ ನಾಟಕ ಕುಂದಮಾಲದಲ್ಲಿಯ ನಾಲ್ಕನೆಯ ಅಂಕದಲ್ಲಿ ರಾಮಸೀತೆಯರ ಸಮಾಗಮದ ಸುಖಾಂತವಿದೆ. ನಿರೂಪಣೆ, ವರ್ಣನೆಯಲ್ಲಿ ಗಿರಿಯಮ್ಮ ಸ್ವಂತಿಕೆ ಮೆರೆದಿದ್ದಾಳೆ.

ಹರಪನಹಳ್ಳಿ ಭೀಮವ್ವನವರ 'ನಳಚರಿತ್ರೆ' ಮಹಾಭಾರತದ್ದೇ ವಸ್ತುವಾದರೂ ಚ್ಯವನ ಋಷಿಯ ಕಥೆ ಭೀಮವ್ವನ ಸ್ವಯಂ ಕಲ್ಪಿತ ಕಥೆ.

'ರತಿಕಲ್ಯಾಣ'ವು ಪೂರ್ಣ ಭೀಮವ್ವನವರದ್ದೇ ಕಲ್ಪನೆ. ರತಿ ಮನ್ಮಥರ ವಿವಾಹ ೬೧ ಧ್ವನಿಗಳಲ್ಲಿ ವರ್ಣಿತವಾಗಿದೆ. ಮನ್ಮಥ ಶಂಭಾಸುರನನ್ನು ವಧಿಸಿದ ಮೇಲೆ, ಮನ್ಮಥನು ನಿನಗೆ ಸರಿಯಾದ ವರನಲ್ಲವೆಂದು ನಾರದ ಹೇಳಿದ ಮಾತಿಗೆ ನೊಂದು ರತಿ ಅಗ್ನಿಪ್ರವೇಶ ಮಾಡುತ್ತಾಳೆ. ಮುಂದೆ ಕಮಲಾವತಿಯ ರಾಜನ ಮಗಳಾಗಿ ಜನಿಸಿ ಮನ್ಮಥನ ಧ್ಯಾನದಲ್ಲೇ ಇರುತ್ತಾಳೆ. ಇತ್ತ ರತಿಯ ಅಗಲಿಕೆಯಿಂದ ದುಃಖಿತನಾದ ಮನ್ಮಥನನ್ನು ನೋಡಿ ನೊಂದ ರುಕ್ಮಿಣಿ ಅವನಿಗೆ ಕನ್ಯೆಯನು ಹುಡುಕಬೇಕೆಂದು ಕೃಷ್ಣನಿಗೆ ಹೇಳುತ್ತಾಳೆ. ಏಳು ದಿನ ಹುಡುಕಿದರೂ ಕನ್ಯೆ ಸಿಗುವುದಿಲ್ಲ. ನಾರದನ ಸಲಹೆಯಂತೆ ಕೃಷ್ಣನು ಕಮಲಾವತಿಯ ರಾಜನ ಮಗಳನ್ನು ಕೇಳಲು ದ್ರೌಪದಿಯನ್ನು ಮಧ್ಯಸ್ಥಿಕೆಗೆ ಕಳುಹಿಸುತ್ತಾನೆ. ರಾಜ ದ್ರೌಪದಿಯನ್ನು ಅವಮಾನ ಮಾಡಿ ಕಳುಹಿಸುತ್ತಾನೆ. ಆದರೆ ರತಿ ಮನ್ಮಥನನ್ನೇ ಮದುವೆಯಾಗುತ್ತೇನೆಂದು ಹಠ ಹಿಡಿಯಲು ಮತ್ತೆ ರಾಜನು ಕ್ರೌಂಡಿಕನನ್ನು ನಿವಾರಿಸಬೇಕೆಂಬ ನಿರ್ಬಂಧ ಮಾಡಿ ಮದುವೆಗೆ ಒಪ್ಪಿಗೆ ನೀಡುತ್ತಾನೆ. ಅಷ್ಟರಲ್ಲಿ ಕ್ರೌಂಡಿಕನು ರತಿಯನ್ನು ಎತ್ತಿಕೊಂಡು ಹೋಗುತ್ತಾನೆ. ರುಕ್ಮಿಣಿಯು ದ್ರೌಪದಿಯನ್ನೇ ಯುದ್ಧಕ್ಕೆ ಕಳುಹಿಸುತ್ತಾಳೆ. ದ್ರೌಪದಿಯು ಕ್ರೌಂಡಿಕನ ಒಡಲು ಬಗೆದು ಕರುಳು ಕಿತ್ತೊಗೆದು ರತಿಯನ್ನು ಕರೆತರುತ್ತಾಳೆ. ಕಥೆಯಲ್ಲಿ ಹೊಸತನವಿದೆ.

ನಿಡಗುರಕಿ ಜೀವೂಬಾಯಿಯವರ 'ಶ್ರೀರಾಮ ಜನನ, ಸೀತಾ ಕಲ್ಯಾಣ' ಕಥೆಯು ರಾಮಾಯಣದ್ದೇ ಆದರೂ, ಸೀತಾ ಸ್ವಯಂವರದಲ್ಲಿ ರಾಮನು ಬಿಲ್ಲು ಮುರಿಯುತ್ತಿರುವ ಪ್ರಸಂಗಕ್ಕೆ ಜೀವಮ್ಮ ಹೊಸಕಲ್ಪನೆಯೊಂದಿಗೆ ಮೆರಗು ತಂದಿದ್ದಾಳೆ. ರಾಮನು ಲಕ್ಷ್ಮಣನನ್ನು ಕುರಿತು 'ತೆರೆಯಮರೆಯಲಿ ಜಾನಕಿ ಇರುತಿರೆ, ಅರಿತು ಪೇಳ್ವುದು ಚೆಲ್ವಿಕೆಯಾ ಸರಿ ಬಂದರೆ ಎನ್ನ ಮನಸಿಗೆ ಧನುವನು ಅರೆನಿಮಿಷದಲಿ ಭಾಗಿಪೆನು' ಎನ್ನುತ್ತಾನೆ! ಸೀತೆಯು ಸೌಂದರ್ಯವತಿಯಲ್ಲದಿದ್ದರೆ ಬಿಲ್ಲು ಬಗ್ಗಿಸುವ ವ್ಯರ್ಥ ಸಾಹಸಕ್ಕೆ ಕೈಹಾಕುವುದಿಲ್ಲವೆನ್ನುವ ಅರ್ಥವಿದೆ ರಾಮನ ಮಾತಿನಲ್ಲಿ, ಲಕ್ಷ್ಮಣನು ಮಹಾಲಕ್ಷ್ಮಿಯನ್ನು ಸ್ಮರಿಸುತ್ತಾ ಸೀತೆಯನ್ನು ಅಡಿಯಿಂದ ಮುಡಿಯವರೆಗೆ ವರ್ಣಿಸುತ್ತಾನೆ. ನಂತರ ರಾಮ ಬಿಲ್ಲು ಮುರಿಯುತ್ತಾನೆ. ಮದುವೆಯಲ್ಲಿ ಜನಕನು ರಾಮನಿಗೆ ವರದಕ್ಷಿಣೆಯನ್ನು ಕೊಡುವ ಪ್ರಸಂಗ ನಿಡಗುರಕಿಯವರಿಂದ ಕಲ್ಪಿತವಾದದ್ದು. (ಪುಟ-೨೭೧). ಅಂದಿನ ಸಾಮಾಜಿಕ ಪರಿಸ್ಥಿತಿಯಲ್ಲಿ ವರದಕ್ಷಿಣೆ ಎಷ್ಟು ಪ್ರಭಾವಶಾಲಿಯಾಗಿತ್ತೆಂಬುದನ್ನು ಇಲ್ಲಿ ಕಾಣಬಹುದು. ಅಥವಾ ರಾಜನಾದ ಜನಕನು ವರನಿಗೆ

ನೀಡಿದ ಕೊಡುಗೆ ಎನ್ನುವ ಅರ್ಥದಲ್ಲಿ ಜೀವೂಬಾಯಿ ವರದಕ್ಷಿಣೆ ಎನ್ನುವ ಪದವನ್ನು ಬಳಸಿಕರಲೂಬಹುದು. ಏಕೆಂದರೆ ರಾಮನಂತಹ ಆದರ್ಶ ಪುರುಷ ವರದಕ್ಷಿಣೆಯನ್ನು ಸ್ವೀಕರಿಸಿರಲಾರ.

ಗಾಲವ ಚರಿತ್ರೆಯಲ್ಲಿ ಬರುವ ಗಾಲವನಿಗೂ ಪುರಾಣದ ವಿಶ್ವಾಮಿತ್ರನ ಶಿಷ್ಯ ಗಾಲವನಿಗೂ ಸಂಬಂಧವಿಲ್ಲ. ಗಾಲವ ಒಬ್ಬ ಮುನಿ. ಅವನು ನದಿಯಲ್ಲಿ ಸ್ನಾನ ಮಾಡಿ ಅರ್ಘ್ಯ ನೀಡುತ್ತಿದ್ದಾಗ, ಬೊಗಸೆಯ ನೀರು ಮಲಿನಗೊಳ್ಳುತ್ತದೆ. ಕೋಪಗೊಂಡ ಋಷಿ ಇದಕ್ಕೆ ಕಾರಣನಾದವನನ್ನು ಸೂರ್ಯಾಸ್ತವಾಗುವುದರೊಳಗೆ ಕೊಲ್ಲುತ್ತೇನೆಂದು ಪ್ರತಿಜ್ಞೆ ಮಾಡುತ್ತಾನೆ. ಇದಕ್ಕಾಗಿ ಕೃಷ್ಣನ ಮೊರೆ ಹೋಗಬೇಕೆಂದು ನಾರದ ಸೂಚಿಸುತ್ತಾನೆ. ಮುನಿಯು ಕೃಷ್ಣನಿಂದ ಭಾಷೆ ತೆಗೆದುಕೊಳ್ಳುತ್ತಾನೆ. ನಾರದನು ಮುನಿಯ ಕೋಪಕ್ಕೆ ಕಾರಣನಾದ ಚಿತ್ರರಥನಿಗೆ ವಿಷಯ ತಿಳಿಸುತ್ತಾನೆ. ಚಿತ್ರರಥನು ಸತ್ಯಭಾಮೆಯ ಮೂಲಕ ಅರ್ಜುನನ ಮೊರೆಹೋಗುತ್ತಾನೆ. ಕೃಷ್ಣಾರ್ಜುನರ ಕಾಳಗವಾಗುತ್ತದೆ. ಕೊನೆಗೂ ಚಿತ್ರರಥನನ್ನು ಕೃಷ್ಣ ಕೊಲ್ಲುತ್ತಾನೆ. ಅರ್ಜುನ ಅಗ್ನಿಪ್ರವೇಶಕ್ಕೆ ಮುಂದಾಗುತ್ತಾನೆ. ಕೃಷ್ಣ ಮತ್ತೆ ಚಿತ್ರರಥನನ್ನು ಬದುಕಿಸುತ್ತಾನೆ. ಪದ್ಮಪುರಾಣದಲ್ಲಿ ಈ ಪ್ರಸಂಗವಿದೆ. ಗಾಲವನ ಬೊಗಸೆಗೆ ಉಗಿದವನು ಚಿತ್ರಸೇನನೆಂಬ ಗಂಧರ್ವನು. ಕೊಂಚ ಬದಲಾವಣೆಯೊಂದಿಗೆ ಈ ಕಥನವನ್ನು ಹೇಳಿದ್ದಾಳೆ.

'ಪಾಂಡುರಂಗ ಚರಿತ್ರೆ' ಪಾಂಡುರಂಗನ ಭಕ್ತೆಯೊಬ್ಬಳ ಕಥೆ. ಪಂಢರಾಪುರದಲ್ಲಿ ಮಕ್ಕಳಿಲ್ಲದ ಹೆಣ್ಣೊಬ್ಬಳು ಬಾಲಕನಾದರೆ ಆಳನು ಮಾಡುವೆ, ಬಾಲಕಿಯಾದರೆ ಧಾರೆಯನೆರೆಯುವೆ ಎಂದು ಪಾಂಡುರಂಗನಿಗೆ ಹರಕೆ ಹೊರುತ್ತಾಳೆ. ಆಗ ಹೆಣ್ಣು ಮಗು ಜನಿಸುತ್ತದೆ. ಹರಿ ಬಂದು ಕೇಳಿದಾಗಲೆಲ್ಲಾ ನೆಪ ಹೇಳಿ ಕೊನೆಗೆ ಬೇರೆ ವರನಿಗೆ ಮದುವೆ ನಿಶ್ಚಯ ಮಾಡುತ್ತಾಳೆ. ಮದುವೆಯ ಹಿಂದಿನ ದಿನ ವರನ ವೇಷದಲ್ಲಿ ಬಂದ ಹರಿ ಹುಡುಗಿಯನ್ನು ಧಾರೆ ಎರೆಸಿಕೊಂಡು ಹೋಗುತ್ತಾನೆ. ಬೆಳಗಾಗ ವಧು ಕಾಣುವುದಿಲ್ಲ ವಿಠಲನ ಗುಡಿಯಲ್ಲಿ ಅವಳ ಸೆರೆಗು ವಿಠಲ ಮೂರ್ತಿಯ ಸೆರಗಿಗೆ ಗಂಟು ಹಾಕಿಕೊಂಡಿರುತ್ತದೆ. ಇದನ್ನು ನೋಡಿದ ಅರ್ಚಕ ವಿಷಯ ಮುಟ್ಟಿಸುತ್ತಾನೆ. ಎಲ್ಲರೂ ಬಂದು ಪಾಂಡುರಂಗನ ಕ್ಷಮೆ ಕೋರಿ ಅವನಿಗೇ ಧಾರೆ ಎರೆದುಕೊಡುತ್ತಾರೆ.

'ವರಮಹಾಲಕ್ಷ್ಮಿಯ ಕಥೆ' ಹೆಂಗಸರು ಪೂಜೆಯ ಸಂದರ್ಭದಲ್ಲಿ ಹೇಳಿಕೊಳ್ಳುವ ಹಾಡು. ಇದು ಶ್ರಾಣದ ಮಾಸದ ವರಮಹಾಲಕ್ಷ್ಮಿಯ ವ್ರತಕಥೆ. ಅದನ್ನು ಹಾಡಿನ ರೂಪಕ್ಕಿಳಿಸುವುದು ಜೀವೂಬಾಯವರ ಹಾಡು ಕಟ್ಟುವ ಶಕ್ತಿಯನ್ನು ತೋರಿಸುತ್ತದೆ. 'ಸಮುದ್ರಮಥನ'ದ ವಸ್ತು ಪುರಾಣದ್ದೇ ಆದರೂ ಹಾಡು ಬರೆದಿರುವುದರಲ್ಲಿ ಸ್ವಂತಿಕೆಯಿದೆ. ಲಕ್ಷಿ ಹರಿಯನ್ನು ವರಿಸುವಾಗ ಯಮ ಇಂದ್ರ ಮುಂತಾದ ದೇವರುಗಳನ್ನು ಯಾಕೆ ವರಿಸುವುದಿಲ್ಲವೆಂಬ ಕಾರಣ ಹೇಳುತ್ತಾ ಮುಂದೆ ಸಾಗುವ ಸಂದರ್ಭ ಸೃಷ್ಟಿ ಹೊಸದಾಗಿದೆ. ಅಲ್ಲದೆ ಮೋಹಿನಿ ಅವತಾರದ ವರ್ಣನೆ ಹೊಸದಾಗಿ ಮೂಡಿ ಬಂದಿದೆ.

'ಶ್ರೀಹರಿಲೀಲಾ' ಕೃತಿಯನ್ನು ಜೀವೂಬಾಯಿಯವರು ಭಾಗವತದ ಸಪ್ತಾಹ ಕೇಳಿದ ನಂತರ ಕನಸಿಲ್ಲಾದ ಗುರುಗಳ ಪ್ರೇರಣೆಯಿಂದ ಬರೆದೆ ಎನ್ನುತ್ತಾರೆ. ದ್ವಾರಕೆಯಲ್ಲಿ ಕೃಷ್ಣ ರುಕ್ಮಿಣಿಯರನ್ನು ನೋಡಿದ ನಾರದ ಉಳಿದ ಪಟ್ಟ ಮಹಿಷೆಯರ ಪಾಡೇನೆಂದು ನೋಡಿ ಬರಲು ಹದಿನಾರು ಸಾವಿರ ಜನರ ಮನೆಗೂ ಹೋದಾಗ ಎಲ್ಲರ ಮನೆಯಲ್ಲೂ ಕೃಷ್ಣನಿರುತ್ತಾನೆ. ಕೃಷ್ಣನ ಸರ್ವವ್ಯಾಪಕತ್ವವನ್ನು ಜೀವೂಬಾಯಿ ಹೇಳಿದ್ದಾರೆ.

'ರಾಧಾ ಮಾಧವ ವಿಲಾಸ' ಎಂಬ ಕೃತಿಯಲ್ಲಿ ಅರ್ಧ ಭಾಗ ಕೃಷ್ಣನ ಬಾಲಲೀಲೆಗಳಿವೆ. ಕೃಷ್ಣನ ಬಾಲಲೀಲೆಗಳನ್ನು ವರ್ಣಿಸುತ್ತ: ಒಮ್ಮೆ ಕೃಷ್ಣ, 'ಚಂದ್ರನ ತೋರೆ ಅಮ್ಮ ಅಮ್ಮ ಅಮ್ಮಾ' ಎಂದು ಹಠ ಹಿಡಿಯುವ ಜೊತೆಗೆ 'ಅಂಗೈಯಲ್ಲಿ ಚಂದ್ರನ ತಂದು ಕೊಡಮ್ಮ' ಎಂದು ಕಾಡುತ್ತಾನೆ. ಯಶೋಧೆಯು ಚಿಂತಿಸುತ್ತಿರಲು 'ಯಶೋಧೆ ನೋಡೆ ಚಂದ್ರನ ಕರೆಸುವೆನೆ' ಎಂದು ಹೇಳಿ ಕೈಯಲ್ಲಿ ಚಂದ್ರನನ್ನು ಹಿಡಿದು ಮಾತೆಗೆ ತೋರಿಸುತ್ತಾನೆ. ವಸ್ತು ಮತ್ತು ವರ್ಣನೆಯ ದೃಷ್ಟಿಯಿಂದಲೂ ಜೀವೂಬಾಯಿ ಹೊಸತನ ಮೆರೆದಿದ್ದಾರೆ.

ಅಂಬಾಬಾಯಿಯವರ 'ಸೀತಾಪತಿ ವಿಠಲದಾಸಳ ನಿರ್ಯಾಣ ಪದ' ಬದುಕಿನಲ್ಲಿ ಪ್ರಭಾವ ಬೀರಿದ ತಮ್ಮ ಅಜ್ಜಿಯನ್ನು ಕುರಿತು ಬರೆದಿರುವ ಅಪರೂಪದ ಕೃತಿ. ಇದು ಸರಳ ಮತ್ತು ನೇರ ನಿರೂಪಣೆಯಲ್ಲಿದೆ.

ಯದುಗಿರಿಯಮ್ಮನವರ 'ಶ್ರೀರಂಗ ಮಹಾತ್ಮಂ' ಕೃತಿ ಶ್ರೀರಂಗ ಕ್ಷೇತ್ರದ ಅಧಿದೈವ ರಂಗನಾಥಸ್ವಾಮಿಯ ಉತ್ಸವ, ಕೈಂಕರ್ಯಗಳನ್ನು ದಾಖಲಿಸುವ ಕೀರ್ತನ ಗುಚ್ಛ. ಶ್ರೀರಂಗ ನಾಯಕಿ ದೇವಿಯರ ತಿರುಮಜ್ಜನ ವಿವರ, ಪಾರ್ವಟೆ ಉತ್ಸವ, ಉಯ್ಯಾಲೆ, ಊಂಜಲ್, ಕೌಶಿಕೋತ್ಸವ, ಕೃತಿಕೋತ್ಸವ, ಧರ್ನುಮಾಸದ ಉತ್ಸವ–ಹೀಗೆ ಪ್ರತಿ ತಿಂಗಳು ನಡೆಯುವ ಉತ್ಸವವನ್ನು ಕಣ್ಣಾರೆ ಕಂಡಿದ್ದ ಇವರು ತಮ್ಮ ಅನುಭವವನ್ನು ಕೀರ್ತನೆಯಲ್ಲಿ ತಂದಿರುವುದು ಅಪರೂಪದ ವಸ್ತುವಿಷಯವೇ ಆಗಿದೆ. ಮಧ್ಯರಾತ್ರಿ ವೈಷ್ಣವ ದೇವಾಲಯಗಳಲ್ಲಿ ನಡೆಯುವ ಪುಳಿಯೋಗರೆ ನೈವೇದ್ಯ ಮುಂತಾದ ಮಾಹಿತಿಯನ್ನು ಕೃತಿ ಒಳಗೊಂಡಿದೆ. ವೈಷ್ಣವ ಧರ್ಮ ಪ್ರತಿಪಾದನೆಯಲ್ಲಿ ಯದುಗಿರಿಯಮ್ಮನದು ವಿಶಿಷ್ಟ ರಚನೆ.

ರಾಧಾಬಾಯಿಯವರು ಮಂತ್ರಾಲಯದ ರಾಘವೇಂದ್ರಸ್ವಾಮಿಗಳ ಪವಾಡ ಹಾಗೂ ಮಹಿಮೆಯನ್ನು ಕುರಿತ ಹಾಡುಗಳನ್ನು ರಚಿಸಿ ರಾಯರ ಮೇಲಿನ ತಮ್ಮ ಭಕ್ತಿಯನ್ನು ಮೆರೆದಿದ್ದಾರೆ.

ಕೀರ್ತನಕಾರ್ತಿಯರು ರಚಿಸಿರುವ ಬಿಡಿಕೀರ್ತನೆಗಳು ಪರಸ್ಪರರ ರಚನೆಯ ಭಿನ್ನತೆ, ಪ್ರತಿಭೆ, ನಿಷ್ಠೆ, ಸರಳತೆ, ನೇರ ನಿರೂಪಣೆಗೆ ಸಾಕ್ಷಿಯಾಗಿದೆ. ಅಲ್ಲದೆ ಇತರ ಕೃತಿಗಳಲ್ಲಿ ರಾಮಾಯಣ, ಮಹಾಭಾರತ, ಭಾಗವತದ ವಸ್ತುಗಳನ್ನೇ ಆಯ್ದುಕೊಂಡಿದ್ದರೂ ನಿರೂಪಣೆಯಲ್ಲಿ ವೈವಿಧ್ಯತೆಯನ್ನು ಸ್ವಂತಿಕೆಯನ್ನೂ ಮೆರೆದಿದ್ದಾರೆ. ಮಹಿಳೆಯರಿಗಾಗಿಯೇ ವ್ರತದ ಹಾಡುಗಳನ್ನು, ಸಂಪ್ರದಾಯದ ಹಾಡುಗಳನ್ನು ರಚಿಸಿದ್ದಾರೆ. ಮಹಿಳೆಯರು ಸಮಾರಂಭಗಳಲ್ಲಿ ಸಾಮೂಹಿಕವಾಗಿ ಹಾಡಲು ಅನುಕೂಲವಾಗುವ ಧಾಟಿಯಲ್ಲಿ ಕೃತಿ ರಚನೆ ಮಾಡಿರುವುದು ಇವರ ಹೆಗ್ಗಳಿಕೆಯೇ ಸರಿ.

## ೨.೬ ಕಾವ್ಯಶಕ್ತಿ

ಮಹಿಳಾಕೀರ್ತನಕಾರರ ಕೃತಿಗಳ ಮೂಲ ದ್ರವ್ಯ ಭಕ್ತಿ. ದೈವ ಹಾಗು ಮಾನವನ ನಡುವಿನ ಸಂಬಂಧವನ್ನು ಕಲಾತ್ಮಕವಾಗಿ ತೆರೆದಿಟ್ಟ ಅವರ ಕೀರ್ತನೆಗಳಲ್ಲಿ ಮಾನವೀಯವಾದ ಎಲ್ಲ ಭಾವನೆಗಳ ತೀವ್ರ ಸಂಚಲನವಿದೆ. ಮಾನವನ ಬದುಕಿಗೆ ಬೇಕಾದ ಭಾವಗಳು ಮೇಳೈಸಿವೆ. ಭಗವಂತನೇ ಆ ಎಲ್ಲ ಕೀರ್ತನೆಗಳ ಗುರಿ. ಹುಟ್ಟು ಪ್ರತಿಭೆಗಳಾದ ಅವರ ಬರಹಗಳು ಕಾವ್ಯಗಳೇ ಆಗಿವೆ. ಕೃತಿಗಳು ಬರಿಯ ಕಲ್ಪನೆಗಳಿಂದ ಕೂಡಿರದೆ ಬದುಕನ್ನು ಎದುರಿಸಿದ ಧೀಮಂತಿಕೆಯ ಹೊಳಪು ಅನುಭವಗಳ ಸಂಕೀರ್ಣತೆಯಲ್ಲಿ ಹಾಸುಹೊಕ್ಕಾಗಿ ಮೂಡಿಸಿದ ಲೌಕಿಕ ಚಿಂತನೆಗಳನ್ನು, ಪಾರಮಾರ್ಥಿಕ ವಿಚಾರಗಳನ್ನು, ತಮ್ಮ ಕಾವ್ಯದ ಜೀವಾಳವಾಗಿಸಿಕೊಂಡ ಮೇರು ಕವಿತ್ವವಾಗಿದೆ. ಸುಲಭವೂ ಸರಳವೂ ಆದ ಕೀರ್ತನೆಗಳು ಅನುಭವ ಮತ್ತು ಅನುಭಾವದ ಸಂಪತ್ತಿನ ಕಾವ್ಯಗುಣ ತೀವ್ರವಾದ ಜೀವಂತಿಕೆಯಲ್ಲಿದೆ. ಕೀರ್ತನೆಗಳು ಆಶುಕವಿತೆಗಳು. ಜನರ ನಡುವೆ ಮೂಡಿ ಬಂದವುಗಳು. ಬಾಯಿಂದ ಬಾಯಿಗೆ ದಾಟಿ ಬಂದವುಗಳು. ಅಂತರಂಗದ ಅಭಿವ್ಯಕ್ತಿಯಾದ್ದರಿಂದ ಸಹಜ ಕಾವ್ಯಲಕ್ಷಣಗಳನ್ನು ಪಡೆದೇ ಹುಟ್ಟಿಕೊಂಡಿವೆ. ಸಂಗೀತಕ್ಕೂ ತಾಳಕ್ಕೂ ಹೊಂದಿಕೊಳ್ಳುತ್ತವೆ. ಆಧ್ಯಾತ್ಮದಂತಹ ಗಹನ ವಿಚಾರಗಳನ್ನು ಸರಳ ಭಾಷೆಯಲ್ಲಿ ಹೇಳುತ್ತವೆ. ಧ್ವನಿಗೆ ತಕ್ಕಂತೆ ಭಾಷೆಯ ಬೆಡಗು, ಬಳುಕು ಬಾಗುಗಳು ಕೀರ್ತನೆಗಳಲ್ಲಿ ಕಾಣಿಸಿಕೊಂಡು ಕಾವ್ಯತ್ವ ಪಡೆದಿವೆ. ಸ್ವಾನುಭವದ ನೆಲೆಯಲ್ಲಿಯೂ ಸಾರ್ವತ್ರಿಕ ನೆಲೆಯಲ್ಲಿಯೂ ಕಾವ್ಯಗುಣ ಅಭಿವ್ಯಕ್ತಿ ಪಡೆಯುತ್ತವೆ. ಮಹಿಳಾಕೀರ್ತನಕಾರರ ರಚನೆಗಳು ಅನುಭವಜನ್ಯವಾದವು ಆದುದರಿಂದ ಸಹಜವಾಗಿ ಮೂಡಿ ಬಂದಿವೆ. ಸಹಜತೆಯೊಂದಿಗೆ ಅವರ ಕಾವ್ಯರಚನಾ ಶಕ್ತಿಯನ್ನೂ ಸಾಬೀತಾಗಿದೆ. ಇವರ ಸಾಹಿತ್ಯವು ಕಾವ್ಯ ಮೀಮಾಂಸೆಯ ಯಾವ ನಿಕಷದ ಮೇಲಾದರೂ ಹೊಳೆಯುತ್ತವೆ ಎಂದು ವಿಮರ್ಶಕರೊಬ್ಬರು ಹೇಳಿರುವ ಮಾತು ನೆನಪಾಗುತ್ತದೆ. ಸರಳ, ನೇರ ನಿರೂಪಣೆಯ ಈ ಕಾವ್ಯಗಳು ವಿವರಣೆಯನ್ನು ಬೇಡುವುದಿಲ್ಲ.

ಗಲಗಲಿ ಅವ್ವನವರು ರಂಗನಿಗೆ ನಮಸ್ಕರಿಸುವ ಪರಿಯಿದು (ಕೀ.೧೩೬).

ಚಿತ್ರ ಚಕೋರದಂತೆ ನಲಿದು ನರ್ತನಾಡುತ
ನಲಿದು ನರ್ತನಾಡುತ ಹಸ್ತವೆಂಬೋ ಕಮಲ
ಮುದದಿ ಎತ್ತಿ ಮುಗಿಯುತ
ರಂಗಗೆ ಎತ್ತಿ ಮುಗಿಯುತ

ಲಕುಮೇಶನಲ್ಲೇ ಸ್ನೇಹ ಉಕ್ಕಿ ಚೆಲ್ಲುವ
ಶರಧಿ ಉಕ್ಕಿ ಚೆಲ್ಲುತ ಅಕ್ಕ
ನೇತ್ರವೆಂಬೊ ಕುಮುದ
ಚಕ್ಕನೆ ಅರಳುತ ಚಕ್ಕನರಳುತ

ರಂಗನಂಘ್ರಿಗೆರಗುವಂತೆ ಭೃಂಗವಾಗುತ

ಎರಗಿ ಭೃಂಗವಾಗುತ ನಮ್ಮ
ಅಂಗ ಮರೆದು ಮುದದಿ
ಉತ್ತುಂಗರಾಗುತ ಉತ್ತುಂಗರಾಗುತ

ಹರಿವಿದ ಕ್ಯಾದಗೆಯು ನವಿಲು ಗರಿಯಂತೊಪ್ಪುತ
ನವಿಲು ಗರಿಯಂತೊಪ್ಪುತ
ಶ್ರೀರಾಮನೆಂಬೊ ಮುಗಿಲಿಗೆ
ಪರಿವೆ ನಲಿಯುತ ಪರಿವೆ ನಲಿಯುತ

ಕೃಷ್ಣನು ತುಂಬಿದ ಸಭೆಗೆ ಮಹಲಿನಿಂದ ಇಳಿದು ಬರುವ ಚಿತ್ರಣ ಕಣ್ಣಿಗೆ ಕಟ್ಟುವಂತಿದೆ: (ಕೀ.೧೨೬) ಶ್ರೀಕೃಷ್ಣನ ಅರಮನೆಯ ವೈಭವವನ್ನು ವರ್ಣಿಸಲು ಈ ಸಂದರ್ಭವನ್ನು ಬಳಸಿಕೊಂಡಂತೆ ಕಾಣುತ್ತದೆ.

ನೀಲ ಮಾಣಿಕ ರತ್ನ ದಿವ್ಯ ನಿಲವುಗನ್ನಡಿ
ಹೊಳೆವ ಮಹಲುಗಳ ಇಳಿದು ಬಂದ

ಮುತ್ತಿನ ತ್ವಾರಣ ನವರತ್ನ ಹಂದರ ದಾಟಿ
ಚಿತ್ರ ಚಾವಡಿಯ ತಾನು ಇಳಿದು ಬಂದ

ಕೃಷ್ಣನು ಮಡದಿಯರೊಂದಿಗೆ ಬೀದಿಯಲಿ ಹೊರಟಾಗ: (ಕೀ.೧೨೮)

ಕೃಷ್ಣನರಸಿಯರು ಉಟ್ಟ ಪಟ್ಟಾವಳಿಯ ಬೆಳಕು
ಅಷ್ಟು ಇಷ್ಟೆಂಬ ಮಿತಿಯಿಲ್ಲ ನಲ್ಲೆ/ಸೂರ್ಯನಾಚೆ
ಬಿಟ್ಹೋದ ತಮ್ಮ ಮನೆತನಕ

ಗಗನದಿ ಬೆಳಗುವ ಹಗಲು ಬತ್ತಿಗಳೆಷ್ಟು
ಮುಗಿಲೀಗೆ ಮುಟ್ಟೋ ಬಿರುಸೆಷ್ಟೊ ಬಹುಶ್ರೇಷ್ಠ

ಮುಟ್ಟೊ ಮಿಂಚಿನಂತೆ–ಇಲ್ಲಿರುವ ಉತ್ಪ್ರೇಕ್ಷಿತ ವರ್ಣನೆಯು ಕೃಷ್ಣ ಭಕ್ತಿಯನ್ನು ಸಾರುತ್ತದೆ.

ಅವ್ವನವರ ಈ ಕೀರ್ತನೆ (ಕೀ.೧೫೩) ಜನಪದ ಗೀತೆಯನ್ನು ಓದಿದ ಅನುಭವವನ್ನು ಕೊಡುತ್ತದೆ.

ಬಾಗುವ ತೆಂಗಿನ ಮರನೋಡ
ರಂಗನ ಅಂಘ್ರಿಗೆರಗುವಂತೆ ಸಖಿಯೆ

ಶೃಂಗಾರದ ವನನೋಡ ಪಂಚರಂಗದ ಗಿಳಿ ನೋಡ
ಮಂಗಳ ಸ್ವರ ನೋಡ ಕೋಕಿಲ ರಂಗನ ಪಾಡುತಲಿವೆ

ಜಾತಿ ಹಂಸ ನೋಡ ವನದೊಳು

ಮಾತಿನ ಗಿಳಿನೋಡ ಸಖಿಯೆ
ನೂತನ ಮೃಗ ನೋಡ ಕಸ್ತೂರಿ ಹರಿಪಾದಕೆ
ಆತುರದಲಿ ಬರುತಲಿದೆ

ನೆಲ್ಲಿ ನೇರಲ ನೋಡ ಪುಷ್ಪ ಚೆಲ್ಲಿ ನಲಿಯುತಲಿವೆ
ಮಲ್ಲಮಲ್ಲಿಗೆ ನೋಡ ಹರಿಪಾದ ಪಲ್ಲವಕೆ ಎರಗುತಲಿವೆ

ಚಾರುಕೋನವ ನೋಡ ಕಮಲವು ತೂರಿ ಬರುತಲಿದೆ
ಸಾರ ಪಕ್ಷಿಗಳ ನೋಡ ಹರಿಗುಣ ಸಾರುತ ನಲಿಯುತಿದೆ

ನಾಗ ಪನ್ನಾಗ ನೋಡ ಸಂಪಿಗೆ ಪರಿಮಳ ನೋಡ
ಹಾಂಗೆ ಕ್ಯಾದಿಗೆ ನೋಡ ಹರಿಪಾದಕ್ಹೋಗಿ ಎರಗುತಿವೆ

ಓಕುಳಿ ಕುಣಿ ನೋಡ ನಿಲ್ಲಿಸಿದ ಜೀಕಳಿ ಗೊಂಬೆಗಳ
ಲೋಕ ನಾಯಕ ಹರಿಗೆ ಚಿಮ್ಮುತ ಹಾರುವ ಪರಿ
ಸಾಲುಮರಗಳ ನೋಡ ರಂಗಗೆ ಫಲ ಮೇಲಾಡಿ ಮೆಲಿಸುವಂತೆ.

ಜನಪದರು ನಿಸರ್ಗದ ಕೂಸುಗಳು. ಅವ್ವನವರ ಈ ಪದ್ಯ ಜನಪದರ ಪ್ರಕೃತಿ ಪ್ರೀತಿ, ದೈವನಿಷ್ಠೆಯನ್ನು ನೆನಪಿಸುತ್ತದೆ.

ದ್ವಾರಕಾಪುರದ ವರ್ಣನೆಯಲ್ಲಿ ಗಲಗಲಿ ಅವ್ವನವರು ತಮ್ಮ ಕವಿತಾಚಾತುರ್ಯವನ್ನು ಹೀಗೆ ಮೆರೆದಿದ್ದಾರೆ.

ಏಳಂತಸ್ತಿನ ಮಾಳಿಗೆ ಮ್ಯಾಲಿನ ಗೊಂಬೆಗಳು
ಬಾಳೆ ಎಲೆಯಂತೆ ಬಳುಕುತ
ಬಾಳೆ ಎಲೆಯಂತೆ ಬಳುಕುತ
ಕಿವಿಮಾತು ಹೇಳ್ಯಾವೆಂಬಂತೆ ನಿಲ್ಲಿಸ್ಯಾವೆ (ಪು–೩೩, ಕೀ–೨೬)

ಏಳಂತಸ್ತಿನ ಅರಮನೆಯ ಮೇಲೆ ಇರುವ ತೂಗಾಡುವ ಬೊಂಬೆಯ ಚಿತ್ರ ಬಾಳೆಯ ಎಲೆಯಂತೆ ಎನ್ನುವ ಅವರ ವರ್ಣನೆ ಅದರ ತೂಗಾಟವನ್ನು ಕಣ್ಣ ಮುಂದೆ ತಂದು ನಿಲ್ಲಿಸುತ್ತದೆ.

ಹೆಳವನಕಟ್ಟೆ ಗಿರಿಯಮ್ಮನವರ ಕೃತಿ 'ಲವಕುಶರ ಕಾಳಗ'ದಲ್ಲಿ ಸೀತೆಯ ಹಾಸಿಗೆಯ ಕೆಳಗೆ ರಾವಣನ ಚಿತ್ರ ಕಂಡ ರಾಮ ಕಾರಣ ಕೇಳಿದ ಸಂದರ್ಭದಲ್ಲಿ ಸೀತೆಯು ನಡೆದ ವಿಷಯವನ್ನು ಹೇಳುತ್ತಾಳೆ. ತಾಟಕಿ ನನ್ನನ್ನು ರಾವಣನ ಚಿತ್ರ ಬರೆಯಲು ಒತ್ತಾಯಿಸಿದಳು. ನಾನು ರಾವಣನ ಉಂಗುಷ್ಟ ಮಾತ್ರ ಬಲ್ಲೆ ಎಂದಾಗ ತಾಟಕಿ ಚಿತ್ರ ಬರೆಸಿದ ಬಗೆಯನ್ನು ಸೀತೆ ಹೀಗೆ ವಿವರಿಸುತ್ತಾಳೆ:

ಉಂಗುಷ್ಟವೊಂದಕ್ಕೆ ಮುಂದೆ ಪಾದವ ಬರಿ
ಹಿಂದೆ ಹಿಂಬುಡ ಮೊಣಕಾಲು/
ಚಂದದಾ ನಡುದೊಡಿ ಎದೆ ಭುಜವ ಇದ
ಹೊಂದಿಸಿ ಬರೆ ಎಂದಳವಳು

ಚಂದದಾ ಕಾಗದ ಲೆಕ್ಕಣಿಕೆ ಪಿಡಿದು ತಂದು ಕೊಟ್ಟಳು ಸೀತೆ ಕೈಗೆ
ಒಂದು ಕಾಯಕ್ಕೆ ಹತ್ತು ಸಿರಗಳ ಬರೆದಳು
ಮುಂದೆರಡು ಪಾದವ ಬರೆದಳು

ಒಂದರ ಹಿಂದೊಂದು ವರ್ಣಿಸಿ ಬರೆದಳು
ತಂದು ನಿಲ್ಲಿಸದಳಾ ರಾವಣನ
ಚಂದವಾಯಿತು ದೇವಿ ವರವ ಕೊಡೆನುತಲಿ
ಎಂದೆಂದು ಅಳಿಯದ್ದಾಗೆ
ಅಳಿದು ಉಳಿಯದಿರು ಉಳಿದು ನೀ ಕೆಡದಿರು
ಧರಿಯವಳಗೆ ಅಡಗದಿರು
ಕಿರಿಯ ಲಕ್ಷ್ಮಣದೇವ ಹೊಡೆದರೆ ಮಡಿ ಎಂದು
ವರವ ಕೊಟ್ಟಳು ಸೀತೆ ಪಠಕೆ –

ಹೀಗೆ ಸಂಭಾಷಣೆಯನ್ನು ಪದ್ಯದಲ್ಲಿ ಹಿಡಿದಿಟ್ಟಿರುವುದೊಂದು ಚಮತ್ಕಾರವಾಗಿ ಮೂಡಿ ಬಂದಿದೆ. ಈ ಪ್ರಸಂಗ ಇಡೀ ಕಾವ್ಯಕ್ಕೆ ತಿರುವು ನೀಡುತ್ತದೆ. ಇದು ಗಿರಿಯಮ್ಮನವರ ಚಿತ್ರಕ ಶಕ್ತಿಗೊಂದು ಉದಾಹರಣೆಯಾಗಿದೆ.

ವರಪಡೆದ ಪಠ ಕಾಡುವ ರಾವಣನ ಭೂತವಾಗಿ ಕುಣಿವ ಚಿತ್ರಣ:

ಮರೆ ಮೋಸವಾಯಿತು (ತಾಟಕಿ) ಮೇಲೆ
ಬಿಸುಟಳು ಪಠ
ಹಾರಿದಳು ಗಗನ ಮಂದಿರಕೆ
ಮೇಲೆ ಬಿಸುಟಳು ಪಠ
ಗಾಳಿಪಟದಂತೆ
ಕೇರಿಯೊಳಗೆ ಬಂದಿಹುದು

ನಾರೇರೆಲ್ಲರು ಕೂಡಿ ಕಟ್ಟಲು ಪಠ ಬೋ
ರೆದ್ದು ಕುಣಿದಾಡುತಿಹುದು
ಹಗಲಿರುಳಾದವು ನೆಲ ಬಾಯಿ ಬಿಟ್ಟವು
ಧರೆ ಅಸ್ತಮಾನ ತೋರಿದವು

ಉರಿಯೊಳಗಂಜದು ಧರೆಯೊಳಡಗದು
ಶರಧಿಯೊಳಗೆ ಮುಣುಗದಿಹುದು
ಹರದಿ ಜಾನಕಿ ಕೊಟ್ಟ ವರದ ಕಾರಣದಿಂದ
ಬರುತೆದ್ದು ಕುಣಿದಾಡುತಿಹುದು

ಅನಪೇಕ್ಷಿತವಾಗಿ ನಡೆದ ಘಟನೆಯೊಂದು ಸೀತೆಯ ಬದುಕಿನಲ್ಲಿ ಭೂತವಾಗಿ ಕಾಡುವ ಧ್ವನಿಯಾಗಿ ಚಿತ್ರಪಟ ಕುಣಿಯುತ್ತದೆ.

ಇದೇ ಕಾವ್ಯದಲ್ಲಿ ಮೂಡಿರುವ ಇನ್ನೊಂದು ಪ್ರಸಂಗ:

ರಾಮನು ಸೀತೆಯನ್ನು ವಧಿಸಿ ಬರುವಂತೆ ಲಕ್ಷ್ಮಣನಿಗೆ ಆಜ್ಞೆ ಮಾಡುತ್ತಾನೆ. ಆದರೆ ಲಕ್ಷ್ಮಣ ವನದಲ್ಲಿಯೇ ಬಿಟ್ಟು ಬರುತ್ತಾನೆ. ಹಾಗೆ ಬರುವಾಗ ಸೀತೆ:

ಕಾಯವನುಳುಹುವ ತಾಯಿತಂದೆದಾರು
ದಾರ ಆಸೆಯಲಿ ಬದುಕಲಿ
ರಾಮರರಸಿ ಸೀತೆ ಓಡಿಹೋದಳೆಂದು
ನಾಡೊಳಗೆ ಅಪಕೀರ್ತಿ

– ಎನಲು ಲಕ್ಷ್ಮಣನು:

ಕೆಂಡಕ್ಕೆ ಇರುವೆ ಮುತ್ತುವುದುಂಟೆ ಎಲೆ ದೇವಿ
ಚಂದ್ರಮಕೆ ರವಿ ಬೀಸಲುಂಟೆ
ಮುಂದೇಳು ಲೋಕವನ ಹೊರುವ ಜಗನ್ಮಾತೆಗೆ
ನಿಂದ್ಯಾಪಕೀರ್ತಿಗಳುಂಟೆ

ಕಿಚ್ಚನೊಳಗೆ ಸರಸ ಬೆರೆಸಿದವರುಂಟೆ
ಸರ್ಪನೊಳಗೆ ಸ್ನೇಹವುಂಟೆ 
ಸಪ್ತಸಾಗರದಲ್ಲಿ ಹುಟ್ಟಿದ ಲಕ್ಷ್ಮಿಗೆ
ಮತ್ತಪಕೀರ್ತಿಗಳುಂಟೆ – ಎಂಬುದು ಸಹಜ ಕಾವ್ಯ. ಸ್ತ್ರೀ ಸಹಜವಾದ ಅಪಕೀರ್ತಿಯ ಭಯ ಸೀತೆಯನ್ನು ಆವರಿಸಿದರೆ ಹಾಗಾಗಲು ಸಾಧ್ಯವೇ ಇಲ್ಲ ಎನ್ನುವ ಮಾತನ್ನು ಕೆಂಡಕ್ಕೆ ಇರುವೆ ಮುತ್ತುವುದು, ಕಿಚ್ಚಿನೊಳು ಸರಸವಾಡುವುದು, ಸರ್ಪದೊಂದಿಗೆ ಸ್ನೇಹ ಮಾಡುವುದು ಎನ್ನುವ ಸಮರ್ಥ ಉಪಮೆಯ ಬಳಕೆಯಲ್ಲಿ ಕಾವ್ಯದ ಸೊಗಸು ಹೆಚ್ಚಿದೆ.

ಲಕ್ಷ್ಮಣನು ಪ್ರಾಣಿಯೊಂದನ್ನು ಕಡಿದು ಆಯುಧವನ್ನು ರಕ್ತ ಮಾಡಿ ಸೀತೆಯನ್ನು ಕಡಿದೆನೆಂದು ತಂದು ರಾಮನಿಗೆ ತೋರಿಸಿ:

ವಡೆಯರೆ ಸೀತೆಯ ಕಡಿದು ಬಂದೆವು ನಾವು
ಅರಮನೆಯನು ಹೋಗಬಹುದೆ

ಕಡಿಯೆಂದ ಮಾತಿಗೆ ಕಡಿವರೇನೋ ತಮ್ಮ
ಕಡುಮುದ್ದು ಸೀತೆಯನೊಯಿದು

ನನ್ನ ಕೋಪವ ತಾಳಿ ನಿನ್ನ ಕೈಯೊಳಿಟ್ಟೆ
ಪಾಪ ಪುಣ್ಯವು ನಿನದೆಂದೆ –

ಎನ್ನುವ ಸಂದರ್ಭ ಕಟ್ಟುವಿಕೆಯಲ್ಲಿ ಕಾವ್ಯಶಕ್ತಿ ಸ್ಫೋಟಗೊಂಡಿದೆ– 'ಕಡಿಯೆಂದ ಮಾತಿಗೆ ಕಡಿಯುವರೇನೋ ತಮ್ಮ ಕಡು ಮುದ್ದು ಸೀತೆಯನೊಯ್ದು' ಎನ್ನುವ ಸಾಲುಗಳು ಸೀತೆಯ ಮೇಲಿದ್ದ ರಾಮನ ನೈಜ ಪ್ರೀತಿ ಅಭಿವ್ಯಕ್ತವಾಗಿದೆ.

'ಲವಕುಶರ ಕಾಳಗ'ದಲ್ಲಿ

೧)ಅಂದರೆ ಲಕ್ಷ್ಮಣ ಕೊಂದು ಹಾಕಿದ ಪಠ
ತಂದು ಶ್ರೀರಾಮಗೊಪ್ಪಿಸಿದ
ಪಠ ಬಿದ್ದಲ್ಲಿಗೆ ಸಂಧ್ಯೊಂದು ಮುಗಿಯಿತು
ಮುಂದೆ ವನವಾಸ ಸಂಧಿಗಳು

೨) ಸೃಷ್ಟಿಯೊಳಗೆ ಉಳ್ಳ ದಾನ ಧರ್ಮಂಗಳ
ಕೊಟ್ಟನು ಶ್ರೀರಾಮಚಂದ್ರ
ಅಶ್ವದಾನ ಗಜದಾನವ ಮಾಡಿದ
ಗೋದಾನವ ಕೊಟ್ಟ ರಾಮ

ಒಂದೆರಡು ಬಾಣವ ಲವಕುಶರು ಹಾಕಲು
ತುಂಡುತುಂಡಾಗಿ ಕೆಡವಿದರು
ಕೋಟಿ ಬಾಣ ಸೋಸಿ ಭರತ ತಾ ಹಾಕಲು

ಆಕಾಶಬಾಣ ಸೋಕಿದವು–ಮೊದಲ ಪದ್ಯದಲ್ಲಿ ಒಂದು ಸಂಧಿಯು ಮುಕ್ತಾಯವಾಯಿತು ಎಂಬುದನ್ನು ಕಾವ್ಯಾತ್ಮಕವಾಗಿ ಹೇಳಿದರೆ, ಎರಡನೇ ಉದಾಹರಣೆಯಲ್ಲಿ ಅಶ್ವಮೇಧಯಾಗದ ವರ್ಣನೆಯಿಂದ ಮುಂದಿನ ನುಡಿಯಲ್ಲಿ ಥಟ್ಟನೆ ಯುದ್ಧ ಪರಾಕ್ರಮದ ವರ್ಣನೆಗೆ ಬರುವುದು.

ನಾಟಕಗಳಲ್ಲಿ ದೃಶ್ಯ ಬದಲಾಗಿ ಇನ್ನೊಂದು ದೃಶ್ಯ ಅರಳುವ ಬಗೆಯ ಪರಿಣಾಮವನ್ನು ಉಂಟುಮಾಡುವ ತಂತ್ರವನ್ನು ಕಾವ್ಯಕ್ಕೆ ತಂದುಕೊಂಡು ರೋಚಕ ರಂಜಕತೆಯನ್ನುಂಟು ಮಾಡುವ ಗಿರಿಯಮ್ಮನ ಪ್ರತಿಭೆ ಪ್ರಶಂಸನೀಯವಾದುದು.

ಹರಪನಹಳ್ಳಿ ಭೀಮವ್ವನವರು ಜಲಕ್ರೀಡೆಯ ಹಾಡಿನಲ್ಲಿ (ಕೀ.೮೧): ಕೃಷ್ಣ ಜಲಕ್ರೀಡೆಯಾಡುವ ಗೋಪಿಕೆಯರ ಸೀರೆ ಕದ್ದು ಮರಹತ್ತಿ ಕೂರುತ್ತಾನೆ. ಹೊತ್ತಾಯಿತೆಂದು ನೀರು ಬಿಟ್ಟೆದ್ದ ನೀರೆಯರಿಗೆ ಸೀರೆ ಕಾಣುವುದಿಲ್ಲ. ಆಗ ಅವರು:

ಎಡಗೈಯ ಮರೆ ಮಾಡಿ ಬಲಗೈಯ ತಿರುವುತ
ಹುಡುಕುತ ಮಿಡುಕುತ ಹುಡಿಗೇರೆಲ್ಲ ಬಂದು
ಉಡುವೊ ಸೀರೆಗಳಿಲ್ಲ ತೊಡುವ ಕುಪ್ಪಸವಿಲ್ಲ
ತುಡುಗ ಕಳ್ಳನಾತ ಬಂದಿದ್ದಾನೆ– ಇಲ್ಲಿ ಗೋಪಿಕೆಯ ಆತಂಕ ನುಡಿನುಡಿಯಲ್ಲೂ

ಧ್ವನಿಸುತ್ತದೆ. ಈ ರಚನಾ ಕೌಶಲ ಸಹಜ ಕವಿತ್ವದ್ದು.

ಶಕುಂತಲೆ ದುಷ್ಯಂತ ಮಹಾರಾಜರ ಹಾಡಿನಲ್ಲಿ ದುಷ್ಯಂತನು ಚಿಗರೆಯೊಂದನ್ನು ಬೆನ್ನಟ್ಟಿದಾಗ:

ಅಡವಿಯಲಾರ್ಭಟಿಸುತ್ತ ಒಂದು ಚಿಗುರೆಯು
ಹೊಡಿವೋನೆನುತ ತಾನು ಎದೆಯೊಡೆದು ಓಡಿತು

ಮುಂದಿನ ಚರಣದಲ್ಲಿ ಅಂಜಿದ ಜಿಂಕೆಯು ತಪ್ಪಿಸಿಕೊಳ್ಳುವಾಗ ಮಾಡುವ ದೇಹ ವಿನ್ಯಾಸಗಳು ಕವಯಿತ್ರಿಯ ಸೂಕ್ಷ್ಮ ವೀಕ್ಷಣೆ ಹಾಗು ಗ್ರಹಿಕಾ ಶಕ್ತಿಯನ್ನು ತೋರಿಸಿಕೊಡುತ್ತದೆ. ಆದರೂ ಇದು ಕಾಳಿದಾಸನ ವಿವರಣೆಯನ್ನೆ ಹೋಲುತ್ತದೆ. ತುಲನೆಗಾಗಿ ನೋಡಿ:

ಕೊಂಕು ಗೊರಲಿಂದಂದವೆಸೆಯುವ ನೋಟವನು ಸಲ
ಸಲಕೆ ಬೆನ್ನೊಳೆ ಬರುವ ತೇರಿನೊಳೆಸೆಯುತೆ
ಬಾಣ ಬೀಳುವ ಭಯಕೆ ಬೆದರುತೆ ತನ್ನ ಕಡೆಯರೆಮೈಯ್ಯ
ಮುಮ್ಮೈಯರೆಯೊಳಡಗಿಸುತೆ
ಬಳಲಿ ಸಲೆ ಬಾಯ್ದೆರೆಯಲರೆಗಚ್ಚಿರುವ ದರ್ಭೆಯ
ನಿಡಿಗೊ ದಾರಿಯೊಳೆರಚುತುದುರಿಸುತೆ
ಎತ್ತರಕೆ ನೆಗೆದುರ್ವಿಯನು ಓರೊರ್ಮೆ ಸೋಂಕುತೆ
ನೋಡು ಬಹುತರವಿಹುದು ಬಾನೊಳೆ ಪಾರುತೆ' – ಚಿಗುರೆ ತಪ್ಪಿಸಿಕೊಳ್ಳುತ್ತದೆ.

ಅರ್ಧದೇಹದೊಳಗೆ ಅರ್ಧದೇಹ ಅಡಗಿಸಿ ಉಬ್ಬಿ
ಸೆದೆಯ ಅಗಲ ಮಾಡಿಕೊಂಡು ಓಡುತ
ಹುಲ್ಲ ತಿಂದು ತಿರುಗಿ ಬಾಯಲ್ಲಿ ಜಗಿಯದೆ
ಅಲ್ಲಿದಲ್ಲೆ ಉಗುಳುತ ನೋಡುತ ಓಡುತ.... – ಎನ್ನುವ ಚಿತ್ರ ಕಣ್ಣಿಗೆ ಕಟ್ಟುವಂತಿದೆ.

ದುಷ್ಯಂತನು ಆಶ್ರಮಕ್ಕೆ ಹೋದಾಗ ಅಲ್ಲಿ ಸಖಿಯರೊಂದಿಗೆ ಶಕುಂತಲೆ ಗಿಡಕೆ ನೀರೆರೆಯುತ್ತಿರುತ್ತಾಳೆ. (ಧ್ವ–೧೫)

ಬಡಬಡ ನಡೆಯಿರಿ ಗಿಡಕೆ ನೀರೆರೆಯೋಣ
ತಡಮಾಡದೆ ತಾರಾಮುಖಿ ಸಖಿಯೆ

ಬನ್ನಿಯ ಮರಕೀಗ ನೀರ್ಹಾಕಿ ಸು
ವನ್ನಿ (ಸುರಹೊನ್ನಿ) ಸುರಗಿ ಶಾವಂತಿಗೆ ವನಕೆ

ಅನಸೂಯ ನೀಹೋಗಿ ಹಲಸು ನೇರಲೆ ನಿಂಬೆ
ನೆನೆಸಿ ನಮ್ಮನು ಬಾಯಬಿಡುವೊ ದಾಳಿಂಬ್ರೆ

ಆದರೀ ಕ್ಯಾದಿಗೆ ಅರಳು ತಾವರೆ ಮೊಗ್ಗು ಪ್ರೇ
ಮದ (ಪ್ರಿಯಂವದ) ನೀ ನೀರ ಪ್ರೇಮದಿಂದೆರೆಯೆ

ಅರಿಶಿಣಂಜೂರ ಗಿಡ ಮೆಣಸು ಯಾಲಕ್ಕಿಗೊನೆ
ತುಳಸಿಗಿಡಕ್ಕೆ ನಾನಾಧರಿಸಿ ಹಾಕುವೆನೆ

ತುಳಸಿಗಿಡವ ನೀನು ಬೆಳೆಸಿ ನೀರ್ಹಾಕಲು
ಅರಸು ಬರುವೋ ಫಲ ಫಲಿಸೋದು ನಿನಗೆ–ಗಿರಿಯಮ್ಮ ತನ್ನ ಪರಿಸರದ ಹಿತ್ತಲ ಗಿಡಮರಗಳನ್ನು ತಂದಿರುವುದನ್ನಿಲ್ಲಿ ಗಮನಿಸಬಹುದು. ಇವು ಅನುಭವ ಸಹಜವಾದ ಸೇರ್ಪಡೆಗಳು.

ಗೆಳತಿಯರ ಸರಸ ಸಂಭಾಷಣೆಯ ಕೊನೆಯ ಸಾಲುಗಳು ಮುಂದೆ ನಡೆಯುವ ಪ್ರಸಂಗಕ್ಕೆ ಮುನ್ಸೂಚನೆಯಂತಿದೆ. ಸಖಿಯರು ಶಕುಂತಲೆಯನ್ನು ದುಷ್ಯಂತನಿಗೆ ಪರಿಚಯಿಸುವ ಪರಿ ಹೀಗಿದೆ:

ವಿಶ್ವಾಮಿತ್ರ ಮೇನಕೆಯಲಿ ಹುಟ್ಟಿದಾಣಿ ಮುತ್ತಿನ ಗೊಂಬೆ
ಎತ್ತಿ ತಂದು ನಮ್ಮ ಋಷಿಗಳು ಪುತ್ರಿಯಂತೆ ಸಾಕಿದರವಳ –

ಎನ್ನುವ ಎರಡು ಸಾಲುಗಳಲ್ಲಿ ಶಕುಂತಲೆಯ ಬದುಕನ್ನು ಹಿಡಿದಿಟ್ಟಿದ್ದಾರೆ ಭೀಮವ್ವ ಅಲ್ಪದರಲ್ಲಿ ಅನಲ್ಪವಾದದ್ದನ್ನು ಹೇಳುವುದು ಕಾವ್ಯದ ಲಕ್ಷಣ.

ಭೀಮವ್ವನು ಬರೆದಿರುವ ಬಿಡಿ ಕೀರ್ತನೆಯೊಂದು ಹೀಗಿದೆ:

ಆಸೆಯೆನಗಿಲ್ಲ ಸರ್ವೇಶ ನೆನಪಿಟ್ಟು
ವಾಸುಕಿಶಯನ ಜಗದೀಶ ನಿನ್ನೊರತೆನೆಗೆ

ನಿಗಮದಾಸೆಗೆ ಹೋಗಿ ನೀರಿನೊಳಗೆ ಮುಳುಗಿ ನೀ
ಸುಧೆಯ ಆಸೆಗೆ ಹೋಗಿ ಸುರರ ಕೈ ಸಿಕ್ಕು

ನೆಲದ ಆಸೆಗೆ ಮಣ್ಣು ಶ್ರಮವನೆ ಬಟ್ಟು
ಕೊರಳಹಾರದ ಆಸೆ(ಗೆ) ಕರುಳಬಗೆವೊಲೆ ಕೃಷ್ಣ

ಭೂಮಿಯಲಿ ಭಾಳಾಸೆ ಭುವನ ವ್ಯಾಪಿಸಿಕೊಂಡು
ಕಾಮಧೇನುವಿನ ಆಸೆಗೆ ಕಾರ್ತವೀರ್ಯಾರ್ಜುನನ ಕೊಂದು

ಸಿರಿಯ ಸೌಂದರ್ಯದಾಸೆ ಶಿವನೆ ಬಲ್ಲನು ನೆಗಹಿ
ಉದರದಾಸೆಗೆ ಅಸುರೆ ಜಗಿದು ವಿಷಮೊಲೆಯೂಡಿ –

ಹೀಗೆ ಕೃಷ್ಣನ ಲೀಲೆಗಳನ್ನು ಭಾವ ತುಂಬಿ ವರ್ಣಿಸಿದ್ದಾರೆ. ಭಾವಗೀತಾತ್ಮಕ ಗುಣವನ್ನಿದು ಹೊಂದಿದೆ.

ಪತಿದಾನಕೊಟ್ಟ ಹಾಡಿನಲ್ಲಿ ಸತ್ಯಭಾಮೆ ಕೃಷ್ಣನನ್ನು ದಾನ ಕೊಡಲು ಎಲ್ಲರನ್ನೂ ಕರೆಯುವ ಬಗೆ ಹೀಗೆ:

ಆಚಾರ್ಯರೇ ನೀವು ಬನ್ನಿ ವಾಸುದೇವನ ದಾನ
ಈ ಕ್ಷಣದಲ್ಲೆ ಕೊಡುವೆ

ವಿದ್ಯಾರ್ಥಿಗಳೆ ಬನ್ನಿ ಮುದ್ದುಕೃಷ್ಣನ
ವಿದ್ಯುಕ್ತದಲಿ ಕೊಡುವೆ

ಭಟ್ಟರೆ ನೀವು ಬನ್ನಿ ಸೃಷ್ಟಿಪತಿಯ ದಾನ
ಕೊಟ್ಟುಬಿಡುವೆ

ಯತಿಗಳೆ ನೀವು ಬನ್ನಿ ಪೃಥವಿಗೊಡೆಯ
ಹಿತದಿ ದಾನವ ಕೊಡುವೆ

ಋಷಿಗಳೆ ನೀವು ಬನ್ನಿ ಶಿಶುಪಾಲಾಂತಕನಾದ
ವಸುಧೇಶನ ನಾ ಕೊಡುವೆ
ಸುರಮುನಿಗಳು ಬನ್ನಿ ಪರಮಪುರುಷನ
ತ್ವರಿತದಿಂದಲಿ ಕೊಡುವೆ.

ಹೆಂಗಸಿನ ಆಲೋಚನೆ, ಆಮಿಷಕ್ಕೆ ಬಲಿಯಾಗಿ ದಿಕ್ಕು ತಪ್ಪುವ ಬಗೆ ಸತ್ಯಭಾಮೆಯ ಮೂಲಕ ಸೊಗಸಾಗಿ ಮೂಡಿಸಿದ್ದಾರೆ.

ಅಂಬಾಬಾಯಿಯವರು ಬರೆದಿರುವ 'ಕೃಷ್ಣ ಬಾಲಲೀಲೆ ಜೋಗುಳ' ಎನ್ನುವ ಹಾಡಿನಲ್ಲಿ ಪ್ರಕಟಗೊಂಡಿರುವ ಗೋಪಿಯ ತಾಯ್ತನವು ಹೀಗೆ ವರ್ಣಿತವಾಗಿದೆ.

ಕ್ಷೀರ ಶರಧಿಯೊಳಂದು ತಾರೇಶ ಉದ್ಭವಿಸಿ
ಕ್ಷೀರಾಬ್ಧಿ ಉಕ್ಕಿತ್ತರುಷದಲಿ ಉಕ್ಕಿದಾ ಪಾಲ್ಬಂದು
ಸೇರಿತೊ ಗೋಪಿ ಕುಚಗಳಲಿ

ಪಾಲ್ಗಡಲ ಅಂಶದ ಬಾಲೆ ಮೊಲೆಹಾಲಿನಲ್ಲಿ
ಬಾಲಕೃಷ್ಣನ್ನ ಮುಖಚಂದ್ರ/ ಬಿಂಬಕ್ಕೆ
ಹಾಲು ತಾನಾಗಿ ಉಕ್ಕಿದುದು

ಅರೆನಿದ್ದೆಗಣ್ಣಿನಲಿ ಅರೆನೋಟ ಆತುರದಿ
ಬರದಿಂದ ಪಿಡಿದು ಪಾಲ್ದರವ/ಶ್ರೀಕೃಷ್ಣ
ಜುರಜುರನೆ ಎಲ್ಲವನು ಸವಿದುಂಡ

ನಿತ್ಯತೃಪ್ತನು ಆಗ ತೃಪ್ತನಾದವನಂತೆ
ಪೆತ್ತವಳ ನೋಡಿ ನಸುನಗಲು/ಮುದ್ದಿಟ್ಟು
ಎತ್ತಿ ಕೆಳಗಿಳಿಸಿದಳು ಗೋಪಮ್ಮ – ಎಂದು ವರ್ಣಿಸಿರುವುದು ಮಾತೃವಾತ್ಸಲ್ಯದ ಉತ್ತುಂಗದಂತೆ ಕಾವ್ಯಶಕ್ತಿಯ ಉತ್ತುಂಗವೂ ಹೌದು.

ದನಕಾಯ್ದು ಬಳಲಿದ ಕೃಷ್ಣ ಅಮ್ಮನ ಬಳಿ ನಿಂತು:
ಅಮ್ಮ ಹಸಿದೆನೆ ಈಗ ಕೊಡ ಎನಗೆ ನೊರೆಹಾಲ
ದಮ್ಮನೆ ದಣಿದೆ ರಕ್ಕಸರ/ಬಡಿದು
ಹಮ್ಮೈಸಿಕೊಂಡು ಬಂದಿಹೆನೆ

ಕೊಳಲ ನಾ ಊದುತಿರೆ ಹೊಳೆಯು ಹರಿಯದೆ ನಿಂತು
ಮೊಳೆತವಾಕ್ಷಣದಿ ಕುಡಿಚಿಗುರು ಪಲ್ಲವಿಸಿ
ಗಿಳಿ ಕೋಗಿಲೆಗಳು ಕುಣಿದಾವು

ಹಗರಣದ ನಾದಕ್ಕೆ ತಗುಲಿ ಮನಗೋವುಗಳು

ಅಗಿಯದೆ ಹುಲ್ಲು ನಿಂತಾವೆ ಕೇಳುತಲಿ

ಜಗವೆಲ್ಲ ಗಾನಮಯವಾಯಿತು

– ಕೃಷ್ಣನು ದನ ಕಾಯುವ ಚಿತ್ರಣ, ನಿಸರ್ಗ ಹಾಗೂ ಪ್ರಾಣಿ ಪಕ್ಷಿಗಳು ಇವನ ಗಾನಕ್ಕೆ ತಲ್ಲೀನವಾಗುವ ಬಗೆಯು ಇಲ್ಲಿ ಸೊಗಸಾಗಿ ಮೂಡಿ ಬಂದಿದೆ.

ಓರಾಬಾಯಿ ಲಕ್ಷ್ಮಿದೇವಮ್ಮನವರು ತಮ್ಮ ರಾಮದೇವರ ಹಾಡಿನಲ್ಲಿ, ರಾಮಪೂಜೆ ಮಾಡಲು ಕೇಶವಭಟ್ಟನ ಹೆಂಡತಿ ಉದಾಸೀನ ಮಾಡಿದ್ದರಿಂದ

ಉಪ್ಪರಿಗ್ಹೋಯಿತು ತಿಪ್ಪಿ ಕುಣಿಯಾಯಿತು

ಕಪ್ಪಕಾಸುಗಳೆಲ್ಲ ಕಳೆದು ಹೋಯಿತು

ಕಪ್ಪಾಯಿತು ದೇಹ ಕಂದಿ ಕುಂದ್ಹೋಯಿತು

ಒಪ್ಪಿತ ಗಾಜಿನ ಬಳೆಯು ಕೈಯ –ಎಂದು ಸರಕ್ಕನೆ ಬಂದ ಬಡತನವನ್ನು ಪದಗಳಲ್ಲಿ ಸಮರ್ಥವಾಗಿ ಹಿಡಿದಿಟ್ಟಿದ್ದಾರೆ. ಆದಿಪ್ರಾಸ ಸಹಜವಾಗಿ ಮೂಡಿ ಕಾವ್ಯದ ಧ್ವನಿಗೆ ಒತ್ತು ನೀಡಿದೆ.

'ಸೌಗಂಧಿಕಾ ಪುಷ್ಪ' ಕೃತಿಯಲ್ಲಿ ಭೀಮನು ನಡೆದು ಬರುವುದನ್ನು ಹೀಗೆ ವರ್ಣಿಸಲಾಗಿದೆ.

ಹೆಗಲ ಮೇಲೆ ಗದೆಯನಿರಿಸಿ ಶೂರರೆದೆ ಒಡೆವಂತೆ

ಭುಜವ ಚಪ್ಪರಿಸಿ

ಎಗರಿ ಏರಿದನು ಆರ್ಭಟಿಸಿ ಭೂಮಿ

ಸಿಡಿದ್ಹೋಗುವಂತೆಜ್ಜೆ

ಯಿರಿಸಿ ಘುಡುಘುಡುಸಿ ಭೀಮ ಬರುತಿರಲು

ನಡುಮಾರ್ಗದಲಿ ಕಂಡ ಮಾರುತಿಯನು.– ಎನ್ನುವುದು ಭೀಮನ ನಡಿಗೆಯ ಅನುಭವವನ್ನು ಕಟ್ಟಿಕೊಡುತ್ತದೆ.

ಓರಾಬಾಯಿಯವರು ರಾಮಕಥೆಯನ್ನು ರಾಮನಿಗರ್ಪಿಸಿರುವ ಬಗೆಯು ಅವರ ಕಾವ್ಯಕಟ್ಟುವ ಶಕ್ತಿಯನ್ನು ತೋರಿಸುತ್ತದೆ.

ರಾಮಕಥಿಗಳೆಂಬೊ ದೊರೆಯ ಮುತ್ತುಗಳನು

ಹಾರವ ಕಟ್ಟಿ ನಾ ಹರುಷದಿಂದ

ಚಾರುಮಹಿಮ ಸೀತಾರಾಮನ್ನ ಕೊರಳೊಳು

ಹಾರವ ಕಟ್ಟಿ ನಾ ಹಾಕಿದೆ

**೨.೭ ಕೀರ್ತನೆಗಳಲ್ಲಿ ಜನಪದ ಸಂಸ್ಕೃತಿ**

ಜನಸಾಮಾನ್ಯರಿಗೆ ಸಾಹಿತ್ಯವನ್ನು ತಲುಪಿಸಲು ಮಹಿಳಾಕೀರ್ತನಕಾರರು ಜನಪದ ಮಟ್ಟುಗಳನ್ನು ಮಾಧ್ಯಮವಾಗಿಸಿಕೊಂಡರು. ತ್ರಿಪದಿ, ಕೊರವಂಜಿ ಪದ, ಕೋಲಾಟದ ಪದ, ಲಾವಣಿ, ಸುವ್ವಾಲಿ, ಒಡಪು, ಮುಂಡಿಗೆಗಳಂತಹ ಮನಮುಟ್ಟುವ ಜಾನಪದ ಮಾದರಿಗಳನ್ನು ಇವರು ತಮ್ಮ ಕೀರ್ತನ ಸಾಹಿತ್ಯಕ್ಕೆ ತಂದುಕೊಂಡರೆನ್ನಬಹುದು. ಇದರಲ್ಲಿ ಸಂಗೀತ ಗುಣಗಳಿದ್ದುದು ಇವರಿಗೆ ಅನುಕೂಲವಾಗಿ ಪರಿಣಮಿಸಿತ್ತು. ಜೊತೆಗೆ ಇದು ಮೌಖಿಕ ಪರಂಪರೆಯನ್ನು ಗಟ್ಟಿಗೊಳಿಸಿ ಅದಕ್ಕೊಂದು ಭದ್ರ

ನೆಲೆಯನ್ನು ಒದಗಿಸಿತ್ತು. ಇದನ್ನು ಮಹಿಳಾ ಕೀರ್ತನಕಾರರು ಪರಿಣಾಮಕಾರಿಯಾಗಿ ಬಳಸಿಕೊಂಡರು. ತಮ್ಮ ಭಕ್ತಿ ಸಾಹಿತ್ಯದ ಪರಿಚಾರಿಕೆಗಾಗಿಯೂ ಇದರ ಉಪಯೋಗ ಪಡೆದರು. ಹರಿದಾಸರು ತಮ್ಮ ಕೀರ್ತನೆಗಳಲ್ಲಿ ಈ ಮಾದರಿಗಳನ್ನು ಬಳಸಿದ್ದರು.

ಹಬ್ಬ ಹರಿದಿನಗಳು, ಜಾತ್ರೆ, ಉತ್ಸವಗಳು, ಬಯ್ಗುಳ, ಆಟಪಾಟಗಳು, ಕುಣಿತಗಳು, ಬಯಲಾಟಗಳು, ಮದುವೆ ಸಂಪ್ರದಾಯಗಳನ್ನು ಹಾಡುಗಳಲ್ಲಿ ತಂದರು. ಗ್ರಾಮೀಣ ಆಟಪಾಟಗಳು, ಬಯ್ಗುಳಗಳನ್ನು ಸಾಹಿತ್ಯದಲ್ಲಿ ಬಳಸಿದರು.

ಯಕ್ಷಗಾನ ಪ್ರಸಂಗ, ಲಾವಣಿ, ಕೀರ್ತನೆ, ಮದುವೆ ಹಾಡು, ತೊಟ್ಟಲು ಪದ ಇವು ದೇಸೀ ರಚನೆಗಳು ಎಂದಿದ್ದಾರೆ ಮಂಜೇಶ್ವರ ಗೋವಿಂದ ಪೈ. ಸಾಹಿತ್ಯ ಪ್ರಕಾರದಲ್ಲಿನ ಜಾನಪದೀಯ ಅಂಶವನ್ನು ಗುರುತಿಸಬೇಕಾದರೆ ಅಲ್ಲಿ ಬಳಕೆಯಾದ ಹಾಡು, ನುಡಿ, ಒಗಟು, ಜನಪದ ಕ್ರೀಡೆಗಳು, ಬೈಗುಳ, ಕಣಿ ಹೇಳುವುದು, ನಂಬಿಕೆಗಳು, ಆಣೆ ಮಾಡುವುದು, ವಿಧಿಯ ಪ್ರಸ್ತಾಪ, ಜೂಜಾಡುವಂತಹ ಜನಪದ ನಡವಳಿಕೆಗಳು, ಸಂಪ್ರದಾಯಗಳು, ಇವೆಲ್ಲವನ್ನೂ ಗಮನಿಸಬೇಕು. ಸಂಪ್ರದಾಯದ ಹಾಡುಗಳಂತೂ ಬದುಕಿನ ಎಲ್ಲ ಮುಖ್ಯ ಘಟ್ಟಗಳನ್ನು ಸಾಹಿತ್ಯದಲ್ಲಿ ಒಳಗೊಂಡು ಜನಪದ ವಾತಾವರಣವನ್ನೇ ನಿರ್ಮಾಣ ಮಾಡುತ್ತವೆ. ದೇವರನಾಮಗಳೂ ಅಷ್ಟೆ ಪೀಳಿಗೆಯಿಂದ ಪೀಳಿಗೆಗೆ ದಾಟಿ ಬಂದು ಜನಪದ ಸಾಹಿತ್ಯವೇ ಅನ್ನುವಂತಾಗಿದೆ.

ಕೀರ್ತನ ಸಾಹಿತ್ಯವು ಸಮಾಜದಲ್ಲಿ ಒಂದು ಎಚ್ಚರಿಕೆಯನ್ನು ಮೂಡಿಸಿತ್ತು. ತನ್ನಲ್ಲಿನ ಸಂಗೀತದ ಗುಣಗಳಿಂದಾಗಿ ಭಕ್ತಿ–ರಂಜನೆಯನ್ನು ನೀಡುತ್ತಿತ್ತು. ಕೀರ್ತನೆಗಳಲ್ಲಿ ಬರುವ ಸುಳಾದಿ ಉಗಾಭೋಗಗಳು ದೇಶಿ ಸಂಸ್ಕೃತಿ–ಪರಂಪರೆಗೆ ಹೊಂದಿಕೊಳ್ಳುತ್ತವೆ. ಹಾಗಾಗಿಯೇ ಯಕ್ಷಗಾನದಲ್ಲಿ ಮತ್ತು ಹರಿಕಥೆಯಲ್ಲಿ ಧಾರಾಳವಾಗಿ ಇವನ್ನು ಬಳಸುತ್ತಾರೆ. ಇಂದಿಗೂ ಹೆಳವನಕಟ್ಟೆ ಗಿರಿಯಮ್ಮ, ಹರಪನಹಳ್ಳಿ ಭೀಮವ್ವ ಮತ್ತು ನಿಡಗುರಿಕಿ ಜೀವೂಬಾಯಿಯವರ ರಚನೆಗಳನ್ನು ಯಕ್ಷಗಾನಗಳಲ್ಲಿ ಬಳಸುತ್ತಾರೆ. ಹೆಳವನಕಟ್ಟೆ ಗಿರಿಯಮ್ಮನ 'ಹೊನ್ನು ತಾ ಗುಬ್ಬಿ' ಕೀರ್ತನೆಯನ್ನು ಸಣ್ಣಾಟಗಳಲ್ಲಿ ಹಾಡುತ್ತಾರೆ.

ಮಹಿಳಾಕೀರ್ತನಕಾರರ ಸಾಹಿತ್ಯವು ಜನರ ಬಾಯಿಂದ ಬಾಯಿಗೆ ಹರಿಯುತ್ತ ಉಳಿದು ಬಂದವುಗಳು. ಇಂದಿಗೂ ಮೌಖಿಕ ಸಾಹಿತ್ಯವಾಗಿಯೇ ಹೆಚ್ಚು ಪ್ರಚಾರದಲ್ಲಿವೆ. ಕೃತಿಯು ಯಾರಿಂದಲೇ ರಚನೆಗೊಂಡಿರಲಿ ಅದು ಸಮುದಾಯದ ಬದುಕಿನ ಬಿಂಬವಾಗುವ ಹಾಗು ಅದರ ಸಂಸ್ಕೃತಿಯಾಗುವ ಗುಣ ಹೊಂದಿರುತ್ತದೆ. ಉದಾ: ದಿವಸಿ ಗೌರಿ ವ್ರತದ ಹಾಡೊಂದು ಕಾಲಕಾಲಕ್ಕೆ ಬಾಯಿಂದ ಬಾಯಿಗೆ ಬದಲಾವಣೆ ಹೊಂದಿ ಬಳಕೆಯಾಗುವುದನ್ನಿಲ್ಲಿ ಕಾಣಬಹುದು. ಓರಾಬಾಯಿ ಲಕ್ಷ್ಮಿದೇವಮ್ಮನವರ ದಿವಸಿ ವ್ರತದ ಹಾಡು ಹೀಗಿದೆ. ನುಡಿಯೊಂದನ್ನು ಮಾತ್ರ ಇಲ್ಲಿ ಉದಾಹರಿಸಲಾಗಿದೆ.

ಕತ್ರೆರಾಯನ ಪತ್ನಿಯೂ/ಸುಪುತ್ರನ್ನ ಪಡೆಯಲೂ
ಇತ್ತಳು ವಸ್ತ್ರಗಳನ್ನು ಚಂದದಿ ದ್ವಿಜರಿಗೆ ಕೊಡಲೂ

ಪಡೆದಳು ಪುತ್ರನ ಬುಧರು ಕಾಳಿಂಗನೆಂದು ಕರೆದರು
ಪರಿ ಪರಿವಿದದಿಂದ ರಾಜರು ಹರುಷಗರೆದರು

ಗಿರಿಕಾನನದಿ ಚಲಿಸಿ/ಮೃಗವ ಸಂಹರಿಸೀ
ಬಾಲಕನೂ/ಬರುತಿರಲು ಬಾಲಕನು ವ್ಯಾಘ್ರದ ದನಿ ಕೇಳಿ
ಮೂರ್ಛೆಗೈದು ಮೃತನಾದನು
(ಸ.ದಾ.ಸಾ. ಸಂಪುಟ–೧೮, ಭಾಗ–೪; ಪುಟ–೧೪೨)

ಕಣಕಟ್ಟೆಯ ಸಾವಿತ್ರಮ್ಮನವರು ಹೇಳುತ್ತಿದ್ದ ದಿವಸಿ ಗೌರಿ ಹಾಡು ಹೀಗಿದೆ:

ಕತ್ತಲಾರಾಜನಿಗೆ ಪುತ್ರಹುಟ್ಟಿದನೆಂದು
ಅರ್ಥಿಯಿಂದಲೆ ಬೇಟೆಗ್ಹೋಗುವಾಗ
ಚಿತ್ತಾರ್ಹುಲಿಯನು ಕಂಡು ಮೂರ್ಛೆಹೋದಾನೆಂದು
ಮಾತಾಪಿತರುಗಳಿಗೆ ಬಂದು ಹೇಳಿದಾರು

ಸಂಪ್ರದಾಯದ ಹಾಡುಗಳ ಸಂಕಲನವೊಂದರಲ್ಲಿ ಇರುವ ದಿವಸಿ ಗೌರಿ ಹಾಡು:

ಕತ್ಲರಾಯನ ಹೊಟ್ಟೆಯಲಿ ಪುತ್ರ ಹುಟ್ಟಿದನೆಂದು/
ವಿಪ್ರ ಸುರರೆಲ್ಲಾ ನೆರೆದಾಗ//
ಆರ್ಥಿಯಿಂದಲಿ ಹೋಗಿ ಜಾತಕವನು ಬರಿಸಿ/
ಇಟ್ಟರು ಕಾಳಿಂಗನೆಂಬ ಹೆಸರು//

ಜ್ಯೊ......................
ಕತ್ಲರಾಯನ ಮಗ ಕಾಳಿಂಗರಾಯ
ಆರ್ಥಿಯಿಂದ ಬೇಟೆಗೆ ಹೋದನು
ಚಿತ್ರದಾ ಹುಲಿಕಂಡು ಮೂರ್ಛೆಗೈದನು್

ಮಹಿಳಾಕೀರ್ತನಕಾರರ ಸಂಪ್ರದಾಯದ ಹಾಡುಗಳು ಜನಪದವಾಗಿದ್ದು ಬಾಯಿಂದ ಬಾಯಿಗೆ ಬದಲಾಗುತ್ತ ಹೋಗುವುದನ್ನು ಕಾಣಬಹುದು. ಗ್ರಾಂಥಿಕ ರೂಪವನ್ನು ಪಡೆಯುವುದಕ್ಕೆ ಮುಂಚೆ ಅದು ಜನರ ಮಾತಿನಲ್ಲಿಯೇ ಅಸ್ತಿತ್ವಗೊಂಡಿತ್ತು. ಮೊದಲು ಜನಪದದಿಂದ ಪ್ರಾರಂಭವಾಗಿದ್ದು ನಂತರ ಪ್ರೌಢ ಸಾಹಿತ್ಯವಾಗಿ ರೂಪುಗೊಳ್ಳುತ್ತದೆ. ಅನಕ್ಷರಸ್ಥ ಸ್ತ್ರೀಯರೂ ತಮ್ಮ ದಿನನಿತ್ಯದ ಕೆಲಸಗಳಲ್ಲಿ ತೊಡಗಿಕೊಂಡೇ ಜೀವನಾನುಭವಗಳಿಂದ ಕೂಡಿದ ಸಹಜ ಸಾಹಿತ್ಯ ನಿರ್ಮಾಣ ಮಾಡಿದರು. ಕಾಲಕ್ಕೆ ತಕ್ಕಂತೆ ಅನುಭವದ ವೈವಿಧ್ಯತೆಯನ್ನು ಇದು ಒಳಗೊಂಡಿವೆ.

ಶ್ರೀ ಎ.ವಿ. ನಾವಡ ಅವರು 'ಬದುಕಿನ ಬಗೆಗೆ ತೀವ್ರವಾದ ಶ್ರದ್ಧೆ, ಸುತ್ತಲಿನ ಎಲ್ಲ ವಿವರಗಳನ್ನು ತನ್ನಲ್ಲಿ ದಾಖಲಿಸಿಕೊಂಡಿರುವಿಕೆ, ವಸ್ತು ಮತ್ತು ಅಭಿವ್ಯಕ್ತಿಯಲ್ಲಿ ಮುಕ್ತ ಸ್ವಾತಂತ್ರ್ಯ, ಸಾಂಸ್ಕೃತಿಕ ಚಟುವಟಿಕೆಗಳ ದಾಖಲಾತಿ ಇವನ್ನು ಜನಪದ ಮನೋಧರ್ಮ ಎನ್ನಬಹುದು'[೧೦] ಎಂದಿದ್ದಾರೆ.

ಈ ದೃಷ್ಟಿಯಿಂದ ನೋಡಿದಾಗ ಮಹಿಳಾ ಕೀರ್ತನಕಾರರ ಕೀರ್ತನೆಗಳು ಈ ಮೇಲಿನ ಎಲ್ಲ ಜನಪದ ಮನೋಧರ್ಮವನ್ನು ಒಳಗೊಂಡು ಬೆಳೆದಿದೆ.

**ಕೀರ್ತನೆಗಳಲ್ಲಿ ಬರುವ ಜನಪದ ಸಾಹಿತ್ಯ ರೂಪಗಳು**

ಮಹಿಳಾಕೀರ್ತನಕಾರರ ಕೀರ್ತನೆಗಳಲ್ಲಿ ಭಾಷೆ, ಶರೀರ, ತಂತ್ರ, ತತ್ವಗಳಲ್ಲಿ ಜನಪದ ಸತ್ವವು ಕಂಡು ಬರುತ್ತದೆ. ಸಂಪ್ರದಾಯದ ಹಾಡುಗಳು ಮತ್ತು ಕಥನ-ಕೀರ್ತನೆಗಳು, ಜೋಗುಳದ ಹಾಡುಗಳು, ದೇವರ ಉತ್ಸವದ ಹಾಡುಗಳು, ಧಾರ್ಮಿಕ ಬದುಕಿನ ಚಿತ್ರಣ, ಕೋಲುಪದ ಮುಂತಾದವುಗಳನ್ನು ಮಹಿಳಾಕೀರ್ತನಕಾರರು ಸಹಜವಾಗಿ ಕೀರ್ತನೆಗಳಲ್ಲಿ ಬಳಸಿದ್ದಾರೆ. ಹಾಗಾಗಿ ಇವು ಲೋಕಪ್ರಿಯತೆಯನ್ನು ಪಡೆದುಕೊಂಡಿವೆ.

ಜನಪದ ಛಂದಸ್ಸೆಂದು ಖ್ಯಾತವಾದ ತ್ರಿಪದಿಯಲ್ಲಿ ಈ ಕೀರ್ತನಕಾರರ ರಚನೆಗಳಿವೆ. ಸಮುದಾಯದ ಸಂಸ್ಕೃತಿಯು ಈ ಕೀರ್ತನೆಗಳಲ್ಲಿ ಕೆನೆಗಟ್ಟಿದೆ. ಧರ್ಮವು ಇದರ ಮೂಲ ಪ್ರಚೋದನೆ. ಜನಜೀವನದ ಮಧ್ಯದಿಂದ ಅರಳಿದ ಕೀರ್ತನೆಗಳು ಅವರ ಬಾಳನ್ನು ಸಂತೃಪ್ತಿಯ ಕಡೆಗೆ ಒಯ್ದು ಅಲ್ಲಿಯೇ ವಿಕಸನಗೊಂಡಿತು. ಸಾರ್ಥಕ ಸಾಹಿತ್ಯವೆಂದರೆ ಇದೇ. ಸಾಮಾನ್ಯ ಜನರ ಜೀವನವನ್ನು ಮುಟ್ಟಿ ಅವರ ಬಾಳನ್ನು ಬೆಳಗಿಸುತ್ತದೆ. ಇದನ್ನು ಕೀರ್ತನೆಗಳು ಸಾಧಿಸಿವೆ. ಜನಪದದ ವಿವಿಧ ಪ್ರಕಾರಗಳಾದ ಕೋಲಾಟ, ಜೋಗುಳದ ಹಾಡು, ಉತ್ಸವದ ಹಾಡುಗಳು, ಹಬ್ಬದ ಹಾಡು, ಮದುವೆಯ ಹಾಡು, ಸೋಬಾನೆಯ ಹಾಡು, ಕಥನ ಸಂಕೀರ್ತನೆಗಳು, ತತ್ವ ಪದಗಳು ಮಹಿಳಾಕೀರ್ತನಕಾರರ ಕೀರ್ತನೆಗಳಲ್ಲಿ ಕಂಡು ಬರುತ್ತವೆ. ವ್ರತಕಥೆಗಳು ಕಥನ ಕೀರ್ತನಗಳಾಗಿವೆ.

ಗಲಗಲಿ ಅವ್ವನವರು ರಚಿಸಿರುವ ಪ್ರಾರ್ಥನಾ ಪದ್ಯವೊಂದರಲ್ಲಿ ಜನಪದ ಗೀತೆಯೊಂದರ ಸೊಗಡು ಕಾಣಿಸುತ್ತದೆ. ಇದು ತ್ರಿಪದಿಯಲ್ಲಿ ರಚಿತವಾಗಿದೆ.

ಆಕಾಶಕಭಿಮಾನಿ ಶ್ರೀಕಂಠನ ವರಪುತ್ರ
ಏಕದಂತನೆ ವಿಘ್ನೇಶ
ಏಕದಂತನೆ ವಿಘ್ನೇಶ ನಿನ್ನ ಪಾದ ಏಕಚಿತ್ತದಲೆ
ಬಲಗೊಂಬೆ ವಂದಿಸುವೆ ಶ್ರೀಗಣರಾಯ

ನೆನೆಯಕ್ಕಿ ನೆನೆಗಡಲೆ ಗೊನೆಬಾಳೆಹಣ್ಣು
ಘನವಾದ ಚಿಗಳಿ ತಂಬಿಟ್ಟು
ಘನವಾದ ಚಿಗಳಿ ತಂಬಿಟ್ಟು ತಂದಿಹೆ ಗಣಪತಿ
ಮತಿಯ ಕರುಣಿಸು ವಂದಿಸುವೆ (ಪು-೧೧, ಕೀ-೮)

ಹರದಿ ಸರಸ್ವತಿಗೆ ಮುತ್ತಿನ ಉಡಿಯಕ್ಕಿ
ಅರಳು ಮಲ್ಲಿಗೆ ನೆನೆದಂಡೆ
ಅರಳು ಮಲ್ಲಿಗೆ ನೆನೆದಂಡೆ ತಂದಿಹೆ
ತಡೆಯದೆ ನಮಗೆ ವರವ ಕೊಡು (ಪುಟ-೧೩, ಕೀ-೯)

ಬೀಸುವ ಕಲ್ಲಿನೊಡನೆ ಒಡನಾಟ ನಮ್ಮ ಜನಪದ ಹೆಣ್ಣುಮಕ್ಕಳಿಗೆ ಸಜಹವಾದದ್ದು. ಶುಭಕಾರ್ಯಗಳಲ್ಲಿ ಬೀಸುವ ಕಲ್ಲಿನ ಪೂಜೆಯ ನಂತರವೇ ಮಂಗಳ ದ್ರವ್ಯಗಳ ಸಿದ್ಧತೆ ನಡೆಸುವುದು. ನಮ್ಮ ಜನಪದ ಕಾವ್ಯಗಳಲ್ಲಿ ಬೀಸುವ ಕಲ್ಲಿನ ಪದಕ್ಕೆ ವಿಶಿಷ್ಟ ಸ್ಥಾನವಿದೆ.

ಎಲ್ಲ ಮಂಗಳ ಕಾರ್ಯ ಕಲ್ಲು ಒರಳು

ಪೂಜೆ ಬಲ್ಲ ನಾರಿಯರು ನಗದಿರಿ

ಬಲ್ಲ ನಾರಿಯರು ನಗದಿರಿ ಲಕ್ಷ್ಮಿವಲ್ಲಭ

ಇದಕೆ ಒಲಿಯಲಿ (ಪು-೧೨೭, ಕೀ-೯೮) – ಎನ್ನುತ್ತಾ ಸುಭದ್ರೆ ದ್ರೌಪದಿಯರು ಬುಕ್ಕಿಟ್ಟನ್ನು ಬೀಸಿದರಂತೆ.

**ಕೋಲಾಟ ಪದ**

ಕೋಲು ಹುಯ್ಯುವಾಗ ಹೇಳುವ ಹಾಡುಗಳೇ ಕೋಲುಪದ. ಕೋಲು ಹುಯ್ಯುವ ತಾಳಕ್ಕೆ ತಕ್ಕಂತೆ ಸಾಹಿತ್ಯ ಸೃಷ್ಟಿಯಾಗುತ್ತದೆ. ಛಂದಸ್ಸು ಕೂಡಾ ಅದನ್ನೇ ಅನುಸರಿಸುತ್ತದೆ. ಸಾಮಾನ್ಯವಾಗಿ ಒಂದೇ ಸಾಲು ಪುನರುಕ್ತಿಗೊಳ್ಳುತ್ತದೆ. ಪೋಷಕರ ಆಸಕ್ತಿಗೆ ಅನುಗುಣವಾಗಿ ಆಶು ಕವಿತೆಗಳು ನಿರ್ಮಾಣವಾಗಿ ಸಾಹಿತ್ಯವನ್ನು ಬೆಳೆಸುತ್ತದೆ. ಕೋಲಾಟದ ಪದಗಳು ಪ್ರಾರ್ಥನೆ, ಪೌರಾಣಿಕ ಕಥೆಗಳು, ದೇವರ ಸ್ತುತಿಗಳು, ಸಂಸಾರದ ಸುಖ-ದುಃಖಗಳು, ಹಾಸ್ಯ, ವಿಡಂಬನೆ, ಒಗಟಿನ ಸವಾಲುಗಳು ಮುಂತಾದ ವಸ್ತುಗಳನ್ನು ಒಳಗೊಂಡಿರುತ್ತದೆ. ನವರಸಗಳು, ಅಭಿವ್ಯಕ್ತಿಗೊಳ್ಳುವ ಮಾಧ್ಯಮವಾದರೂ ವೀರರಸ ಪ್ರಧಾನವಾದುದು. ಕೋಲಾಟವು ಸಹ ದೇವರ ಪ್ರಾರ್ಥನೆಯಿಂದಲೇ ಪ್ರಾರಂಭವಾಗುತ್ತದೆ. ಇದು ಗಣಪತಿ, ಸರಸ್ವತಿಯ ಅನುಗ್ರಹವನ್ನು ಬೇಡುತ್ತದೆ. 'ಕೋಲು ಕೋಲೆನ್ನ ಕೋಲೇ' ಎನ್ನುವ ಪಲ್ಲವಿಯ ಹಾಗೆ 'ತಂದನ್ನಿ ತಾನು ತಂದೆ ನಾನು....ತಾ ನಂದನ್ನಿ ತಾನು ತಂದೆ ನಾನು' ಎನ್ನುವುದನ್ನು ಪಲ್ಲವಿಯಾಗಿ ಕೋಲಾಟಕ್ಕೆ ಬಳಸುವುದುಂಟು.

ಗಲಗಲಿ ಅವ್ವನವರ ಒಂದು ಕೋಲಾಟ ಪದವಿದೆ. ಅದೊಂದು ಮುಯ್ಯದ ಪದದಲ್ಲಿ ಬರುವ ಕಥೆಯನ್ನು ಪ್ರಾರಂಭಿಸುವ ಮುಂಚೆ ಹಾಡುವ ಪ್ರಾರ್ಥನೆ ಪದವಾಗಿ ಮೈದಾಳಿದೆ. ಸುಭದ್ರೆ, ದ್ರೌಪದಿಯರು ಶ್ರೀಕೃಷ್ಣನ ದರ್ಶನಕ್ಕಾಗಿ ಮುಯ್ಯದ ನೆಪ ಮಾಡಿಕೊಂಡು ದ್ವಾರಕೆಗೆ ಬರುವರು. ಮುಯ್ಯದ ಹಾಡನ್ನು ರಚಿಸಲು ಗುರುವಿನ ಆಶೀರ್ವಾದವನ್ನು ಬೇಡಿರುವುದನ್ನು ಕಂಡಾಗ ಇವರಲ್ಲಿಯೂ ಗುರುಪರಂಪರೆ ಸ್ತುತಿಗೆ ಆದ್ಯತೆ ದೊರೆತಿದೆ ಎಂಬುದು ಮನವರಿಕೆಯಾಗುತ್ತದೆ. ಸತ್ಯಭಾಮ ಮತ್ತು ರುಕ್ಮಿಣಿಯರನ್ನು ಹೊಗಳುವ ಇನ್ನೊಂದು ಹಾಡಿನಲ್ಲಿ ಕಣ್ಣಿಗೆ ಕಟ್ಟುವಂತಹ ಚಿತ್ರಕ ಶಕ್ತಿ ಇದೆ. ಕೃಷ್ಣನ ಬಹುನಾಮಗಳನ್ನು ಪ್ರಾಸಕ್ಕೆ ಬಳಸಿಕೊಂಡಂತಿದೆ. (ಕೋಲೆಂದು ಕೋಮಲೆಯರೆಲ್ಲಾ ಅಮ್ಮಯ್ಯ)

'ಹಸ್ತಿನಾಪುರದಾಗ ಹಸ್ತಿ ಮೊದಲಾದ' ಎನ್ನುವ ಕೋಲಾಟ ಪದದಲ್ಲಿ ದೇವಾನುದೇವತೆಗಳು ಶ್ರೀಕೃಷ್ಣನ ದರುಶನಕ್ಕಾಗಿ ಬರುವ ವರ್ಣನೆ ಇದೆ. ಆ ದಂಪತಿಗಳ ಹೆಸರುಗಳು, ವಾಹನಗಳು, ಆಯುಧಗಳ ಆಕರ್ಷಕ ವಿವರಣೆಗಳು, ಕೃಷ್ಣನ ವಿವಿಧ ಹೆಸರುಗಳು ಸಹಜವಾಗಿ ಮೂಡಿ

ಬಂದಿವೆ. (ಇಂದ್ರ–ಶಚಿ, ಅಗ್ನಿ–ಸ್ವಾಹ, ಯಮ–ಶ್ಯಾಮತಿ, ವರುಣ–ಭಾಗೀರಥಿ, ಮಾರುತ–ಪ್ರವಾಹಿ, ಕುಬೇರ–ವಿತ್ತಸತಿ, ಈಶ್ವರ–ಸತಿದೇವಿ) ಪಾಂಡವರು ಮೆರವಣಿಗೆಯಲ್ಲಿ ಹೊರಟ ಚಿತ್ರಣ ಮನೋಹರವಾಗಿ ಮೂಡಿ ಬಂದಿದೆ.

'ಕೋಲನಾಡುತ ಬಂದ ಬಾಲೆಯರು ಕೈ ಮುಗಿದು...'ಎನ್ನುವ ಕೋಲಾಟ ಪದದಲ್ಲಿ ಮೇಲುಗಿರಿ ವಾಸ ಗೆಲುಸೆಂದು ಅವನನ್ನೆ (ಕೃಷ್ಣನನ್ನೇ) ಬೇಡುವುದು ವಿಶೇಷವಾಗಿದೆ. ಹರಿದಾಸರ ಶ್ರೇಷ್ಠತೆಯನ್ನು ಹೇಳಲಾಗಿದೆ. ನಾಗಸ್ವರ, ಢಕ್ಕೆಯಂತಹ ಜನಪದ ವಾದ್ಯಗಳನ್ನು ಕೀರ್ತನೆಗಳಲ್ಲಿ ತರಲಾಗಿದೆ.

'ಗಂಗೆಗೆ ಸ್ವರ್ಗ ತಂಗಿಗೆ ರನ್ನದ ಕೋಲಾ ಕೋಲೆನ್ನಿರೆ....' ಎನ್ನುವ ಹಾಡಿನಲ್ಲಿ ಮುಯ್ಯವ ಗೆಲ್ಲಿಸಲು ಗೋದಾವರಿ, ಕೃಷ್ಣ, ಕಾವೇರಿ ನದಿಗಳ ಪ್ರಾರ್ಥನೆಯನ್ನು ಮಾಡಲಾಗಿದೆ.

ಜನಪದದ ಪ್ರಧಾನ ಶಕ್ತಿ ಪ್ರಕೃತಿ. ನದಿಯನ್ನು (ಗಂಗೆಯನ್ನು) ಇಲ್ಲಿ ಪ್ರಾರ್ಥಿಸಿರುವುದು ಗಲಗಲಿ ಅವ್ವನವರ ಜನಪದ ಮನೋಧರ್ಮವನ್ನು ಸೂಚಿಸುತ್ತದೆ. 'ರಂಗನಂಗದ ಸಂಗ ಸುಖ ನೋಡೆ ಅಂಗನೆ....' ಎನ್ನುವ ಹಾಡಿನಲ್ಲಿ ಶ್ರೀಕೃಷ್ಣನಿಗೆ ವಂಕಿ, ಕಂಕಣ, ಕಡಗ, ಒಡ್ಯಾಣ, ಕ್ಯಾದಿಗೆಯ ಹೂಗಳಿಂದ ಅಲಂಕರಿಸಿ ಅಂಗನೆಯರು ದೀಪ–ಆರತಿ ಬೆಳಗಿ ತಾಂಬೂಲ ಸಮರ್ಪಿಸುವ ಚಿತ್ರಣವಿದೆ. ಇದು ವಿಷ್ಣು (ಕೃಷ್ಣ) ಅಲಂಕಾರ ಪ್ರಿಯನೆಂಬ ಲೋಕಖ್ಯಾತಿಗೆ ಪೂರಕವಾಗಿದೆ. ಇದು ಭೀಮನ ಪ್ರತಾಪವನ್ನು, ಬೃಹನ್ನಳೆಯ ವೇಷ ಧರಿಸಿದ ಅರ್ಜುನನನ್ನು ಹೆಣ್ಣಲ್ಲ, ಗಂಡಲ್ಲ ಎಂದು ಛೇಡಿಸುವ ಹಾಸ್ಯದ ವಸ್ತುವನ್ನು ಒಳಗೊಂಡಿದೆ.

'ಕೋಲಾ ಕೋಲೆನ್ನ ಕೋಲಾಕೃಷ್ಣ' ಎನ್ನುವ ಹಾಡಿನಲ್ಲಿ ಕೃಷ್ಣನಿಗೆ ಮತ್ತು ಸಭಾಜನರಿಗೆ, ಪ್ರದ್ಯುಮ್ನನಿಗೆ, ಮುತ್ತೈದೆಯರಿಗೆ, ಬಂದ ಜನಕ್ಕೆ, ದಾಸಿಯರಿಗೆ, ಆಳುಗಳಿಗೆ ಉಡುಗೊರೆ ನೀಡುವುದಲ್ಲದೇ ರಂಗಯ್ಯನ ಗಿಳಿಗೆ, ರುಕ್ಮಿಣಿಯ ಬೆಕ್ಕಿಗೆ ಉಡುಗೊರೆ ನೀಡುವ ಚಿತ್ರಣ ಅವ್ವನ ಪ್ರತಿಭೆಗೆ ಸಾಕ್ಷಿಯಾಗಿದೆ.

'ಶ್ರೀಶನು ಪತ್ನಿಯರ ಹಾಸ್ಯವ ಮಾಡುತ....' ಎನ್ನುವ ಕೋಲು ಪದ ಹಾಸ್ಯಮಿಳಿತವಾದದ್ದು. ರುಕ್ಮಿಣಿ, ಸತ್ಯಭಾಮೆಯರ ಶೌರ್ಯವನ್ನು ಪ್ರಸ್ತಾಪಿಸುತ್ತ 'ಹೇಳಕೇಳದಲೆ ಹಿರಿಯರ ಕೃಷ್ಣಯ್ಯ ಭೋಳೆತನದಿ ಮದುವ್ಯಾದ' ಎಂದು ಛೇಡಿಸಿಸುತ್ತಾರೆ. 'ಯಾಕೋ ಪಾರ್ಥನ ಹೆಸರು ಹೋತೆ ಮಾತಿನ ಕೃಷ್ಣ' ಎನ್ನುವ ಕೋಲು ಪದದಲ್ಲಿ ಅರ್ಜುನನೊಂದಿಗೆ ಹೋಲಿಸುವ ನೆವದಲ್ಲಿ ಅವನ ಲೀಲೆಗಳನ್ನು ವರ್ಣಿಸುತ್ತಾಳೆ. ಹೆಂಡಿರ ಪುಣ್ಯದಿಂದ ತಂದೆಯ ಈ ಭಾಗ್ಯ ಎನ್ನುವ ಒಂದು ಮಾತು ಸಾಕು. ಮಹಾಭಾರತದ ಕಥೆಯಾದ್ದರಿಂದ 'ಕೋಲ ಕೋಲೆನ್ನ ಕೋಲೆ' ಎಂದು ಪ್ರಾರಂಭವಾಗುವ ಕೋಲು ಪದದಲ್ಲಿ 'ಲೋಕನಾಯಕ ವ್ಯಾಸ ಮುನಿಗಳಿಗೆ ಏಕೋ ಭಾವದಿಂದ ನಮಿಸಿ, ವಾಕ್ಯಗೆಲಿಸೆಂದು' ಕೋರುತ್ತಾಳೆ. 'ಮೃಢನ ಮಗನ ಮೊದಲೆ ನೆನೆದು' ನುಡಿಯ ಗೆಲಿಸೆಂದು ಕೋರುತ್ತಾಳೆ. 'ಮಂಥರ ಧರನೆಂಬು ಕೋಲ' ಎಂಬುವ ಹಾಡಿನಲ್ಲಿ ಹದಿನಾರು ಸಾವಿರ ನಾರಿಯರು ಕೃಷ್ಣನ ಗೆಲುವಿಗಾಗಿ ಪ್ರಾರ್ಥಿಸುವ ವಿಶೇಷವಾದ ಕೋಲು ಪದವೊಂದಿದೆ: 'ಮುತ್ತು ರತ್ನದ ಕೋಲ ಮತ್ತಮಲ್ಲೀಗೆ ಕೋಲ, ತತ್ವ ಸೂಸ್ಯಾಡುವ ಕೋಲ ಮಿತ್ರೆಯರು ಹರ್ಷದಿ ಎತ್ತಾಡಿ

ಕೋಲು ಹಾಕುವ ಅತ್ಯಂತ ಸೊಬಗಿನ ಕೋಲ' ಎನ್ನುವ ಹಾಡಿನಲ್ಲಿ ಗೋಪಿಕಾ ಸ್ತ್ರೀಯರು ಸಂಸಾರವನ್ನು, ತಮ್ಮ ಇರುವಿಕೆಯನ್ನೆ ಮರೆತು ನಲ್ಲೆಯರೆಲ್ಲರು ತಮ್ಮ ವಲ್ಲಭರನ್ನು ಬಿಟ್ಟು ಅಲ್ಲೆ ರಾತ್ರಿಲೆ ಒರಗಿದರು 'ಕೋಲು ಕೋಲೆನ್ನ ಕೋಲೆ' ಎನ್ನುವಲ್ಲಿ ಅರ್ಪಿತ ಭಕ್ತಿ ಶೃಂಗಾರ ರಸ ಪೋಷಣೆ ಇದೆ.

'ಕೋಲು ಕೋಲೆನ್ನ ಕೋಲ..... ಶ್ರೀಹರಿಯ ನೆನೆದೇವಾ ಕೋಲ' ಎನ್ನುವ ಕೋಲು ಪದದಲ್ಲಿ ಕೃಷ್ಣನ ದಶಾವತಾರವನ್ನು ವರ್ಣಿಸಿದೆ.

ಹೀಗೆ ಕೋಲು ಪದದಲ್ಲಿ ತರಬಹುದಾದ ಎಲ್ಲ ಜೀವಂತಿಕೆಯನ್ನು, ಪ್ರಯೋಗವನ್ನು ಅವ್ವನವರು ಕೋಲು ಹುಯ್ಯುವವರ ಉತ್ಸಾಹದಂತೆಯೇ ಬಳಸಿಕೊಂಡಿದ್ದಾಳೆ.

ಹರಪನಹಳ್ಳಿ ಭೀಮವ್ವನವರ 'ಕೋಲು ಕೋಲೆನ್ನ ಕೋಲೆ' ಹನ್ನೊಂದು ನುಡಿಗಳ ಕೋಲು ಪದ. ಇದರಲ್ಲಿ ದ್ವಿಪದಿಯಲ್ಲಿ ದಶಾವತಾರವು ವರ್ಣಿತವಾಗಿದೆ.

ನಂಜನಗೂಡು ತಿರುಮಲಾಂಬೆಯವರ 'ಕೋಲನಾಡೆ ಲೋಲಾಕ್ಷಿ ಬಾರೆ' ಎನ್ನುವ ಹಾಡಿನಲ್ಲಿ ವಿಭವದೇಳಿಗೆಗೆ (ಸ್ವಾತಂತ್ರ್ಯ)ಗಾಗಿ ಭಾರತಾಂಬೆಯ ಭವ್ಯ ಮೂರುತಿಗೆ ಜಯವಾಗಲೆಂದು ಸಾರಿದ್ದಾರೆ. ಹರಿದಾಸಿಯರಲ್ಲಿ ಆಧುನಿಕತೆಯು ಮೈಗೂಡಿದಂತೆ ಯುಗ ಧರ್ಮಕ್ಕೆ ಅನುಗುಣವಾಗಿ ವಸ್ತುವಿನ ಆಯ್ಕೆಯಲ್ಲಿಯೂ ಬದಲಾವಣೆ ಮಾಡಿಕೊಳ್ಳುವ ಮನೋಭಾವನೆಯನ್ನು ಕಾಣಬಹುದು. ಈ ಹಾಡಿನಲ್ಲಿ ಕಂಡುಬರುವ ಈ ವಸ್ತುಭಾವವು ಸ್ವಾತಂತ್ರ್ಯ ಚಳುವಳಿಯ ಪ್ರಭಾವವಿದೆಯೆಂಬುದನ್ನು ಕಲ್ಪಿಸಲು ಅವಕಾಶವಿದೆ.

'ಬಾಲೆಯರೆಲ್ಲರು ಬನ್ನಿರೆ ರನ್ನದ ಕೋಲ್ಗಣೀವ ಪಿಡಿದು' ಎನ್ನುವ ಪದದಲ್ಲಿ ಕನ್ನಡ ತಾಯಿಯ ಕನ್ನೆಯರಾವು....ಎನ್ನುತ ಸಮಗ್ರ ಭಾರತವನ್ನು ಗಿರಿಸುತೆಯು ಕೇಳಿಕೊಳ್ಳುವಂತೆ ಬರೆದಿರುವ ಕೋಲು ಪದ, 'ಲೀಲೆಯಿಂ ಬಾ ಲೋಲಲೋಚನೆ ಕೋಲನಾಡುವ' ಎನ್ನುವ ಪದದಲ್ಲಿ 'ಶೀಲದಿಂದೆಮಾಳ್ವ ಭೂಪಗೆ ಜಯವ ಪಾಡುವೆ' ಎನ್ನುತ ಭೂಮಿ ಆಳುವ ದೊರೆಗೆ ಜನ್ಮಭೂಮಿಗೆ ಜಯವೆನ್ನುವ ಪದವು ಕೀರ್ತನಮಾರ್ಗದಲ್ಲಿ ಭಿನ್ನವಾಗಿ ಕಾಣುತ್ತದೆ.

ವಸ್ತುವಿನ ಆಯ್ಕೆ ದೃಷ್ಟಿಯಿಂದ ವೈವಿಧ್ಯತೆಯನ್ನು ಅರುಹುವ ಕೋಲಾಟದ ಹಾಡುಗಳನ್ನು ಮಾತ್ರ ಇಲ್ಲಿ ಉದಾಹರಿಸಲಾಗಿದೆ.

**ಗಾದೆ**

ಗಾದೆಯು ಜನಪದ ಸಾಹಿತ್ಯದಲ್ಲಿನ ಒಂದು ಪ್ರಕಾರ. ಜನರು ತಮ್ಮ ಜೀವನದ ಅನುಭವಗಳನ್ನು ಅಡಕವಾದ ಮಾತುಗಳಲ್ಲಿ ಹಿಡಿದಿಟ್ಟಿರುವುದು ಗಾದೆ. ಇದಕ್ಕೆ ನಾಣ್ನುಡಿ ಎಂದೂ ಕರೆಯುತ್ತಾರೆ. ದೇವುಡು ನರಸಿಂಹ ಶಾಸ್ತ್ರಿಗಳು ತಮ್ಮ 'ಕರ್ನಾಟಕ ಸಂಸ್ಕೃತಿ' ಎಂಬ ಪುಸ್ತಕದಲ್ಲಿ 'ತಲೆ ತಲಾಂತರದಿಂದ ಶೇಖರವಾಗಿರುವ ಅನುಭವವು ಯಾವನಾದರೊಬ್ಬನ ಬಾಯಿಯಲ್ಲಿ ಮಾತಾಗಿ ಹೊರ ಬೀಳುವುದು. ಜನ ಆ ಮಾತಿನ ಸೊಬಗಿಗೂ ಅದರ ಹಿಂದಿರುವ ಅನುಭವಕ್ಕೂ ಮೆಚ್ಚಿ ಅದನ್ನು ನಾಣ್ಯವನ್ನಾಗಿ

ಸಂಗ್ರಹಿಸುವರು. ಜ್ಞಾತಾಜ್ಞಾತವಾಗಿ ಅದನ್ನು ಸಾಧ್ಯವಾದಂತೆಲ್ಲ ಅವರಿವರೆನ್ನದೆ ತಿದ್ದುವರು; ಉಜ್ಜಿ ಹೊಳಪಿಕ್ಕುವರು. ಹೀಗೆ ಸಿದ್ಧವಾದ 'ಮೊಹರೆ ವಾಕ್ಯ'ವು ಗಾದೆ ಎನಿಸಿಕೊಳ್ಳುತ್ತದೆ. ಇದು ಸಂಕ್ಷಿಪ್ತವಾಗಿ, ಸೂಚ್ಯವಾಗಿ ಧ್ವನಿ ಶಕ್ತಿಯನ್ನು ಹೊಂದಿರುತ್ತದೆ. ಕೆಲವೊಮ್ಮೆ ಸಾಹಿತ್ಯಕ್ಕೆ ಜೀವಕಳೆಯನ್ನು ತಂದು ಕೊಡುತ್ತದೆ. ಅಲ್ಲದೆ ಹೊಸ ಅರ್ಥವೊಂದನ್ನು ಹೊಳೆಸುತ್ತದೆ. ಸಂತೋಷ, ದುಃಖ, ಸಮಸ್ಯೆ, ವ್ಯಂಗ್ಯ, ವಿಡಂಬನೆಯ ಭಾವವನ್ನು ಸ್ಫುರಿಸುತ್ತದೆ' ಎಂದಿದ್ದಾರೆ. ಪ್ರತಿಯೊಂದು ವಿಷಯದಲ್ಲಿಯು ಗಾದೆಯೆನ್ನುವುದು ಇದ್ದೆ ಇರುತ್ತದೆ. ಜಾನಪದದ ಮೂಲಸೆಲೆಯಾದ ಇಂತಹ ಗಾದೆಗಳನ್ನು ಕೂಡಾ ಮಹಿಳಾ ಕೀರ್ತನಕಾರರು ತಮ್ಮ ಕೃತಿಗಳಲ್ಲಿ ಬಳಸಿದ್ದಾರೆ. ಹೆಳವನಕಟ್ಟೆ ಗಿರಿಯಮ್ಮನು ತನ್ನ 'ಲವ-ಕುಶರ ಹಾಡು' ಕೃತಿಯಲ್ಲಿ ಲವ-ಕುಶರು ಭರತನನ್ನು ಎದುರಿಸುವ ಸಮಯದಲ್ಲಿ ನಡೆಯುವ ಸಂಭಾಷಣೆಯಲ್ಲಿ ತಾಯಿ ಮಾತನು ಕೇಳಿ ಸೋದರರಿಬ್ಬರು ಅರಣ್ಯವನ್ನು ಚರಿಸುತಿರಲು...ನಿಮ್ಮ ತಾಯಿ ನಿಮ್ಮ ಪಡೆದುದುಂಟಾದರೆ ನಮ್ಮ ಪಡೆದವಳು ನಮ್ಮ ತಾಯಿ 'ಕಣ್ಣೆರಡು ಮುಚ್ಚಿ ಬೆಕ್ಕು ಹಾಲು ಕುಡಿದರೆ ಮುನ್ನಿನವರು ಕಾಣದಿಹರೆ' (ಬೆಕ್ಕು ಕಣ್ಣು ಮುಚ್ಚಿ ಹಾಲು ಕುಡಿದರೆ ಲೋಕ ಕಣ್ಣು ಮುಚ್ಚಿರುವುದಿಲ್ಲ) ಎಂದು ಲವಕುಶರು ಭರತನನ್ನು ಛೇಡಿಸುತ್ತಾರೆ. ಸಂಭಾಷಣೆಯ ಗಟ್ಟಿತನವನ್ನು ಹೆಚ್ಚಿಸಲು ಸಾಂದರ್ಭಿಕವಾಗಿ ಗಿರಿಯಮ್ಮ ಈ ಗಾದೆಯನ್ನಿಲ್ಲಿ ಬಳಸಿಕೊಂಡಿದ್ದಾಳೆ. ಇದೇ ಹಾಡಿನಲ್ಲಿ ಇನ್ನೊಂದು ಕಡೆ ಲಕ್ಷ್ಮಣನು ಸೀತೆಯನ್ನು ಕಾಡಿಗೆ ಬಿಟ್ಟು ಬಂದ ಮೇಲೆ ರಾಮನು ಲಕ್ಷ್ಮಣನನ್ನು ವಿಚಾರಿಸುತ್ತಾನೆ. ಆ ಗಳಿಗೆಯ ಸೀತೆಯ ಮನಸ್ಥಿತಿಯನ್ನು ವರ್ಣಿಸುತ್ತ ಲಕ್ಷ್ಮಣ 'ಸಿಟ್ಟೀನಾ ವ್ಯಾಳ್ಯಾಗೆ ಮೂಗು ಕೊಯ್ಯಿದುಕೊಂಡರೆ ಅಣ್ಣಾ ಶಾಂತ ವ್ಯಾಳ್ಯಾಕ್ಕೆ ಹತ್ತಬಹುದೆ?' (ಕೋಪದಾಗೆ ಮೂಗು ಕೊಯ್ಕೊಂಡ್ರೆ ಶಾಂತದಾಗೆ ಬಂದೀತಾ?) ಎಂದು ಪ್ರಶ್ನಿಸುತ್ತಾನೆ. ಸಾಂದರ್ಭಿಕವಾಗಿ ಇದು ಮಾತುಗಳಿಗೆ ತೂಕವನ್ನು ತಂದು ಕೊಟ್ಟಿದೆ.

ಸ್ತ್ರೀ ಹತ್ಯೆಯ ಬಗ್ಗೆ ಲಕ್ಷ್ಮಣನು ಯೋಚಿಸಿದಾಗ ರಾಮನ ಬಾಯಿಯಲ್ಲಿ 'ಆಳು ಕೊಂದ ಪಾಪ, ಅರಸಿ ಮಾಡಿದ ಪಾಪ, ಭೂಮಿಯನಾಳುವ ರಾಯರಿಗೆ' ಎಂದು ಹೇಳಿಸಿದ್ದಾಳೆ. ಉದ್ದಾಳಿಕನ ಕಥೆಯಲ್ಲಿ ಗಂಡು ನೊಣವು ಸುಳಿಯದಂತೆ ಸಾಕಿದ್ದ ಮಗಳು ಗರ್ಭವತಿ ಎಂದು ತಿಳಿದಾಗ ತಾಯಿಯು 'ಮಿಸುನಿಯ ಅಲಗೆಂದು ಬಸಿರೊಳಗಿಡುವರೆ ವಶವಲ್ಲದಂತ ಮೂಗುತಿಯ' ಎನ್ನುತ್ತಾಳೆ. ಇಲ್ಲಿ ಗಾದೆ ಮಾತಿನ ಬಳಕೆಯಿಂದ ಮಾತಿಗಷ್ಟು ಹರಿತ ಒದಗಿದೆ.

ಹರಪನಹಳ್ಳಿ ಭೀಮವ್ವನವರು ಕೀರ್ತನೆಯೊಂದರಲ್ಲಿ 'ಕೆಟ್ಟೆನೆಂದರಮನೆ ಸೇರಿಕೊಂಬುವುದಕಿಂತ ಅಟ್ಟಡವಿಯಲ್ಲಾವಾಸವೇ ಲೇಸು' (ಪುಟ-೩೬೦), 'ಪುತ್ಥಳಿ ಮನೆಯಲ್ಲೇ ಇರಲು ಹಿತ್ತಾಳೆ ಬಯಸುವರೇ' (ಪುಟ-೧೦೩) ಎನ್ನುವ ಗಾದೆಗಳನ್ನು ಬಳಸಿದ್ದಾರೆ. ಬದುಕಿನ ಅನುಭವದಿಂದ ಸಹಜವಾಗಿ ಮೂಡಿಬಂದ ಹೋಲಿಕೆಗಳಿವು.

**ಶಕುನಗಳು**

ಶಕುನಗಳು ಲೋಕಪ್ರಿಯತೆಯನ್ನು ಪಡೆದಿವೆ. ೨೧ನೇ ಶತಮಾನದಲ್ಲೂ ಶಕುನ ನೋಡಿ ಕಾರ್ಯಮಾಡುವ ಪರಿಪಾಟ ನಡೆದುಬಂದಿದೆ. ಇದು ಎಲ್ಲ ವರ್ಗದ ಜನರಲ್ಲಿಯೂ

ಮನೆಮಾಡಿಕೊಂಡಿದೆ. ಮೂಢನಂಬಿಕೆಯೆಂದರೂ ಇದು ನಂಬಿಕೆಯಿಂದ ದೂರ ಉಳಿದಿಲ್ಲ. ಹಾಗಾಗಿ ಇದರಿಂದ ನಮ್ಮ ಕೀರ್ತನಕಾರ್ತಿಯರು ಹೊರತಾದವರಲ್ಲ.

ಗಲಗಲಿ ಅವ್ವನವರ ಮುಯ್ಯದ ಹಾಡೊಂದರಲ್ಲಿ ಸುಭದ್ರೆ ಮುಯ್ಯವನ್ನು ಒಯ್ಯುಲು ತೀರ್ಮಾನಿಸಿ ಪಾಂಡವರಲ್ಲಿ ತನ್ನ ಅಳಲನ್ನು ತೋಡಿಕೊಳ್ಳುತ್ತಾಳೆ. ಒಳ್ಳೆಯ ಕೆಲಸವೊಂದಕ್ಕೆ ಹೊರಟಾಗ ಶುಭವಾರ, ತಿಥಿ, ನಕ್ಷತ್ರಗಳನ್ನು ನೋಡುವ ಸಂಪ್ರದಾಯವಿದೆ. ಹಾಗಾಗಿ ಶುಭ ಶಕುನ ನೋಡಲು ಪಾಂಡವರು ಗುರುಗಳಾದ ಬೃಹಸ್ಪತಿಯನ್ನು ಕರೆದು ಶುಭದಿನವನ್ನು ಸೂಚಿಸಲು ಕೇಳಿಕೊಳ್ಳುತ್ತಾರೆ.

ಈಗಿನ ವ್ಯಾಳಕ್ಕೆ ಜಾಗು ಮಾಡದೆ ಕೃಷ್ಣಿ
ಹೋಗ ನೀ ಗೆದ್ದು ಬರತೀಯೆ ಚಪಲಾಕ್ಷಿ

ಹೋಗ ನೀ ಗೆದ್ದು ಬರತೀಯೆ... (ಪುಟ–೭, ಕೀ. ೪೪) ಬೃಹಸ್ಪತಿಯು ಶುಭ ನುಡಿಯುತ್ತಾನೆ. ಹಾಗಾಗಿ ಸರಿರಾತ್ರಿಯಲ್ಲಿಯೇ ಮುಯ್ಯ ತೆಗೆದುಕೊಂಡು ಹೊರಡುವ ಪಾಂಡವರ ಮನೋಧರ್ಮವು ಶಕುನಗಳಿಗೆ ಅವರು ನೀಡುತ್ತಿದ್ದ ಪ್ರಾಧಾನ್ಯತೆಯನ್ನು ಕಾಣಿಸುತ್ತದೆ.

ಇನ್ನೊಂದು ಕೀರ್ತನೆಯಲ್ಲಿ,

ವೀರಾಧಿವೀರ ಧರ್ಮರಾಯ ಮುಂದಕ್ಕೆ ಬರಲು
ನೀರಿನ ಕುಂಭ ಎದುರಾಗ
ನೀರಿನ ಕುಂಭ ಎದುರಾಗ ರಂಗಯ್ಯನೆ
ಸೂರಿ ಬಿಡವೋನೆ ದಯವನೆ

ಬಲ್ಲರು ಹೊರಡಲು ಹಲ್ಲಿ ಮಾತಾಡಿದವು
ಫುಲ್ಲನಾಭನ ದಯ ಚಲ್ಲುವುದೆನುತಲಿ
ಫುಲ್ಲನಾಭನ ದಯ ಚಲ್ಲುವುದೆನುತಲಿ
ವಾಲಿ ಗಂಟಿಟ್ಟ ನಕುಲನು

ಅಂಗಳಕೆ ಬರುತಿರೆ ಮಂಗಳವಾದ್ಯಗಳಾದವು
ಹಂಗ ಹಾರಿದವು ಎಡಗಡೆ
ಹಂಗ ಹಾರಿದವು ಎಡಗಡೆ ರಂಗಯ್ಯ
ಆಲಿಂಗನ ಕೊಡುವೋನು ನಿಜವೆಂದು

ತೇರಿನ ಬೀದಿಯ ದ್ವಾರದಿ ಬರುತಿರೆ
ಕಾಗೆ ಹಾರಿದವು ಬಲಗಡೆ
ಕಾಗೆ ಹಾರಿದವು ಬಲಗಡೆ ರುಕ್ಮಿಣಿ
ಸೂರಿ ಬಿಡುವಳು ದಯವನ್ನೆ....

ಮುಯ್ಯ ಕೊಡುವಾಗ ಧರ್ಮರಾಯನು ಕೃಷ್ಣನ ಅರಮನೆಗೆ ನಡೆದು ಬರುತಿರಲು 'ನೀರಿನ

ಕುಂಭ ಎದುರಾಯಿತು' ಆದ್ದರಿಂದ ಹೋದ ಕೆಲಸದಲಿ ಜಯವಾಗಿ ರಂಗನು ದಯವನ್ನು ಕರುಣಿಸುತ್ತಾನೆ ಎನ್ನುವ ನಂಬಿಕೆಯು ಈ ಶಕುನದಲ್ಲಿ ವ್ಯಕ್ತವಾಗಿದೆ. (ಪ್ರಯಾಣ ಹೊರಟಾಗ ತುಂಬಿದ ಕೊಡ ಎದುರಾದರೆ ಹೊರಟ ಕೆಲಸದಲ್ಲಿ ಜಯ ದೊರೆಯುವುದೆಂಬ ನಂಬಿಕೆ ಇಂದಿಗೂ ಅನೇಕರಲ್ಲಿದೆ. ಅದರಲ್ಲಿಯೂ ಇದು ಹಳ್ಳಿಗರಲ್ಲಿ ಹೆಚ್ಚು.)

ಧರ್ಮರಾಯನ ಜೊತೆ ಎಲ್ಲರೂ ಹೊರಟಾಗ 'ಹಲ್ಲಿ ಮಾತಾಡಿದವು' ಇದರಿಂದ ರಂಗನ ದಯ ಚೆಲ್ಲುವುದು ಎನ್ನುತ್ತಾರೆ. ಹಲ್ಲಿ ಲೊಚಗುಟ್ಟುವುದು ಪ್ರಕೃತಿ ಸಹಜವಾದದ್ದಾದರೂ ಜನಪದವು ತಾವು ಅಂದುಕೊಂಡ ವಿಚಾರ, ಹಿಡಿದ ಕಾರ್ಯಗಳ ಜಯಾಪಜಯಗಳು ಹಲ್ಲಿ ಯಾವ ದಿಕ್ಕಿನಲ್ಲಿ ಕೂಗಿತು, ಎಷ್ಟು ಸಲ ಕೂಗಿತು ಎನ್ನುವುದರ ಮೇಲೆ ನಿರ್ಧರಿಸಿಕೊಳ್ಳುತ್ತಾರೆ. ಹಲ್ಲಿ ಲೊಚಗುಟ್ಟುವುದು ಶಕುನಗಳಲ್ಲೊಂದು.

ಎಲ್ಲರು ಅಂಗಳದಲ್ಲಿ ಕಾಲಿಡುತಲೇ ಮಂಗಳವಾದ್ಯಗಳು ಪ್ರಾರಂಭವಾದವು. 'ಎಡಭುಜವು ಹಾರಿತು' ರಂಗಯ್ಯನು ನಮ್ಮನ್ನು ಆಲಂಗಿಸಿಕೊಳ್ಳುವನು' ಎಂದಿದ್ದಾಳೆ.

ಮನೆಯಿಂದ ಕಾರ್ಯ ನಿಮಿತ್ತ ಹೊರಗೆ ಹೊರಟಾಗ ಮಂಗಳವಾದ್ಯಗಳು ಕೇಳಿ ಬಂದರೆ ಎಡಭುಜವು ಹಾರಿದರೆ, ಎಡಗಣ್ಣು ಹಾರಿದರೆ ಹೋದ ಕೆಲಸ 'ಆಗುವುದೆಂಬ' ನಂಬಿಕೆ, ಹೆಂಗಸರಿಗೆ ಎಡಭಾಗವು, ಗಂಡಸರಿಗೆ ಬಲ ಭಾಗವು ಹಾರಿದರೆ ಒಳ್ಳೆಯದೆಂಬ ನಂಬಿಕೆ ಇದೆ. ಇಲ್ಲಿ ಚಲುವೆಯರು ಮಲ್ಲಮರ್ಧನನ್ನು ನೋಡಲು ಹೊರಟಿರುವುದರಿಂದ ಶುಭವಾಗುವುದೆಂಬ ಸೂಚನೆ ವ್ಯಕ್ತವಾಗಿದೆ.

ಅವರು ತೇರಿನ ಬೀದಿಗೆ ಬರುತ್ತಲೆ ಕಾಗೆಗಳು ಬಲಗಡೆಗೆ ಹಾರುತ್ತದೆ, ರುಕ್ಮಿಣಿಯು ದಯವನ್ನೆ ಸುರಿದು ಬಿಡುತ್ತಾಳೆ ಎನ್ನುತ್ತಾರೆ. ಕಾಗೆಗಳು ಒಂಟಿಯಾಗಿ ಕಾಣಿಸಿಕೊಂಡರೆ ಅಪಶಕುನದ ಮತ್ತು ದುಃಖದ ಸಂಕೇತ. ಆದರೆ ಗುಂಪಾದ ಕಾಗೆಗಳು ಶುಭ ಸಂಕೇತ, ಶುಭ ಸಂದೇಶವನ್ನು ತರುವ ಸಂಕೇತ.

ಶಕುನಗಳ ಬಗ್ಗೆ ಅವ್ವನವರಿಗೆ ಬಹಳ ಆದರ ಮತ್ತು ನಂಬಿಕೆಯಿದ್ದಂತಿದೆ. ಅವರು ಸಾಂದರ್ಭಿಕವಾಗಿ ಶಕುನದ ಹಾಡನ್ನು ಮುಯ್ಯಕೊಡುವ ಹಾಡಿನ ಭಾವಕ್ಕೆ ಇಂಬಾಗಿ, ಸಮರ್ಥವಾಗಿ ಬಳಸಿಕೊಂಡಿದ್ದಾರೆ;

ಶಕುನವೆ ಬಲು ಶಕುನವೆ ಸಖ ಕೃಷ್ಣನ
ಮುದ್ದು ಮುಖವ ಕಾಂಬುವೆ ನೀಗ
ಹಾಲು ಮೊಸರಿನ ಕುಂಭ ಮೇಲಾದ ಘೃತ ಬೆಣ್ಣೆ
ಸಾಲುಸಾಲಾಗಿ ಎದುರಾಗಿ ಇಂದಿವರಾಕ್ಷಿ
ಸಾಲುಸಾಲಾಗಿ ಎದುರಾಗಿ ರಂಗನ ಕಾಲಿಗೆ
ಶಿರವ ನೀಡುವಂತೆ ಇಂದೀವರಾಕ್ಷಿ

ಕೋಟಿ ಜನರು ಕೂಡಿ ತ್ವಾಟ ಪಟ್ಟಿಗಳ
ದಾಟಿ ನೀಟಾದ ಹಂಸ ಗಿಳಿವಿಂಡು
ಹಾಟಕಾಂಬರನ ದಯವಿದು ಇಂದೀವರಾಕ್ಷಿ

ಜತ್ತಾಗಿ ದ್ವಾರಕೆಯ ಹತ್ತಿರ ಬರುತಿರೆ
ಮುತ್ತಿನ ಹೇರು ಇದುರಾಗಿ ಇಂದೀವರಾಕ್ಷಿ
ಮುತ್ತಿನ ಹೇರು ಇದುರಾಗಿ ರಂಗಯ್ಯ

ಹಸ್ತಲಾಘವ ಕೊಡುತಾನೆ ಇಂದೀವರಾಕ್ಷಿ

ಸಾವಿರ ಅಂಗಡಿ ಸಾಲಾದ ಬಜಾರ
ನೇರಳೆ ಹಣ್ಣು ಇದುರಾಗಿ ಇಂದೀವರಾಕ್ಷಿ
ನೇರಳೆ ಹಣ್ಣು ಇದುರಾಗಿ ರಂಗಯ್ಯ
ಮೇಲು ಕರುಣದಲಿ ಕರೆಸುವನು ಇಂದೀವರಾಕ್ಷಿ

ಹಸ್ತಿನಾಪುರದವರು ಸಪ್ತಪ್ರಾಕಾರ ದಾಟಿ
ಮತ್ತೆ ಶ್ರೀಗಂಧ ಇದುರಾಗಿ ಇಂದೀವರಾಕ್ಷಿ
ಅರ್ಥಿಲೆ ಎಂದು ಕರೆವನು ಇಂದೀವರಾಕ್ಷಿ

ವ್ಯಾಲಾಶಯನನ ಮನೆಯ ಏಳು ಬಾಗಿಲದಾಟಿ
ಬಾಳೆಯ ಹಣ್ಣು ಇದುರಾಗಿ ಇಂದೀವರಾಕ್ಷಿ
ಬಾಳೆಯ ಹಣ್ಣು ಇದುರಾಗಿ ರಂಗಯ್ಯ
ಕೇಳೋನು ಕ್ಷೇಮ ಕುಶಲವ ಇಂದೀವರಾಕ್ಷಿ

ನಾಗಶಯನನ ಮನೆಯ ಬಾಗಿಲು ಹೊಗಲಿಕ್ಕೆ
ನಾಗಸಂಪಿಗೆಯ ಮುಡಿದವರು ಇಂದೀವರಾಕ್ಷಿ
ನಾಗಸಂಪಿಗೆಯ ಮುಡಿದವರು ಬಂದರು ಈಗ
ರಾಮೇಶನ ದರುಶನಕೆ ಇಂದೀವರಾಕ್ಷಿ

ಹಾಲು, ಮೊಸರು, ಬೆಣ್ಣೆ ಮತ್ತು ತುಪ್ಪದ ಗಡುಗೆಗಳು ಸಾಲು ಸಾಲಾಗಿ ಎದುರಾದವು. ಹಂಸ-ಗಿಳಿವಿಂಡುಗಳು ಎದುರಾದವು ಇದು ಕೃಷ್ಣನ ದಯೆ ದೊರಕುವುದೆಂಬ ಶುಭ ಶಕುನ. ಮುತ್ತಿನ ರಾಶಿಯೆ ಎದುರಾಗಲು, ಬಜಾರನ್ನು ದಾಟಿ ಬರುವಾಗ ನೇರಳೆ ಹಣ್ಣು, ಶ್ರೀಗಂಧ, ಬಾಳೆಯಹಣ್ಣು, ನಾಗಸಂಪಿಗೆಯು ಎದುರಾಗುತ್ತದೆ. ಶ್ರೀಕೃಷ್ಣನ ದರುಶನವು ಆಗುವುದೆಂಬ ಶುಭ ಸೂಚನೆ ಇದಾಗಿದೆ.

ಹೆಳವನಕಟ್ಟೆ ಗಿರಿಯಮ್ಮನವರ 'ಲವ ಕುಶರ ಕಾಳಗ' (ಇದಕ್ಕೆ 'ಪಟದ ಸಂಧಿ' ಎನ್ನುವ ಹೆಸರು ಇದೆ.) ದಲ್ಲಿ ಬೇಟೆಯಾಡಿ ದಣಿದ ರಾಮ-ಲಕ್ಷ್ಮಣರು ಮರದ ನೆರಳಿಗೆ ಬಂದಾಗ ರಾಮನು ಲಕ್ಷ್ಮಣನ ತೊಡೆಯ ಮೇಲೆ ತಲೆಯಿಟ್ಟು ಮಲಗುತ್ತಾನೆ. ಮುಂದೆ ನಡೆಯುವ ದುರಂತಕ್ಕೆ ಸಾಕ್ಷಿಯಾಗಿ ಅವನಿಗೊಂದು ಕನಸು ಬೀಳುತ್ತದೆ. ತನಗೆ ಬಿದ್ದ ಕನಸನ್ನು ಲಕ್ಷ್ಮಣನಿಗೆ ಹೀಗೆ ಹೇಳುತ್ತಾನೆ. (ನುಡಿ-೨೭)

ಇಂದುವದನೆಮುಡಿ ಪಿಡಿದೆಳೆವೋದುಕಂಡೆ
ತುಂಡರಾವಣ ಕುಣಿಯೋದು ಕಂಡೆ
ಇಂದು ನೀ ಸೀತೆಯ ಕರೆದೊಯಿದು ಕಾನನದಿ
ದಿಂಜಾರಿಳಿಸೋದು ಕಂಡೆ

ಸೀತೆಯ ಮುಡಿಯನ್ನು ತಾಟಕಿಯು ಹಿಡಿದೆಳೆಯುತ್ತಿರುವ ದೃಶ್ಯ, ಲಕ್ಷ್ಮಣನು ಮತ್ತೆ ಸೀತೆಯನ್ನು ಅರಣ್ಯಕ್ಕೆ ಕರೆದುಕೊಂಡು ಹೋಗಿ ರಥದಿಂದ ಇಳಿಸುತ್ತಿರುವ ದೃಶ್ಯವನ್ನು ಕಂಡೆ. ಇದು ಬರಿ ರಾಮನ ಕನಸಾಗಿ ಉಳಿಯುವುದಿಲ್ಲ. ಮುಂದೆ ಸೀತೆಯ ಬದುಕಿನಲ್ಲಿ ನಡೆಯುವ ದುರಂತಕ್ಕೆ

ಅಶುಭ ಶಕುನವೆ ಆಗುತ್ತದೆ. ಹಾಗೆಯೇ ಸಂಭವಿಸಲಿರುವ ಘಟನೆಗಳಿಗೆ ಮುನ್ಸೂಚನೆಯನ್ನು ಕೊಡುತ್ತದೆ. ಹಗಲುಗನಸು ನಿಜವಾಗದು ಎನ್ನುತ್ತಾರೆ. ಆದರೆ ಇಲ್ಲಿ ಅದು ಮುಂದೆ ನಿಜವಾಗುತ್ತದೆ.

ತಾಟಕಿಯು ಕೊರವಂಜಿಯ ವೇಶದಲ್ಲಿ ಅರಮನೆಗೆ ಬರುತ್ತಾಳೆ. ಜಾನಕಿಗೆ ರಾವಣನ ಚಿತ್ರ ಬರೆಯುವಂತೆ ಒತ್ತಾಯಿಸುತ್ತಾಳೆ. ಒಪ್ಪದಿರಲು ಭಸ್ಮವನ್ನು ತೊಡೆದು ಅವಳನ್ನು ವಶಪಡಿಸಿಕೊಂಡು ಚಿತ್ರ ಬರೆಸುತ್ತಾಳೆ. ಅಂದು ಜಾನಕಿಗೆ 'ಮಂಚದಲಿ ಒಬ್ಬಳೆ ಮಲಗಿದ್ದ' ಕೆಟ್ಟ ಕನಸು ಬೀಳುತ್ತದೆ. ಇದು ಮುಂದೆ ರಾಮನನ್ನು ಬಿಟ್ಟು ಒಬ್ಬಳೆ ಬದುಕುವ ಅವಳ ಬದುಕಿಗೆ ಸೂಚನೆಯಾಗುವ ಶಕುನ. ಎಂದಿನಂತೆ ಸೀತೆ ರಾಮನೊಡನೆ ಸಭೆಗೆ ಬಂದರೂ ಮನಸ್ಸು ಎಂದಿನಂತಿರಲಿಲ್ಲ. ಶ್ರೀರಾಮನ ಜೊತೆ ಸಿಂಹಾಸನವೇರುವಾಗ ಅದು ಇಬ್ಬಗೆಯಾಗುತ್ತದೆ. ಇದು ಅಶುಭ ಶಕುನವೆಂದೆ ಎಲ್ಲರಿಗೂ ಮನವರಿಕೆಯಾಗುತ್ತದೆ. ರಾಮ-ಸೀತೆಯರಿಗೆ ಮುಂದೆ ಸಂಭವಿಸುವ ಘಟನೆಯನ್ನು ಸಾಕ್ಷೀಕರಿಸುತ್ತದೆ.

ಹೀಗೆ ಶಕುನವೆಂಬ ಜನಪದ ನಂಬಿಕೆಯನ್ನು ತಮ್ಮ ಪ್ರತಿಭೆಯ ಝಳಕಿನಲ್ಲಿ ಮಹಿಳಾಕೀರ್ತನಕಾರರು ಸಹಜವಾಗಿಯೆ ಬಳಸಿಕೊಂಡಿದ್ದಾರೆ.

**ಜನಪದ ವಾದ್ಯಗಳು**

ಗಾಯನ-ಸಂಗೀತವೆಂದರೆ ವಾದ್ಯ ಪರಿಕರಗಳು ಇರಲೇಬೇಕು. ತಾಳ ವಾದ್ಯಗಳದು ಘನವಾದ ಕೂಡಿಕೆ. ಇದರಿಂದ ಕಳೆ. ಅದರಲ್ಲಿಯೂ ಜನಪದವಾದ್ಯಗಳು ಏರುಧ್ವನಿ. ಇವುಗಳ ಗತ್ತು ಇವುಗಳದೇ ಆಗಿದೆ. ಉತ್ಸಾಹದಿಂದ ಅತ್ಯುತ್ಸಾಹಕ್ಕೆ ಒಯ್ಯುವ ಶಕ್ತಿ ಇವುಗಳಲ್ಲಿ ಅಂತರ್ಗತವಾಗಿದೆ. ಇವುಗಳನ್ನು ಮಹಾಕವಿಗಳೂ ತಮ್ಮ ಕಾವ್ಯಗಳಲ್ಲಿ ಬಣ್ಣಿಸಿದ್ದಾರೆ ಎಂದ ಮೇಲೆ ಗಲಗಲಿ ಅವ್ವನಂತಹವರು ಬಿಟ್ಟಾರೆಯೇ? ಅವ್ವನವರ ಈ ಪದ್ಯದಲ್ಲಿ ಸಾಲು ಮೆರವಣಿಗೆಯಾಗಿ ಬಂದಿವೆ. (ಸ.ದಾ.ಸಂ.೭, ಪುಟ-೧೮೫)

ದುಷ್ಟ ದೈತ್ಯರ ಶಿರವ ಕುಟ್ಟಿ ತಮಸ್ಸಿಗೆ ಹಾಕಿ
ಅಟ್ಟಹಾಸದಿಂದ **ಭೇರಿ** ಪಟ್ಟಾಗಿ ಹೊಯಿಸುವರಾರೆ

ಕ್ರೂರ ದೈತ್ಯರ ಶಿರವ ಸೇರಿಸಿ ತಮಸ್ಸಿಗೆ
ಭೋರೆಂಬೊ **ತುತ್ತೂರಿ** ಕಾಳಿ ಹಿಡಿಸುವರಾರೆ

ವೆಂಕಟನ ದ್ವೇಷ ಸಂಕಟ ಬಿಡದೆಂದು
ಡಂತರದಿಂದಲೆ **ಡಂಕಿ**ಯ ಹೊಯಿಸುವರಾರೆ

ಭಾಗವತರ ಸುಖ ಹೀಗೆ ಉನ್ನತ ಎಂದು
ಈಗ ತೋರುವ ಭರದಿ **ನಾಗಸ್ವರ** ಹಿಡಿಸುವರಾರೆ

ಅಂಭುಜನಾಭನ ನಂಬಲು ಸುಖವಿತ್ತು ಬಂಬಂಬೆನುತ
**ಶಂಖ**ವ ಸಂಭ್ರಮದಿ ಹಿಡಿಸುವರಾರೆ

ಕಂಸಾರಿ ನಿರ್ಜರ ಹಂಸನೀ ಹೌದೆಂದು
ಸಂಶಯ ಬಡಿಸುತ **ಕಂಸಾಳೆ** ಹೊಯ್ಸುವರಾರೆ

ಎಷ್ಟೆಷ್ಟು ಕಾಲಕ್ಕೂ ಕೃಷ್ಣಗೆ ದೊರೆ ಎಂದು
ಶ್ರೇಷ್ಠಾದ **ಜಾಂಗಟೆ** ಘಟ್ಯಾಗಿ ಹೊಯಿಸುವರಾರೆ

ತಂದೆ ರಾಮೇಶನ ಹೊಂದಲು ಸುಖವೆಂದು
ಸುಂದರ **ಕೊಳಲನೆ** ಮುಂದೆ ಊದಿಸುವರಾರೆ

ಈ ವಾದ್ಯಗಳನ್ನು ಪರಿಚಯಿಸುವುದಕ್ಕಾಗಿಯೇ ಈ ಪದವನ್ನು ಕಟ್ಟಿದಂತಿದೆ. ಈ ವಾದ್ಯಗಳ ಬಳಕೆ ಈಗ ಆಧುನಿಕ ಬೇಡಿಕೆಯಲ್ಲಿ ಮರೆಯಾಗುತ್ತಿದೆ. ಇದಕ್ಕೆ ಕಾರಣ ವೃತ್ತಿವಂತಿಕೆಯ ವ್ಯವಸ್ಥೆಯಲ್ಲಿ ಉಂಟಾಗಿರುವ ಶಿಥಿಲೀಕರಣ, ಶಿಷ್ಯತ್ವ ಸಿಗದೇ ಇರುವುದು. ಹೀಗಾಗಿ ಮುಂದಿನ ದಿನಮಾನಗಳಲ್ಲಿ ಇಂತಹ ದಾಖಲೆಗಳು ಸಂಗೀತ ವಾದ್ಯ ಚರಿತ್ರೆಯನ್ನು ಬರೆಯುವಾಗ ಆಕರವಾಗಬಹುದು. ಇತರೆ ಮಹಿಳಾ ಕೀರ್ತನಕಾರರು ತಮ್ಮ ಬಿಡಿ ಕೀರ್ತನೆಗಳಲ್ಲಿ ಅಲ್ಲಲ್ಲಿ ಈ ವಾದ್ಯಗಳನ್ನು ಸಾಂದರ್ಭಿಕವಾಗಿ 'ನುಡಿಸಿದ್ದಾರೆ'.

'ತಂಬೂರಿ ಮಾಡಿಸಿ ತರಲಿಲ್ಲವಮ್ಮ' ಎನ್ನುವ ಪದದಲ್ಲಿ ಮುಯ್ಯಿ ಕೊಡುವ ಸಂದರ್ಭದಲ್ಲಿ ಕೃಷ್ಣನು ಧರ್ಮರಾಯನಿಗೆ ಬೇಡಿದ ಜವಳಿ, ಬಂದವರಿಗೆಲ್ಲ ಉಡುಗೊರೆ, ನೆರೆದ ಜನಕ್ಕೆಲ್ಲ ರತ್ನದ ಉಡುಗೊರೆ ಕೊಟ್ಟರು. ದ್ರೌಪದಿಯು ಬೇಡಿದ ತಂಬೂರಿ ತಂದುಕೊಡಲಿಲ್ಲವೆಂಬ ಹೀಗಳಿಕೆಯ ವಸ್ತುವನ್ನೊಳಗೊಂಡ ಪದ್ಯವಿದು.

ಗಿರಿಯಮ್ಮನವರ 'ಸೀತಾಕಲ್ಯಾಣ'ದಲ್ಲಿ ದಶರಥನ ಪರಿವಾರವು ಜನಕನ ಮನೆಗೆ ಹೊರಟಾಗ ವಾದ್ಯಗಳು ಮೊಳಗುತ್ತವೆ. ಇದು ಔಚಿತ್ಯಪೂರ್ಣವಾದ ವರ್ಣನೆಯಲ್ಲ. ಏಕೆಂದರೆ ಸಂತೋಷದ ಸಂಭ್ರಮಾಚರಣೆಯಲ್ಲಿ ಬಳಸಿದ ವಾದ್ಯಪರಿಕರಗಳು ಯುದ್ಧಭೂಮಿಯ ನೆನಪನ್ನು ತರುತ್ತವೆ.

ಹೊಡೆವ ತಂಬಟ ಭೇರಿ ನಿಸ್ಸಾಳ
ಬಿಡದೆ ಚೀರುವ ಹೆಗ್ಗಾಳೆಗಳು
ಸಿಡಿಲು ಗರ್ಜಿಸುವಂತೆ ಪಂಚಮವಾದ್ಯದಿ
ನಡೆದರು ಜನಕರಾಯನ ಮನೆಗೆ

ಮುಂದಿನ ಕೀರ್ತನಕಾರರಲ್ಲೂ ಇದೇ ವಾದ್ಯಗಳ ಬಳಕೆಯಿದೆ.

**ಜನಪದರ ಆಭರಣ**

'ಆಭರಣ ಪ್ರಿಯತೆ'ಗೆ ಸ್ತ್ರೀ ಪುರುಷರಲ್ಲಿ ಭೇಧವಿಲ್ಲ, ಇಂದಿಗೂ ಈ ಎರಡು ವರ್ಗಗಳವರು ಆಭರಣ ಪ್ರಿಯರೆ ಆಗಿರುತ್ತಾರೆ. ಆದರೆ ಇದರಲ್ಲಿ ಹೆಂಗಸರದು ಮೇಲುಗೈ. ಆಭರಣ ಚರಾಸ್ತಿಗಳಲ್ಲಿ ಒಂದು. ಮಾನವರು ಮಾತ್ರವಲ್ಲ, ದೇವರೂ ಆಭರಣ ಪ್ರಿಯನೆ. ಶಿವನೇ ನಾಗಾಭರಣನು ಎಂದ ಮೇಲೆ 'ಆಭರಣ ಮಾಯೆ' ಯಾರನ್ನು ತಾನೆ ಬಿಟ್ಟಿದ್ದೀತು?. ಈ ವಿಷಯದಲ್ಲಿ ಹರಿಯನ್ನಂತೂ

ಕೇಳಲೇ ಬೇಕಿಲ್ಲ. ಇನ್ನು ಅವನ ಭಕ್ತರು ಸುಮ್ಮನಿದ್ದಾರೆಯೇ? ವಿರಕ್ತದಾಸರಿಗೂ ಆಭರಣಗಳು ಬೇಕು, ಹರಿಯನ್ನು ಅಲಂಕರಿಸಿ ಆನಂದದಿಂದ ಕೀರ್ತಿಸಲು. ಅಂದ ಮೇಲೆ ನಮ್ಮ ಮಹಿಳಾ ಕೀರ್ತನಕಾರರು 'ಆಭರಣದ ಒಲುಮೆ'ಯಿಂದ ದೂರವುಳಿಯುವುದಾದರೂ ಹೇಗೆ? ಜನಪದರಲ್ಲಿಯೂ ಇದೇ ಮನೋಭಾವವಿದೆ. ಇದನ್ನು ವರ್ಣಿಸುವ ಅವಕಾಶ ಬಂದಾಗಲೆಲ್ಲಾ ಕೀರ್ತನಕಾರ್ತಿಯರು ಅತ್ಯುತ್ಸಾಹದಿಂದ ವರ್ಣಿಸಿದ್ದಾರೆ.

ಗೆಜ್ಜೆ ಪೈಜನಿ ಪಾಡಗರುಳಿಯು
ನಡುವಿನ ನವರತ್ನ ಪಟ್ಟಿ
ಕರದಲಿ ಕಂಕಣ ಹಾಸರ ಬಳೆಗಳು
ಬೆರಳಲಿ ಉಂಗುರ ಥಳಥಳಿಸುಲಿ
ವಂಕಿನಾಗಮುರುಗಿ ಕರದಲಿ

ಕಠ್ಠಾಣಿಸರ ಪದಕಗಳ್ವೊಳೆಯುತ
ಕಟ್ಟಿದ ಉಂಗುರಡ್ಡಿಕೆ ಶೋಭಿಸುತ

ನಲಿಯುವ ಮೂಗುತಿ ಮುಖುರ ಬುಲಾಕು
ಹೊಳೆವ ಮೀನುಬಾವಲಿ ಚಲತುಂಬುಗಳ್ವೊಳೆಯುತ

ಕುರುಡಿ ಬಾವಲಿ ಬುಗುಡಿ ಚಂದ್ರ
ಮುರುವಿನ ಕಾಂಚಿ ಮುಗುಳ್ನಗೆ ಮುಖವು

ಫಣೆಯಲಿ ಕುಂಕುಮ ಬೈತಲೆ ಬಟ್ಟು

ಕೆಂಪಿನ ರಾಗುಟೆ ಜಡೆಬಂಗಾರವು
ಸಂಪಿಗೆ ಮಲ್ಲಿಗೆ ಸರಗಳ ಮುಡಿದು

(ಸ.ದಾ.ಸಾ.ಸಂ:೧೮, ಭಾಗ-೨, ಪು: ೮೦-೮೨, ನಿ.ಜೀ.ಬಾ.ಕೀ)

ಅವ್ವನವರ ಹಾಡೊಂದರಲ್ಲಿ (ಸ.ದಾ.ಸಾ.ಸಂ:೭, ಪು: ೪೦, ಗ.ಅ.ಕೀ.೩೭) ಕಡಗ, ಸರಪಳಿ, ಮುಕುಟ, ಕಡಿಗಂಟೆ, ಮುತ್ತುಗಳು, ಕತ್ತಿಗೆ ಕುಸುರಾದ ಉತ್ತಮ ಆಭರಣಗಳು, ಮುತ್ತಿನ ಆಭರಣಗಳು, ಕುಂಡಲಾಭರಣಗಳು ಪ್ರಸ್ತಾಪಿತವಾಗಿವೆ. ತಮ್ಮ 'ಶೃಂಗಾರ ತಾರತಮ್ಯ' ಕೃತಿಯಲ್ಲಿ ನಾರಿಯರು ಧರಿಸುವ ಸರ್ವಾಭರಣಗಳನ್ನು ಪ್ರಸ್ತಾಸಿದ್ದಾರೆ. ರಾಗಟೆ, ವಾಲೆ, ಸರಪಳಿ, ಬುಗುಡಿ, ದ್ರಾಕ್ಷಿ, ಮೂಗುತಿ, ಟಕ್ಕಿ, ಮುತ್ತಿನ ಕಂಠಿ, ಕಟ್ಟಾಣಿ, ಸರಿಗಿ, ಗುಂಡಿನ ಸರ, ಚಂದ್ರಹಾರ, ವಂಕಿ, ಬಾವುಲಿ, ಬಾಮರಿ, ಕಡಗ, ಪೈತಣ, ಪಿಲ್ಲೆಗಳ ಗುಣವಿಶೇಷಗಳ ವರ್ಣನೆ ಬರುತ್ತದೆ. ಅವುಗಳ ತತ್ವ ಸೌಂದರ್ಯವೂ ಪ್ರತಿಪಾದಿತವಾಗಿದೆ. ಹೆಣ್ಣಿಗೆ ಆಭರಣಕ್ಕಿಂತಲೂ ಅವಳ ನಡವಳಿಕೆಯೇ ಶ್ರೇಷ್ಠ ಎಂದು ಕಿವಿಮಾತು ಹೇಳಿದ್ದಾರೆ.

ಒಡವೆಗಳ ಬಗ್ಗೆ ಯದುಗಿರಿಯಮ್ಮ ಬರೆದಿರುವ ಸಾಮಾಜಿಕ ಅಂಶಗಳನ್ನೊಳಗೊಂಡ ವಿಶೇಷ ಕೀರ್ತನೆ ಇದು. (ಸಂ.೧೮, ಭಾಗ-೪, ಪುಟ-೩೧, ೩೨)

ಒಡವೆಯ ನೀಡಬಾರದೆ ಬಾಲೆಯರೆಲ್ಲ ಒಡವೇಯ ನೀಡಬಾರದೆ
ಒಡವೆಯನಿಟ್ಟರೆ ವೇಳ್ಯೆಕ್ಕೊದಗುವುದು
ಒಡಲೀಗೆ ಒದಗಾಗು ಕಳ್ಳರು ಕದಿವರು

ಇದು ಬಹಳ ಬೆಲೆಯ ಬಾಳುವ
ಹನ್ನೆರಡು ಹರಳಿನ ಬಾಲೆ ಹದಿನೆಂಟುಸಾವಿರ ಮುತ್ತಿನ ಸರಪಳಿ
ಚರಿಪಸರಗಳುಂಟು ಚಂದದ ಬಾಲೆಗೆ

ಅಣಿಮುತ್ತುಗಳಾರಿಸಿ ಅದರಲ್ಲಿ
ಏಳು ಕಳಸ ಬಿಗದು ಇಪ್ಪತ್ತುನಾಲ್ಕುಸಾವಿರ ಮುತ್ತಿನ ಗೊಂಚಲು
ಸುತ್ತಿದೆ ಮುತ್ತಿನ ಬುಗುಡೀಗೆ

ಕತ್ತರಿಬಾವುಲಿಯ ಅದರ ಬೆಲೆ ಹತ್ತು ಲಕ್ಷವು ಬಾಳುವುದು ಅದಕೆ
ಸುತ್ತಿದೆ ಅಣಿಮುತ್ತುಗಳ್ಹದಿನೆಂಟು
ಎತ್ತಿ ಕಟ್ಟುವರೇ ಸರ್ಪಣಿಗಳಮಂಟು

ಮುತ್ತಿನಲಿ ಹದಿನೆಂಟು ಆರಿಸಿ ತೆಗೆದು
ಹಾರತುರಾಯನಿಟ್ಟು ಮೂರು ಮುತ್ತಿನಲಿ ಜುಳುಜುಳಿಗಳ
ಸುತ್ತಿ ಮಕುರವನಿಟ್ಟಾರೆ ಮುದ್ದಾಗಿ ತೋರ್ಯೆದು

ಕೊರಳಿನೊಳಗೆ ಒಪ್ಪುವ ಹಾರದ ಬೆಲೆ
ಆರುಸಾವಿರ ಬಾಳುವುದು ಠಂಕಳ್ಳಿಸುವ ಎಂಟುರತ್ನದ ಪದಕವು
ಕಂಠದೊಳಿದ್ದರೆ ವೆಂಕಟನತೋರ್ಪುದು

ಕಡಗ ಸರಪಳಿಯು ದಿವ್ಯ ಬೆಗಡಿನಾಭರಣ
ಮುಕುಟ ತಡಿಗಂಟೆ ಮುತ್ತುಗಳ ಜಡವುತ
ಕಡಿಗಂಟೆ ಮುತ್ತುಗಳ ಜಡವುತಲಿ ರಂಗನಾಯಕನ

ಎಡಬಲ ಕುಳಿತ ಅರಸಿಯರು ಸಖಿಯೆ– ಹೀಗೆ ಹೇಳುವಾಗ ಆಧ್ಯಾತ್ಮದರ್ಥದಲ್ಲಿ ಒಡೆ ಎಂಬುದು ಭಕ್ತಿಯೂ ಆಗುತ್ತದೆ ಎಂಬುದನ್ನು ಮರೆಯುವಂತಿಲ್ಲ.

ಹೆಳವನಕಟ್ಟೆ ಗಿರಿಯಮ್ಮನವರ 'ಉದ್ದಾಳಿಕನ ಕಥೆ'ಯಲಿ ಚಂದ್ರಾವತಿಯನ್ನು ಗೆಳತಿಯರು ಅಲಂಕರಿಸುವ ಆಭರಣಗಳು ಹರಿವಾಣಗಳು ತುಂಬುವಷ್ಟಿವೆ. (ಮ:೬೬,೬೭)

ತುಂಬೆಗರುಳ ಓಸರಿಸೆಣ್ಣೆಗಂಟಿಕ್ಕೆ ದುಂಡುಮಲ್ಲಿಗೆ ಮುಡಿಸಿದರು
ಢಾ(ಲೊ)ಪ್ರದ ಕೊಪ್ಪು ಹಲಳೋಲೆ ಹೊನ್ನಾವು ರಂಭೆಯ
ಕರ್ಣಕೊಪ್ಪಿಸಿದವು

ಹರೆನೊಸಲಿಗೊಪ್ಪಿತು ಮುತ್ತಿನ ಬಟ್ಟು ಮೂಗುತಿ
ಹೆಡೆಯ ಮಣಿಯ ಬೆಂತಾಕು
ಮುರಿಗೆಯ ನಲಿಕೆ ಅಡ್ಡಿಕೆ ಮುತ್ತು ತಾಯಿತ
ತರತರವರಿತು ಕಟ್ಟಿದರು

ನಳಿತೋಳಿಗೊಪ್ಪಿತು ಭುಜಕೀರ್ತಿ ಬಾಪುರಿ
ಕಡಗಕಂಕಣ ಚಳಕಿಗೆಯು
ಹೆಡೆಯ ಮುಂಗಯ್ಯ ಸಲಿಗೆ ಹೊನ್ನಸೂಡಗ
ಬೆರಳಿಗುಂಗುರವನಿಡುವರು

ಸಿರಿಮುಡಿ ವರಕುಚ ತೊಡಿಗೆ ಭಾರಕ್ಕೆ
ಮುರಿಯದಿಹುದು ಶಸ್ತ್ರಕಟಿಯು
ನವರತ್ನಖಚಿತವಾಗಿದ್ದ ಒಡ್ಯಾಣವ ನಡುವಿಗೆ
ಕಟ್ಟಿನಿಕ್ಕಿದರು

ಕದಳಿಯ ಭಾವದಿ ಹೋಲುವ ತೊಡೆ
ಕಣಕಾಲುಗಳೆಸುವ ಭಾವಕಿಗೆ
ಸಾಲುಘಂಟೆ ಗಿಜ್ಜೆ ಗಿಲಿಕೆಂಬ ಸರಪಣಿ
ಕಾಲಂದಿಗೆಯನಿಡುವರು

ಹರಪನಹಳ್ಳಿ ಭೀಮವ್ವನವರ ಪದ (ಪು:೮೧)
ಹೆರಳು ಬಂಗಾರ ರಾಗಟೆ ಗೊಂಡ್ಯ ಕ್ಯಾದಿಗೆ
ಅರಳು ಮಲ್ಲಿಗೆ ಸಂಪಿಗೆ ಮುಡಿದು ದಿವ್ಯ
ಕೊರಳ ಕಟ್ಟಾಣಿ ಸರಿಗೆ ಚಂದ್ರಹಾರ ಪು
ತ್ಥಳಿ ಪಚ್ಚಪದಕಗಳ್ಹೊಳೆಯುತಲಿ

ಕಡಗ ಕಂಕಣ ದ್ವಾರ್ಯ ನಾಗಮುರಿಗೆ ವಂಕಿ
ಬಿಡಿಮುತ್ತಿನ ಗೊಂಡ್ಯ ಬಾಜುಬಂದು ದೊಡ್ಡ
ಎಡಬಲ ಕಿವಿಯಲಿ ವಾಲೆ ಸರಪಳಿ ಮತ್ತು ಬು

ಗುಡಿ ಚಂದದ ಬಾಳ್ಯ ಹೊಳೆಯುತಲಿ– ಎಂದು ವರ್ಣಿಸುತ್ತಾರೆ. ಮುಂದಿನ ಕೀರ್ತನಕಾರ್ತಿಯರಲ್ಲಿ ಇವೇ ಆಭರಣಗಳು ಹೊಳೆಯುತ್ತವೆ.

**ನಿಂದನೆ**

ನಿಂದನೆಯು ನಮ್ಮ ಮನಸ್ಸಿನಲ್ಲಿರುವ ಭಾವನೆಗಳನ್ನು ಹೊರಹಾಕುತ್ತದೆ. ಜನಪದ ಸಾಹಿತ್ಯದಲ್ಲಿ ನಿಂದನೆಗಳು ಒಂದು ಸಾಹಿತ್ಯ ಪರಂಪರೆಯಾಗಿಯೆ ಬೆಳೆದು ಬಂದಿದೆ. ನಿಂದಾಸ್ತುತಿಯಲ್ಲಿ ನಿಂದಿಸುವುದೇ ಉದ್ದೇಶವಲ್ಲ ಮನರಂಜನೆ, ಹಾಸ್ಯವು ಮುಖ್ಯವಾಗುತ್ತದೆ. ಗಲಗಲಿ ಅವ್ವನವರ

ಮುಯ್ಯದ ಹಾಡುಗಳಲ್ಲಿ ಸರಿರಾತ್ರಿಯಲ್ಲಿ ಸುಭದ್ರೆ ಮುಯ್ಯವನ್ನು ತೆಗೆದುಕೊಂಡು ಕೃಷ್ಣನ ಅರಮನೆಗೆ ಹೋಗುತ್ತಾಳೆ. ಈ ಪ್ರಸಂಗವು ರುಕ್ಮಿಣಿ ಸತ್ಯಭಾಮೆಯರೊಡನೆ ವಾಗ್ವಾದಕ್ಕಿಳಿಯಲು ಭೂಮಿಕೆಯನ್ನು ಕಲ್ಪಿಸುತ್ತದೆ. ಇದರಿಂದ ಹಾಡಿಗೆ ಸಹಜ ನಾಟಕೀಯತೆ ಏರ್ಪಡುತ್ತದೆ. ಈ ಪ್ರಸಂಗವು ಅವ್ವನವರ ರಚನಾ ಸಾಮರ್ಥ್ಯಕ್ಕೆ ಹಿಡಿದ ಕನ್ನಡಿ.

ಗಲಗಲಿ ಅವ್ವನವರ ಮುಯ್ಯದ ಹಾಡೊಂದರಲ್ಲಿ (ಸ.ದಾ.ಸಾ. ಸಂ.-೭, ಪು: ೧೦೦-೧೦೧)

ಗ್ರಾಮೀಣ ಹೆಣ್ಣುಮಕ್ಕಳು ಆಡುವ ಜಗಳದ ಪರಿ ಇಲ್ಲಿ ಕಣ್ಣ ಮುಂದೆ ಸುಳಿಯುತ್ತದೆ. ಇದು ಸುಭದ್ರಾ ರುಕ್ಮಿಣಿಯರ ವಾಗ್ವಾದ.

ಕದನ ಕಠೋರಿ ಎಂದು
ಕಾಲುಕೆದರ ಬ್ಯಾಡ
ಮದನನ ಮಾತಿಗೆ
ಇದುರೇನ ಎಲ್ಲ ಈ ನೋಡ

ಓಡಿ ಬಂದವಳೆಂದು ಆಡಿದ ನೀ ಎನಗೆ
ತಿರುಗಿ ಆಡಿದಲ್ಲೆ ಏನೂ ಹುರುಳಿಲ್ಲ ಎಲೆ ನೋಡೆ
ತಿರುಗಿ ಆಡಿದಲ್ಲೆ ಏನೂ ಹುರಳಿಲ್ಲ ಸುಭದ್ರಾ ನೋಡಿಕೋ
ನಿನ ಮನದಲ್ಲೆ ಎಲ್ಲ ನೋಡೆ

ಅಣ್ಣನ ವಂಚಿಸಿ ಓಡಿ ಬಂದವಳೆಂದು
ಎನ್ನನೆ ನುಡಿದೆ ಸುಭದ್ರಾ ಎಲೆ ನೋಡೆ
ಎನ್ನನೆ ನುಡಿದ ಸುಭದ್ರಾ
ನಿನ್ನಂತೆ ಸನ್ಯಾಸಿಯೊಡನೆ ಬರಲಿಲ್ಲ ಎಲ್ಲಿ ನೋಡೆ

ಅತ್ತೆಯ ಮಗಳೆಂದು ಹತ್ತೆಂಟು ತಾಳಿದೆ
ಒಂದುತ್ತರ ನಿನಗೆ ಕೊಡತೇನೆ ಎಲೆ ನೋಡೆ
ಒಂದುತ್ತರ ನಿನಗೆ ಕೊಡುತ್ತೇನೆ ಸುಭದ್ರಾ
ಚಿತ್ತಕ್ಕೆ ಹೋಗಿ ನಡುವಂತೆ ಎಲೆ ನೋಡೆ

ಗಲಗಲಿ ಅವ್ವನವರ ಒಂದು ಮುಯ್ಯಿ ಕೊಡುವ ಹಾಡಿನಲ್ಲಿ ಕೃಷ್ಣನ ಅರಮನೆಗೆ ಬರುವ ಸುಭದ್ರೆಯು ರಾಮಾವತಾರದಲ್ಲಿನ ಪ್ರಸಂಗವನ್ನು ಎತ್ತಿಕೊಂಡು ನಿಂದಿಸುತ್ತಾಳೆ (ರುಕ್ಮಿಣಿಯನ್ನು), ಜಗಳದಂತಹ ವಿಷಯವನ್ನು ಜನರ ಮಧ್ಯದಿಂದ ಅತ್ಯಂತ ಸಹಜವಾಗಿ ಮುಯ್ಯದ ಹಾಡಿನಲ್ಲಿ ಮೂಡಿದೆ.(ಸಂ:೭, ಪು:೧೧೧)

ದಶರಥರಾಯನ ಭಾಗ್ಯ ವರ್ಣಿಸಲು ವಶವಲ್ಲ
ಹೊಸದಾಗಿ ಇವಳು ಹೋಗಲಿಕ್ಕೆ

ಹೊಸದಾಗಿ ಇವಳು ಹೋಗಲಿಕ್ಕೆ ಎನಗೆ
ಈ ದೇಶಗೇಡಿ ಬಂದು ವರ್ಣಿಸಲಿಲ್ಲ

ಬಾಲೆ ವಾಲ್ಮೀಕನ ಆಲಯದಲ್ಲಿದ್ದಾಗ
ಮೇಲು ವಸ್ತ್ರವು ಇಲ್ಲ ಅಶನಿಲ್ಲ
ಮೇಲ್ವಸ್ತ್ರ ಇಲ್ಲ ಅಶನಿಲ್ಲದಾಗ ಇವಳ
ಕಾಲ ಲಕ್ಷಣವೆಲ್ಲಿ ಅಡಗಿತ್ತೆ

ಅಕ್ಷ ಮ್ಯಾಲಂತರದಿ ವೃಕ್ಷದಲ್ಲಿದ್ದಾಗ
ಲಕ್ಷ ಕಷ್ಟಗಳ ಬಡುವಾಗ
ಲಕ್ಷ ಕಷ್ಟಗಳ ಬಡುವಾಗ ಇವಳ
ಕೈಯ ಲಕ್ಷಣವೆಲ್ಲಿ ಅಡಗಿತ್ತೆ

ಅವ್ವನ ಕೀರ್ತನೆಯೊಂದರಲ್ಲಿ ಸ್ತ್ರೀಯರ 'ಜಗಳಗಂಟತನ'ವನ್ನು ಚಿತ್ರಿಸುವ ಸಂದರ್ಭವೊಂದಿದೆ ಸತ್ಯಭಾಮೆ-ರುಕ್ಮಿಣಿಯರು ಶ್ರೀಕೃಷ್ಣನ ಮುಂದೆಯೇ ಹೀಗೆ ಜಗಳವಾಡುತ್ತಾರೆ. (ಪುಟ-೬೮, ಸಂ-೭)

ಭಾಮೆ - ಕೆಟ್ಟ ರುಕ್ಮಿಣಿಯು ಕಲಹಗಾರುತಿಯವ್ವ/ಅಗ್ಗಿಷ್ಟಿಕೆ ಆದಳು ಅತಿ ಸಿಟ್ಟಿನ ಹುಲಿಯವ್ವ
ರುಕ್ಮಿಣಿ - ಚಿಕ್ಕ ಚೇಳೆಂದು ಅಕ್ಕರೆ ತೋರಿದೆನೆಮ್ಮ, ಭಾಮೆಯ ಉಕ್ಕು ಹೇಳಲು ಎನಗೆ ಶಕ್ಯ ಇಲ್ಲವ್ವ

ಭಾಮೆ- ಉರಗ ಹಿರಿಯದೆಂದು ಎರಗೋದೇನವ್ವ/ಉರುವಣಿಗೆ ರುಕ್ಮಿಣಿಯ ಮುರಿಯಲಿಲ್ಲವ್ವ

ರುಕ್ಮಿಣಿ - ಕೆಂಜೀಗ ಕಚ್ಚಲು ಅಂಜೋರೇನವ್ವ/ ಅದಕಂಜುವರೇನವ್ವ, ಭಾಮೆಯ ಮಂಜುಳ ವಾಣಿ

ಮೂಲೆಗೆ ಬೀಳಲವ್ವ;

ಭಾಮೆ - ಸುಳ್ಳಿ ರುಕ್ಮಿಣಿ ಶೂಲದಂತಹವಳವ್ವ,

ರುಕ್ಮಿಣಿ-ಧರೆಯಲಿ ನಾನೊಬ್ಬಳು ಹಿರಿಯವಳು ಅಲ್ಲವೇನವ್ವ/ಈ ವೈರಿ ಸವತಿಯು ಎನ್ನ ಸರಿಯಳೇನವ್ವ

ಭಾಮೆ - ಶ್ರೇಷ್ಠಳಾದರೆ ನೀನಿಟ್ಟುಕೊಳ್ಳವ್ವ, ಇಷ್ಟೊಂದು ಸೊಕ್ಕು ಕಟ್ಟಿಡಿಸುವೆನವ್ವ,

ರುಕ್ಮಿಣಿ - ಸೊಕ್ಕು ಸೊಕ್ಕೆನಲಿಕ್ಕೆ ತಕ್ಕವಳೇನೆ ಭಾವೆ/ಇವಳ ಚಕ್ಕಂದಕ್ಕೆ ಹರಿಯು ಅಕ್ಕರಬ ಡುವನವ್ವ

ಭಾಮೆ - ಮುಂಜೆರಗು ಹಿಡಿದು ಕೆಳಗೆ ಎಳೆವೆನವ್ವ

ಜಗಳ ಕಾಯುವುದರಲ್ಲಿ ಯಾವ ಸವತಿಯರಿಗೂ ಇವರು ಕಡಿಮೆಯಿಲ್ಲ. ಗಲಗಲಿ ಅವ್ವನವರು ತಮ್ಮ ಬದುಕಿನಲ್ಲಿ ಸವತಿಯರ ಜಗಳವನ್ನು ಕಂಡಿರಬೇಕು.

**ಉಡುಗೆ ತೊಡುಗೆ**

ಮಹಿಳಾಕೀರ್ತನಕಾರರು ವರ್ಣಿಸುವ ಕಾವ್ಯಕನ್ನಿಕೆಯರು ಅಲಂಕಾರ ಪ್ರಿಯರು. ಅವರ

ಕಾಲದಲ್ಲಿದ್ದ ಉಡುಗೆ, ತೊಡುಗೆ, ಆಭರಣಗಳನ್ನು ಇಲ್ಲಿ ಕಾಣಬಹುದು. ಕೀರ್ತನಕಾರ್ತಿಯರು ಸ್ತ್ರೀ ಸಹಜವಾದ ಶೈಲಿಯಲ್ಲಿ ಸಡಗರದಿಂದ ವರ್ಣಿಸುತ್ತಾರೆ. ಇಲ್ಲಿ ಇವುಗಳೊಂದಿಗಿನ ಭಾವನಾತ್ಮಕ ಸಂಬಂಧದ ಎಳೆಯನ್ನು ಕಾಣಬಹುದು. ಹರಪನಹಳ್ಳಿ ಭೀಮವ್ವನವರ ರಚನೆಗಳಲ್ಲಿ ಇಂತಹ ವರ್ಣನೆಗಳು ಕಿಕ್ಕಿರಿಯುತ್ತವೆ. ಇವರ ನಂತರದವರ ರಚನೆಗಳಲ್ಲಿ ಇವೇ ವರ್ಣನೆಗಳ ಛಾಯೆ ಕಂಡುಬರುತ್ತದೆ.

ಗಲಗಲಿ ಅವ್ವ ತಮ್ಮ ಮುಯ್ಯದ ಹಾಡಿನಲ್ಲಿ ಮುಯ್ಯ ತಂದ ಸುಭದ್ರೆ ದ್ರೌಪದಿಯರನ್ನು ಎದುರುಗೊಳ್ಳಲು ಬರುವ ರುಕ್ಮಿಣಿ ಸತ್ಯಭಾಮೆಯರ ತೊಟ್ಟ ಭಾವದುಡುಗೆಗಳನ್ನು ದ್ರೌಪದಿ ಸುಭದ್ರೆಯರ ಮಾತುಗಳಲ್ಲಿ ಹೀಗೆ (ಬಂದಾರೆ ಅತ್ತಿಗೆಯರು ಚಂದಾವ ನೋಡಿರೆ...ಕೀ.೬೫, ಪು-೮೫) ವರ್ಣಿಸಿದ್ದಾಳೆ. ಹಿರಿಯ ಅತ್ತಿಗೆ ತಾನು ಗರುವಿನ ಸೀರೆಯುಟ್ಟು ಬಿಂಕದ ಕುಪ್ಪಸ ತೊಟ್ಟರೆ, ಸತ್ಯಭಾಮೆ ಬಡಿವಾರದ ಸೀರೆಯುಟ್ಟು ಕಡುಕೋಪದ ಕುಪ್ಪಸ ತೊಟ್ಟಿರುತ್ತಾಳೆ. ಕೃಷ್ಣನ ಅಷ್ಟೂ ಮಡದಿಯರು ಅತಿ ಸಿಟ್ಟಿನ ಸೀರೆಯುಟ್ಟು ಅಷ್ಟ ಮದವೆಂಬೊ ಕುಪ್ಪಸ ತೊಟ್ಟಿರುತ್ತಾರೆ. ಮುಯ್ಯ ನೀಡುವ ಸಂದರ್ಭದಲ್ಲಿ ಸುಭದ್ರೆ ದ್ರೌಪದಿಯರು ನಾರಿ ರುಕ್ಮಿಣಿಗೆ ಸೂರ್ಯರಾಗದ ಸೀರೆ ಸಾಲೆವಲಿಯ ಕುಪ್ಪಸ ಕೊಡುತ್ತಾರೆ. ಭಾಮೆಗೆ ಉದಯರಾಗದ ಸೀರೆ ಪದುಮರಾಗದ ಕುಪ್ಪಸ ಕೊಡುತ್ತಾರೆ. ಸುಭದ್ರೆ ದ್ರೌಪದಿಯರಿಗೆ ಅವರೊಂದಿಗೆ ಬಂದವರಿಗೆ ರುಕ್ಮಿಣಿ ಸತ್ಯಭಾಮೆಯರು ಕೊಡುವ ವಸ್ತ್ರದುಡುಗೊರೆ ಹೀಗಿದೆ: (ಕೀ.೧೦೬, ಪು-೧೩೪) ರಂಗಯ್ಯನ ಸಹೋದರಿ ದಿಟ್ಟ ದ್ರೌಪದಿಗೆ ಸೃಷ್ಟಿಗಧಿಕವಾದ ಪಟ್ಟಾವಳಿ ಸೀರೆ, ಗುಣಾಢ್ಯ ಸುಭದ್ರೆಗೆ ಖಡ್ಡಿ ಪೈಠಣ ಸೀರೆ. ಮಿತ್ರವೃಂದಾಗೆ ಅತ್ತಿಹೂವಿನ ಸೀರೆ, ಕುತನಿ ಕುಪ್ಪಸ, ಕಾಳಿಂದಿಗೆ ಮೋತಿಚೂರಿನ ಸೀರೆ, ಲಕ್ಷ್ಮಣಾಗೆ ಸಾರಸನ ಸೀರೆ, ಜಾಂಬವತಿಗೆ ಗೊಂಬಿಪೈಠಣಿ ಸೀರೆ, ಹದಿನಾರು ಸಾವಿರ ನಾರಿಯರಿಗೆ ಸಾವಿರದ ಬೆಲಿಯಾದ ಸೇಲ್ಯಾವಲಿ ಜವಳಿ. (ಕೀ.೧೦೮) ವಸುದೇವನಿಗೆ ಜೋಡಿ ಶಾಲು ದೇವಕಿಗೆ ಗೌರಿ ಪಠಾವಳಿ ಸೀರೆ, ಬಲರಾಮನಿಗೆ ಹಲವು ಸೂರ್ಯರ ಬೆಳಕು ಗೆಲುವೊ ಪೀತಾಂಬರ, ರೇವತಿಗೆ ಬಿಳಿ ಬಣ್ಣದ ಸೀರೆ. (ಕೀ. ೧೦೯) ಸಾಸಿವೆ ಬಣ್ಣದ ಸೀರೆ ರುಕ್ಮಿಣಿಯ ದಾಸಿಯರಿಗೆ, ಹತ್ತೆಂಟು ಸಾವಿರ ಸುತ್ತುವ ಮುಂಡಾಸು ರಂಗಯ್ಯನ ಭೃತ್ಯರಿಗೆ, ಸುಳಿ ಬಳ್ಳಿಯಂತೊಪ್ಪುವ ಬಿಳಿ ಚೂಟಿನ ಜೂಲು ರಂಗಯ್ಯನ ಗಿಳಿಗಳಿಗೆ, ಚಿಕ್ಕ ಚೀಟಿನ ಜೂಲು ತಕ್ಕ ಕುಲಾಯಿ ರುಕ್ಮಿಣಿಯ ಬೆಕ್ಕಿಗೆ.

ಮುಯ್ಯ ಹಿಂದಿರುಗಿಸುವಾಗ ಕೃಷ್ಣನ ಅರಸಿಯರಿಗೆ ಧರ್ಮರಾಯನು ಶ್ರೇಷ್ಠವಾದ ವಸ್ತ್ರಗಳನ್ನು ಹೀಗೆ ಕೊಡುತ್ತಾನೆ. (ಕೀ.೨೪೩). ನೀಲಮಾಣಿಕದ ವಸ್ತ್ರ ನೀಲಾದೇವಿಗೆ, ಸಾರಾವಳಿಯ ಸೀರೆ ಭದ್ರೆಗೆ, ಮುತ್ತಿನ ಝುಲ್ಲೆವಸ್ತ್ರ ಮಿತ್ರವಿಂದ್ಯಾಗೆ, ಬರಿಯ ಮಾಣಿಕದ ವಸ್ತ್ರ, ಜರದ ಪಟ್ಟಾವಳಿ ಸೀರೆ ಕಾಲಿಂದಿಗೆ, ಲಕ್ಷ ಮಾಣಿಕದವಸ್ತ್ರ ಲಕ್ಷ್ಮಣದೇವಿಗೆ, ಪಚ್ಚರತ್ನದ ವಸ್ತ್ರ ಜಾಂಬವತಿಗೆ.

(ಕೀ.೧೩೭) ಕೋಲಾಟದ ಪದವೊಂದರಲ್ಲಿ ಒಡವೆಗಳ ವರ್ಣನೆ ಬರುತ್ತದೆ

ಹಸ್ತಕಡಗ ಹರಡಿ ದೋರೆ ಹವಳ ಕಂಕಣ.....
ಮುತ್ತೀನ ವಾಲೆ ಮೂಗುತಿ.....

ಹೆರಳು ಬಂಗಾರ ಕ್ಯಾದೀಗೆ ಹೆರಳು....

ಚವರಿ ರಾಗಟೆ ಚೆಲ್ವ ಗೊಂಡ್ಯ....

ಥೋರ ಮುತ್ತಿನ ಹಾರ ಪದಕ......

ನಡುವಿಗೆ ಒಡ್ಯಾಣ ಕಾಲಿಗೆ ಗೆಜ್ಜೆ – ಹಾಕಿ ಅಲಂಕರಿಸಿಕೊಂಡ ನಾರಿಯರು ರಂಗನ ಪಾಡಿ ಕೋಲು ಹೊಯ್ಯುತ್ತಾರೆ.

ಹೆಳವನಕಟ್ಟೆ ಗಿರಿಯಮ್ಮನವರ ಉದ್ದಾಳಿಕನ ಕಥೆಯಲ್ಲಿ ರಾಜಕುಮಾರಿ ಚಂದ್ರಾವತಿಗೆ ವಜ್ರದ ಕೊಪ್ಪು, ಹರಳೋಲೆ, ಹೊನ್ನುಹೂವು, ಮುತ್ತಿನ ಮೂಗುತಿ ಬೊಟ್ಟು, ಹೆಡೆಮಣಿ ಚಿಂತಾಕು, ಮುರಿಗೆ, ಅಡ್ಡಿಕೆ, ಮುತ್ತು ತಾಯಿತ, ಬಿಲ್ಲೆ ಸರ, ಕೊಂಬಾಳೆ ಸರ, ಗುಂಡಿನ ಸರ, ಏಕಾವಳಿ ಪದಕ, ಭುಜಕೀರ್ತಿ, ಕಡಗ ಕಂಕಣ, ಉಂಗುರ, ವಡ್ಯಾಣ, ಸಾಲುಗಂಟೆ, ಗೆಜ್ಜೆ, ಗಿಲಿಕ್ಕಿಂಬ ಸರಪಣಿ, ಕಾಲಂದುಗೆ, ಕಾಲುಂಗುರ, ಪಿಲ್ಲಿಗಳನ್ನು ಧರಿಸಿಕೊಳ್ಳಲು ಗೆಳತಿಯರು ತಂದಿಡುತ್ತಾರೆ. ಚಂದ್ರಾವತಿಯು ಕಾಡುಪಾಲಾದಾಗ ಆಶ್ರಮದ ಸ್ತ್ರೀಯರು ಹುಚ್ಚಿಯಂತಿದ್ದ ಅವಳನ್ನು ಕರೆತಂದು ಜೀರ್ಣವಸ್ತ್ರಗಳನ್ನು ತೆಗೆದು ಹೊಸ ದುಕೂಲಗಳನ್ನು ಉಡಿಸುತ್ತಾರೆ. ಈ ಎರಡು ಪ್ರಸಂಗಗಳಲ್ಲಿ ವಸ್ತ್ರಗಳು ಚಂದ್ರಾವತಿಯ ಬದುಕಿನ ಎರಡು ಮುಖಗಳನ್ನು ಚಿತ್ರಿಸುತ್ತವೆ. ಶಂಕರಗಂಡನ ಹಾಡಿನಲ್ಲಿ ರತಿಯ ಮನೆಗೆ ಬಂದ ಶಿವನ ಚಿತ್ರಣವನ್ನು ಗಿರಿಯಮ್ಮ ಹೀಗೆ ಕೊಡುತ್ತಾಳೆ. ಬಿಗಿದು ಸುತ್ತಿದ ದೊಡ್ಡ ಚಂಡಿಯ ಬೆನ್ನಿಗೆ ಬಿಗಿದ ನಾಡಗಂಬಳಿ...ಮನ್ಮಥ ನಗುವಂತೆ ಮಾಡಿದವು. ಚಂದ್ರಹಾಸನ ಕಥೆಯಲ್ಲಿ ವಿಷಯೆಗೆ ವಧುವಾಗಿ ಅಲಂಕರಿಸುವಾಗ ಎಳೆ ಸಂಪಿಗೆಯ ನಾಸಿಕದಲ್ಲಿ ಹೊಳೆವ ಮೂಗುತಿ ಇಡುತ್ತಾರೆ. ತೋಳಿಗೆ ಗಟ್ಟಿ ಕಂಕಣ, ಬೆರಳಿಗೆ ಮುದ್ರಿಕೆ, ವಜ್ರದಡಿಗೆ, ಹೊರಹೊಮ್ಮುವ ಕುಚ ಮಧ್ಯದಲಿ ಪಚ್ಚೆಸರಿ, ಕಂಠೀಸರ, ಬಿಲ್ಲಸರ, ಸಾಲುಗಂಟೆಗಳ ಗೆಜ್ಜೆಸರಪಳಿ, ಕಾಲಬೆರಳಿಗೆ ಪಿಲ್ಲಿ ಧರಿಸಿ ವಜ್ರದಂದಣದಲಿ ಹಸೆಮಣೆಗೆ ಬರುತ್ತಾಳೆ. ಲವಕುಶರ ಕಾಳಗದಲ್ಲಿ ಗರ್ಭಿಣಿ ಸೀತೆಯನ್ನು ಕಾಡಿಗಟ್ಟುವ ರಾಮ ಅಂಗನೆ ಜಾನಕಿ ನಿನ್ನ ಬಂಗಾರದೊಡವೆಯನು ಚೆಂದಾದ ಪೆಟ್ಟಿಗೆಗೆ ತುಂಬು, ಆಭರಣ, ಮಾಂಗಲ್ಯಸೂತ್ರ, ಬೆರಳ ಮುದ್ರಿಕೆ, ಮೂಗುತಿ, ಕಡಗವು ಲಕ್ಷ್ಮಣನ ಕೈಯಲ್ಲಿರಲಿ ಎನ್ನಲು ಜಾನಕಿ ಎಲ್ಲವನ್ನೂ ಬಿಚ್ಚಿಕೊಡುತ್ತಾಳೆ. ಈ ಪ್ರಸಂಗಗಳಲ್ಲಿ ಬರುವ ಜನಪದರು ಬಳಸುವ ತೊಡಿಗೆಗಳನ್ನು ಕಾಣಬಹುದು.

ಹರಪನಹಳ್ಳಿ ಭೀಮವ್ವ (ಕೀ.೧) 'ಅಪ್ಪ ವೆಂಕೋಬನ' ಎನ್ನುವ ಕೀರ್ತನೆಯಲ್ಲಿ ಅವರು ಕಂಡ ವೆಂಕೋಬ ಪಾದದಲ್ಲೊಪ್ಪೊ ಪಾಗಡ ರುಳಿ, ಕಿರುಗೆಜ್ಜೆ, ಪೀತಾಂಬರ, ನೀಲಮಾಣಕಿದ ಉಡಿದಾರ, ವೈಜಯಂತಿಮಾಲೆ, ಶ್ರೀವತ್ಸದಹಾರ, ಸರಿಗೆ ಸರಪದಕ, ಕೈಗೆ ಕಂಕಣ, ಕಡಗ, ಭುಜಕೀರ್ತಿ, ಶಿರದಿ ಕಿರೀಟಗಳನ್ನು ಧರಿಸಿರುತ್ತಾನೆ. ದ್ರೌಪದಿಯ ವಸ್ತ್ರಾಪಹರಣವನ್ನು ಬಿಂಬಿಸುವ ಕೀರ್ತನೆಯಲ್ಲಿ ದುಶ್ಯಾಸನನು (ಕೀ.೭೪)ಸೆಳೆಯುವ ಸೀರೆಗಳು ಹೀಗಿರುತ್ತವೆ:

ಕೆಂಪು ಹೂವು ಇರುವಂತಿಕೆಯು, ಪಂಚಪೈಠಣಿ, ಪಗಡಿ, ಬಣ್ಣ

ಚಿಂತಾಕು ಪೈಠಣಿಯ ನಿರಿ ಸೆಳೆಯುತಿದ್ದನು

ಕರಿಯ ಹೂವು ಕಡ್ಡಿಪೈಠಣಿ ಸೆರಗು ಜರದ ಚಾರಖಾನಿ

ಪರಿಪರಿ ಪತ್ತಲಗಳ ತಾ ಸೆಳೆಯುತಿದ್ದನು
ಬಿಳಿಯ ಹೂವು ಬಟ್ಟ ಮುತ್ತಿನ ಹೊಳೆವೊ ನಿಂಬಾವಳಿಯು ಚಂದ್ರ
ಕಳೆಯ ಸೀರೆಗಳನೆ ಪಿಡಿದು ಸೆಳೆಯುತಿದ್ದನು
ಸೂರೂತಿ ಸುಗುತಿಯ ಬಣ್ಣ ಭಾರಿ ಬಾಳೆಪಟ್ಟೆಗಳನು
ದ್ವಾರಿಯಾ ಮನಿ ಕಂಭಾವತಿ ಸೀರೆ ಸೆಳೆಯುತಿದ್ದನು
ತಬಕದ್ಹೂವೆಳ್ಹೂವು ಗೆರೆ ಸಾಸಿವೆಯ ಚಿಕ್ಕಿ ಸರಪಳ್ಯಂಚು
ಥಳಕೆಂದ್ಹೊಳೆವೊ ಮಗ್ಗಿಸೀರೆ ಸೆಳೆಯುತಿದ್ದನು

ಗಜಮುಖ ಎನ್ನುವ ಕೀರ್ತನೆಯಲ್ಲಿ (ಕೀ.೮೧) ಗೋಪಿಕೆಯರು ಜಲಕ್ರೀಡೆಯಾಡಲು ಹೊರಡುತ್ತಾರೆ. ಆಗ ತೆಗೆದುಕೊಂಡ ಹೋಗುವ ಆಭರಣಗಳು:

ಹೆರಳು ಬಂಗಾರ ರಾಗಟೆ ಗೊಂಡ್ಯ
ಕೊರಳ ಕಟ್ಟಾಣಿ ಸರಿಗೆ ಚಂದ್ರಹಾರ
ಪುತ್ಥಳಿ ಪಚ್ಚಪದಕಗಳು
ಕಡಗ ಕಂಕಣ ನಾಗಮುರಿಗೆ ವಂಕಿ
ವಾಲೆ ಸರಪಳಿ ಮುತ್ತು ಬುಗುಡಿ – ಈ ಆಭರಣರಗಳು ಎಲ್ಲ ಕೀರ್ತನಕಾರ್ತಿಯರ ಕೀರ್ತನೆಗಳಲ್ಲೂ ಸಾಮಾನ್ಯವಾಗಿ ಕಂಡುಬರುತ್ತದೆ.

ಕೃಷ್ಣನು ಅವರ ಸೀರೆಗಳನ್ನು ಕದ್ದಾಗ ಹಾರಿ ಹೋದವು ಯಾವ ದಿಕ್ಕಿನಲಿ ಎನ್ನುತ್ತಾ ಕಳಕೊಂಡ ಸೀರೆಗಳನು ಗೋಪಿಕೆಯರು ನೆನಪಿಸಿಕೊಳ್ಳುವ ಪರಿ ಅದ್ಭುತವಾಗಿದೆ. ಭೀಮವ್ವ ನಾರಿಗೆ ಸೀರೆಯೊಂದಿಗಿರುವ ಭಾವನಾತ್ಮಕ ಸಂಬಂಧವನ್ನು ಬಿಚ್ಚಿಟ್ಟಿದ್ದಾಳೆ.

ಸಾರಾವಳಿ ಸೀರೆ ರಾಗಾವಳಿ ಸೀರೆ ದ್ವಾರಾಮುನಿ ಸೀರೆ ನಿಂದಲ್ಲೆ ಅಕ್ಕ
ಗೋದಿ ಮಗ್ಗಿ ಸೀರೆ ಗುಬ್ಬಿ ಕಣ್ಣಿನ ಸೀರೆ ಸೋದರತ್ತೆಯರುಟ್ಟ ಸೀರೆ
ಬಾಳೆ ಪಟ್ಟೆ ಸೀರೆ ನಂದು ಬದನೆ ಬಣ್ಣದ ಸೀರೆ ನಿಂದು
ಕಾಡಿಗ್ಗಣ್ಣಿನ ಸೀರೆ ಕರಿಯ ಚಂದದ ಸೀರೆ ನಾವಕ್ಕತಂಗಿಯೇರಿಟ್ಟಿದ್ದೇವೆ
ಕರಿಯ ಮಧುರೆ ಸೀರೆ ಜರಮಗ್ಗಿ ಕುಪ್ಪಸ ಕರೆಸಿ ಸೋದರಮಾವ ಉಡಿಸಿದನೆ ನನ್ನ
ರವಡಕೆ ಅಂಚಿನ ದಿವ್ಯ ಕವಳೆ ಹೂವಿನ ಸೀರೆ ಕುರುಡ್ಹುವ್ವಿನ ಸೀರೆ ನಂದು ಕಾಣಲಿಲ್ಲೆ
ಕಡ್ಡಿ ಪೈಠಣಿ ಸೀರೆ ಕಡ್ಡಾಯದಿಂದ ನಾ ಬಡ್ಡಿ ಸಾಲವ ಮಾಡಿ ತಂದಿದ್ದೆನೆ ನಾ
ಅಡ್ಡಿ ಮಾಡಿದ ಭಾವ ನಾವುಟ್ಟು ಬರುವಾಗ ಕುದ್ರಿಗೇಡಿ ನೆಗೆಣ್ಣಿ ಕುದಿವೋಳಲ್ಲೆ
ಮಾವಿಗೆ (ನ್ಗೆ?) ಸೀರೆ ಮಾರುದ್ದ ಸೆರಗಿತ್ತು ಮಾವ ತಂದುಕೊಟ್ಟ ನನಗೆ ನಿನ್ನೆ ನೋಡೆ
ಹ್ಯಾವವಿಲ್ಲದೆ ಮನೆಗ್ಹೋದರೆ ನಮ್ಮಾವ ಕೋಲುಕೋಲಲಿ ಹೊಡೆದ್ಹೊರಗ್ಹಾಕುವ
ಪ್ರಸ್ತಕ್ಕೆ ತಂದದ್ದು ಉಪ್ಪಾಡ ಪತ್ತಳ ಕಸ್ತೂರಿ ಬಣ್ಣದ ಕಮಲದ ಪೇಟಿ ಅಂಚು

ಮುತ್ತಿನ ಬಟ್ಟೀನ ಸೀರೆ ಮೊದಲೆ ಮೈನೆರೆದಾಗ್ನಮ್ಮತ್ತಿಗ್ಯಕ್ಕರದಿಂದ ಕೊಟ್ಟಿದ್ದಳೆ

ಹಾಲ್ಚಿಕ್ಕಿ ಸೀರ್ನಂದು ಗುಲಾಬ್ಚಿಕ್ಕಿ ಗೋಪೀದು ಹಾವುರಾಣಿಗೆರೆ ಸೀರೆ ದಾರದೇನೆ ಅಕ್ಕ

ಜೋಡ್ಪಕ್ಕಿ ಸೀರೆ ಕುಂಕುಮಗೆರಿ ಸೀರೆ ನಾ ಜೋಡಿಸಿಟ್ಟಿದ್ದರೆಲ್ಲಿ ಹೋದವ್ವೇ

ಭಾರಿ ಬೆಲೆ ಕೊಟ್ಟ ಬನಾರಸದ ಸೀರೆ ನಾ ಭಾಳಾಪೇಕ್ಷದಲುಟ್ಟುಕೊಂಡಿದ್ದೆನೆ ನಾನು

ಭಾನುಪ್ರಕಾಶದಂತ್ಹೊಳೆವೊ ಚಂದಿರ ಸೀರೆ ಬಾ ನಾನು ನೀನು ಕೂಡ್ಹುಡುಕುವೋಣ

ಕಳ್ಳನ್ಹೆಂಡತಿಯೇನು ಪುಣ್ಯಮಾಡಿದಳಾಕೆ ಎಲ್ಹೋಗಿ ನಮ ಸೀರೆ ಸೇರಿದಾವೆ ನಾ

ಮೆಲ್ಲರ ಸೀರೆಗಳುಟ್ಟುಕೊಂಡಾಕೆ ಬಾಳುಲ್ಲಾಸದಿಂದ ಓಡ್ಯಾಡಿವೋಳೆ

ಹೆಣ್ಣುಮಕ್ಕಳು ನಾವು ಚೆನ್ನಾರ ಚೆಲುವೇರು ಅರಣ್ಯವ ಸೇರಿಕೊಂಬುವುದು ಹ್ಯಾಗೆ ಹೋಗಿ

ಕಣ್ಣಿಟ್ಟ ಪುರುಷೋರು ಬಿಡುವೋರೆ ನಮ್ಮನ್ನ ಇನ್ನೊಂದುಪಾಯ ನಾ ಹೇಳುವೆನು

ಕೃಷ್ಣನು ಬಿದ್ದಂತ ಕಾಳಿ ಮಡುವಿನೊಳು ಒಟ್ಟಾಗಿ ನಾವೆಲ್ಲ ಧುಮುಕೋಣ ಹೋಗಿ

ಎನ್ನುವಲ್ಲಿಗೆ ಸೀರೆ ಕಳೆದುಕೊಂಡ ನಾರಿಯರು ಆಲೋಚಿಸುತ್ತಾರೆ. ಭೀಮವ್ವ ಸೀರೆ ಒಡವೆ ವಸ್ತ್ರಗಳ ಪ್ರಸಂಗ ಬಂದಾಗೆಲ್ಲ ಸಡಗರದಿಂದ ವರ್ಣಿಸುತ್ತಾರೆ. ಈ ಹಾಡಿನ ೩೬ ನುಡಿಗಳಲ್ಲಿ ಬಗೆಬಗೆಯ ಸೀರೆಗಳ ವರ್ಣನೆ ತುಂಬಿದೆ. ಈ ಸಾಲುಗಳನ್ನು ಸೂಕ್ಷ್ಮವಾಗಿ ಅವಲೋಕಿಸಿದಾಗ ಅವುಗಳನ್ನು ಪಡೆದುಕೊಳ್ಳುವ ಹಿಂದಿನ ಅವರ  ಸ್ಥಿತಿಯ ಚಿತ್ರಣವಿದೆ.

ಕಡ್ಡಿ ಪೈಠಣಿ ಸೀರೆ ಕಡ್ಡಾಯದಿಂದ ನಾ ಬಡ್ಡಿ ಸಾಲವ ಮಾಡಿ ತಂದಿದ್ದೆನೆ ನಾ

ಅಡ್ಡಿ ಮಾಡಿದ ಭಾವ ನಾವುಟ್ಟು ಬರುವಾಗ ಕುದ್ರಿಗೇಡಿ ನೆಗೆಣ್ಣಿ ಕುದಿವೋಳಲ್ಲೆ

'ಕಡ್ಡಾಯದಿಂದ ನಾ ಬಡ್ಡಿ ಸಾಲವ ಮಾಡಿ ತಂದಿದ್ದೇನೆ....' ಅನ್ನುವಲ್ಲಿ ಸಾಲ ಮಾಡಿ ತಂದಿದ್ದನ್ನು ಅದೂ ಬಡ್ಡಿಗೆ ಹಣ ತಂದು ಕೊಂಡದ್ದನ್ನು ಕಳೆದುಕೊಳ್ಳುವ ನೋವಿದೆ. ಇಲ್ಲಿ ಆರ್ಥಿಕ ಮುಗ್ಗಟ್ಟು ಇತ್ತೆಂಬ ಧ್ವನಿಯೂ ಇರುವುದನ್ನು ಗಮನಿಸಬೇಕು.  ಈ ಪ್ರಸಂಗ ಅಂದಿಗೇ ಇಂದಿಗೂ ಸಾಮಾನ್ಯವಾದುದು. ಇಂದೂ ಸೀರೆಗಳಿಗಾಗಿ ಚೀಟಿ ಹಾಕುವುದು, 'ಕಂತು'ಗಳಲ್ಲಿ ಸೀರೆ ಕೊಳ್ಳುವುದನ್ನು ಇದು ನೆನಪಿಸುತ್ತದೆ.

ಕೃಷ್ಣನು ಮೋಹಿನಿಯ ರೂಪ ತಾಳಿದಾಗ ಮೋಹಿನಿಯ ಆಭರಣಗಳನ್ನು ಭೀಮವ್ವ ವರ್ಣಿಸುವ ಪರಿ (ಕೀ.೧೩೫).

ಕಂಚುಕ ತೋಳಿನಲ್ವಂಕಿ ಬಾಜುಬಂದು
ಮಿಂಚಿನಂದದಿ ನಲಿದಾಡುತ ಗೊಂಡ್ಯವು
ಕಂಕಣ ತೋಡ್ಯ ವಜ್ರದ್ವಾರ್ಯ ಹರಡಿಯು
ಪಂಚ ಬೆರಳಿನಲ್ಲುಂಗುರವನಿಟ್ಟು ಸೊಬಗಲಿ

ಚಿಂತಾಕು ಸರಿಗೆ ಚಿನ್ನದ ಗುಂಡು ಹವಳವು
ಕೆಂಪು ಏಕಾವಳಿ ಮಲಕು ತಾಯಿತ ಮುತ್ತು

ಮಿಂಚುವೋ ಪದಕ ಮುತ್ತಿನ ಕಟ್ಟಾಣಿಯು
ಪಂಚರತ್ನದ ಹಾರ ಪರಮಾತ್ಮಗಲೆಯುತ

ಪಂಜಿನ ವಾಲೆ ಬುಗುಡಿ ಬಾಳ್ಯ ಚಳತುಂಬು
ಚಂದ್ರ ಮುರುವು ಚಿನ್ನದ ಕಡ್ಡಿ ಕಿವಿಯಲ್ಲಿ
ಕುಂದಣ ಕುಸುರು ವಜ್ರಗಳು ಕೆಂಪೊಳೆವಂಥ
ದುಂಡು ಮುತ್ತಿನ ಮುಕುರ್ಯವ ಮೂಗಿನಲ್ಲಿಟ್ಟು – ಎನ್ನುವ ಸಾಲುಗಳಲ್ಲಿರುವ ಆಭರಣಗಳ ವರ್ಣನೆಯು ಭೀಮವ್ವನವರ ಸ್ತ್ರೀ ಸಹಜ ಆಭರಣ ಪ್ರಿಯತೆ, ಕೃಷ್ಣಭಕ್ತಿಯನ್ನು ಹೇಳುತ್ತವೆ.

ಶಕುಂತಲಾ ದುಷ್ಯಂತರ ಕಥೆಯಲ್ಲಿ ದುಷ್ಯಂತನ ವಿರಹದಲ್ಲಿ ಮೈಮರೆತಿದ್ದ ಶಕುಂತಲೆ ದೂರ್ವಾಸರು ಬಂದಿದ್ದನ್ನು ಗಮನಿಸದಿದ್ದಾಗ ಶಾಪ ನೀಡುತ್ತಾನೆ. ಗೆಳತಿ ಪ್ರಿಯಂವದೆ ಉಶ್ಶಾಪ ಕೋರುತ್ತಾಳೆ.

ಪಟ್ಟದರಸು ತಾನಿಟ್ಟುಂಗುರವು ದೃಷ್ಟಿಗೆ ಬೀಳಲಾಕ್ಷಣ ನೆನಪಾಗಲಿ
ಕನಕದುಂಗುರ ಕಣ್ಣಿಗೆ ಬಿದ್ದಾಕ್ಷಣ ಘನ ಪತಿವರತಿಯು ನೆನಪಿಗೆ ಬರಲಿ

–ಎಂದು ಉಶ್ಶಾಪ ನೀಡುತ್ತಾನೆ. ಆದರೆ ಉಂಗುರವನ್ನು ಶಕುಂತಲೆ ಕಳೆದುಕೊಂಡಿದ್ದರಿಂದ ದುಷ್ಯಂತ ಅವಳನ್ನು ಮರೆಯುತ್ತಾನೆ. ವೇಶ್ಯೆಯೆಂದು ನಿಂದಿಸುತ್ತಾನೆ. ಅಷ್ಟರಲ್ಲಿ ಹೊರಗಿನಿಂದ ಬಂದ ಜಲಗಾರನು ದೊರೆ ನಿಮ್ಮ ನಾಮದುಂಗುರವೆಂದು ಕೊಟ್ಟಾಗ ಶಕುಂತಲೆಯ ನೆನಪಾಗುತ್ತದೆ. ದುಷ್ಯಂತ ಶಕುಂತಲೆಯರು ದೂರಾಗುವುದಕ್ಕೂ ಮತ್ತೆ ಸಮಾಗಮಗೊಳ್ಳುವುದಕ್ಕೂ ಉಂಗುರವೇ ಕಾರಣವಾಗುತ್ತದೆ.

**ಪಾಕ ವೈವಿಧ್ಯ**

ಶ್ಯಾವಿಗೆ, ಚಿತ್ರಾನ್ನ, ಪರಮಾನ್ನ, ಶ್ಯಾಲ್ಲಾನ್ನ, ಚಕ್ಕುಲಿ, ಚಿಟೋಟಿ, ಹಪ್ಪಳ, ಸಂಡಿಗೆ, ಆಂಬೊಡೆಗಳು, ಮಂಡಿಗೆ, ಬೀಸೋರಿಗೆ, ಗುಳ್ಳೋರಿಗೆ, ಫೇಣಿ, ಲಾಡು, ಜಿಲೇಬಿ, ಸುಕಿಯನುಂಡೆ, ಹೋಳಿಗೆ, ಎಣ್ಣೋರಿಗೆ, ಹೊಯ್ಗಡುಬು, ಹೂರಣಗಡುವು, ತೇಂತೋಳಿ, ಮೆಣಸು ಜೀರಿಗೆ ಇಂಗು ಹಾಕಿದ ಉಪ್ಪಿನ ಕಡುಬು, ಸಾರು, ಸಾಂಬಾರ, ಪಡವಲಕಾಯಿ ಪಳದ್ಯ, ಉಪ್ಪೇರಿ, ಉಪ್ಪಿನಕಾಯಿ ರಸ, ಕೀರು, ಕೋಸಂಬರಿ, ಕಲಸಿಮೇಲೋಗರ, ಬಜ್ಜಿಗಳು, ಸಬ್ಜಿಬಾತು, ಸೌತೆಬಾತು, ಕೇಸರಿಬಾತು ಮುಂತಾದವು ಗಲಗಲಿ ಅವ್ವ, ಗಿರಿಯಮ್ಮ, ಭೀಮವ್ವ ಅವರ ಕೀರ್ತನೆಗಳಲ್ಲಿ ಸಾಂದರ್ಭಿವಾಗಿ ಪ್ರಸ್ತಾಪಿಸಲಾಗಿವೆ. ಇವೆಲ್ಲವೂ ಜನಪದರ ಅಡಿಗೆಗಳಾಗಿವೆ.

**ಸಂಪ್ರದಾಯ**

ವ್ರತಗಳ ಆಚರಣೆ, ಉತ್ಸವಗಳ ಆಚರಣೆ, ಜಾತಕರ್ಮ, ನಾಮಕರಣ, ಅನ್ನಪ್ರಾಶನ, ಚೌಲಕರ್ಮ, ಮುಂಜಿ, ಅಕ್ಷರಾಭ್ಯಾಸ, ಬಾಗಿನ ಸಂಪ್ರದಾಯಗಳಿವೆ. ಮದುವೆಗೆ ಸಂಬಂಧಿಸಿದಂತೆ ಲಗ್ನಪತ್ರಿಕೆ, ಹಸೆಗೆ ಕರೆಯುವುದು, ಕಾಲುಂಗುರ ಇಡುವುದು, ಆರತಿ ಎತ್ತುವುದು, ವರಪೂಜೆ, ಧಾರೆ,

ಅಂತರಪಟ ಹಿಡಿಯುವುದು, ಶಕುನದ ಸೊಡಲು, ಕಂಕಣ ಕಟ್ಟುವುದು, ಮಾಂಗಲ್ಯ ಧಾರಣೆ, ಚಟ್ಟು ಬಡಿಯುವುದು, ಲಾಜಾ ಹೋಮ, ಅರುಂಧತಿ ನಕ್ಷತ್ರ ವೀಕ್ಷಣೆ, ಭೂಮ, ನಾಗೋಲಿ, ಉರುಟಣೆ, ಪ್ರಸ್ತ, ಸೀಮಂತ ಸಂಪ್ರದಾಯಗಳ ಪ್ರಸ್ತಾಪಗಳು ಕೀರ್ತನೆಗಳಲ್ಲಿ ಬರುತ್ತವೆ. ಆರತಿ, ಮಂಗಳಾರತಿ, ಆಶೀರ್ವಾದ, ಮುಯ್ಯದ ಹಾಡುಗಳನ್ನು ಕೀರ್ತನಕಾರರು ತಮ್ಮ ಕೃತಿಗಳಲ್ಲಿ ಬಳಸಿಕೊಂಡಿದ್ದಾರೆ.

**೨.೮ ಭಕ್ತಿಯ ಪರಿಭಾವ**

ಕೀರ್ತನಕಾರ್ತಿಯರು ಭಗವದ್ಭಕ್ತರು ಭಗವಂತನನ್ನು ವಿವಿಧ ಭಾವಗಳಲ್ಲಿ ಸ್ತುತಿಸಿದ್ದಾರೆ. ಪ್ರಿಯತಮೆಯಾಗಿ, ತಾಯಾಗಿ, ಗೆಳತಿಯಾಗಿ ಭಾವಿಸಿ ಬರೆದಿದ್ದಾರೆ. ರಚನೆಗಳಲ್ಲಿ ವಾತ್ಸಲ್ಯ, ಶೃಂಗಾರ, ಹಾಸ್ಯ, ಸರಸ, ವಿರಹ, ಕಾರುಣ್ಯ ಭಾವಗಳು ಮಡುಗಟ್ಟಿವೆ.

ಮುಯ್ಯದ ಹಾಡಿನಲ್ಲಿ (ಕೀ.೧೦೨) ಸುಭದ್ರೆಯು ಮುಯ್ಯ ಕೊಡಲು ಕೃಷ್ಣನ ಮನೆಗೆ ಬಂದಾಗ ಪರಸ್ಪರ ನಡೆದ ಮಾತಿನ ಚಕಮಕಿಗಳು, ವಾಗ್ವಾದಗಳನ್ನು ಮರೆಯಬೇಕೆಂದು ಆಗ್ರಹಿಸಿ ಅತ್ತಿಗೆಯರನ್ನು ಪ್ರೀತಿಯಿಂದ ಒತ್ತಾಯಿಸುತ್ತಾಳೆ.

ದೇವಿ ರುಕ್ಮಿಣಿ ನಮ್ಮಮ್ಮ ದೇವಕಿ ಸರಿಯಮ್ಮ
ನಾಕುಂದು ನಿನ್ನ ನುಡಿದೇನ/ಅಪರಾಧವ
ಭಾವದೊಳಿಡದೆ ಕರುಣಿಸು ಪ್ರೀತಿಯ ಮಾಡು

ಅತ್ತಿಗಿ ನೀನಮ್ಮ ಹೆತ್ತ ತಾಯಿ ಸರಿಯಮ್ಮ
ಅತ್ಯಂತ ನಿನಗೆ ನುಡಿದೇವ/ಅಪರಾಧವ
ಚಿತ್ತದೊಳಿಡದೆ ಕರುಣಿಸು ಪ್ರೀತಿಯ ಮಾಡು

ಸುಗುಣ ಸಹಕಾರಿಯೆ ನಿಗಮಾಭಿಮಾನಿಯೆ
ವಿಗಡ ಬುದ್ದಿಯಿಂದ ನುಡಿದೇವ/ಅತ್ತಿಗೆ ನಿನ್ನ
ಮಗಳು ಜಾಹ್ನವಿಯ ಸರಿಯಮ್ಮ ಪ್ರೀತಿಯ ಮಾಡು

ಸತ್ಯಭಾಮೆ ನಮ್ಮ ಅತಿವಿನೋದವ
ಮತ್ತೊಂದು ನೀನು ತಿಳಿಯದೆ/ಅತ್ಯಂತ
ಎನಮ್ಯಾಲೆ ಕರುಣೆ ಇರಲಮ್ಮ ಪ್ರೀತಿಯ ಮಾಡು

ಸರಿಸಿಜಮುಖಿ ನಮ್ಮ ಹರುಷ ವಿನೋದವ
ವಿರಸ ಮಾಡದೆಲೆ ಮನದೊಳು/ರಾಮೇಶನ
ಅರಸಿ ನೀ ನಮಗೆ ದಯಮಾಡು ಪ್ರೀತಿಯ ಮಾಡು – ಪರಸ್ಪರ ಅತ್ತಿಗೆ ನಾದಿನಿಯರಲಿ

ಇರಬೇಕಾದ ಬಾಂಧವ್ಯ, ಪ್ರೀತಿಯನ್ನು, ಹೊಂದಾಣಿಕೆಯನ್ನು, ಸಹಕಾರ ಮನೋಭಾವವನ್ನು ಅನುನಯದ ಮಾತುಗಳಿಂದ ಸೂಚಿಸಿದ್ದಾರೆ. ಇದು ಅನುಭವಿಯ ವಿವೇಕದ ಮಾತುಗಳೂ ಆಗಿವೆ. ಇದು ವಿರಸ ಕಳೆದು ಮಧುರ ಭಾವ ತರುವ ಪ್ರಯತ್ನ ಎಂಬುದನ್ನು ಮರೆಯುಂವತಿಲ್ಲ.

**ಅಂಜಿಕೆ**

ಕೃಷ್ಣನ ಅಂಜಿಕೆಯಿಂದಲೆ ಅಷ್ಟದಿಕ್ಪಾಲಕರು ಕೆಲಸ ನಿರ್ವಹಿಸುತ್ತಿದ್ದಾರೆಂಬುದನ್ನು ಅಲ್ಲಿನ ನಡವಳಿಕೆಯ ಮೂಲಕ ಚಮತ್ಕಾರವಾಗಿ ಹೀಗೆ ವರ್ಣಿಸುತ್ತಾರೆ:

ಹಾಸಿಗ್ಯಾಗುವ ಶೇಷ ಅಂಜಿ ದಾಸಿ ಆಗುವಳಂಜಿ ಲಕುಮಿ
ದೇಶಕಾಲ ಅಂಜಿ ಒಂದು ಲೇಸು ಮೀರ್ಯಾವೆ ಎನುತ

ಸಂಖ್ಯಾವಿಲ್ಲದ ಗಜಗಳಂಚಿ ಫಕ್ಕನೆ ನಿಂತಿಹವಮ್ಮ
ದಿಕ್ಪಾಲಕರು ಅಂಜಿ ನಮ್ಮ ದಿಕ್ಕು ಕಾಯುವರು

ರಮಿ ಅರಸಗಂಜಿಕೊಂಡು ಬ್ರಹ್ಮ ಸೃಷ್ಟಿ ಮಾಡುವನಮ್ಮ
ಸುಮ್ಮನೆ ಸುರರೆಲ್ಲ ಕೂಡಿ ದಮ್ಮಯ್ಯ ಅನಲೆಂದು ಹರಿಗೆ

**ವಾತ್ಸಲ್ಯ ಭಾವ**

ಪಂಚ ಭಾವಗಳಲ್ಲಿ ವಾತ್ಸಲ್ಯ ಭಾವವೂ ಒಂದು. ಕೃಷ್ಣನನ್ನು ಮಗನನ್ನಾಗಿ ಕಂಡು ವರ್ಣಿಸುವ ಪರಿ ಹೃದಯಂಗಮವಾಗಿದೆ. ಭಾಗವತದ ದಶಮಸ್ಕಂದದಲ್ಲಿ ಬರುವ ಶ್ರೀಕೃಷ್ಣನ ಬಾಲಲೀಲೆಗಳೇ ವಾತ್ಸಲ್ಯ ಭಾವಕ್ಕೆ ಪ್ರೇರಣೆ. ಎಲ್ಲ ಹರಿದಾಸಿಯರೂ ಸಾಮಾನ್ಯವಾಗಿ ಶ್ರೀಕೃಷ್ಣನ ಬಾಲಲೀಲೆ ವರ್ಣಿಸುವ ವಾತ್ಸಲ್ಯಗೀತೆಗಳನ್ನು ರಚಿಸಿದ್ದಾರೆ. ಇಲ್ಲಿ ಯಶೋಧೆಯ ಮಾತೃವಾತ್ಸಲ್ಯವು ತುಂಬಿತುಳುಕುತ್ತದೆ. ಕೆಲವು ಕೀರ್ತನೆಗಳಲ್ಲಿ ಬಾಲಭಾಷೆ (ಕಲ ಭಾಷೆ)ಯನ್ನು ಬಳಸಿರುವುದು ಕಂಡುಬರುತ್ತದೆ. ಮಗುವಿನ ತೊದಲ್ನುಡಿ, ಅಮ್ಮನ ಮೇಲಿನ ಮಮತೆಗಳ ಸಂಗಮದಲ್ಲಿ ವಾತ್ಸಲ್ಯ ಗೀತೆಗಳು ಜೀವ ಪಡೆಯುತ್ತವೆ. ಮಗು ಅಮ್ಮನನ್ನು ಮಾತನಾಡಿಸುವ ಪರಿ ಮತ್ತು ಅಮ್ಮನು ಮಗುವನ್ನು ಮಾತನಾಡಿಸುವ ಪರಿ – ಈ ಎರಡು ಪರಿಯಲ್ಲಿ ವಾತ್ಸಲ್ಯಗೀತೆಗಳು ತೆರೆದುಕೊಳ್ಳುತ್ತವೆ. ಮಗುವಿನ ತೊದಲು ನುಡಿಗಳಿಂದ ತಾಯಿಯ ಮನಸ್ಸು ಹಿಗ್ಗುತ್ತದೆ.

ಹೆಳವನಕಟ್ಟೆ ಗಿರಿಯಮ್ಮನವರು 'ಮಕ್ಕಳ ಮಾಣಿಕವೇ ಮೋಹನ್ನ' ಎನ್ನುವ ಕೀರ್ತನೆಯಲ್ಲಿ ತಪ್ಪು ತಪ್ಪು ಹೆಜ್ಜೆನಿಕ್ಕುತ ಬಾಯೊಳು ಜೊಲ್ಲು, ಸುಪ್ಪಾಣಿ ಮುತ್ತಂತೆ ಸುರಿಸುತ ಬಾ ರಂಗಯ್ಯ ನಿನಗೊಪ್ಪುವ ಆಭರಣ ನೀಡುವೆ ಅದನೊಲ್ಲದಿದ್ದರೆ ತುಪ್ಪ ಕಜ್ಜಾಯ ಕೊಡುವೆನು. ಅಂದಿಗೆ ಕಿರುಗೆಜ್ಜೆ ಬಿಂದುಲಿ ಬಾಜು ಬಂದು ತಿರುಹುತ ಬಾರಯ್ಯ. ಬಂದೆನ್ನ ಬಿಗಿಯಪ್ಪಿಕೊಳ್ಳಯ್ಯ ಅದನೊಲ್ಲದಿದ್ದರೆ ಅಂದವಾದ ಒಂದು ಮುದ್ದು ತಾರಯ್ಯ. ಕಾಡಬೇಡ ಎನ್ನ ಎಂದು ಮಗುವನ್ನು ಮುದ್ದಾಡಲು ಕರೆಯುತ್ತಾರೆ.

ಉದ್ಧಾಳಿಕನ ಕಥೆಯಲ್ಲಿ ಚಂದ್ರಾವತಿಯು ವಿವಾಹ ಪೂರ್ವದಲ್ಲಿ ಹೆತ್ತಮಗುವನ್ನು ಲೋಕ ನಗುವುದೆಂದು ನದಿಯಲ್ಲಿ ತೇಲಿ ಬಿಡಲು ತೀರ್ಮಾನಿಸುತ್ತಾಳೆ. ಆ ಸಂದಿಗ್ಧ ಸ್ಥಿತಿಯಲ್ಲಿ ವ್ಯಕ್ತವಾಗುವ ತಾಯ್ತನವನ್ನು ಗಿರಿಯಮ್ಮ ಹೀಗೆ ವರ್ಣಿಸಿದ್ದಾರೆ. ಕತ್ತಲೆಯಲಿ ಕಂದನ ಎತ್ತಿ ತಾ ನಡೆದಳು/ ಮತ್ತಗಮನೆ ನೀರತಡಿಗೆ/ಕೊಟ್ಟಳೆ ಸ್ತನ್ಯಪಾನ್ಯವ ತನ್ನ ಕಂದಗೆ/ಸ್ತೋತ್ರಮಾಡಿದಳೆ ನದಿಯ/ರಕ್ಷಿಸವ್ವ ತಾಯೆ ಎನುತ/ಎಡಬಲಕೊಲಿಯದೆ ಗಿಡಗಂಟೆ ಸೋಂಕದೆ ತಡಿಗೆ/ಸೇರಿಸು ಎನ್ನ ಮಗುವ/ ಕಡಲಶಯನನ ನಿನ್ನ ಕೈಯೊಳಗಿತ್ತೆನು 'ಕೊಲಲು ಕಾಯಲು ನಿನ್ನ ಭಾರ' ಎಂದು ಪಾಲಿಸವ್ವಾ ತಾಯಿ ಮೀನು ಮೊಸಳೆ ಮುಟ್ಟದ್ಹಂಗೆ ಎಂದು ನದಿಯನ್ನು ಪ್ರಾರ್ಥಿಸುತ್ತಾಳೆ.

ಮಗುವು ಉದ್ಧಾಳಿಕನಿಗೆ ಸಿಗುತ್ತದೆ. ತಾಯಿಲ್ಲದ ಮಗುವನ್ನು ತಂದೆಯೇ ತಾಯಾಗಿ ಸಲಹುವ ಪಿತೃವಾತ್ಸಲ್ಯವನ್ನು ಗಿರಿಯಮ್ಮ ವರ್ಣಿಸಿದ್ದಾರೆ. ಇದು ತಾಯ್ತನವನ್ನು ತಂದೆ ಅನುಭವಿಸುವ ಮಧುರ ಚಿತ್ರಣ. ಅತ್ತರೆ ಜೇನುತುಪ್ಪವ ತಂದು ಉಣಿಸುವ/ ತೊಟ್ಟಿಲ ಹಿಡಿದು ತೂಗುವನು/ ಅತ್ತಿತ್ತ ನೋಡದೆ ಆಲಂಬದಿಂದಲೆ ಹೊತ್ತುಗಳೆಯುತಲಿದ್ದ ಮುನಿ/ ಬಿಂಬಾಧರ ಮೊಳೆಹಲ್ಲು ಸುರಿವ ಜೊಲ್ಲುಕಂಗಳು ಕುಡಿನೋಟವೆಸೆಯೆ/ ಉಂಗುಉಕ್ಕು ಎಂಬ ಸುತನ ಲಾವಣ್ಯವ ಕಂಡು ಹಿಗ್ಗುತಲಿದ್ದ ಮುನಿ/ ಕುಳ್ಳಿರಿಸೊಮ್ಮೆ ಅಲ್ಲಲ್ಲೆ ಸಾಗಿಸುವನು/ ನಿಲ್ಲಿರಿಸೊಮ್ಮೆ ನೋಡುವನು/ ಮೆಲ್ಲನೆ ತೊದಲ್ನುಡಿಗಳ ಕೇಳಿ ಹಿಗ್ಗುವ ಗಲ್ಲಕೆ ಮುತ್ತನಿಡುವನು/ ಮಗ್ಗುಲೊಳಗೆ ಇಟ್ಟು ಮಲಗಿದ್ದ ತರುಳನ ಎಬ್ಬಿಸಿ ಮೈದಡುವುವನು. ಹಡೆದ ತಾಯಂದಿರು ಮಾತ್ರ ತಾಯಂದಿರಲ್ಲ. 'ತಾಯ್ತನ' ಎನ್ನುವುದೊಂದು ಭಾವ. ಅದಕ್ಕೆ ಜಾತಿ, ಲಿಂಗ, ಅಂತಸ್ತಿನ ಭೇದವಿಲ್ಲ ಎಂಬುದನ್ನು ಕೀರ್ತನೆಗಳಲ್ಲಿ ಧ್ವನಿಸಿದ್ದಾರೆ.

ಮುಂದೆ ಚಂದ್ರಾವತಿಯು ವಿಧಿ ಬರಹದಂತೆ ಉದ್ಧಾಳಿಕನ ಆಶ್ರಮಕ್ಕೆ ಬರುತ್ತಾಳೆ. ಅಲ್ಲಿ ಮಗ ನಾಶಿಕೇತನನ್ನು ನೋಡುತ್ತಾಳೆ. ಮಗನೆಂದು ಅರಿಯದ ಅವಳಿಗೆ ಮಾತೃವಾತ್ಸಲ್ಯ ಉಕ್ಕಿಹರಿಯುತ್ತದೆ. ಕಣ್ಣು ಅರಿಯದ್ದನ್ನು ಕರುಳು ಅರಿಯುತ್ತದೆ. ನಾನಾರೊ ಇವನ ಕಾಣುತ ಮೊಲೆದೊರೆದವು/ನೀರಿನೊಳಿಟ್ಟ ಬಾಲಕನು/ತೇಲಿಸಿ ಕಡೆಗೆ ತಂದಿಟ್ಟಳೊ ನದಿಯೀಗ ಪಾಲಿಸಿದರೊ/ ಮುನೀಶ್ವರರು/ ಬೆನ್ನದಡವಿ ತನ್ನ ಚಿಣ್ಣನ ನುಡಿಸಿದಳ್ ಕಣ್ಣಲಿ/ ಜಲವ ತುಂಬಿದಳು/ ನಿನ್ನ ಸಂತೈಸುವರಿಲ್ಲವೆ ಎಂದಳು/ ಬೆಂಬಲವಾಗಿ ಸಂಗಾತಲೆ ತಿರುಗುವಳು/

ಚಂದ್ರಹಾಸನ ಕಥೆಯಲ್ಲಿ ತಂದೆ ತಾಯಿಯನ್ನು ಕಳೆದುಕೊಂಡ ಚಂದ್ರಹಾಸ ಅನಾಥನಾಗುತ್ತಾನೆ.

ದಾಸಿಯೊಬ್ಬಳು ಅವನನ್ನು ಕಂಡು ಮರುಗುತ್ತಾ ಮಾತೃವಾತ್ಸಲ್ಯ ತೋರುತ್ತಾಳೆ. ತಿರಿದು ಹಾಕುವಳು ಪಾಲ್ಬೆಣ್ಣೆಯ

ಶಿಶುವಿಗೆ/ಎರೆದು ಪೋಷಣೆಯ ಮಾಡುವಳು/ತರಳಗೆ ಬೇಕಾದುದಿಲ್ಲದಿರಲು ದಾಸಿ/ ಮರುಗುತಿರ್ದಳು

ಮನದೊಳಗೆ/ದೇಶಾಧಿಪತಿಯ ಗರ್ಭದಿ ಬಂದು ನಿನಗೀಗ/ಹಾಸುವ ವಸ್ತ್ರಗಳಿಲ್ಲ/ಬೀಸಿ ತೂಗುವರೆ ತೊಟ್ಟಿಲು ಇಲ್ಲ

ಎನುತಲಿ ಬೇಸತ್ತು ಅಳುವಳೊಮ್ಮೆ/ಪಾಲನೆ ಮಾಡುವಳು ಪರಿಪರಿಯಲಿ ಬಾಲಲೀಲೆಯ ನೋಡಿ

ಹಿಗ್ಗುವಳು/ಶ್ರೀಲೋಲನೆ ನೀ ಗತಿಯೆಂದು ತರಳನ ಆಲಂಬನದಲಿರುತಿಹಳು.

ಅನಾಥನಾದ ಚಂದ್ರಹಾಸನಿಗೆ ಆ ಪುರದ ಸೂಳೆಯರು ತಾಯ್ತನವನ್ನು ತೋರಿಸುತ್ತಾರೆ: ಸೂಳೆವೆಣ್ಣುಗಳೆಲ್ಲ

ಸೆಳೆವೆತ್ತಿಕೊಂಡು/ತಮ್ಮಾಲಯದೊಳು ಕರೆದೊಯ್ದು/ಕಾಲತೊಳೆದು ಕಸ್ತೂರಿಯನಿಟ್ಟು ಮಲ್ಲಿಗೆ/ಮಾಲೆಯವನಿಗೆ

ಹಾಕುವರು/ಕದಳಿ ಖರ್ಜೂರ ಕಿತ್ತಳೆ ಜಂಬುನೇರಲ ಮಧುರ/ಮಾವಿನ ಫಲಗಳನು ಚದುರೆಯರೆಲ್ಲ ಕೊಟ್ಟು

ಮನ್ನಿಸುವರು. 'ಸೂಳೆ' ಎಂಬುದು ಒಂದು ವೃತ್ತಿವಾಚಕ. ಆದರೆ ಅದು ಹೆಣ್ಣನ್ನು ಅವಮಾನಿಸುವ ಶಬ್ದವಾಗಿ ಮಾರ್ಪಟ್ಟಿದೆ. ಹೆಣ್ಣಿನ ಪಾಲಿಗೆ ಇದು ಕರ್ಣಕಠೋರವಾದ ಶಬ್ದ. ಸೂಳೆಯಾದರೂ ಅವಳು ಹೆಣ್ಣು, ಅವಳಲ್ಲಿ ಮಾತೃ ಮಮತೆ ಇದ್ದದ್ದೆ. ಅದನ್ನು ಇಲ್ಲಿ ನಿಚ್ಚಳವಾಗಿ ಕಾಣಬಹುದು. ಇಲ್ಲಿ ಗಿರಿಯಮ್ಮ ತಾಯ್ತನಕ್ಕೆ ನ್ಯಾಯವನ್ನು ಒದಗಿಸಿದ್ದಾಳೆ.

ಲವಕುಶರ ಕಾಳಗದಲ್ಲಿ ಲವಕುಶರು ರಾಮನ ಅಶ್ವಮೇದದ ಕುದುರೆಯನ್ನು ಕಟ್ಟಿ ಬಂದು ಬಾಲರಿಬ್ಬರು ಬಂದು ತಾಯಿಗೆರಗುತ್ತಾರೆ /ಬಾಲಾರ ಬಿಗಿದಪ್ಪಿ ಸೀತೆ/ಹೋಳಿಗೆ ತುಪ್ಪ ಮಕ್ಕಳಿಗುಣಲಿಟ್ಟು/ಮೇಲೆ ನೊರೆಹಾಲು ಸುರುವಿದಳು/ಮಂಡಿಗೆ ತುಪ್ಪವು ಮಕ್ಕಳಿಗುಣಲಿಟ್ಟು/ತಂದು ನೊರೆಹಾಲು ಸುರುವಿದಳು/ಮುಂದೆ ಹತ್ತುಸಾವಿರ ಕೋಟಿ ಸೈನಿಕರು ಶತ್ರುಜ್ಞನು ದಂಡೆತ್ತಿ ಬಂದಾಗ ಬಾಲರಿಬ್ಬರು ಬಂದು ತಾಯಿಗೆರಗಿದಾಗ ಕುಶದರ್ಭಿಯಿಂದಲೆ ಬಿಲ್ಲುಬಾಣವ ಮಾಡಿ ಶಿಶುಗಳಿಗೆ ಕೊಡುತ್ತಾರೆ. ತಾಯಿಯ ಈ ವಾತ್ಸಲ್ಯವೆ ಮುಂದೆ ಶತ್ರುಜ್ಞನನ್ನು ಎದುರಿಸುವ ಬಲ ನೀಡುತ್ತದೆ. ಲಕ್ಷ್ಮಣನು ಯುದ್ಧದಲ್ಲಿ ಎದುರಾದಾಗ ತನ್ನ ತಾಯಿಯನ್ನು ಪರಿಚಯಿಸುತ್ತ ಮಕ್ಕಳು, ಮುನ್ನೂರರವತ್ತು ನೋಂಪಿಯನೊಂತಾಳು/ನಮ್ಮಮ್ಮ ನಮ್ಮ ಪಡೆದಾಳೊ/ಅನ್ಯಾಯದಾ ಸತಿ ಪಡೆದ ಮಕ್ಕಳಲ್ಲ/ಪುಣ್ಯವಂತೆಯ ಮಕ್ಕಳೆಂದರು–ಎನ್ನುವ ಮಕ್ಕಳ ಮಾತಿನಲ್ಲಿ ತಾಯಿಯೆಡೆಗಿನ ಪ್ರೀತಿಭಾವವನ್ನು ಕಾಣಿಸಿದ್ದಾಳೆ.

ಹರಪನಹಳ್ಳಿ ಭೀಮವ್ವನವರ 'ನಳಚರಿತ್ರೆ'ಯಲ್ಲಿ ಭೀಮರಾಯನು ಮಗಳು ದಮಯಂತಿಯನ್ನು ಬಿಗಿದಪ್ಪಿ ತೊಡೆಯಲಿಟ್ಟು ಮುದ್ದಿಸುತ ಮುಂಗುರುಳು ತಿದ್ದಿ ಮುಖ ಬೆವರುಗಳನ್ನು ಒರೆಸುತ್ತಾ 'ಸಂದೇಹ ಬ್ಯಾಡ ಸ್ವಯಂವರವ ಮಾಡುವೆ ಮನ್ನಕ್ಕೆ ಬಂದ ರಾಯರಿಗೊಲಿದು ವನಮಾಲೆ ಹಾಕು' ಎನ್ನುತ್ತಾ ಪಿತೃವಾತ್ಸಲ್ಯ ಮೆರೆಯುತ್ತಾನೆ.

ಶಕುಂತಲೆ ದುಷ್ಯಂತ ಮಹಾರಾಜನ ಹಾಡಿನಲ್ಲಿ ಭೀಮವ್ವ ಕಣ್ವ ಮಹರ್ಷಿಗಳ ವಾತ್ಸಲ್ಯ ಭಾವವನ್ನು ಹೀಗೆ ಚಿತ್ರಿಸುತ್ತಾರೆ. ಹೆಣ್ಣು ಕೂಸನು ಎತ್ತಿಕೊಂಡು ಕಾವಿಯ ಮರೆಮಾಡಿ ಕುಟೀರಕ್ಕೆ ಕರೆತರುತ್ತಾರೆ. ಎರೆದು ಕ್ಷೀರವನ್ಹಾಕಿ ಮರಕೆ ತೊಟ್ಟಿಲ ಕಟ್ಟಿ, ಅರಿವೆಯನ್ಹಾಸಿ, ಹೊದಿಸಿ, ಸರ್ವಋಷಿಗಳಿಗೆ ತೋರುತಾ ತಮ್ಮ ಮಗಳನು ಆಶೀರ್ವಾದ ಮಾಡಿ ಹರಸಿ ಎನ್ನುತ್ತಾರೆ. ಇಂತ ಮಗಳ ಪಕ್ಷಿಗಳು ಪಾಲಿಸಿದವು ಹೀಗಂತ ತಿಳಿದು ಮನದಲ್ಲಿ ಸಂತೋಷದಿಂದಲಿ ಶಾಕುಂತಲ ಎಂದು ನಾಮಕರಣ ಮಾಡುತ್ತಾರೆ.

'ಪತಿದಾನ ಕೊಟ್ಟ ಹಾಡಿ'ನಲ್ಲಿ ಸತ್ಯಭಾಮೆ ಕೃಷ್ಣನನ್ನು ನಾರದನಿಗೆ ದಾನ ಮಾಡಿಬಿಡುತ್ತಾಳೆ. ದೇವಕಿ ಯಶೋದೆಯರು ಬಂದು–ಎನ್ನ ಕೂಸಿನ ದಾನ ಕೊಡಲಿಕ್ಕೆ ನಿನಗೀಗೆ/ನಿನ್ನ ಸ್ವತಂತ್ರವೇನೆ/ ಚೆನ್ನವಾಯಿತೆ ಸತ್ಯಭಾಮೆಯೆ ನೀ ಎನ್ನ ಚಿಣ್ಣನ ತೋರೆಂದಳು/ನಂದ ಯಶೋದೆಯ ಕಂದನ ಕೊಡಲಿಕ್ಕೆ/ನೀ ಸ್ವತಂತ್ರವೇನೆ ಚೆನ್ನವಾಯಿತೆ ಸತ್ಯಭಾಮೆಯೆ ನೀ ಎನ್ನ ಕಂದನ ತೋರು – ಎಂದು ಮಾತೃವಾತ್ಸಲ್ಯ ಮೆರೆಯುತ್ತಾರೆ. ಇಲ್ಲಿ 'ಚೆನ್ನವಾಯಿತೆ' ಎನ್ನುವಲ್ಲಿ ಕವಯಿತ್ರಿ ತಂದಿರುವ ವ್ಯಂಗ್ಯ ಭಾವ ಬಹಳ ಉಚಿತವಾದದ್ದು. 'ಆ ಮಾತಾಡಿ ನೀನು ದೊಡ್ಡೋಳು ಅನ್ನಿಸಿಕೊಂಡೆ ಬಿಡು' ಎಂಬುದು ಜನವಾಡಿಕೆಯ ಮಾತಿನಂತಿದೆ. ಜನರ ಒಡನಾಟದಲ್ಲಿದ್ದಾಗ ಇಂಥ ನುಡಿಗಳು ಹೆಂಗಸರ ಬಾಯಿಂದ ಹೆಚ್ಚಿಗೆ ಬರುವುದನ್ನು ಗಮನಿಸಬಹುದು.

ಅಂಬಾಬಾಯಿಯವರು ತಮ್ಮ ಶ್ರೀಕೃಷ್ಣ ಬಾಲಲೀಲೆಯಲ್ಲಿ ತಾಯಿ ಯಶೋದೆಯು ಮಗುವನ್ನು ಕುರಿತು ಬೂಚಿ ಬಂದಿತೊ ರಂಗಾ ಪಾಚಿಕೊಳ್ಳೆಲೊ ಸ್ವಾಮಿ/ತಾಚಿಯ ಕೊಡುವೆ ಏಳುತಲೆ/ ಮೊಲೆಯುಣಿಸಿ ಬಾಚಿ ತಲೆಹೂವ ಮುಡಿಸುವೆ/ಹೊತ್ತಾಯಿತೆಲೊ ಕಂದ ಬತ್ತುತಿದೆ ಮೊಲೆಹಾಲು/ ಚಿತ್ತಜನಯ್ಯ ಕುಡಿಯಮ್ಮ/ಕುಡಿಯೆಂದು ಪಾಲುಣಿಸಿ ಎತ್ತಿ ಜೋಗುಳದಿ ಮಲಗಿಸುತ/ಸದ್ದು ಮಾಡಬೇಡಿ ಮುದ್ದು ಕಂದನಿಗೀಗ/ನಿದ್ರೆ ಬಂದಿಹುವುದು ಜಗವೆಲ್ಲ/ಉದರದಲಿ ಪೊದ್ದಿಕೊಂಡಿರುವ ಚಿಣ್ಣನಿಗೆ/ಅರೆನಿದ್ರೆಯಿಂದೆದ್ದು ಕಿರಿಕಿರಿಯ ಮಾಡದೆಲೆ/ಹರಿಸುಖದ ನಿದ್ರೆಗೈಯೆಂದು ಗೋಪಮ್ಮ ಸಿರಿಕಾಂತನನ್ನು ತೂಗಿದಳು/ಅಂಧಕಾರದ ಒಳಗೆ ಒಂದು ಇಲ್ಲದ ವೇಳೆ/ಕಂದನೆ ಆಲದೆಲೆ ಮೇಲೆ ಪವಡಿಸಿದರೆ ಅಂದ್ಯಾರು ನಿನ್ನ ತೂಗಿದರು/ಅಳದೆ ಆಡೆಲೆ ಕಂದ ಆನೆ ಕುದುರೆಯ ಕೊಡುವೆ/ಗಿಳಿ ಬಸವಣ್ಣ ಗೊಂಬೆಗಳ ನೋಡಮ್ಮ/ಎಳೆಗೂಸು ನೀ ಆಟ ಆಡಮ್ಮ/ರತ್ನ ಮಾಣಿಕದ ವಜ್ರ ಚಿನ್ನದುಂಗುರವಿಟ್ಟು/ರನ್ನೆಗೋಪಮ್ಮ ಬೆರಳುಗಳ/ ಹೊನ್ನ ತಾ ಗುಬ್ಬಿ ಆಡಿದಳು–ಎಂದು ಮಿತಿಯಿಲ್ಲದ ಮಾತೃವಾತ್ಸಲ್ಯದ ಚಿತ್ರಣವನ್ನು ನೀಡಿದ್ದಾರೆ. ತಾಯಿ ಪೋಷಣೆ ಬಲವೆ ಕಾಯುವುದು ಎನ್ನನು/ಕಾಯಕೊಬ್ಬಿರುವ ಕಂಸನ್ನ/ಕಂಸನಾ ಮದವನ್ನು ಆಯವರಿತು ನಾನು ಅಡಗಿಸುವೆ/ ಪಾಲಿಸಿದೆ ಎನ್ನ ನೀ ಲಾಲಿಸಿದೆ ಗೋಪಮ್ಮ/ಮೇಲೆ ಕಷ್ಟಗಳ ಸಹಿಸಿದೆ/ಸಹಿಸಿದಾ ಉಪಕೃತಿಯ ಮರೆಯಲಳವಲ್ಲ ಎನ್ನಿಂದ–ಎಂದು ಕೃಷ್ಣನ ಬಾಯಿಂದ ತಾಯಿಯ ಮೇಲಿನ ಅವನ ಪ್ರೀತಿಯನ್ನು ಹೇಳಿಸಿರುವುದು ಮನೋಹರವಾಗಿ ಮೂಡಿಬಂದಿರುವುದರ ಜೊತೆಗೆ ತಾಯಿ ಮುದ್ದುಗರೆಯುವುದು ಅನುಭವವೇದ್ಯವಾಗುತ್ತದೆ. ಪಾಚಿಕೊಳ್ಳೊ, ತಾಚಿಕೊಡುವೆ– ಇಂಥ ಪ್ರಯೋಗಗಳು ತಾಯಿಂದ ಮಾತ್ರ ಸಾಧ್ಯವಾಗುವುದು. ಇವು ಸ್ತ್ರೀತ್ವದ ಚಿಲುಮೆಗಳು.

ಅಂಬಾಬಾಯಿಯವರ 'ಶ್ರೀಕೃಷ್ಣ ಬಾಲ ಲೀಲೆ ಜೋಗುಳ' ಎನ್ನುವ ದೀರ್ಘಕೀರ್ತನೆಯಲ್ಲಿ 'ಪುಟ್ಟೀತು ಮನದಲ್ಲಿ ಕೃಷ್ಣಲೀಲೆಯ ಸ್ಮರಣೆ ಥಟ್ಟನೆದ್ದೀಗ ಬರೆಯುವೆ' ಎನ್ನುವಲ್ಲಿ ಕೀರ್ತನೆಯ ಕಥಾವಸ್ತುವಿನ ಹೊಳಹಿದೆ. 'ಕೃಷ್ಣ ನಿನ್ನ ನೆನಹೇ ಆನಂದ' ಎನ್ನುವರು. ಪದ್ಯದ ಗುರಿಯೂ ಅಷ್ಟೇ ಆದರೂ ಕೀರ್ತನೆಯ ತುಂಬೆಲ್ಲಾ ಮಾತೃವಾತ್ಸಲ್ಯ ಉಕ್ಕಿ ಹರಿದಿದೆ.

ತೊಡೆಯಮೇಲೆ ಮಲಗಿ ಮೊಲೆಹಾಲನುಣುವಾಗ

ಕೊರಳ ಸರವನೆ ಪಿಡಿದು ಅರೆಗಣ್ಣು ನೋಟದಲಿ

ಕಿರುನಗೆಯ ನಗುತ ಶ್ರೀಕೃಷ್ಣಾ/ಶ್ರೀಕೃಷ್ಣಾ ಮೊಲೆಯುಣುವಾ

ವರಭಾಗ್ಯ ಗೋಪಿ ಹೊಂದಿದಳು' ಎನ್ನುವ ತಾಯ್ತನದ ಸುಖ ಎಲ್ಲ ತಾಯಂದಿರ ಪಾಲಿನ ಅನುಭವ. ತಾಯಿ ಮಾತ್ರ ಅನುಭವಿಸಬಲ್ಲ ಸುಖ.

ತೊಟ್ಟಿಲೊಳು ಮಲಗುತ್ತ ಬೊಟ್ಟು ಬಾಯಲಿ ಚೀಪಿ

ಪುಟ್ಟಪಾದವ ಹಿಡಿದು ಕೈಯಲಿ/ಕೈಪಿಡಿದು ಉಂಗುಷ್ಟ

ಕೃಷ್ಣ ಜುರಜುರನೆ ಚೀಪಿ ನಲಿಯುವನು/

ಎಂದು ಹೀಗೆ ಕೃಷ್ಣ ಬಾಲಲೀಲೆಗಳು ಕಣ್ಣಿಗೆ ಕಟ್ಟುವಂತಿದೆ. ಇಂತಹ ವರ್ಣನೆಗಳು ಪರಂದರದಾಸರ ನಂತರ ದಟ್ಟವಾಗಿ ಕಾಣಸಿಗುವುದು ಮಹಿಳಾ ಕೀರ್ತನಕಾರ್ತಿಯರಲ್ಲೆ ಎನ್ನಬಹುದು.

**ಶೃಂಗಾರ**

ಶೃಂಗಾರವನ್ನು ಯೋಚಿಸಿ ಬರೆದರೆ ಶುಷ್ಕವಾಗುತ್ತದೆ. ಅತಿರೇಕಕ್ಕೆ ಹೋದರೆ ಅಶ್ಲೀಲ ಸಾಹಿತ್ಯವಾಗುವ ಅಪಾಯವಿದೆ. ಇಲ್ಲಿ ಶೃಂಗಾರವನ್ನು ಭಗವಂತನನ್ನು ತಲುಪುವ ಮಾರ್ಗವನ್ನಾಗಿ ಮಾಡಿಕೊಂಡಿರುವುದು ಇವರ ರಚನೆಗಳ ವೈಶಿಷ್ಟ್ಯತೆ. ಶೃಂಗಾರದ ವರ್ಣನೆಯ ಪದ್ಯಗಳು ಕೀರ್ತನಕಾರರು ಅದುಮಿಟ್ಟ ಸ್ತ್ರೀ ಸಹಜ ಭಾವನೆಗಳ ನಿಗೂಢ ಧ್ವನಿಗಳೂ ಆಗಿವೆ.

ಗಲಗಲಿ ಅವ್ವನವರು ತಮ್ಮ 'ಗೋಪಿಗೀತ'ದಲ್ಲಿ (ಕೀ.೨೦೭) ಕೃಷ್ಣನ ಶೃಂಗಾರ ಭಾವವನ್ನು ಹೀಗೆ ವರ್ಣಿಸುತ್ತಾರೆ. ನಳಿನಾಕ್ಷಿಯರ ಮನ ಕೊಳಲೂದಿ ರಾತ್ರಿಲೆ/ಸೆಳೆದೆಲ್ಯೋ ಕಪಟಭಾವದಲಿ ಕೃಷ್ಣ/ಎಳೆಯ ಮಕ್ಕಳು ಗಂಡ ಉಳಿದ ಭಾಗ್ಯವ ಬಿಟ್ಟು/ಅಳೆದಲ್ಲೊ ಅವರ ಒಗೆತನವ/ಭಾವಮೈದುರನ್ನು ಕೇವಲ ತುಚ್ಛಿಸಿ/ಧಾವಿಸಿ ಬಂದ ಬಾಲೆಯರ ಕೃಷ್ಣ/ಪಾವನ ಮಾಡದೆ ದೇವ ರಾತ್ರಿಯೊಳು/ ಯಾವ ಪಾಶವ ಬಿಡಿಸಿದೆಯೊ/ಕಾಲೀನ ಗೆಜ್ಜೆಯು ಮ್ಯಾಲೆ ಕೊರಳೀಗೆ ಕಟ್ಟಿ ಮೇಲಾದ ಸರ ಕಾಲಿಗ್ಹಾಕಿ/ಶಾಲೆ ಹಂಬಲಬಿಟ್ಟು ಲೋಲಾಕ್ಷಿ ನಡೆದಳು/ಕೋಲಾಹಲವ ಮಾಡಿಸಿದೆಯೊ/ಹಣೆಗೆ ಕುಂಕುಮ ಗಲ್ಲಕ್ಕೆ ಕಾಡಿಗೆ/ಚೆಲುವ ಫಣಿಗೆ ಅರಿಶಿನವು ಬಾಲೆ/ನಲ್ಲೆಯರೆಲ್ಲರು ತಮ್ಮ ವಲ್ಲಭರ ಬಿಟ್ಟು ಅಲ್ಲೆ ರಾತ್ರಿಲೆ ವರಗಿದರು/

ಹೀಗಾಗಲು ಕಾರಣ ಮೇಲುನೋಟಕ್ಕೆ ವ್ಯಾಮೋಹ, ಲಂಪಟತನ ಅನ್ನಿಸಬಹುದಾದರೂ ಆಧ್ಯಾತ್ಮ ನೆಲೆಯಲ್ಲಿ ಅವಲೋಕಿಸಿದಾಗ ಇದು ಅವರ ಮನಗಳಲ್ಲಿ ಬಂದ 'ಕೃಷ್ಣ ಭಾವ'. ಅದರಲ್ಲಿ ಮೈ ಮರೆಯುವಿಕೆಯೂ ಆಗುತ್ತದೆ.

ಶಕುಂತಲೆ ದುಷ್ಯಂತ ಮಹಾರಾಜನ ಹಾಡಿನಲ್ಲಿ ಭೀಮವ್ವ ಶಕುಂತಲೆ ದುಷ್ಯಂತ ಪ್ರಥಮ ಭೇಟಿಯನ್ನು ವರ್ಣಿಸುತ್ತ, ಶಕುಂತಲೆಯ ಮುದ್ದು ಚರಣಶಿರ ಪರ್ಯಂತ್ರ/ ಹರಿದಾಡುವಂತಹ ಭ್ರಮರವ ನೋಡಿ/ ದೊರೆ ದುಷ್ಯಂತನು ಭ್ರಮರ ಮಾಡಿದ ಪುಣ್ಯ ಭಾಳಾಗಿ ಕಾಂಬೊದು/ ಧರಿಸಿ ವೈರಾಗ್ಯ ತಪಾಚರಿಸಿ ಶ್ರೀಹರಿಯನ್ನು/ ಒಲಿಸಿಕೊಂಡು ವರ ಪಡೆದು ಬಂದಿಹುದೆನೊ/

ಸರಸಿಜಾಕ್ಷಿಯ ಕೂಡ ಸರಸವಾಡುವುದೀಗ ನಟ/ಪುರುಷನಂತೆ ಕೀಟಕ ಮಾಡುವುದು/ಇವಳ ಹವಳ ಕುಡಿಯ ತುಟಿಗೆ ಚುಮ್ಮನೆ ಕೊಡುವುದೀ ಮುದ್ದುಮುಖವನ್ನು/ಮಿಟಿಮಿಟಿ ನೋಡುವುದು ಮಿಂಚಿನಂತ ದೇಹ/ಎನ್ನ ಕ್ಲೇಶಬಡಿಸುವುದು ಎನಗಿಂತ ಮೊದಲೆ ಅಂಗಕೆ ಆಲಿಂಗನೆಯ ಕೊಡುತಿಹುದು– ಎಂದುಕೊಳ್ಳುತ್ತಾನೆ.

ಇವರ ಗೊಲ್ಲತಿ ಹಾಡಿನಲ್ಲಿ ಗೋಪಿಯು ಕೃಷ್ಣನ ಸಂಗದಲ್ಲಿದ್ದು ಮನೆಗೆ ಬರುತ್ತಾಳೆ. ಕಾಣುತ್ತ ಅತ್ತೆಯನು ಕಂಬ ಮರೆಮಾಡಿ ನಿಲ್ಲುತ್ತಾಳೆ. ಅತ್ತೆ ಗಲ್ಲ ಪಿಡಿದು ಕೇಳುತ್ತಾಳೆ, ಸಲ್ಲಲಿತಾಂಗಿ ನಿನ್ನ ಗಲ್ಲದ ಮೇಲೆ/ಸುಳಿಪಲ್ಲಿನ ಗಾಯವಿದೆ/ಬಲ್ಲಿದ ಮುಡಿಯೊಳು/ಮಲ್ಲಿಗೆ ಮುಡಿಸಿದ ವಲ್ಲಭದಾರೀಗಲೆ ನೀ ಪೇಳೆ/ಉಟ್ಟ ನೀರಿ ಸಡಲಿ/ಬೊಟ್ಟು ಕುಚವು ಬಳಲಿ/ಕಟ್ಟಿದಾ ಮುಡಿ ಸೊಡಲಿ/ದೃಷ್ಟಿಸಿ ನೋಡಲು/ಕುಂಕುಮಖದಲಿ/ಎಷ್ಟೆಂತ ನಾ ಪೇಳಲಿ ಏನ ಹೇಳಲಿ/ಜಾರೆ ಹೆಂಗಸೆ ನಿನ್ನ/ಯಾರೇನು ಮಾಡಿದ್ದು – ಎನ್ನುತ್ತ ಅವಳ ನಾಚಿಕೆಯ ಹಿಂದಿನ ನಿಜವನ್ನು ಬಯಲಿಗೆಳೆಯುತ್ತಾಳೆ.

'ಚೇಳಿನ ಹಾಡು' ಎಂಬುದು ಕೃಷ್ಣನು ರುಕ್ಮಿಣಿಯ ಸಮಾಗಮಕ್ಕಾಗಿ ಚೇಳಿನಿಂದ ಅವಳನ್ನು ಕಡಿಸಿ ತನ್ನ ಸನಿಹ ಬರುವಂತೆ ಮಾಡುವ, ಅವನ ಚೇಷ್ಟೆಗಳನ್ನು ವರ್ಣಿಸುವ ಶೃಂಗಾರಕಾವ್ಯವೇ ಆಗಿದೆ.

ಕೃಷ್ಣ ಶೃಂಗಾರನಾಯಕ. ಅವನ ಸುತ್ತ ಸುಳಿಯುವವರು ಶೃಂಗಾರನಾಯಕಿಯರು. ಇಲ್ಲಿ ಶೃಂಗಾರದ ವರ್ಣನೆಗಳು ಪುರುಷ ಕೀರ್ತನಕಾರರಿಗೆ ಸರಿಸಮನಾಗಿ ವರ್ಣಿತವಾಗಿಲ್ಲದಿದ್ದರೂ ಹೆಣ್ಣಾಗಿ ಏನನ್ನು ಹೇಗೆ ಎಷ್ಟು ಹೇಳಬೇಕೆಂಬ ವಿವೇಕ–ವಿವೇಚನೆಯಿಂದ ಇವರು ಹೇಳಿದ್ದಾರೆ.

**ಹಾಸ್ಯ**

ಗಲಗಲಿ ಅವ್ವನವರು ಗೋಪಿಗೀತವೊಂದರಲ್ಲಿ ಗೋಪಿಕೆಯರು ಕೃಷ್ಣನ ಸೆಳೆತಕ್ಕೆ ಒಳಗಾಗಿ ಮಾಡಿದ ಮತಿಹೀನ ಕೆಲಸಗಳನ್ನು ಹೀಗೆ ವಿನೋದವಾಗಿ ವರ್ಣಿಸಿದ್ದಾರೆ. ಚಿತ್ತಚಂಚಲೆವಾಗಿ ಎತ್ತಿಗೆ ಮುರವಿಟ್ಟು/ಮತ್ತೊಂದು ಹೋರಿಯ ತರಿಸೆ ಬಾಲೆ/ ಹತ್ತಿರಿದ್ದವರೆಲ್ಲ ನಗುವರು/ಮಂಗನ ಮರೆಯೆತ್ತಿ ಅಂಗಿಯ ತೊಡಿಸುತ/ ರಂಗನ ಬಳಿಗೆ ಬಾರೆಂದು ಕಂದ/ಅಕ್ಕತಂಗಿಯರು ಕಂಡು ಹಂಗಿಸಿ ನಗುವರು/ಬೆಕ್ಕಿನ ಬಾಯಿಗೆ ಇಕ್ಕುತ ತುತ್ತನೆ/ಚಿಕ್ಕ ಕಂದಯ್ಯ ಉಣ್ಣೆನುತ ಬಾಲೆ ನಕ್ಕರು/ಗೆಳತಿಯರು ಚಕ್ಕನೆ/

ಮುಯ್ಯದ ಹಾಡಿನಲ್ಲಿ ಮುಯ್ಯ ತಂದ ದ್ರೌಪದಿ ಸುಭದ್ರೆಯನ್ನು ರುಕ್ಮಿಣಿ ಸತ್ಯಭಾಮೆಯರು ಎದುರುಗೊಳ್ಳುವುದಿಲ್ಲ ಅದನ್ನು ಹೀಯಾಳಿಸುತ್ತಲೆ ವ್ಯಂಗ್ಯ ಮಾಡಿ ಹೀಗೆ ನಗುತ್ತಾರೆ. ನೀರಜಾಕ್ಷಿಯರ ನಿನ್ನ ದ್ವಾರದಿ ನಿಲ್ಲಿಸಿದಿ/ಘೋರ ಬುದ್ದಿಯನೆಲ್ಲಾ ತೋರಿಸಿದ ಈಗ/ಹೀನಗುಣದ ಬಾಲೆ ಮಾನವು ನಿನಗಿಲ್ಲ/ಶ್ರೀನಿವಾಸನು ನಿನ್ನ ಏನೆಂದು ಮದುವೆಯಾದ/ರಜವೆಂಬೊ ಗುಣ ಸೇರಿ/ರಾಜ್ಯ ಭೋಗವ ಬಿಟ್ಟೆ/ತ್ರಿಜಗವಂದನ ಕೂಡ ಭುಜಗಾಲಿಂಗನೆ ಯಾಕೆ/ಸತ್ವಗುಣವ ಸೇರಿ ಅತ್ಯಂತ ಸುಖಿಸಿದಿ/ಚಿತ್ತಜನಯ್ಯನೆಗೆ ಪತ್ನಿ ತಕ್ಕವಳಲ್ಲ/ತಮವೆಂಬೊ ಗುಣಗಳ/ ಸುಮ್ಮನೆ ಗುತ್ತಿಗೆ ಹೊತ್ತಿ/ರಮಿ ಅರಸನ

ಕೂಡ/ರಮಿಸೋದು ತರವಲ್ಲ- ಹೀಗೆ ಪರಸ್ಪರರು ನಿಂದಿಸುವಂತೆ ಕಂಡರೂ ಅದು ಮುಯ್ಯದ ಹಾಡಿನಲ್ಲಿ ಬರುವ ಹಾಸ್ಯದ ನೆಲೆಯಲ್ಲಿದೆ.

ಪಾರ್ಥನನ್ನು ಹಾಸ್ಯಕ್ಕೆ ಗುರಿಮಾಡಿರುವ ಕೀರ್ತನೆಯೊಂದಿದೆ. ಗಂಡಸಲ್ಲವೊ ಇಂತ ಬಾಳು ನಿನಗೆ/ಗಾಂಡೀವಿ ಯಾತಕೆ ಹೇಳೊ/ಷಂಡನೆಂದರೆ ಇಂತಹ ಬಾಳುವೆ ನಾಚಿಕೊಂಡು ಬರಲಿಲೇನೋ ಹೇಳೊ/ಬಿಲ್ಲು ಕಂಡರೆ ನಿನಗೆ ಭೀತಿಯೆ/ಒಳ್ಳೆ ಚೆಲುವೆಯರ ಮ್ಯಾಲೆ ಅತಿ ಪ್ರೀತಿಯೊ/ನಲ್ಲಹೀನಳ ಬೆರೆದ ಖ್ಯಾತಿಯೊ-ಎನ್ನುತ್ತ ಪರಿಹಾಸ್ಯ ಮಾಡಿದ್ದಾರೆ. (ಕೀ.೧೯೫).

ರುಕ್ಮಿಣಿಯನ್ನು ಕುರಿತು ಕೇಳಿ, ರುಕ್ಮಿಣಿ ನಿನ್ನ ಭಾಳ ಚಾಪಲ್ಯ ನೋಡಿ/ಹೇಳ ಕೇಳದಲೆ ಹಿರಿಯರ/ಕೃಷ್ಣಯ್ಯ ಭೋಳೆತನದಿಂದ ಮದುವ್ಯಾದ/ಗಂಡನ ಎದುರಿಗೆ ಗಂಡು ಗಚ್ಚಿಯ ಕಟ್ಟಿ/ ಗಂಡಸಿನಂತೆ ಧನುವೆತ್ತಿ ಕಾದಿದ/ಬಂಡುಗಾರತಿಯೆ ನಿನ ತಂಗಿ ಎಂದು ಹಾಸ್ಯ ಮಾಡಿ ನಗುತ್ತಾರೆ.

ಸುಭದ್ರೆಯನ್ನು ಕುರಿತು (ಕೀ.೬೬) ಕೀರ್ತನೆಯೊಂದರಲ್ಲಿ ಸತಿಯು ಸುಭದ್ರೆ ನೀನು ಯತಿಯ ಬೆನ್ನತ್ತಿದಾಗ/ಅತಿ ಭೀತಿ ಎಲ್ಲಿ ಅಡಗಿತ್ತ ನಾವು/ನಿನ್ನ ಪತಿವ್ರತಾತನವ ಅರಿಯೆನೆ/ಎಂದು ಹಾಸ್ಯಗೈಯುತ್ತಾರೆ.

ಹೆಳವನಕಟ್ಟೆ ಗಿರಿಯಮ್ಮನ 'ಸೀತಾಕಲ್ಯಾಣ' ಕೃತಿಯಲ್ಲಿ ಮದುವೆಯ ಸಂದರ್ಭದಲ್ಲಿ ರಾಮನು ಸೀತೆಯನ್ನು ಎತ್ತಿಕೊಳ್ಳುವ ಸಾಂಪ್ರದಾಯಿಕ ಪ್ರಸಂಗವೊಂದು ಬರುತ್ತದೆ. ಅರಳುವ ಕೆಂದಾವರೆ ಕುಸುಮ/ಪರಿಮಳ ಸುರಮ್ಯ ಕಣ್ಗೆಸೆಯೆ/ಎರಗುವ ಮರಿದುಂಬಿಗಳಂತೆ ರಾಘವ/ಕರಗಳ ಪಿಡಿದೆತ್ತಿದ ಸತಿಯ/ಇಳೆಯ ಜಗಂಗಳನುದರದಲಿ/ಅಳವಡಿಸಿದ ಮಹಾತ್ಮಕನು/ಇಳೆಯ ಮಗಳನು ಎತ್ತಲಾರದೆ ರಾಮ/ಬಳಲಿದನೆಂದು ನಕ್ಕರು ಜನರು-ಹೀಗೆ ಹಾಸ್ಯಕ್ಕಾಗಿಯೇ ಮಾಡುವ ಕೆಲವು ಸಂಪ್ರದಾಯಗಳಿವೆ. ವಧುವರರು ಪರಸ್ಪರರನ್ನು ಅರ್ಥೈಸಿಕೊಂಡು, ಹತ್ತಿರವಾಗಿ ಮುಜುಗರಗಳನ್ನು ದೂರಮಾಡಿಕೊಳ್ಳುವುದು ಇದರ ಉದ್ದೇಶ.

ಹರಪನಹಳ್ಳಿ ಭೀಮವ್ವನವರು ತಮ್ಮ ಕೀರ್ತನೆಯಲ್ಲಿ (ಕೀ.೧೨೮) ಏನಂತೊಲಿದೆ ಸತ್ಯಭಾಮೆ ಏನಂತೊಲಿದೆ. ಕೃಷ್ಣ ಜೋಡು ಕಂಗಳ ತೆರೆದಿರುವೋನೆ, ನೀರೊಳಾಡಿ ನಾರುತ ಮೈಹೊರೆಯೋನೆ, ಸತಿರೂಪದಿಂದ ಅಸುರರನೆಲ್ಲಾ ಭಾಳ ಮತಿಗೆಡಿಸಿದ, ಕೊರಳಲ್ಲಿ ಕರುಳಾಭರಣವೇನೆ, ಬಾಯಿ ತೆರೆದು ನೋಡಲು ಭಯವಿಲ್ಲವೇನೆ, ಹಾವಿನ ಸರ ಹಾರಗೊಳಿತೇನೆ, ರುಂಡಮಾಲೆಯ ಕಂಡು ಅಂಜಿಕಿಲ್ಲೇನೆ-ಎನ್ನುತ್ತಾ ಕೃಷ್ಣನ ಅವತಾರಗಳನ್ನು ವಿಡಂಬಿಸಿದ್ದಾರೆ. ಇನ್ನೊಂದು ಕೀರ್ತನೆ(ಧ್ವನಿ.೪೬)ಯಲ್ಲಿ ಗರತಿಯರಾದರೆ ಗಂಡನ ಕೊಡುವುದು/ನಿರುತ ಸತಿಯರ ನೀತ್ಯೇನೆ ಸಖಿಯೆ/ಸತ್ಯಭಾಮೆ ಅರಸನ ದಾನ ಕೊಡುವೋರೆ ಸಖಿಯೆ/ಏಕಪುಷ್ಪಕೆ ನೀನನೇಕ ಕದನ ಮಾಡಿ/ಲೋಕಾಧಿಪತಿಯ ಗಸುಗುಟ್ಟಿ ಸಖಿಯೆ/ತಿಕ್ಕುತ ಪಾಕಶಾಸನನ ಜಯಿಸಿದೆ/ಕಂತುಪಿತನಿಗೆ ಶಮಂತಕ ಕಳುವಿಟ್ಟ/ಎಂತ ಧಾರ್ಮಿಕನೆ ನಿಮ್ಮಯ್ಯ/ ರಂಗಗೇನಂಥ ನಿಂದ್ಯೆಗಳ ನುಡಿವೋರೆ – ಎಂದು ಮುಯ್ಯದ ಹಾಡಿನಲ್ಲಿ ಹಾಸ್ಯದ ನೆಲೆಯಲ್ಲಿ ಛೇಡಿಸುವ ಮಾತುಗಳಿವು.

ದ್ರೌಪದಿಯನ್ನು ಕುರಿತು (ಧ್ವನಿ-೪೭) ಚೆನ್ನಿಗ ಪುರುಷನ ಸನ್ಯಾಸಿ ರೂಪದಿ/ಧರ್ಮನ ಎಲ್ಲಿ ಅಡಗಿಸಿದೆ/ನೀ ಮಾನ್ಯ ಮಾನ್ಯರೊಳಗೆ ಕಂಕನೆನಿಸಿದೆ ಸಖಿಯೆ/ಗಾಂಡೀವಿ ಅಡಗಿಸಿ ಬೃಹನ್ನಳೆ ಎನಿಸಿದೆ/ಹೆಂಗಸರೊಳಗೆ ಸರಿಮಾಡಿದೆ ಸಖಿಯೆ/ಗಂಡನ ಸಂಗೀತ ಹೇಳಕಳಿಸಿದೆ/ರಾಜ್ಯಾಧಿಪತಿ ಒಯ್ದು ತೇಜಿ ಕಾಯಲು ಹಚ್ಚಿ/ಮೋಜು ನೋಡುತಲಿ ಕುಳಿತೀಯೆ ನಿನ ಕೀರ್ತಿ/ ಈ ಜಗದೊಳಗೆ ಬೆಳೆದಾವೆ/ಚಿಕ್ಕ ಪುರುಷನ ನೀ ವತ್ಸ ಗೋವುಗಳ ಕಾಯ/ಲ್ಹಚ್ಚಿದೆ ಹ್ಯಾಗೆ ಹರುಷದಿ ಗಂಡನ/ ಕುತ್ತಿರರೊಳಗೆ ಸರಿಮಾಡಿದೆ/ಬಲವಂತ ಪುರುಷನ ಒಲೆಯ ಮುಂದೊಡ್ಡಿದೆ/ಛಲದಿಂದ ಹುಟ್ಟು ಹಿಡಿಸಿದೆ/ಭೀಮನ ಚೆಲ್ವಿಕೆಯೆಲ್ಲಿ ಅಡಗಿಸಿದೆ-ಎಂದು ಪಾಂಡವರ ಅಜ್ಞಾತವಾಸಕ್ಕೆ ನೀನೇ ಕಾರಣವೆಂದು ದ್ರೌಪದಿಯನ್ನು ಪರಿಹಾಸ್ಯ ಮಾಡುತ್ತಾರೆ.

**ವಿರಹ**

'ಯಾಕೆ ಬಾರನಕ್ಕಯ್ಯ' ಎನ್ನುವ ಕೀರ್ತನೆಯಲ್ಲಿ ಗಿರಿಯಮ್ಮ ಪ್ರಾಣನಾಥನ ಕರೆತಾರೆ ಸೈರಿಸಲಾರೆ/ ಸೋಗೆಗಂಗಳ ಸನ್ನೆ ಮಾಡಿ ಪೊಳೆದು ಪೋದ/ಮೇಘದ ಮಿಂಚಿನಂತೆ ಮಂದರೋದ್ಧಾರ/ ಬಾಗಿದ ಮುಖವೆತ್ತಿ ಎನ್ನ ನೋಡದೆ ಪೋದ/ಈಗಲವನ ಮನಸ್ಯೆರಡಂಗವಾಗಿದೆ/ಹ್ಯಾಂಗ ಮಾಡಲಿ ಸಖಿಯೆ/ಹೇಳಲಿ ಪ್ರಿಯೆ/ಕರವೊಡ್ಡಿ ಬೇಡಿದರೆ ಒಲ್ಲದೆ ಪೋದ/ಕರೆದರೆ ಪಿತನಾಜ್ಞೆ ತೋರುತಾನೆ/ ನಿರುತದಿ ಏಕಪತ್ನಿಯ ವ್ರತನೆನುತ/ಸರಿಬಂದ ಸತಿಯರ ಒಡನಾಡುತ ಇದಾನೆ/ಸುಮ್ಮನೆ ಲಜ್ಜೆ ಭಂಗವ ಮಾಡಿ ಹೋದನೆ/ಒಮ್ಮೆ ಮನೆಗೆ ಬಾರನೆ/ಹೆಳವನಕಟ್ಟೆ ರಂಗನ ಗುಮ್ಮನೆ ಕರೆದುತಾರೆ ಸೈರಿಸಲಾರೆ/ ಎನ್ನುತ್ತಾ ವಿರಹವನ್ನು ವ್ಯಕ್ತಪಡಿಸುತ್ತಾಳೆ.

ಇಲ್ಲಿ ಚಿತ್ರತವಾಗಿರುವುದು ಕೃಷ್ಣನ 'ಕಳ್ಳಾಟ'. ಇದನ್ನು 'ನೆಪ ಶೃಂಗಾರ' ಎಂದು ಗುರುತಿಸಬಹುದು. ಏಕೆಂದರೆ ಅವನ ಚರ್ಯೆ ಯಾವುದೂ ನಿಜವಲ್ಲ. ಬರಿ ತೋರಿಕೆಯದು. ಮುಖ್ಯವಾಗಿ ಕಾಡುವುದು, ಕಾಡಿಸುವುದು ಕೃಷ್ಣನಿಗೆ ಚಿಕ್ಕಂದಿನಿಂದ ಮೈಗೂಡಿದ ಕಲೆ. ಇದನ್ನೇ ಗಿರಿಯಮ್ಮ ಧ್ವನಿಸಿದ್ದಾಳೆ.

ಪತಿದಾನ ಕೊಟ್ಟ ಹಾಡಿನಲ್ಲಿ ಹರಪನಹಳ್ಳಿ ಭೀಮವ್ವನವರು (ಧ್ವನಿ ೫೦ರಲ್ಲಿ) ಸತ್ಯಭಾಮೆಯ ವಿರಹವೇದನೆಯನ್ನು ಚಿತ್ರಿಸಿದ್ದಾರೆ. ಮುತ್ತು ಮಾಣಿಕ್ಯ ನವರತ್ನದ ಆಭರಣವೆಲ್ಲವನ್ನು ಬಿಸುಟು ಮಂಚದಿ ಮುಡಿ ಬಿಟ್ಟು ಹೊರಳುತ್ತಾಳೆ. ನಾನಾ ಪರಿಯಲ್ಲಿ ಎನ್ನ ಸಾಧಿಸಿ ಕರೆತಂದ, ರುಕ್ಮಿಣಿ ಬಂದ ಮೇಲೆ ಲೆಕ್ಕಿಸುವುದಿಲ್ಲ, ಇರಲಾರೆ ನಾನಿಂದು ವಿರಹ ತಾಪಗಳಿಂದ. ಅರೆಗಳಿಗೆಯಲ್ಲಿ ಪ್ರಾಣ ಕಳೆದುಕೊಳುತ್ತೇನೆ ಎನ್ನುತ್ತಾಳೆ. ಎದೆಯಲ್ಲಿ ಅನಂಗನ ಬಾಣ ತಾಗಲು ಕೃಷ್ಣ ಕೃಷ್ಣ ಎನುತ್ತಾ ಪತಿಯ ವಿರಹತಾಪದಿಂದ ಹೊರಳುತ್ತಾಳೆ. ಇದು ವಿರಹವಷ್ಟೇ ಅಲ್ಲ, ತನ್ನವನು ಸವತಿ ಪಾಲಾದಾಗಿನ ಈರ್ಷ್ಯೆಯೂ ಹೌದು. ಈ ಎರಡೂ ಮಿಳಿತವಾದ ಭಾವದಲ್ಲಿ ಅವಳು ಪಡುವ ಮನೋವೇದನೆ ಇಲ್ಲಿದೆ. ಇಂಥ ವರ್ಣನೆ ಹೆಣ್ಣಿನಿಂದ ಮಾತ್ರ ಸಾಧ್ಯ.

ಶಕುಂತಲೆ ದುಷ್ಯಂತ ಮಹಾರಾಜನ ಹಾಡಿನಲ್ಲಿ ಭೀಮವ್ವ ಶಕುಂತಲೆಯು ದುಷ್ಯಂತನ ನೆನಪಿನಲ್ಲಿ ವಿರಹವನ್ನು ಅನುಭವಿಸುವಾಗ ಸಖಿಯರೆಲ್ಲ ಒರಗುತಲಿ ಮರುಗುತಲಿ ಸೊರಗಿ

ಸುಮ್ಮನೆ ಬಿದ್ದು/ಕೊರಗುತಲಿ ಕುಂದಿರುವ/ ಮಾನಿನಿಯ ಎತ್ತಿ ಮಾಲಿನಿ ತೀರಕ್ಕೆ/ಮಾವಿನ ಗಿಡ ತಂಪಲಿ ಮಲಗಿಸಿದರು/ಹಾಸು ಬಂಡೆಯಲ್ಹಾಸುತ ಮಲ್ಲಿಗೆ/ಬೀಸುತ ಗಾಳಿ ಪನ್ನೀರು ತಂದು ಹಾಕುವರು/ – ವಿರಹದುರಿಯನು ತಣಿಸುವರು. ಈ ಕ್ರಿಯೆಗಳು ಶೈತ್ಯೋಪಚಾರವೆನಿಸುತ್ತವೆ. ಇಂಥವನ್ನು ಮಾರ್ಗ–ದೇಸೀ ಕಾವ್ಯಗಳಲ್ಲಿಯೂ ಕಾಣಬಹುದಾಗಿದೆ.

ರತಿಕಲ್ಯಾಣದಲ್ಲಿ ರತಿ ಅಗಲಿದಾಗ ಮನ್ಮಥನು, ಅನ್ನವಸ್ತ್ರಗಳಲ್ಲ ಚಿನ್ನದಾಭರಣ/ ಕಣ್ಣಲಿ ನೋಡಲೊಲ್ಲನು/ ಸೆಳೆಮಂಚ ಗಂಧ ಪರಿಮಳ ಅರಳು ಕುಸುಮ/ಬಿಳಿ ಎಲೆ ಅಡಿಕೆ ತಾಂಬೂಲ ತಾನೊಲ್ಲ/ಕಡಗ ಕಂಕಣವು ಬಿಡಿ ಮುತ್ತಿನ್ಹಾರಗಳು/ಮೃಢನ್ವೈರಿ ತಾನೊಲ್ಲ– ಎಂದು ಮನ್ಮಥನ ವಿರಹಬಾಧೆಯನು ಚಿತ್ರಿಸಿದ್ದಾರೆ.

**ಸರಸ**

ಹರಪನಹಳ್ಳಿ ಭೀಮವ್ವನವರ ಸಂಪ್ರದಾಯದ ಹಾಡಿನಲ್ಲಿ: (ಹಾ.೧೧೧) ಪಾಂಡವರೈವರು ಕೂಡಿ ಬರುತಿರಲು ಸರಸಕ್ಕಾಗಿ ದ್ರೌಪದಿ ಕದವಿಕ್ಕುತ್ತಾಳೆ. ನಾಗವೇಣಿ ಬಾಗಿಲು ತೆಗಿ ಎಂದರೆ ಯಾರು ಬಂದವರೆಂದು ಹೇಳದೆ ಹ್ಯಾಗೆ ತೆಗೆಯಲಿ ಎನಲು, ದೊರೆ ಧರ್ಮರು ಬಂದರು ಎನ್ನುತ್ತಾರೆ. ದೊರೆಗಳಾದರೆ ರಾಜ್ಯ ಪರರಿಗೆ ಕೊಟ್ಟು ಅಡವಿ ಯಾತಕೆ ತಿರುಗೀರಿ ಎನ್ನುತ್ತಾಳೆ. ಶ್ರೇಷ್ಠ ಭೀಮನು ಬಂದಿದ್ದೇನೆ ಎಂದರೆ ರಾಜರಿಗೆ ಅಡಿಗೆ ಉಣಿಸು ಹೋಗು ಎನ್ನುತ್ತಾಳೆ, ಗಾಂಡೀವ ಬಂದಿದ್ದೇನೆ ಎಂದರೆ ಗೊಂಡೆ ಹರಳನ್ನು ಹಾಕಿಕೊಂಡು ವಿದ್ಯೆ ಕಲಿಸ ಹೋಗು ಎನ್ನುತ್ತಾಳೆ. ನಕುಲನು ಬಂದಿದ್ದೇನೆ ಎಂದರೆ ತೇಜಿ ಕೆಲಸ ರಾಯರಿಗೆ ಕಲಿಸ ಹೋಗು ಎನ್ನುತ್ತಾಳೆ. ಬಳಲಿ ಬಂದಿದ್ದೇವೆ ಎನಲು ಬಾಗಿಲು ತೆಗೆಯುತ್ತಾಳೆ. ಪಾಂಡವರೈವರು ಅವಳನ್ನು ಸರಸದಿಂದ ಮುದ್ದಿಸುತ್ತಾರೆ.

**ಕಾರುಣ್ಯ**

ಅಂಬಾಬಾಯಿಯವರ 'ದ್ರೌಪದಿಯವಸ್ತ್ರಾಪಹರಣ' ಕೃತಿಯಲ್ಲಿ ದ್ರೌಪದಿಯು, ಸಭೆಯಲ್ಲಿ ಸರ್ವರಿಗಿದು ನ್ಯಾಯವೇನೊ/ಸಜ್ಜನರಾರಿಲ್ಲವೇನೊ/ದ್ರೋಣ ಭೀಷ್ಮ ಕೃಪಾಚಾರ್ಯರೆಲ್ಲ/ಖಳ ಮಾಡುವ ಕಾರ್ಯ ನೋಡೆ ಆಶ್ಚರ್ಯ/ಮರೆವರೆ ಋಷಿವರ್ಯರೆ ನನ್ನ ನೀವೆಲ್ಲ/ಇದು ಏನು ಕಾರ್ಯ ಸಲ್ಲ/ಅತ್ತಿ ಗಾಂಧಾರಿಯೆ/ಅಕ್ಕ ಭಾನುಮತಿಯೆ ರಕ್ಕಸನ ಕಾರ್ಯ/ಅಕ್ಕರವೆ ನಿಮಗೆ ಯಾರಿಗೆ/ ಪೇಳಲಿನ್ನು ಎನ್ನ ಪಾರುಗಾಣಿಪರಾರು/ಅತ್ತಿ ಮೌನ ಹಿಡಿದಲೊ/ಈ ಮಾತಿಗೆ ಸುತ್ತಲೆಲ್ಲವರು ನುಡಿಯರೊ/ಹೇ ಧರ್ಮ ಹೇ ಭೀಮ ಅರ್ಜುನ ನಕುಲ/ಸಾದೇವ ನಿಮ್ಮ ಕಾರ್ಯ ಸಾಕಾಯಿತೆ ಈಗ/ಸಹಿಸಲಾರೆನು ಇಂತು ಸಭಿಯೊಳಗೆ/ಎನ್ನನು ವಹಿಸಿ ಕಾಯುವರ್‍ಯಾರೊ/ಕ್ಷಿತಿಯೊಳಗೆ ಸತಿಯರಿಗೆ ಪತಿ ಒಬ್ಬನೆ ಸಾಕೊ/ಸಕಲ ದುರಿತವ ಕಳೆದು/ಸುಖವ ತೋರುವನೊ ಅತಿಬಲರು ಈ ನಿಪುಣರೈವರು/ ಇದ್ದು ಗತಿಯೇನು ಎನಗೆ ಕಾಣಿಸಲಿಲ್ಲ/ನೀನೇ ಗತಿ ಎಂದೆನುತ ಸಭೆಯೊಳಗೆ ನಿಂದು ರೋಧಿಸುವುದು ಕರುಣಾಜನಕವಾಗಿದೆ.

ಗಿರಿಯಮ್ಮನ 'ಲವಕುಶರ ಕಾಳಗ'ದಲ್ಲಿ ಸೀತೆಯನ್ನು ಅರಣ್ಯಕ್ಕಟ್ಟುವಾಗ ಸೀತೆ 'ಮುಂದಿನ ಜನ್ಮಕ್ಕೆ ನಿಮ್ಮನಿಯ ದಾಸ್ಯಾಗೆಂದು ನಂಬಿ ವರವ ಕೊಡು'ಎಂದು ರಾಮನನ್ನು ಕೇಳಿದಾಗ, 'ಮುಂದಿನ ಜನ್ಮಕ್ಕೆ ನನ್ನ ಸತಿಯೆ ನೀನು ಇಂದಿಗೆ ಹೋಗಿ ಬಾ ಎನ್ನುತ್ತಾನೆ. ಅಂಗಳದಲ್ಲಿ ಶುಭಶಕುನಗಳಾಗಲು ಸೀತೆ 'ಶುಭಗಳನಿತ್ಯಾಕೆ ನಮಗೆ, ಶುಭಗಳೆಲ್ಲವೂ ನಮ್ಮ ಧರಣೀಶಗಾಗಲಿ/ ಕಿರಿಯ ಲಕ್ಷ್ಮಣಗಾಗಲಿ' ಎನ್ನುತ್ತಾಳೆ. ಪುರದ ನಾರೇರೆಲ್ಲಾ ರಾಮನಲ್ಲಿ ಬಿನ್ನಹ ಮಾಡಿ, ದೇವಿಯ ತಪ್ಪನ್ನು ಕಾಯಬೇಕೆಂದು ಪಾದಕ್ಕೆರಗಿದಾಗ ರಾಮ, ಇಂದಿನ ತಪ್ಪನ್ನು ಕಾದರೇನಹುದು, ಎಂದಿಗಾದರೂ ಸೀತೆ ಅಸುರನ ಕೂಡಿದವಳು, ಮುಂದೆ ನಮಗೆ ಆಗೋಳಲ್ಲ, ಕಾಣದವರು ನೀವು ಕೇಳಬಹುದು ತಾಯೆ/ಬಾಳ ನೊಂದೆನು ಈಕೆ ಕೂಡ/ಮಾಯಾ ಚೋರಿ ಈಕೆ ಮರ್ಮ ಕಂಡವರಿಲ್ಲ. ನಾ ಬಲ್ಲೆ ಈಕೆಯ ಗುಣವ/ ಎನ್ನುತ್ತಾನೆ. ನಾರಿಯರೆಲ್ಲ ರಾಮನಿಗೆ ಕರವೆತ್ತಿ ಮುಗಿದು ಧರಣಿಯ ಮೇಲಡ್ಡಬಿದ್ದು 'ಹಡೆದವರಿದ್ದರೆ ನಮ್ಮ ಮನವ ಸಂತೈಸುವರು, ಕಣ್ಣಲಿ ಉದಕ ಕಾರೋರು' ಎನ್ನುವ ಸಂಭಾಷಣೆಯು ಕರುಳು ಹಿಂಡುವ ದೃಶ್ಯಕಾವ್ಯ.

**೨.೯ ಭಾಷಾ ವಿಶೇಷಗಳು**

ಮಹಿಳಾಕೀರ್ತನಕಾರರ ಕೃತಿಗಳು ಸಹಜವಾಗಿ ಮೂಡಿ ಬಂದಂತವು. ಗಣ ಯತಿ ಪ್ರಾಸ ನಿಯಮಗಳಿಗಾಗಿ ಬರೆದ ಪದ್ಯಗಳಲ್ಲ. ಆದರೂ ಕೃತಿಯಲ್ಲಿ ಛಂದಸ್ಸನ್ನು, ಪದಪ್ರಯೋಗವನ್ನು, ಅಲಂಕಾರಗಳನ್ನು, ಆಡುನುಡಿಗಳು, ಗಾದೆ ಮಾತುಗಳ ಬಳಕೆಯನ್ನು ಕಾಣಬಹುದು.

**ಷಟ್ಪದಿಗಳು**

**ಭಾಮಿನಿ ಷಟ್ಪದಿ:** ನಿಡಗುರಕಿ ಜೀವೂಬಾಯಿಯವರ ಕೀರ್ತನೆಗಳಲ್ಲಿ ಭಾಮಿನಿ ಷಟ್ಪದಿ ಎಂದು ನಿರ್ದೇಶಿಸಿರುವ ಕೀರ್ತನೆಯೊಂದು ಹೀಗಿದೆ:

ಕಡಲ ಶಯನನ ಗುಣವ ಪಾಡುತ
ಬಡವ ವಿಪ್ರನು ಬರಲು ಅವರಿಗೆ
ಹಿಡಿಯ ತಂಡುಲು ಕೊಡಲು ಅಸ್ವತಂ– ಹೀಗೆ ಭಾಮಿನಿ ಷಟ್ಪದಿ ಎಂದು ನಿರ್ದೇಶಿಸಿರುವ ಪದ್ಯಗಳು ತಪ್ಪಾದ ಮಾತ್ರಾಗಣಗಳನ್ನು ಹೊಂದಿದೆ. ಕೆಲವಂತೂ ನಾಕುಸಾಲುಗಳಿಂದ ಪ್ರಾರಂಭವಾಗಿ ಮುಂದಿನ ಸಾಲುಗಳು ದ್ವಿಪದಿಗಳಾಗಿವೆ.

ಭಾಮಿನಿ ಷಟ್ಪದಿ ಎಂದಿರುವ ಆರುಸಾಲಿನ ಫಲಶೃತಿಯ ಕೀರ್ತನೆಯಲ್ಲಿ ಮೂರುಸಾಲುಗಳು ಮಾತ್ರ ಭಾಮಿನಿ ಷಟ್ಪದಿಯ ಲಕ್ಷಣಗಳನ್ನು ಒಳಗೊಂಡಿದೆ.

ಪರಮ ಪುರುಷನ ಅಡಿಗೆ ವಂದಿಸಿ
ವರಮ ಹಾಲ ಕ್ಷ್ಮಿಯವಿ ಲಾಸವು
ವರಗು ರುಗಳಿಗೆ ಅರ್ಪಿ ಸಿದಮಂ ಗಳಚ ರಿತ್ರವ ನು

ನಿಡಗುರಕಿ ಜೀವೂಬಾಯಿಯವರ 'ಸಮುದ್ರಮಥನ' ಕೃತಿಯಲ್ಲಿ ಇರುವ ಪದ್ಯವೊಂದರಲ್ಲಿ ಮೂರು ಸಾಲುಗಳು ಮಾತ್ರ ಭಾಮಿನಿ ಷಟ್ಪದಿಯ ನಿಖರವಾದ ಮಾತ್ರೆಗಳನ್ನು ಒಳಗೊಂಡಿದೆ. ಇದೊಂದು ಫಲಸ್ತುತಿಯ ಹಾಡು:

ಪರಮ ಪುರುಷನ ಅಡಿಗೆ ವಂದಿಸಿ
ವರಮ ಹಾಲ ಕ್ಷ್ಮಿಯವಿ ಲಾಸವು
ವರಗು ರುಗಳಿಗೆ ಅರ್ಪಿ ಸಿದಮಂ ಗಳಚ ರಿತ್ರವ ನು

**ಕಂದ**

ಕಂದ ಎಂದು ನಿರ್ದೇಶಿಸಿರುವ ಪದ್ಯಗಳು ನಾಲ್ಕು ಸಾಲುಗಳನ್ನು ಮಾತ್ರ ಒಳಗೊಂಡಿದ್ದು, ಕಂದದ ಮಾತ್ರಾಲಕ್ಷಣಗಳನ್ನು ಹೊಂದಿಲ್ಲ. ಉದಾಹರಣೆ:

ಮೂರು ಝಾಮವು ಮುಗಿದ ಕ್ಷಣದೊಳು
ಬಾಲೆ ಸ್ವಪ್ನವ ಕಂಡಳು
ಲೋಲೆ ಕರದಲಿ ಕಮಲ ತಿರುವುತ
ಬಾಗಿಲೊಳಗೆ ಬರುತಿರೆ (ಪುಟ–೪೩೧, ನಿ.ಜೀ.ಬಾ)

**ಪ್ರಾಸ**

ಮಹಿಳಾಕೀರ್ತನಕಾರರ ಕೀರ್ತನೆಗಳಲ್ಲಿ ಯಥೇಚ್ಛವಾಗಿ ಆದಿಪ್ರಾಸ, ಅಂತ್ಯಪ್ರಾಸಗಳನ್ನು ಬಳಸಲಾಗಿದೆ.

ಭೀಮವ್ವನವರ ಆದಿಪ್ರಾಸದ ಒಂದು ಪದ್ಯ ಹೀಗಿದೆ: (ಪುಟ–೧೨೮, ಕೀ.೭೫)

ಹೊದ್ದ ಪೀತಾಂಬರ ಅಲೆಯುತ ಶ್ರೀಕೃಷ್ಣ
ಹದ್ದನೇರದೆ ನಡೆಯುತಲಿ
ಮುದ್ದುರುಕ್ಮಿಣಿಯ ಮುಂದಕೆ ಕರೆದ್ಹೇಳದೆ
ಎದ್ದು ಬಂದನು ಭಾಮೆ ಮನೆಗೆ

ನಿಡಗುರಕಿ ಜೀವೂಬಾಯಿಯವರು 'ಪತಿಮಂದಿರದಲ್ಲಿ ನೀ ಸುಖವಾಗಿ ಬಾಳು' (ಕೀ.೧೨೬, ಪುಟ:೧೬೯) ಎನ್ನುವ ಸಂಪ್ರದಾಯದ ಹಾಡಿನಲ್ಲಿ ಆದಿ ಮತ್ತು ಅಂತ್ಯಪ್ರಾಸ ಎರಡನ್ನೂ ನಿಭಾಯಿಸಿರುವ ರೀತಿ ನೋಡಿ:

ಬಿಟ್ಟ ಕಂಗಳು ಮುಚ್ಚಿದವನು ಎಂದೆನಬೇಡ
ಬೆಟ್ಟ ಬೆನ್ನಲಿ ಪೊತ್ತನೆನಲು ಬೇಡ
ಗಟ್ಟಿ ನೆಲವನು  ಕೆದರಿ ಅಲಸಿದನೆನಬೇಡ
ಹೊಟ್ಟೆಯ ಕರುಳನು ಬಗೆದವನೆನಬೇಡ– ಎನ್ನುತ್ತಾ ದಶಾವತಾರದ ವರ್ಣನೆಯನ್ನು ಮಾಡಿದ್ದಾಳೆ.

ಆದಿಪ್ರಾಸ ಅಂತ್ಯಪ್ರಾಸಗಳ ಕೀರ್ತನಗಳಲ್ಲಿ ಪ್ರಯತ್ನಪೂರ್ವಕವಾಗಿ, ಕೆಲವೆಡೆ ಸಾಂದರ್ಭಿಕವಾಗಿ ಅಪ್ರಯತ್ನಪೂರ್ವಕವಾಗಿಯೂ ರಚಿಸಿರುವುದು ಕಂಡುಬರುತ್ತದೆ. ಆದರ ನಿರ್ಬಂಧದಿಂದ ಪ್ರಾಸಗಳನನ್ನು ಅನುಸರಿಸಿ ರಚಿಸಿರುವ ಕೀರ್ತನೆಗಳು ಕಡಿಮೆ ಎಂದೇ ಹೇಳಬೇಕು.

ಅಂಬಾಬಾಯಿಯವರ ಕೀರ್ತನೆ (ಪುಟ:೬೧–೬೨, ಕೀ.೫೦)ಯೊಂದು ಹೀಗಿದೆ:

ಪೂರ್ಣರೂಪನೆ ಎನ್ನ ಪೂರ್ಣಮನದಲಿ ನಿಂತು
ಪೂರ್ಣಗೊಳಿಸಭಿಲಾಶೆಯ

–ಎನ್ನುವ ಪಲ್ಲವಿಯಿಂದ ಪ್ರಾರಂಭವಾಗುವ ಕೀರ್ತನೆ ಪೂರ್ಣ ಎನ್ನುವ ಪದ ಪ್ರತಿಸಾಲಿನ ಮೊದಲಲ್ಲಿ ಬರುವಂತೆ ರಚಿಸಿದ್ದಾರೆ. ಪಲ್ಲವಿ ಅನುಪಲ್ಲವಿಗಳನ್ನು ಒಳಗೊಂಡಿದ್ದು ಆರುಸಾಲಿನ ಐದು ನುಡಿಗಳನ್ನು ಒಳಗೊಂಡಿದೆ. ಇದು ಅಂಬಾಬಾಯಿಯವರ ರಚನಾ ಸಾಮರ್ಥ್ಯವನ್ನು ಸೂಚಿಸುತ್ತದೆ.

**ಆರ್ಯ**

ಇದು ಸಂಸ್ಕೃತದ ಆರ್ಯವೃತ್ತವಲ್ಲ ಯಕ್ಷಗಾನದಲ್ಲಿ ಬರುವ ಆರ್ಯಾನವಾಯಿ ಛಂದಸ್ಸು. ಇದರ ಪೂರ್ವಾರ್ಧಲ್ಲಿ ಚತುರ್‌ಮಾತ್ರಾಗಣ ಕೊನೆಗೆ ಒಂದು ಗುರು. ಇದೇ ಉತ್ತರಾರ್ಧದಲ್ಲೂ ಇರಬೇಕು. ಮಧ್ಯದಲ್ಲಿ ಮೂರುಮಾತ್ರಾ ಗಣವು ಬಂದರೆ ನಾಲ್ಕು ಮಾತ್ರೆಗಳವರೆಗೆ ಎಳೆದು ಹಾಡುವುದು ಕ್ರಮ. ಪಂಚಮಾತ್ರಾಗಣವಿದ್ದರೆ ಕುಬ್ಜವಾಗಿಸಬೇಕು. ಹಾಡುವ ಧಾಟಿಯಾದ್ದರಿಂದ ಛಂದಸ್ಸಿನ ನಿಯಮಗಳನ್ನು ಕೀರ್ತನಕಾರರು ಅಷ್ಟಾಗಿ ಪಾಲಿಸಿಲ್ಲ.

**ಸ್ತೋತ್ರ**

ಇದು ಅಂಬಾಬಾಯಿಯವರ ರಚನೆಯಲ್ಲಿ ಕಂಡುಬರುತ್ತದೆ. ೨೪ ನುಡಿಗಳನ್ನೊಳಗೊಂಡ ಸ್ತೋತ್ರರೂಪದ ಪದ್ಯವಿದೆ. ಇನ್ನೊಂದು ೨೭ ನುಡಿಗಳನ್ನು ಒಳಗೊಂಡಿದೆ. ಕೃಷ್ಣಾವತಾರದ ಲೀಲೆಗಳನ್ನು, ದಶಾವತಾರವನ್ನು ವರ್ಣಿಸಲಾಗಿದೆ. ಮೊದಲ ಸ್ತೋತ್ರದ ಪ್ರತಿನುಡಿಯ ಕೊನೆಯು ಪಾಲಿಸೈ ವೆಂಕಟೇಶ ಎನ್ನುವ ಬೇಡಿಕೆಯೊಂದಿಗೆ ಮುಕ್ತಾಯವಾಗುತ್ತದೆ. ವೆಂಕಟೇಶನ ವಸ್ತ್ರ ವೈಭವ, ಅಲಂಕಾರ ವರ್ಣಿತವಾಗಿವೆ. ಸ್ತೋತ್ರಗಳನ್ನು ವಿಭಾಗಿಸಿಕೊಂಡಿರುವುದರಲ್ಲಿ ವಸ್ತು ವಿಶೇಷವೇನೂ ಕಂಡುಬರುವುದಿಲ್ಲ. ಕೃಷ್ಣನ ಲೀಲಾ ವರ್ಣನೆ, ಭಕ್ತಿಯಷ್ಟೇ ಪ್ರಧಾನ.

**ತ್ರಿಪದಿ**

ಜನಪದ ತ್ರಿಪದಿಗಳು ಹಾಡುವ ಧಾಟಿಯನ್ನನುಸರಿಸಿ ನಾಲ್ಕುಸಾಲುಗಳಲ್ಲಿ ಗಲಗಲಿಅವ್ವನವರ ಮುಯ್ಯದ ಹಾಡುಗಳು ಕಂಡುಬರುತ್ತವೆ. ಇದು ಸಂಪ್ರದಾಯದ ಹಾಡಾದ್ದರಿಂದ ತ್ರಿಪದಿಯ ಧಾಟಿಯನ್ನು ಸಮರ್ಥವಾಗಿ ಬಳಸಿಕೊಂಡಿದ್ದಾರೆ. ಸಾಮೂಹಿಕವಾಗಿ ಹಾಡಲು ಅವು ಇನ್ನಷ್ಟು ಸುಲಭವೇ ಆಗುತ್ತವೆ.

ರನ್ನದ ಬಾಗಿಲು ಚಿನ್ನದ ಚೌಕಟ್ಟು
ಹೊನ್ನ ಕಳಸಗಳು ಹೊಳೆವೋವೆ
ಹೊನ್ನ ಕಳಸಗಳು ಹೊಳೆವೋವೆ
ಇದು ನಮ್ಮ ಪನ್ನಗಶಯನನ ಅರಮನೆ (ಕೀ.೨೯, ಪುಟ:೩೬)

ಮುಯ್ಯದ ಹಾಡುಗಳಲ್ಲಿ ಪಲ್ಲವಿ ಅನುಪಲ್ಲವಿಗಳನ್ನು ಹೊರತುಪಡಿಸಿದರೆ ಉಳಿದ ಎಲ್ಲ ನುಡಿಗಳು ತ್ರಿಪದಿಗಳೇ ಆಗಿರುವುದು ಕಂಡುಬರುತ್ತವೆ. ಈಗ ಲಭ್ಯವಿರುವ ಅವ್ವನವರ ಕೃತಿಗಳಲ್ಲಿ ತ್ರಿಪದಿಗಳನ್ನು ಛಂದೋಬದ್ಧವಾಗಿ ಪಾದವಿಂಗಡಣೆ ಮಾಡಿಲ್ಲ.

ಭೀಮವ್ವನವರ ಕೀರ್ತನೆ: (ಕೀ.೬, ನುಡಿ–೪) ಇಡೀ ಪದ್ಯವು ತ್ರಿಪದಿಯಲ್ಲಿ ರಚನೆಯಾಗಿದೆ.

ರಂಗಾ ರಂಗಾಯೆಂದು ರಂಗನ್ನ ನೆನೆದರೆ
ಹಿಂಗೋದು ಸಕಲ ದಾರಿದ್ರ್ಯ/ದಾರಿದ್ರ್ಯ ಕಳೆವಂಥ
ಮಂಗಳಾಂಗಿಯೆ ಶ್ರೀಮಹಾಲಕ್ಷ್ಮಿ

ಹರಪನಹಳ್ಳಿ ಭೀಮವ್ವನವರ ಕೀರ್ತನೆ (ಕೀ.೧೩೩, ಪುಟ–೨೫೦) 'ಕರಿಮುಖದ ಗಣಪತಿಯ ಚರಣಕ್ವಂದನೆ ಮಾಡಿ' ಎನ್ನುತ್ತಾ ಗಣಪತಿಯ ಪ್ರಾರ್ಥನೆಯೊಂದಿಗೆ ಆರಂಭವಾಗುವ ಈ ಕೀರ್ತನೆ ಬುಧ ಬೃಹಸ್ಪತಿಗಳ ಕಥೆ. ೭೩ ನುಡಿಗಳನ್ನು ಒಳಗೊಂಡಿದೆ. ಇಡೀ ಕೀರ್ತನೆಯ ಪ್ರತಿನುಡಿಯು ತ್ರಿಪದಿಯಲ್ಲೇ ರಚನೆಯಾಗಿರುವುದು ಅವ್ವನವರ ಭಾಷಾ ಸಾಮರ್ಥ್ಯಕ್ಕೆ ಹಿಡಿದ ಕನ್ನಡಿಯಾಗಿದೆ. ಇಂತಹ ತ್ರಿಪದಿಯ ರಚನೆಗಳು ಉಳಿದ ಮಹಿಳಾ ಕೀರ್ತನಕಾರರಲ್ಲೂ ಕಂಡುಬರುತ್ತವೆ.

**ಶ್ಲೇಷಾಲಂಕಾರ**

ನಿನ್ನ ದಾಸರ ಬಿಟ್ಟು ನಾ **ಬಾಳೆ** ಕಾಯೊ ಪ್ರ
ಸನ್ನ ಮೂರುತಿ ಹರಿ ನೀ **ನೆಂಬೆ** ಕಾಯೊ
ಮಾರಜನಕನೆ ಅಳಿದ **ಮಾವನ** ಕಾಯೊ
ಮಾರಜನಕ ನರಸಿಂಹ ವಿಠಲ ನೀ
ಮಾಡಿದೆಲ್ಲವು ನನಗೆ **ಸಮತೆ** ಕಾಯೊ – (ಓರಾಬಾಯಿ ಲಕ್ಷ್ಮಿದೇವಮ್ಮ)

ಇಲ್ಲಿ ಬಾಳೆ, ನಿಂಬೆ, ಮಾವು, ಸವತೆಕಾಯಿಗಳನ್ನು ಪ್ರಸ್ತಾಪಿಸಿ ಶ್ಲೇಷಾಲಂಕಾರಕ್ಕೆ ಎಡೆ ಮಾಡಿರುವುದನ್ನು ಕಾಣಬಹುದು. ಇದು 'ತರಕಾರಿ ಹಾಡು' ಎಂದು ಪ್ರಸಿದ್ಧವಾಗಿದೆ.

**ಉಪಮಾಲಂಕಾರ**

'ಈಚಲ ಗಿಡದಲಿ ಗೋಕ್ಷೀರ ಕರೆದಂತೆ ನೀಚರ ಸಂಗ'
'ಒಳ್ಳೆ ಮನುಜರ ಸಂಗ ಮಲ್ಲಿಗೆ ಮುಡಿದಂತೆ'
'ಭಾವಜ್ಞರ ಸಂಗ ಶಾವಿಗೆ ಉಂಡಂತೆ'
'ಬಾಳ್ವೆವಂತರ ಸಹವಾಸ ಹೋಳಿಗೆ ಉಂಡಂತೆ'
'ಪಾಮರರ ಸಹವಾಸ ಬೇವಿನ ಹಾಲು ಕುಡಿದಂತೆ'
'ರುಕ್ಮಿಣಿಯು ಶೂಲದಂತವಳು' (ಗ.ಅವ್ವ, ಮುಯ್ಯದ ಹಾಡುಗಳು)

ಆಲಯದಂತ ಕಿವಿ/ಗಾಲಿಯಂತ ಹರಳಿನ್ವಾಲೆ/ಬಿಲ್ಲೂಡಿದಂತೆ ನೀಲವೇಣಿಯ ಹುಬ್ಬುಗಳು/ ರಥಚಕ್ರದಂತ ನೇತ್ರಗಳು (ಹ.ಭೀ. – ದ್ರೌಪದಿಯ ವಸ್ತ್ರಾಪಹರಣ)

ಶಾಕುಂತಲೆ ಕಾಣುತಿರೆ ಕಳಿತ ಬಾಳೆಯಹಣ್ಣು ತುಪ್ಪ ಸಕ್ಕರೆ ಕ್ಷೀರ/ಕಲಸಿ ಕುಡಿದಂತಾಯಿತು ದೊರೆಯ ಉದರಕ್ಕೆ (ಹರಪನಹಳ್ಳೀ ಭೀಮವ್ವ, ಪು–೫೬೫)

'ಹದ್ದಿನ ಬಾಯೊಳಗಿನುರಗದಂತೆ'
'ಚಿಪ್ಪಿನೊಳು ಮುತ್ತು ಮೂಡುವ ತೆರನಂತೆ'
'ಪಂಕಜಪತ್ರದೊಳಿಪ್ಪ ನೀರಂತೆ'

'ಅರೆಗಾಯ ಹೊಂದಿದ ನಾಗರಮರಿಯಂತೆ' (ಹೆಳವನಕಟ್ಟೆ ಗಿರಿಯಮ್ಮನ ಕೃತಿಗಳು)

ಚಂಚಲಾಕ್ಷಿಯ ಮುಖವು ಮಿಂಚಿನಂತ್ಹೊಳೆಯುತಲಿ
ಪಂಚಬಾಣನ ಸರಳ್ಗೆ ಮಿಂಚ್ಹಾರಿ ತೋರುತಲಿ
ಮ್ಯಾಲೆ ತಾರಕ್ಕಿಗಳೊಳು ಬಾಲಚಂದ್ರಮನಂತೆ
ಬಾಲೇರ ಒಳಗೆಲ್ಲ ಮೇಲಾದ ಸಖಿ ನಾನು – (ಓರಾಬಾಯಿ ಲಕ್ಷ್ಮಿದೇವಮ್ಮ)

'ಗಾಣಕೆ ಸಿಲ್ಕಿದ ಎಳ್ಳು ಸ್ವಚ್ಛದೆಣ್ಣೆ ಮಾಣದೆ ಬರುವ ತೆರ' (ಸರಸ್ವತಿ ಬಾಯಿ)

ನಕ್ಷತ್ರ ಮಾಲೆಯಂತೆ ಹೊಳೆವ ನಾರಿಯರ ಕೂಡ ಲಕ್ಷ್ಮಿರಮಣನು ನಿಂತಾನಮ್ಮ
(ಗಲಗಲಿ ಅವ್ವ, ಪು–೨೩೨)

'ಸಾಲು ದೀವಿಗೆಯಂತೆ ಬಾಲೆಯರು ನಿಂತಾರೆ' (ಗಲಗಲಿ ಅವ್ವ, ಪು–೬೫)

'ಕುಂದಣ ರತ್ನದಡ್ಡಿಕೆಯೊಳಗೆ ಹೊಂದಿಸಿ ನವರತ್ನ ಇರುವಂತೆ'
(ಹೆಳವನಕಟ್ಟೆ ಗಿರಿಯಮ್ಮ–ಪು–೩೪)

'ಹಸಿದು ಬಂದವರು ಮೃಷ್ಟಾನ್ನವ ಕಂಡಂತೆ' (ಹೆಳವನಕಟ್ಟೆ ಗಿರಿಯಮ್ಮ –ಪು–೮೮)

'ಶಿಶುವಿಗೆ ತಾಯಿ ಬಂದಂತೆ' (ಹೆಳವನಕಟ್ಟೆ ಗಿರಿಯಮ್ಮ –ಪು–೮೮)

'ವ್ಯಾಘ್ರ ಬಂದು ಹರಿಣನ ಕಚ್ಚಿ ಒಯ್ದಂತೆ' (ಹೆಳವನಕಟ್ಟೆ ಗಿರಿಯಮ್ಮ –ಪು–೮೩)

'ಮತ್ತವಾರಣ ಕದಳಿವನ ಪೊಕ್ಕಂತೆ' (ಹೆಳವನಕಟ್ಟೆ ಗಿರಿಯಮ್ಮ –ಪು–೯೦)

'ಕಡಲುಬ್ಬಿದಂತೆ ಉಲ್ಲಾಸದಿ ರಾತ್ರಿಯ ಕಳೆದಳು' (ಹೆಳವನಕಟ್ಟೆ ಗಿರಿಯಮ್ಮ –ಪು–೬೬)

'ಬೆಕ್ಕಿನ ಬಾಯ ಮೂಷಿಕದಂತೆ ಮಿಡುಕುತಲಿಪ್ಪ' (ಹೆಳವನಕಟ್ಟೆ ಗಿರಿಯಮ್ಮ –ಪು–೨೬)

'ಚಿಪ್ಪಿನೊಳಗೆ ಮುತ್ತು ಮೂಡುವ ತೆರೆನಂತೆ' (ಹೆಳವನಕಟ್ಟೆ ಗಿರಿಯಮ್ಮ –ಪು–೫೮)

'ಔದಂಬ ಹಣ್ಣಿನಂತೆ ಕಾಯವು ಮನವೆ' (ಹೆಳವನಕಟ್ಟೆ ಗಿರಿಯಮ್ಮ –ಪು–೪೪)

**ರೂಪಕಾಲಂಕಾರ**

'ಭಾವೆ ಎದೆಗಿಚ್ಚಿನವಳು'
'ರುಕ್ಮಿಣಿ ಅಗ್ಗಿಷ್ಟಿಕೆ ಆದಳು' (ಗಲಗಲಿ ಅವ್ವ, ಮುಯ್ಯದ ಹಾಡುಗಳು)

'ಮಂಚವಾಗಿ ಮನೆಯೂ ಆಗಿ ಪಂಚರತ್ನದ ವಸ್ತುಗಳಾಗಿ
ಮಿಂಚು ದೀವಿಗೆ ಮಲ್ಲಿಗೆ ಸಂಪಿಗೆ ಕೆಂಚಿ ತಾನಾಗಿ' (ಗಲಗಲಿ ಅವ್ವ, ಪು–೨೨೭)
'ಹಿರಿಯ ಅತ್ತಿಗೆ ಗರುವಿನ ಸೀರೆ ಉಟ್ಟು'(ಗಲಗಲಿ ಅವ್ವ, ಪು–೬೫)

'ಶ್ವಾನ ಮುಟ್ಟಿದ ಭಾಂಡ ಬಾಹದೆ ನಿಳಯಕ್ಕೆ' (ಹೆಳವನಕಟ್ಟೆ ಗಿರಿಯಮ್ಮ –ಪು–೧೪೬)

**ಗಾದೆ**

ಕೆಟ್ಟು ನೆಂಟರ ಮನೆ ಸೇರಿಕೊಂಬುವುದಕ್ಕಿಂತ/ಅಟ್ಟಡವಿಯಲ್ಲಾವಾಸವೇ ಲೇಸು. (ಹ.ಭೀ. ಪು-೩೬೦)

ಪುತ್ಥಳಿ ಮನೆಯಲೆ ಇರಲು ಹಿತ್ತಾಳೆ ಬಯಸುವರೆ (ಹ.ಬೀ. ಪು-೧೦೫)

ಹೆರರಿಗುಪಕಾರಿ ಮನೆಗೆ ಮಾರಿ (ಗಲಗಲಿ ಅವ್ವ, ಪು-೯೩೪)

ಬಾಳುವವರ ಮನೆ ಮುಂದೆ ಕೋಳಿ ಕೂಗಿದಂತೆ (ಗಲಗಲಿ ಅವ್ವ, ಪು-೭೬)

ಕಣ್ಣೆರಡು ಮುಚ್ಚಿ ಬೆಕ್ಕು ಹಾಲು ಕುಡಿದರೆ ಮುನ್ನಿನವರು ಕಾಣದಿಹರೆ
(ಹೆಳವನಕಟ್ಟೆ ಗಿರಿಯಮ್ಮ -ಪು-೨೪೬)

ಪೂಜೆಯಿಲ್ಲದೆ ಪಾದಕ್ಕೆರಗುವರೆ (ಹೆಳವನಕಟ್ಟೆ ಗಿರಿಯಮ್ಮ -ಪು-೨೫೯)

ಸಿಟ್ಟಿನ ವ್ಯಾಳ್ಯಾಕ್ಕೆ ಮೂಗು ಕೊಯ್ದು ಕೊಂಡರೆ ಅಣ್ಣ ಶಾಂತ ವ್ಯಾಳ್ಯಾಕ್ಕೆ ಹತ್ತಬಹುದೆ
(ಹೆಳವನಕಟ್ಟೆ ಗಿರಿಯಮ್ಮ -ಪು-೨೪೩)

ಆಳು ಕೊಂದ ಪಾಪ ಅರಸಿ ಮಾಡಿದ ಪಾಪ ಭೂಮಿಯನಾಳುವ ರಾಯರಿಗೆ
(ಹೆಳವನಕಟ್ಟೆ ಗಿರಿಯಮ್ಮ -ಪು-೨೩೯)

ಕಾಣಬಾಹದಕೆ ಕನ್ನಡಿ ಯಾತಕೆ (ಹೆಳವನಕಟ್ಟೆ ಗಿರಿಯಮ್ಮ -ಪು-೨೧೯)

ಕುಂ(ಜವ)ಗಿಣಿಯನು ಪಂಜರದೊಳಗಿಟ್ಟು
ಅಂಜೂರ ಕೊಯ್ದು ಕೊಟ್ಟಂತೆ (ಹೆಳವನಕಟ್ಟೆ ಗಿರಿಯಮ್ಮ -ಪು-೮೫)

ಮಿಸುಣಿಯ ಅಲಗೆಂದು ಬಸಿರೊಳಗಿಡುವರೆ (ಹೆಳವನಕಟ್ಟೆ ಗಿರಿಯಮ್ಮ -ಪು-೮೨)

ಹೇರೊಪ್ಪಿದ ಮೇಲ್ಯಾತರ ಸುಂಕವು (ಹೆಳವನಕಟ್ಟೆ ಗಿರಿಯಮ್ಮ -ಪು-೩೩)

**ದ್ವಿರುಕ್ತಿ**

ಹೆತ್ತಜನಕ

ತಾವರೆಕಮಲ

ಕಿತ್ತಳೆನಾರಂಗ

ಅಡವಿಅರಣ್ಯ

ಬೇರೆ ಪರಪುರುಷನ

ತಂಡ ತಂಡದಲೆ

ಹಿರಿದೊಡ್ಡ ಸಿಂಹಾಸನ

**ದೇಶಿನುಡಿ/ಆಡು ಮಾತು**

ಅನಂದ್ಯ್ರತಿ (ಅರುಂಧತಿ), ಹೆತ್ತೋರ (ಹೆತ್ತವರ), ಬ್ರಾಹ್ಮರು (ಬ್ರಾಹ್ಮಣರು), ಕರ್ನಿಕೆ (ಕನ್ನಿಕೆ), ನೀರಾಗೆ (ನೀರೊಳಗೆ), ಕಾರ್ದನು (ಕಾರಿದನು), ಸ್ವಾರಿ (ಸವಾರಿ), ಅಕ್ಷರೇಡ್ಯ, ಸೋಸಲಿ,

ಘಾಡದಿ, ಘಾಡನೆ, ಕಡಲೊಡೆಯ, ಪರಿಸರನೊಡೆಯ, ಸುಮನಸರೊಡೆಯ, ಉನ್ನಂತ, ಅಡಗ್ಯಾನೆ, ಕಂದನಾದ್ಯೆಆನೇ, ಕಂಡಾನೆ, ಕುಳಿತಾನೆ, ನಡೆದಾನೆ, ನಲಿದಾನೇ, ಕೈಪಿಡಿದಾನೇ.

ಮಗ್ಗವನೆ ಹಾಕಿ ಮಾರುಬಟ್ಟೆ ನೇಯ್ದಿಲ್ಲ/ರೊಕ್ಕವನೆ ಕೊಟ್ಟು ತರಲಿಲ್ಲ/ದ್ರೌಪದಿತೆ ಲೆಕ್ಕಿಲ್ಲದ್ವಸ್ತ್ರ ಉಡಿಸಿರಿ (ಭೀಮವ್ವ)

ಹೆಣ್ಣು ನಮ್ಮ ಕಣ್ಣಿಗೆ ಇಂಗು ಹಚ್ಚಿ/ನಮ್ಮಣ್ಣನ ಕೂಡ ಇರುವೋಳು (ಗಲಗಲಿ ಅವ್ವ ಪು-೨೨೩)

ಒಂದು ನುಡಿದು ಹನ್ನೊಂದು ನುಡಿಸಿಕೊಂಡೆ (ಗಲಗಲಿ ಅವ್ವ, ಪು-೭೬)

ಹೆಂಗಸು ಹೆಡೆತಾಲಿಮಿರ್ತು (ಹೆಳವನಕಟ್ಟೆ ಗಿರಿಯಮ್ಮ -ಪು-೨೩೬)

ಮಾರಿ ಮೇಲಾಗಿಸಮ್ಮ (ಗಲಗಲಿ ಅವ್ವ ಪು-೧೭೪)

**ಬಾಲಭಾಷೆ (ಕಲಭಾಷೆ)**

ಅಮ್ಮ ಹೊಡಿಯಲಿ ಬ್ಯಾಡೆ ಗುಮ್ಮನ ಕರಿಬ್ಯಾಡೆ/ಸುಮ್ಮನಿರುತ್ತೇನೆ ದಮ್ಮಯ್ಯ/ದಮ್ಮಯ್ಯ ಹಗಲೆಲ್ಲ ಅಮ್ಮಿಯ ಕೇಳೊದಿಲ್ಲ

ಅಪ್ಪಾಲು ಅತಿರಸ ಅರಳುಂಡೆ ಕೊಡುವೆನು/ತುಪ್ಪದಲಿ ಕರೆದ ಚಕ್ಕುಲಿಯು/ಚಕ್ಕುಲಿ ಅಪ್ಪಚ್ಚಿ ಅಪ್ಪಯ್ಯ ಕೊಡುವೆ ಮಲಗವ್ವ (ಶ್ರೀಕೃಷ್ಣ ಬಾಲಲೀಲೆ, ಅಂಬಾಬಾಯಿ)

**ಪದಶಕ್ತಿ**

ಕಮಲಾನನೆ ಕಮಲಾಲಯೆ ಕಮಲಾಕ್ಷಿ
ಕಮಲೋದ್ಭವೆ ಕಮಲೆ
ಕಮಲಾಸನ ಪಿತನ ಸತಿಯ ಭಾರ್ಗವಿಯೆ
ಕಮಲಾಂಬಿಕೆ ಪಿಡಿದಿಹ
ಕಮಲಪುಷ್ಪ ಮಾಲೆಯ ಹರುಷದಿ ಈ
ಕಮಲನಾಭ ವಿಠಲಗರ್ಪಿಸುಲಿ
ಕಮಲಪತ್ರದಳಾಕ್ಷಿಗೆ ನಮಿಸಿ (ನಿ.ಜೀ. ಕೀ.೫೪)

ಕಮಲ ಎನ್ನುವ ಪದವನ್ನು ಆದಿಪ್ರಾಸವನ್ನಾಗಿಸಿಕೊಂಡು ಮಹಾಲಕ್ಷ್ಮಿಯನ್ನು ಕುರಿತು ರಚಿಸಿರುವ ಈ ಕೀರ್ತನೆ ಜೀವೂಬಾಯಿಯ ಪದಕಟ್ಟುವ ಸಾಮರ್ಥ್ಯಕ್ಕೊಂದು ನಿದರ್ಶನ.

ಮನ್ಮಥ- ನಾರಾಯಣ ಕುಮಾರ, ಪುಷ್ಪಬಾಣ, ಪುಷ್ಪಶರ, ಪೂಶರ, ಪಂಚಬಾಣ, ಮಲ್ಲಿಗೆಬಾಣ, ಮದನ, ಮಾರ, ಅಂಗಜ, ಚಿತ್ತಜ, ಮನಸಿಜ, ಕಂತು, ಕಂದರ್ಪ, ಕಾಮದೇವ, ಶಂಕರಾರಿ, ಕಬ್ಬುಬಿಲ್ಲ-ಇವು ಮನ್ಮಥನಿಗೆ ಕೀರ್ತನೆಗಳಲ್ಲಿ ಬಳಸಿರುವ ಪರ್ಯಾಯ ಪದಗಳು.

ಭೂಮಿ-ಇಳೆ, ರೂಢಿ, ಕುಂಬಿಣಿ, ಧಾತ್ರಿ, ಧರೆ, ನೆಲ, ಅವನಿ, ಪೃಥವಿ - ಇವು ಭೂಮಿಗೆ ಕೀರ್ತನೆಗಳಲ್ಲಿ ಬಳಸಿರುವ ಪರ್ಯಾಯ ಪದಗಳು.

**ಅನುಕರಣಾವ್ಯಯ**

ಬಡಬಡನ್ಹಾಗೆ ಹಲ್ಲ ಕಡಿಯುತಲಿ/ ಘುಡುಘುಡಿಸುತ ಘನಘೋಷದಲಿ/ಘಡಘಡನ್ಹಲ್ಲ ಮುರಿಯುತಲಿ ಧಡ/ಧಡ ರಥದಲಿ ಕೆಡೆಯುತಲಿ ಭಡಭಡನೆ/ಸಿಡಿಲಂತೆ ಘರ್ಜಿಸಿ... (ಹ.ಭೀ. – ಮ–೬೩೨) ಈ ಸಾಲುಗಳಲ್ಲಿ ದ್ರೌಪದಿಯ ರೌದ್ರಾವತಾರವನ್ನು ವರ್ಣಿಸಲಾಗಿದೆ. ಬಳಸಿರುವ ಅನುಕರಣಾವ್ಯಯಗಳು ರೌದ್ರವನ್ನು ಸಮರ್ಥವಾಗಿ ಹಿಡಿದಿಟ್ಟಿವೆ.

ಬೊಮ್ಮಕಂಡು ಕೋಪಿಸಿ ಶಾಪ ಝುಮ್ಮನೆ ಕೊಟ್ಟನು (ಗಲಗಲಿ ಅವ್ವ, ಕೀ.೧೪೨)

ಘಿಲಿ ಘಿಲಿ ಘಿಲಿಕೆಂದು ಗೆಜ್ಜೆ/ಘಿಲಿ ಘಿಲಿ ಘಿಲಿಕೆಂದು ಗೆಜ್ಜೆ/ ಘಿಲಿ ಘಿಲಿ ಘಿಲಿಕು ಎನತಲೆ/ ಬಲು ಬಲು ರೌಸದಿ ಬಾಲೆ ರಂಭ ಕಿಲಿ ಕಿಲಿ ಕಿಲಿ ಕಿಲಿ ಕಿಂಕಿಣಿ ಜಾಲದಿ/ನಲಿ ನಲಿದಾಡುತ ಚೆಲುವೆ ರಂಭ/ಝಣ ಝಣರೆನುತಲಿ ಜಾಣೆ/ಕುಣಿ ಕುಣಿದಾಡುತ ಕುಂಬಿಣಿ ಮ್ಯಾಲೆ ರಂಭ/ಥಳ ಥಳ ಹೊಳೆಯುತ ತಾಳವ ಹಾಕುತ/ಅಳಕಿಸಿ ಸೂರ್ಯನ ಬೆಳಕವ ತಾನು/ತಕ್ಕಡ ತಕ್ಕಡ ತಾಥಾ ಎನುತಲಿ/ಧಿಕ್ಕಿಡಿ ಧಿಕ್ಕಿಡಿ ಧಿಮಕಿಡಿ ಕೃಷ್ಣ/ಘಲು ಘಲು ಘಲುಕು ಎನ್ನುತ್ತ/ – ಎನ್ನುತ್ತಾ ಅನುಕರಣಾವ್ಯಯಕ್ಕಾಗಿಯೇ ಪದ್ಯ ಬರೆದಂತಿದೆ.

ಮಹಿಳಾಕೀರ್ತನಕಾರರು ಸಾಹಿತ್ಯದಲ್ಲಿ ಛಂದಸ್ಸಿನ ನಿಯಮಗಳನ್ನು ಸರಿಯಾಗಿ ಪಾಲಿಸಿದ್ದಾರೆಂದು ಹೇಳಲಾಗುವುದಿಲ್ಲ. ಗಣವಿಂಗಡಣೆ, ಪ್ರಾಸ, ಸಾಲುಗಳ ಸಂಖ್ಯೆಯಲ್ಲಿಯೂ ತಪ್ಪು ಕಂಡುಬರುತ್ತದೆ. ಕೆಲವು ಹಾಡುಗಳ ನುಡಿಗಳ ಸಾಲುಗಳು ಸಮಸಂಖ್ಯೆಯಲ್ಲಿವೆ. ಕೆಲವೊಮ್ಮೆ ನುಡಿಗಳು ಅಂಕಿತ ಮುಗಿದ ಮೇಲೂ ಎರಡು ಸಾಲು ಬರುತ್ತವೆ. ಪ್ರಾಸವೂ ಕೂಡ ಕೆಲವೆಡೆ ನಿಯಮಿತವಲ್ಲ. ಮುಖ್ಯವಾಗಿ ಹಾಡುವ ಧಾಟಿಯನ್ನು ಅನುಸರಿಸಿರುವುದರಿಂದ ದೋಷಗಳು ಸಹಜ. ಇವು ಆತ್ಮಸಂತೋಷಕ್ಕಾಗಿ ಹಾಡಿದ ಹಾಡುಗಳು. ಪಂಡಿತರನ್ನು ಮೆಚ್ಚಿಸುವ ದೃಷ್ಟಿ ಇವರಿಗಿರಲಿಲ್ಲ. ಹಾಡುಗಳು ವಿಶೇಷವಾಗಿ ಸಂಗೀತದ ಮಟ್ಟುಗಳಿಗೆ ಹೊಂದಿಕೆಯಾಗುವಂತೆ ರಚನೆಯಾಗಿದೆಯೇ ಹೊರತು ಸಾಹಿತ್ಯ ಛಂದಸ್ಸಿಗೆ ಬದ್ಧವಾಗಿಲ್ಲ. ತಮ್ಮ ರಚನೆಗಳಲ್ಲಿ ಸಾಕಷ್ಟು ಸ್ವತಂತ್ರ ವಹಿಸಿರುವುದು ಕಂಡುಬರುತ್ತದೆ. ಆರ್ಯ, ಕಂದ, ಷಟ್ಪದಿ, ಸೀಸ ಪದ್ಯ ಎಂದು ಮುಂತಾಗಿ ನಿರ್ದೇಶಿಸಿದ್ದರೂ ಅವು ಹಾಡಿನ ಧಾಟಿಯನ್ನು ಅನುಸರಿಸಿವೆಯೇ ಹೊರತು ಛಂದಸ್ಸನ್ನಲ್ಲ.

ಹೆಳವನಕಟ್ಟೆ ಗಿರಿಯಮ್ಮನವರು ಬರೆದಿರುವ ಸಾಂಗತ್ಯಕ್ಕೊಂದು ಉದಾಹರಣೆ ಹೀಗಿದೆ: ಇದು ತಪ್ಪಾದ ಪ್ರಯೋಗ.

ಪಸರಿಸಿ ಹರಿಯ ಮಯೂರ ಪಕ್ಷಿಗಳೆಲ್ಲ ಬಿಸಿಲಿಗೆ
ಮರೆಯ ಮಾಡುವವು
ಒಸರುವ ಕಣ್ಣೀರು ಒರೆಸುವ ಕಪಿಗಳ ಬಸ
ಒಳಿದಿರ್ದ ಬಾಲಕಗೆ

ಇದರ ಸರಿರೂಪ:

ಪಸರಿಸಿ ಹರಿಯ ಮಯೂರ ಪಕ್ಷಿಗಳೆಲ್ಲ
ಬಿಸಿಲಿಗೆ ಮರೆಯ ಮಾಡುವವು

ಒಸರುವ ಕಣ್ಣೀರು ಒರೆಸುವ ಕಪಿಗಳ

ಬಸವಳಿದಿರ್ದ ಬಾಲಕಗೆ.

ಛಂದಸ್ಸಿನ ನಿಯಮಗಳ ತಿಳುವಳಿಕೆ ತಮಗಿಲ್ಲವೆಂಬುದು ವೇದ್ಯವಾಗಿದ್ದ ಕೀರ್ತನಕಾರ್ತಿಯರು ಅತ್ಯಂತ ವಿನಯದಿಂದ ಅದನ್ನು ಹೇಳಿಕೊಂಡಿದ್ದಾರೆ.

ಅನ್ವಯ ಅರ್ಥ ಚಾತುರ್ಯಬಲ್ಲವಳಲ್ಲ

ಹೆಣ್ಣು ಬಾಲಕಿ ಹೆಚ್ಚಾಗರಿಯೆ

ಅರಿಯೆನು ಕವಿತಾಚಾತುರ್ಯದ ಮಹಿಮೆಯ

ಆದರೆ ಗುರುಮುಖದಲಿ ಹೇಳಲಿಲ್ಲ – ಹೆಳವನಕಟ್ಟೆ ಗಿರಿಯಮ್ಮ

ಅರಿಯೆ ಯತಿಗಣ ಪ್ರಾಸನೇಮಗಳನೆಂದೆಂದೂ: ಹಿರಿಯರಾದವರು ದೋಷಗಳ ದೂರವ ಮಾಡಿ. –ನಿಡಗುರಕಿ ಜೀವೂಬಾಯಿ ಎಂದು ವಿನಯವನ್ನು ಮೆರೆದಿದ್ದಾರೆ.

ನಂಜನಗೂಡು ತಿರುಮಲಾಂಬನವರು (ಪುಟ:೩೯೦, ಕೀ–೧೨೬) ತಮ್ಮ ಕೃತಿಯನ್ನು ಕುರಿತು

ಯತಿಗಣಪ್ರಾಸ ಶೃತಿತಾಳ ಲಯ ಸಂಗತಿಯ ನಾನರಿಯೆ ಪುಸಿಯನುಡಿಯೆ

ಶೃತಿ ಸ್ಮೃತಿ ಪುರಾಣ ಇತಿಹಾಸ ಶಾಸ್ತ್ರಗಳ ಗತಿಮಿತಿ ತತ್ವಮದೊಂದನರಿಯೆ

ಅತಿಶಯಿತ ಪಾಂಡಿತ್ಯ ಪ್ರಭೆಯಿಂ ರಾಜಿಪರಲ್ಲಿ

ಕ್ಷಿತಿನಾಥನಾಡಿಸಿದ ಪರಿಯಿದೆಂದೆನುವ ವಿನಯದಲಿ–ಎನ್ನುತ್ತಾರೆ. ತಿರುಮಲಾಂಬನವರ ಈ ಮಾತು ಎಲ್ಲ ಮಹಿಳಾಕೀರ್ತನಕಾರರ ರಚನೆಗಳಿಗೂ ಅನ್ವಯಿಸುತ್ತದೆ.

**ಅಡಿ ಟಿಪ್ಪಣಿಗಳು**

೧. ಸ.ರಘುನಾಥ; ಲೇಖನ ಸಂಕಲನ: ಅಭಿರುಚಿ)

೨. ಸ. ರಘುನಾಥ; ಲೇಖನ ಸಂಕಲನ: ಜೊನ್ನಲ ರಾಶಿ, ಪುಟ:೩೫,

೩. ಕನ್ನಡ ಜೈಮಿನಿ ಭಾರತ; ಸಂ: ದೇವುಡು ನರಸಿಂಹ ಶಾಸ್ತ್ರಿ, ಪುಟ–೨೦೪, ನುಡಿ–೩೪

೪. ಹೆಳವನಕಟ್ಟೆ ಗಿರಿಯಮ್ಮನ ಹಾಡುಗಳು; ಸಂ: ಟಿ.ಕೆ.ಇಂದೂಬಾಯಿ, ಪುಟ–೩೪, ಚಂದ್ರಹಾಸನ ಕಥೆ ೧–೨೩.

೫. ಕರ್ನಾಟಕದ ಕವಯಿತ್ರಿಯರು; ಡಾ.ಸರೋಜಿನಿ ಮಹಿಷಿ

೬. ಸಮಗ್ರ ದಾಸ ಸಾಹಿತ್ಯ; ಸಂ: ಹರಪನಹಳ್ಳಿ ಭೀಮವ್ವನವರ ಕೀರ್ತನೆಗಳು

೭. ಜನಪದಗೀತೆಗಳಲ್ಲಿ ಮಹಾಭಾರತ, ಸಂ: ಕ.ರಾ.ಕೃಷ್ಣಸ್ವಾಮಿ, ಪು:೮೮; ಪ್ರ:ಜನಪದ

೮. ಅಭಿಜ್ಞಾನ ಶಾಕುಂತಳ; ಅನು: ಎಸ್.ವಿ.ಪರಮೇಶ್ವರ ಭಟ್ಟ, ಕನ್ನಡ ಕಾಳಿದಾಸ ಮಹಾ ಸಂಪುಟ; ಪುಟ–೫೩೦–೩೧

೯. ಶ್ರಾವಣ ಮಾಸದ ಹಾಡುಗಳು ಮತ್ತು ಸಂಪ್ರದಾಯದ ಹಾಡುಗಳು; ಪ್ರ: ಕೆ.ಜಿ.ಸತ್ಯನಾರಾಯಣ ರಾವ್, ಬೆಂಗಳೂರು; ಪುಟ–೯.

೧೦. ದಾಸ ಸಾಹಿತ್ಯದಲ್ಲಿ ಜಾನಪದೀಯ ಅಂಶಗಳು, ಸಾಧನೆ ಸಂಪುಟ–೨. ಸಂಖ್ಯೆ ೪, ಡಿಸೆಂಬರ್ ೧೯೮೨ ಪುಟ ೧೩೦.

# ಅಧ್ಯಾಯ-ಮೂರು

## ಕೀರ್ತನೆಗಳ ಲಕ್ಷಣ, ಸ್ವರೂಪ

ಅಂಕಿತ
ಕೀರ್ತನೆಗಳ ಸ್ವರೂಪ
ಸಾಂಗತ್ಯ
ಸೀಸಪದ್ಯ
ಪದ
ವೃತ್ತ
ವಚನ
ಧ್ವನಿ
ಉಗಾಭೋಗ
ಸುಳಾದಿ
ಧ್ರುವ ತಾಳ
ಮಠ್ಯತಾಳ
ರೂಪಕತಾಳ
ಅಟ್ಟತಾಳ
ಝಂಪೆತಾಳ

# ಅಧ್ಯಾಯ–ಮೂರು

## ಕೀರ್ತನೆಗಳ ಲಕ್ಷಣ, ಸ್ವರೂಪ

ಶ್ರೀಮದ್ಭಾಗವತದ ಸಪ್ತಮ ಸ್ಕಂದದಲ್ಲಿ:

ಶ್ರವಣಂ ಕೀರ್ತನಂ ವಿಷ್ಣೋಃ ಸ್ಮರಣಂ ಪಾದಸೇವನಂ

ಅರ್ಚನಂ ವಂದನಂ ದಾಸ್ಯಂ ಸಖ್ಯಂ ಆತ್ಮನಿವೇದನಂ – ಎಂಬ ಶ್ಲೋಕವಿದೆ. ಇಲ್ಲಿ ಕೀರ್ತನೆಯ ಪ್ರಸ್ತಾಪವಿದೆ. ನವವಿಧ ಭಕ್ತಿಯಲ್ಲಿ ಕೀರ್ತನೆಯೂ ಒಂದು. ವೈದಿಕ ಪರಂಪರೆಯಿಂದಲೂ ಇದು ಬೆಳೆದು ಬಂದಿದೆ. ಜನಪದರ ನೆಚ್ಚಿನ ಪ್ರಕಾರವಾಗಿತ್ತು.

"ಕನ್ನಡ ಕೀರ್ತನ ಸಾಹಿತ್ಯದ ಮೊದಲ ಕೀರ್ತನಕಾರರೆಂಬ ಕೀರ್ತಿಗೆ ಪಾತ್ರರಾದ ಸಕಲೇಶ ಮಾದರಸನು ಬಸವೇಶ್ವರರ ಹಿರಿಯ ಸಮಕಾಲೀನನಾದುದರಿಂದ ಹನ್ನೆರಡನೆಯ ಶತಮಾನದಲ್ಲಿ ಕೀರ್ತನ ಸಾಹಿತ್ಯದ ಪರಂಪರೆ ಅಧಿಕೃತವಾಗಿ ಪ್ರಾರಂಭವಾಯಿತೆಂದು ಹೇಳಬಹುದು".[೧] ಎನ್ನುವ ಮಾತಿನಲ್ಲಿ ಕೀರ್ತನಸಾಹಿತ್ಯದ ಬೇರು ೧೨ನೆಯ ಶತಮಾನದಲ್ಲಿಯೇ ಇತ್ತೆಂಬುದನ್ನು ಗಮನಿಸಬಹುದು. ಭಕ್ತಿ ಪರಂಪರೆಯಲ್ಲಿ, ವೈದಿಕ ಮತ್ತು ಶರಣಸಾಹಿತ್ಯದಲ್ಲೂ ಇದ್ದ ಕೀರ್ತನೆಗಳು ದಾಸಸಾಹಿತ್ಯದಲ್ಲಿ ಶತಮಾನಗಳ ಕಾಲವನ್ನು ತನ್ನದಾಗಿಸಿಕೊಂಡಿತು.

ಕೀರ್ತನ ಎಂದರೆ ಸ್ತುತಿ–ಹರಿಕಥೆ. ಕೀರ್ತನೆ–ದೇವರ ಸ್ತುತಿಪರವಾದ ಹಾಡು. ದೇವರನ್ನು ಕುರಿತಾದ ರಚನೆಗಳೆಲ್ಲವೂ ಕೀರ್ತನೆಗಳೇ. ಭಕ್ತಿಯೊಂದೇ ಇದರ ಮೂಲಸೆಲೆ. ಉಳಿದದ್ದೆಲ್ಲಾ ಗೌಣ. ಈಗಲೂ ದೇವರನಾಮ ಎಂಬ ಹೆಸರಿನಲ್ಲಿ ಕೀರ್ತನೆಗಳು ಉಳಿದುಕೊಂಡು ಬಂದಿರುವುದನ್ನು ಕಾಣಬಹುದು.

ಹರಿದಾಸರು ಬಳಸಿದ, ಬೆಳೆಸಿದ ಕೀರ್ತನ ಸಾಹಿತ್ಯವನ್ನು ಮಹಿಳಾಕೀರ್ತನಕಾರರು ತಮ್ಮ ವೈವಿಧ್ಯಮಯ ರಚನೆಗಳಿಂದ ಮುಂದುವರೆಸಿಕೊಂಡು ಬಂದರು. ಹರಿದಾಸರ ಪ್ರಭಾವದ ಜೊತೆಗೆ ಸ್ವಂತಿಕೆಯನ್ನೂ ಮೆರೆದರು.

**ಅಂಕಿತ**

ವಚನಕಾರರು ಬಳಸಿದಂತೆ ಕೀರ್ತನಕಾರರು ತಮ್ಮ ಕೃತಿಗಳಲ್ಲಿ ಅಂಕಿತಗಳನ್ನು ಬಳಸಿದ್ದಾರೆ. ಈ ಅಂಕಿತವು ಗುರುಮುಖೇನ ದೊರೆಯುವಂತದ್ದು. ಅಂಕಿತವೆಂದರೆ ಹೆಸರು ಎಂದಾದರೂ ಗುರುತು, ಮುದ್ರಿಕೆ ಎನ್ನುವ ಅರ್ಥವನ್ನು ಸ್ಫುರಿಸುತ್ತದೆ. 'ಇದು ಇಂತಹವರ ರಚನೆ' ಎಂದು ಗುರುತಿಸಲು ಅನುವಾಗುತ್ತದೆ. ಇಷ್ಟದೈವದ ಹೆಸರನನ್ನೇ ಅಂಕಿತವಾಗಿ ಬಳಸುತ್ತಾರೆ. ಪದ್ಯಗಳಲ್ಲಿ

ಅಂಕಿತನಾಮವನ್ನು ಸ್ಮರಿಸಿದಾಗ ಭಗವಂತನನ್ನು ಸ್ಮರಿಸಿದಂತಾಗುತ್ತದೆ. ಗಲಗಲಿ ಅವ್ವ 'ರಮಿಯರಸು' 'ರಾಮೇಶ', ಹೆಳವನಕಟ್ಟೆ ಗಿರಿಯಮ್ಮನು 'ಹೆಳವನಕಟ್ಟೆ ರಂಗ', 'ಹೆಳವನಕಟ್ಟೆ ವೆಂಕಟ', ಹರಪನಹಳ್ಳಿ ಭೀಮವ್ವ 'ಭೀಮೇಶ ಕೃಷ್ಣ', ನಿಡಗುರಕಿ ಜೀವೂಬಾಯಿ 'ಶ್ರೀಕಮಲನಾಭ ವಿಠಲ', ಯದುಗಿರಿಯಮ್ಮ 'ಮುದ್ದುವೆಂಕಟ' ವೆಂಕಟಕೃಷ್ಣ', ಸರಸಾಬಾಯಿ 'ರಮಾವಲ್ಲಭ ವಿಠಲ', ನಂಜನಗೂಡು ತಿರುಮಲಾಂಬ 'ಶೇಷಗಿರೀಶ' 'ಶೇಷ ಶೈಲವಾಸ' 'ಶೇಷಗಿರಿವರ' 'ಶೇಷಾದ್ರಿನಾಥ' 'ಶೇಷಶೈಲಧಾಮ' 'ಶೇಷಾಚಲ ನಿಲಯ' 'ಶೇಷಶಯನ', ಬಳ್ಳಾರಿ ರಾಧಾಬಾಯಿ 'ವೆಂಕಟವಿಠಲ' 'ಶ್ರೀರಾಘವೇಂದ್ರ', ಕಳಸದ ಸುಂದರಮ್ಮ 'ಕಾಳಿಮರ್ಧನಕೃಷ್ಣ', ಗುಂಡಮ್ಮ 'ರುಕ್ಮಿಣಿ ವಿಠಲ', ಸರಸ್ವತಿಬಾಯಿ 'ಶ್ರೀಶ್ರೀನಿವಾಸ', ಅಂಬಾಬಾಯಿ 'ಗೋಪಾಲಕೃಷ್ಣ ವಿಠಲ' ಎನ್ನುವ ಅಂಕಿತಗಳಲ್ಲಿ ಕೀರ್ತನೆಗಳನ್ನು ರಚಿಸಿದ್ದಾರೆ. ಕೆಲವರಿಗೆ ಕನಸಿನಲ್ಲಿ ಗುರುಗಳು ಅಂಕಿತ ಪ್ರಧಾನ ಮಾಡಿರುವುದುಂಟು. ಹರಪನಹಳ್ಳಿ ಭೀಮವ್ವನಿಗೆ ಕನಸಿನ ಮೂಲಕ ಅಂಕಿತ ದೊರಕಿದೆ.

ಕೀರ್ತನಕಾರ್ತಿಯರು ಗುರು ಪರಂಪರೆಯಂತೆ ವಿಷ್ಣುವಿನ ನಾಮವನ್ನೇ ಅಂಕಿತದಲ್ಲಿ ಬಳಸಿರುವುದರಿಂದ ಕೃಷ್ಣ ಭಕ್ತರೆಂದು ಮೇಲ್ನೋಟಕ್ಕೆ ಅನಿಸಿದರೂ ಇವರ ಕೀರ್ತನೆಗಳಲ್ಲಿ ಹರಿಹರ ಭಾವವು ಕಂಡು ಬರುತ್ತದೆ. ಎಲ್ಲ ದೇವರುಗಳ ಕುರಿತಾಗಿ ಬರೆದಿದ್ದರೂ ಹೆಚ್ಚಾಗಿ ಕೃಷ್ಣ ಭಕ್ತಿ ಮೆರೆದಿದ್ದಾರೆ. ಆಧುನಿಕ ಉಪಮೆಗಳನ್ನು, ಇತರ ವಿಷಯವಸ್ತುಗಳನ್ನು ಒಳಗೊಂಡ ಕೀರ್ತನೆಗಳನ್ನು ಕಾಣಬಹುದು. ಇವರ ಅಂಕಿತಗಳಲ್ಲಿ ಸ್ತ್ರೀಯರು ಬರೆದದ್ದು ಎನ್ನುವ ಯಾವ ಸುಳಿವೂ ಇಲ್ಲ. ಅಂದಿನ ಸಾಮಾಜಿಕ ಪರಿಸ್ಥಿತಿಯಲ್ಲಿ ತಾವು ಬರೆಯುತ್ತಿರುವುದು ಬಹಿರಂಗಗೊಳ್ಳಬಾರದೆಂಬ ಉದ್ದೇಶವೂ ಇರಬಹುದು. ಅಥವಾ ಗುರುಗಳನ್ನು, ಇಷ್ಟದೈವರನ್ನು ಒಳಗೊಳ್ಳುವ ಹಂಬಲದಲ್ಲಿ ಮೂಡಿಬಂದಥವುಗಳೇ ಆಗಿರಬೇಕು. ಹೀಗಾಗಿ ಹೆಚ್ಚೆಂದರೆ ಆ ಪ್ರದೇಶದಲ್ಲಿ ಬಿಟ್ಟರೆ ಉಳಿದ ಕಡೆ ಅವರು ಅಜ್ಞಾತರಾಗಿಯೇ ಉಳಿಯುತ್ತಾರೆ.

**ಕೀರ್ತನೆಗಳ ಸ್ವರೂಪ**

ಮಹಿಳಾಕೀರ್ತನಕಾರರ ಕೀರ್ತನೆಗಳು ಕೀರ್ತನೆ, ಸುಳಾದಿ, ಉಗಾಭೋಗ, ವೃತ್ತನಾಮ, ಷಟ್ಪದಿ, ತ್ರಿಪದಿ, ಕಂದ, ಆರ್ಯ, ವಚನ ಮುಂತಾದ ಪ್ರಕಾರಗಳಲ್ಲಿ ರಚಿತವಾಗಿದ್ದರೂ ಅವುಗಳೆಲ್ಲದರ ವಸ್ತು ಪುರಾಣ ಕಥಾಧಾರಿತವಾಗಿರುವುದರಿಂದ, ಭಕ್ತಿಯೇ ಪ್ರಧಾನವಾಗಿರುವುದರಿಂದ ಇವೆಲ್ಲವನ್ನೂ ಒಟ್ಟಾಗಿ 'ಕೀರ್ತನೆ', 'ಪದ, 'ದೇವರನಾಮ'ಗಳೆಂದು ವ್ಯವಹರಿಸುವುದು ರೂಢಿ. ಹರಿದಾಸರ ಕೀರ್ತನೆಗಳಂತೆ ಬದುಕಿನ ಸಂದರ್ಭಗಳ ಹಿನ್ನೆಲೆಯಲ್ಲಿ ಕೀರ್ತನೆಗಳು ಹುಟ್ಟದೆ ಪೌರಾಣಿಕ ಕತೆಗಳ ಚೌಕಟ್ಟಿನಲ್ಲಿ ರೂಪಗೊಂಡಿರುವುದು ಗಮನಿಸಬೇಕಾದ ಅಂಶ. ಕೀರ್ತನೆಯ ಸ್ವರೂಪವನ್ನು ಹೀಗೆ ಹೇಳಬಹುದು. ಕೀರ್ತನೆಯು ಪಲ್ಲವಿ, ಅನುಪಲ್ಲವಿ ಮತ್ತು ನುಡಿಗಳಿಂದ ಕೂಡಿದ ತ್ರಿಧಾತುಕ ರಚನೆ. ಪಲ್ಲವಿಯು ಕೀರ್ತನೆಯ ಅನುಭವ, ಆಶಯವನ್ನು ಒಳಗೊಂಡಿರುತ್ತದೆ. ಕೀರ್ತನೆಗೆ ಪಲ್ಲವಿಯು ಸೂತ್ರದಂತಿರುತ್ತದೆ. ಪಲ್ಲವಿಯ ಭಾವವು ಅನುಪಲ್ಲವಿಯಲ್ಲಿ ಮುಂದುವರೆದು ನುಡಿಗಳಲ್ಲಿ ದೃಷ್ಟಾಂತಗಳ ಮೂಲಕ ಸಮರ್ಥನೆಯಾಗುತ್ತದೆ.

ಸಮಗ್ರ ದಾಸಸಾಹಿತ್ಯ ಸಂಪುಟದಲ್ಲಿ ಕೀರ್ತನೆಗಳನ್ನು ಸಣ್ಣ ಕೀರ್ತನೆಗಳು ಮತ್ತು ದೊಡ್ಡ ಕೀರ್ತನೆಗಳೆಂದು ವಿಭಾಗಿಸಿದೆ. ಆದರೆ ಇಲ್ಲಿ ಕೀರ್ತನೆಗಳನ್ನು ಇಡಿಯಾಗಿ ಅಧ್ಯಯನ ಮಾಡಲಾಗಿದೆ. ಏಕೆಂದರೆ ವಿಭಾಗಿಸುವ ಕ್ರಮವು ಅಧ್ಯಯನಕ್ಕೆ ತೊಡಕನ್ನುಂಟು ಮಾಡುತ್ತದೆ. ಕೀರ್ತನೆಗಳು ಪೌರಾಣಿಕ ಕಥೆಯ ಹಿನ್ನಲೆ ಹೊಂದಿದೆ. ಹರಿಕಥೆ, ಯಕ್ಷಗಾನ ಮತ್ತು ಹರಿದಾಸರ ಪ್ರಭಾವವು ಇದೆ. ಆಧುನಿಕ ಉಪಮೆಗಳಿವೆ. ಕನಿಷ್ಟ ಒಂದು ನುಡಿಯಿಂದ ಗರಿಷ್ಟ ೩೬೯ ನುಡಿಗಳವರೆಗೂ ಇವೆ. ಅಂಬಾಬಾಯಿ ರಚಿಸಿರುವ 'ರಾಮಕಥಾಮೃತ ಕಾವ್ಯ' ೨೫೧೬ ನುಡಿಗಳಿವೆ. ಆದರೆ ಅದು ಲಭ್ಯವಿಲ್ಲ. ಕೀರ್ತನೆಯು ಗೇಯಪ್ರಧಾನವಾದದ್ದು. ಇದು ಉಗಾಭೋಗ, ಸುಳಾದಿ, ಸ್ತೋತ್ರ, ರಾಗ ಸ್ತುತಿ ರೂಪದಲ್ಲಿ ರಚಿತವಾಗಿದೆ. ಕಂದ, ಷಟ್ಪದಿ ಮತ್ತು ಸಾಂಗತ್ಯದಲ್ಲಿಯೂ ರಚಿತವಾಗಿದೆ. ಒಟ್ಟಿನಲ್ಲಿ ಇದು ಹಾಡುವ ಧಾಟಿಯನ್ನನುಸರಿಸಿದೆ. ಕೆಲವು ಕೀರ್ತನೆಗಳಲ್ಲಿ ಮೊದಲು ನುಡಿಗಳು ಬಂದು ನಂತರ ಪಲ್ಲವಿ ಅನುಪಲ್ಲವಿ ಮತ್ತೆ ನುಡಿಗಳ ರಚನೆಯು ಕಾಣುತ್ತದೆ. ಪ್ರಾಸ ಉಪಮೆ ರೂಪಕಾದಿ ಅಲಂಕಾರಗಳನ್ನು ಕೀರ್ತನಕಾರರ ಜೀವನಾನುಭವಗಳನ್ನು ಮೈಗೂಡಿಸಿಕೊಂಡು ರಚಿತವಾಗಿದೆ. ಉದಹರಿಸಿರುವ ಕೀರ್ತನೆಗಳ ಪಕ್ಕದಲ್ಲಿ ಕಂಸಗಳಲ್ಲಿ ನೀಡಿರುವ ಸಂಖ್ಯೆಯು ಸಮಗ್ರ ದಾಸಸಾಹಿತ್ಯದಲ್ಲಿರುವ ಆಯಾ ಕೀರ್ತನಕಾರರ ಕೀರ್ತನೆಗಳ ಸಂಖ್ಯೆಯಾಗಿದೆ.

**ಸಾಂಗತ್ಯ**

ಗಿರಿಯಮ್ಮನ 'ಉದ್ಧಾಳಿಕನ ಕಥೆ'ಯು ಸಾಂಗತ್ಯದಲ್ಲಿ ರಚನೆಯಾಗಿದೆ.

ಹಿಂದಕ್ಕೆ ವನದಲ್ಲಿ ತಪವ ಮಾಡುತಲಿದ್ದೆ ಬಂದೊಬ್ಬ
ಮುನಿಯು ಹೇಳಿದನು
ತಂದೆ ತಾಯಿಗಳಯಮಲೋಕದೊಳಿಹರೆಂದು ಬಂದು
ಹೇಳಿದನೆ ಸುದ್ಧಿಯನು

**ಸೀಸಪದ್ಯ**

ಸುಂದರಾಂಗನ ಪಾದಕೊಂದಿಸುತ ಭಕ್ತಿಯಲಿ
ಮಂದರೋದ್ಧಾರ ಮುಚುಕುಂದ ವರದ
ನೆಂದು ಸ್ತುತಿಸುವ ಭಕ್ತವೃಂದವನು ರಕ್ಷಿಸುವ
ಕುಂದನೆಣಿಸದೆಲೆ ನಾರಸಿಂಹ ಹರಿಯು
ಇಂದಿರಾರಮಣಗೆ ಜಯ ಗೋವಿಂದ ಗೋಪಕುಮಾರ–
ನಂದವರ ಬಂಧನವ ಬಿಡಿಸಿ ಕಾಯ್ದ
ಕಂದರ್ಪಜನಕ ಕಮಲಾಕ್ಷ ಹರಿ ಗತಿ ಎನುತ
ಬಂದವನ ಕೈ ಬಿಡನು ಇಂದಿರೇಶ
ದುಂದುಭಿ ವತ್ಸರದಿ ಸುಜನರೆಲ್ಲ
ತಂದೆ ಕಮಲನಾಭ ವಿಠ್ಠಲನೆನುತ

ಒಂದೆ ಮನದಲಿ ಭಜಿಸಿ ಸ್ತುತಿಪ ಜನರ
ಚಂದದಲಿ ಕಾಯ್ವ ನಾರಸಿಂಹ ಹರಿಯು (ನಿ.ಜೀವೂಬಾಯಿ ಕೀ.೧೬೪)

**ಪದ**

ಎಷ್ಟು ಪುಡುಕಲು ಕೃಷ್ಣ ತೋರನೆ ಇಲ್ಲಿ ಬಾರನೆ
ಮನ ಕೆಟ್ಟಿತೆ ಇನ್ನೆ
ಒಟ್ಟುಗೂಡಿ ಎಲ್ಲ ನೆರೆಯೋಣ ಹರಿಯ ಕರೆಯೋಣ ಭಕ್ತಿ
ಭಾವ ಮಾಡೋಣ
ಇಷ್ಟಾರ್ಥ ಸಲಿಸುವ ಕುಲದೈವ ಎಮ್ಮನು ಕಾವ
ಬಿಡಿಸುವ ಭವ ನೋವ
ನಿಷ್ಟೆಯಿಂದಲಿ ಇಂತು ನೆನೆಯುತ್ತ ಮೈಮರೆಯುತ್ತ
ಕೃಷ್ಣ ಪೊರೆಯೊ ಎನ್ನುತ್ತ (ನಿ.ಜೀವೂಬಾಯಿ ಪುಟ.೩೦೬, ನುಡಿ-೬)

**ವೃತ್ತ**

ಕಂಡರಲ್ಲಿ ಹರಿಯ ಹೆಜ್ಜೆಗುರುತು ಬೆಂಡಾಗಿ ಬಾಲೆಯರು
ಪುಂಡರೀಕಾಕ್ಷ ಒಬ್ಬಳನೆ ಕರೆದುಕೊಂಡೀಗ ಬಂದಿಪ್ಪನೆ
ಮಂಡೆ ನೇವರಿಸಿ ಪೂ ಮುಡಿಸಿಹ ಶುಂಡಾಲ ವರದ ಹರಿ
ಕಂಡೆನೆ ಕಾಲಿನ್ಹೆಜ್ಜೆ ಗುರುತು ಭಂಡಾಳು ಅವಳ್ಯಾವಳೆ

**ವಚನ**

ಪಕ್ಷಿಮಾತನು ಕೇಳಾಪೇಕ್ಷೆ ಹುಟ್ಟಿತು ಮನಕೆ
ಇಕ್ಷುಚಾಪನ ಶರದಿಂದ ಮೋಹಿತಳಾಗಿ
ಲಕ್ಷ್ಮೀವಲ್ಲಭ ಹರಿಯ ಸಾಕ್ಷಿಯಿಂದ್ಹೇಳುವೆನು
ಸಾಕ್ಷಾತ ಪತಿಯು ನಳನೆಂದು ನೇಮಿಸಿಕೊಂಡೆ
ಅಕ್ಷದಿಂದಿನ್ನೊಬ್ಬ ಪತಿಯ ನೋಡುವಳಲ್ಲ
ರಕ್ಷಸಿ ಎನ್ನ ಸ್ವಯಂವರಕೆ ಬರಹೇಳೆನಲು
ಆಕ್ಷಣದಲ್ಹೋಗಿ ನಳರಾಯಗ್ವಾರ್ತೆಯ ತಿಳಸಿ ತಕ್ಷದಲ್ಹಾಂರಂತರಿಕ್ಷಕ್ಕೆ ನಡೆದಿತಾಗ
(ಹ.ಭೀ. ಪು:೩೩೬, ವಚನ:೧೦)

**ಧ್ವನಿ**

ಉಮೆಯ ಸುತನ ಚರಣಕಮಲಕೆ ನಮಿಸಿ ಪೇಳುವೆ ನಾನು ಹರುಷದಿ
ರಮೆಯ ರಮಣನ ಕರುಣದಿಂದಲಿ ನಳನ ಕಥೆಗಳನು - ೧

ಕಂತುಪಿತನ ಕರುಣದಲಿ ದಮಯಂತಿ ಬಂದಾಪತ್ತು ಕಳೆದು
ಸಂತೋಷದಿ ಸಾಮ್ರಾಜ್ಯವಾಳಿದ ಕಥೆಯ ಪೇಳುವೆನು - ೨

ಸತ್ಯವಂತನೆಂಬೊ ನಳ ತಾ ಪೃಥಿವೀಪತಿ ರಾಜಾಧಿರಾಜನು
ಭೃತ್ಯನಾಗಿ ಭೀಮೇಶ ಕೃಷ್ಣಗೆ ಭಕ್ತನೆನಿಸುವನು–೩(ನಳ ಚರಿತ್ರೆ, ಹ.ಭೀ. ಧ್ವನಿ–೧)

**ಉಗಾಭೋಗ**

ಉಗಾಭೋಗ ಎಂಬ ಪದವು ಪ್ರಾಚೀನವಾಗಿದ್ದರೂ ಅಸಂಖ್ಯಾತ ಉಗಾಭೋಗಗಳು ರಚನೆಯಾಗಿದ್ದರೂ ಅದರ ಸ್ವರೂಪದ ಬಗ್ಗೆ ಸ್ಪಷ್ಟ ಚಿತ್ರಣ ಸಿಕ್ಕಿಲ್ಲ. ತಂಜಾವೂರಿನ ದೊರೆ ತುಳಜಾಜಿಯ ಸಂಗೀತ ಸಾರಾಮೃತ, ಎಟ್ಟಿಯಾಪುರದ ಸುಬ್ಬರಾಮ ದೀಕ್ಷಿತರ ಸಂಗೀತ ಸಂಪ್ರದಾಯ ಪ್ರದರ್ಶಿನಿ ಮೊದಲಾದ ಪ್ರಸಿದ್ಧ ಲಕ್ಷಣ ಗ್ರಂಥಗಳಲ್ಲಿ ಇದರ ಉಲ್ಲೇಖ ಬರದಿರವುದು ಈ ಜಿಜ್ಞಾಸೆಯನ್ನು ಮತ್ತಷ್ಟು ಹೆಚ್ಚಿಸಿದೆ. ಉಗಾಭೋಗ ಎಂಬ ಪದದ ಅರ್ಥದ ಬಗ್ಗೆ ವಿಪುಲ ಚರ್ಚೆ ನಡೆದಿದೆ. ಕೆಲವರು ಇದು ಉದ್ಗ್ರಾಹ ಭೋಗ ಎಂಬ ಸಂಸ್ಕೃತ ಶಬ್ದದ ಕನ್ನಡ ರೂಪ ಎಂದು ಭಾವಿಸಿದರು.

ಉದ್ಗ್ರಾಹಃ ಪ್ರಥಮೋ ಭಾಗಃ ತತೋ ಮೇಲಾಪಕಃ ಸ್ಮೃತಃ
ಧ್ರುವತ್ವಾಚ್ಚ ಧ್ರುವಃ ಪಶ್ಚಾದಾಭೋಗಸ್ತ್ವಂತಿಮೋ ಮತಃ
ಧ್ರುವಾಭೋಗಾಂತರೇ ಜಾತೋ ಧಾತುರನ್ಯೋಽಖಂತರಾಭಿದಃ

(ಗೋವಿಂದದೀಕ್ಷಿತನ ಸಂಗೀತಸುಧಾನಿಧಿ)

ಎಂದರೆ ಉದ್ಗ್ರಾಹ ಮೇಲಾಪಕ ಧ್ರುವ ಹಾಗೂ ಆಭೋಗ ಎಂಬ ನಾಲ್ಕು ಅಂಗಗಳಿಂದ ಕೂಡಿದ ಸ್ವರ ಪ್ರಧಾನವಾದ ಗೀತವೇ ಉದ್ಗ್ರಾಹಾಭೋಗ. ಇದರಲ್ಲಿ ಮೊದಲನೆಯದು ಉದ್ಗ್ರಾಹವಾದರೆ ಕೊನೆಯದು ಆಭೋಗ. ಈ ಆದ್ಯಂತಗಳಿಂದಾಗಿ ಇದಕ್ಕೆ ಈ ಹೆಸರು ಬಂದಿರಬೇಕು. ಮತ್ತೆ ಕೆಲವರು ಉಕ್ಥ ಎಂಬ ವೈದಿಕ ಪದದಲ್ಲಿ ಅದರ ಮೂಲವನ್ನು ಕಂಡರೆ ಇನ್ನು ಕೆಲವರು ಉಗು ಎಂಬ ಕನ್ನಡ ಮಾತಿನಲ್ಲಿ ಅದರ ಉಗಮವನ್ನು ಕಾಣಲು ಯತ್ನಿಸುವರು. ಹಲವರು ಶಿವಶರಣರ ವಚನಗಳಲ್ಲಿ ಅದರ ಮೂಲವನ್ನು ಗುರುತಿಸಲು ಪ್ರಯತ್ನಿಸಿದರೂ ಇವು ಸ್ವರಪ್ರಧಾನವಾದ ಗೇಯ ರಚನೆಗಳಾಗಿದ್ದು ಅವುಗಳಿಂದ ಭಿನ್ನವೆಂಬುದು ನಿಶ್ಚಿತ ಎಂದು ಒಪ್ಪಿರುವುರು. ಮರಾಠಿಯ ಅಭಂಗಗಳು, ಓವಿಗಳು, ಸಂಸ್ಕೃತದ ಆರ್ಯಾಗಳು, ದಂಡಿಗಳು, ಉಗಾಭೋಗಕ್ಕೆ ಸ್ಫೂರ್ತಿಯಾಗರಬಹುದು ಎಂಬ ಊಹೆ ಮತ್ತೆ ಕೆಲವರದು. ಇವೆಲ್ಲಕ್ಕೂ ಮೂಲವಾದ ಮತ್ತೊಂದು ಪ್ರಕಾರ ಇದ್ದಿರಬೇಕು ಎಂಬ ಮತ್ತೊಂದು ಅಭಿಮತವಿದೆ. ಉಗಾಭೋಗ ಶಬ್ದ ಅರ್ಥ ಮತ್ತು ಲಕ್ಷಣಗಳು ತೊಡಕಾಗಿಯೇ ಉಳಿದಿದ್ದರೂ ಇದೊಂದು ಸ್ವರಪ್ರಧಾನವಾದ ಗೇಯ ರಚನೆ ಎಂಬುದು ಸರ್ವಸಮ್ಮತ. ಉಗಾಭೋಗಗಳು ಸಂಸ್ಕೃತದ ಮುಕ್ತಕಗಳನ್ನು ಅದರಲ್ಲೂ ಆರ್ಯಾವೃತ್ತವನ್ನು ವಿಶೇಷವಾಗಿ ಹೋಲುತ್ತದೆ ಎಂಬುದು ಗಮನಾರ್ಹ. ಉಗಾಭೋಗಗಳು ರಚನೆಯ ದೃಷ್ಟಿಯಲ್ಲಿ ಸುಳಾದಿಗಳಿಗೆ ಹತ್ತಿರವಾಗಿದ್ದು ಕೆಲವು ಕಡೆ ಸುಳಾದಿಯ ಭಾಗವಾಗಿಯೇ ಮುದ್ರಿತವಾಗಿದೆ. ಇದರಿಂದ ಒಂದು ಹಂತದಲ್ಲಿ ಅವರೆಡಕ್ಕೂ ಸಾಮ್ಯ ಸ್ಫುಟಿಸುತ್ತದೆ. ಪ್ರಸನ್ನ ವೆಂಕಟದಾಸರ ನವವಿಧ ಭಕ್ತಿ ಪ್ರತಿಪಾದಕ ಉಗಾಭೋಗಗಳೂ ಭಕ್ತಿ ಸುಳಾದಿ ಎಂಬ ಹೆಸರಿನಲ್ಲಿ ಮುದ್ರಿತವಾಗಿರುವುದು ಇದಕ್ಕೆ ಮತ್ತೊಂದು ನಿದರ್ಶನ. ಸುಳಾದಿಯ ಸ್ಫೂರ್ತಿಯಿಂದ ಉಗಾಭೋಗ ಪ್ರಕಾರವು ಜನ್ಮ

ತಾಳಿರುವ ಸಾಧ್ಯತೆಯನ್ನು ಇದರಿಂದ ಊಹಿಸಬಹುದಾಗಿದೆ. ಇಂದು ದೊರಕಿರುವ ಉಗಾಭೋಗಗಳಲ್ಲಿ ಶ್ರೀಪಾದರಾಜರ ರಚನೆಗಳೇ ಪ್ರಾಚೀನ. ಪುರಂದರದಾಸರು ವಿಪುಲ ಸಂಖ್ಯೆಯಲ್ಲಿ ಉಗಾಭೋಗಗಳನ್ನು ರಚಿಸಿದ್ದಾರೆ. ಉಗಾಭೋಗಗಳ ವ್ಯಾಪ್ತಿ ಎರಡು ಸಾಲುಗಳಿಂದ ಹಿಡಿದು ಹತ್ತು ಸಾಲಗಳವರೆಗೆ ಹರಡಿದೆ. ಪುರಂದರದಾಸರು ಎರಡು ಸಾಲಿನ ಅತಿ ಚಿಕ್ಕ ಉಗಾಭೋಗವನ್ನು ರಚಿಸಿದ್ದಾರೆ. ನಾಲ್ಕು, ಎಂಟು, ಹತ್ತು, ಹನ್ನೆರಡು, ಇಪ್ಪತ್ತಾರು ಸಾಲುಗಳ ಉಗಾಭೋಗವಿದೆ. ಇಪ್ಪತ್ತಾರು ಸಾಲುಗಳ ಉಗಾಭೋಗ (ಗೋಪಾಲದಾಸರು-ನೀರೊಳಗೆ ನಿಂತು..) ಉಪಲಬ್ಧ ದೀರ್ಘ ಉಗಾಭೋಗ.[೨]

ಉಗಾಭೋಗವು ಹರಿದಾಸ ಸಾಹಿತ್ಯದಲ್ಲಿ ಸಾರವತ್ತಾದ ಹಾಗು ಚಿಕ್ಕದಾದ ಪ್ರಕಾರ. ಲಘುವಾದ ಬಂಧ. ಸಂಸ್ಕೃತ ಶ್ಲೋಕಕ್ಕೆ ಸಂವಾದಿಯಾದ ಪ್ರಕಾರವಾಗಿದೆ. ರಾಗ ತಾಳಗಳ ಕಟ್ಟಿಲ್ಲ. ಯಾವ ರಾಗದಲ್ಲಾದರೂ ಹಾಡಬಹುದು ಇಷ್ಟೇ ಸಾಲುಗಳಿರಬೇಕೆಂಬ ನಿಯಮವಿಲ್ಲ. ಹಾಡಿನ ಸಾರಾಂಶವನ್ನು ಸ್ಫುಟವಾಗಿ ನೇರವಾಗಿ ಉಗಾಭೋಗಗಳು ಹೇಳುತ್ತವೆ. ಉಗಾಭೋಗದಲ್ಲಿ ತತ್ವ ವಿಮರ್ಶೆ, ವೈರಾಗ್ಯ, ವಿಡಂಬನೆ, ಸ್ತುತಿ, ನಿಂದೆ, ಡಂಭಾಚಾರ, ಅಲಂಕಾರ ವೈಭವ ಮತ್ತು ನವವಿಧ ಭಕ್ತಿಗಳ ರಸಾವೇಶವನ್ನು ಕಾಣಿಸಬಹುದಾಗಿದೆ. ವಿವಿಧ ಭಾವಗಳಲ್ಲಿ ಉಗಾಭೋಗವಿದೆ. ಮಹಿಳಾ ಕೀರ್ತನಕಾರರ ಕೀರ್ತನೆಗಳಲ್ಲೂ ಉಗಾಭೋಗಗಳು ಕಂಡುಬರುತ್ತವೆ.

ಗಿರಿಯಮ್ಮ ರಚಿಸಿರುವ ಉಗಾಭೋಗವೊಂದು ಹೀಗಿದೆ:

ಪಾಪಿಯೊಳು ನಾ ಬಂದೆ ಪರದೇಶಿ ನಾನಾದೆ
ಕಾಪಾಡುವರ ಕಾಣೆ ಕೈಪಿಡಿ(ದು)
ಆಪತ್ತು ಬಂದ ಕಾಲಕ್ಕೆ ಆರಯ್ವರೊಬ್ಬರಿಲ್ಲ
ಶ್ರೀಪತಿಯೆ ಕಡೆಹಾಯಿಸೊ
ತಂದೆ ತಾಯೆಂಬುದನು ನಾ
ನೊಂದು ಗುರುತನರಿಯೆ ನಿಮ್ಮ ಕಂದ
ಳೆಂದೆನಿಸಿ ಕಡೆ ಹಾಯಿಸೊ ಹೆಳವನಕಟ್ಟೆ ರಂಗ...

ಮೊರೆಹೋಗುವ ಈ ಪದ್ಯದಲ್ಲಿ ಆರ್ತತೆಯ ಭಾವವಿದೆ. ಆಪತ್ತು ಬಂದ ಕಾಲದಲ್ಲಿ ಅರಿಷಡ್ವರ್ಗಗಳು (ಆರು) ಪಂಚೇಂದ್ರಿಯಗಳು (ಐದು), ಒಬ್ಬರೂ ಆಗುವುದಿಲ್ಲ ಎನ್ನುತ್ತಾಳೆ. ಗಿರಿಯಮ್ಮನ ಆರ್ತತೆಯನ್ನು ಈ ಉಗಾಭೋಗವು ಚೆನ್ನಾಗಿ ಧ್ವನಿಸಿದೆ. ಆರಯ್ವರು ಎನ್ನುವುದು ಸಂಖ್ಯಾವಾಚಕವಾಗಿಯೂ ಸಮಾಸಪದವಾಗಿಯೂ ಬಳಕೆಯಾಗಿದೆ.

ಹರಪನಹಳ್ಳಿ ಭೀಮವ್ವನವರ ಒಂದು ಉಗಾಭೋಗವು (ಪುಟ-೧೫೧) 'ನಿಗಮ ಗೋಚರ ಸ್ವಾಮಿ ನಿಂತು ನೋಡುವ ಎನ್ನ' ಎನ್ನುವ ಉಗಾಭೋಗವು ಪೌರಾಣಿಕ ವಸ್ತುವನ್ನು ಒಳಗೊಂಡಿದೆ. ಹರಿಯ ದಶಾವತಾರವನ್ನು ಬಣ್ಣಿಸುತ್ತದೆ. ಪ್ರಾರಂಭದ ನಾಲ್ಕು ಸಾಲುಗಳಲ್ಲಿ ಆದಿಪ್ರಾಸವಿದ್ದು ನಂತರ ಅಲ್ಲಲ್ಲೇ ಎರಡು ಸಾಲುಗಳಲ್ಲಿ ಆದಿಪ್ರಾಸವು ಬಂದರು ನಿಯಮಿತವಾಗಿ ಮುಂದುವರೆದಿಲ್ಲ.

ಸಾಲುಬಿಟ್ಟು ಸಾಲುಗಳಲ್ಲಿ ಕೃಷ್ಣಾ ಎನ್ನುವ ಪದದಿಂದ ನಿಯಮಿತವಾಗಿ ಕೊನೆಯಾದರೂ ಅದನ್ನು ಅಂತ್ಯಪ್ರಾಸ ಎನ್ನಬಹುದು. ಆದರ ಇದು ವ್ಯಾಕರಣ ನಿಯಮ ನಿರ್ಬಂಧಗಳಿಗೆ ಒಳಪಡುವುದಕ್ಕಿಂತ ಕೃಷ್ಣ ಮಹಿಮೆಯನ್ನು ಎತ್ತಿಹಿಡಿಯುವ ಭೀಮವ್ವನವರ ಕೃಷ್ಣ ಶ್ರದ್ಧೆಯನ್ನು ಕಾಣಬಹುದು. ಇದೊಂದು ಮುಂಡಿಗೆಯನ್ನು ಹೋಲುವ ವಿಶೇಷ ಉಗಾಭೋಗ.

ಅಂಬಾಬಾಯಿಯವರ ಒಂದು ಉಗಾಭೋಗವು (ಕೀ.೧೭೪, ಪುಟ:೨೦೯)

ಗುರುವಿನ ಕರುಣದಿ ಭಕ್ತಿಜ್ಞಾನಾದಿಗಳು

ಗುರುವಿನ ಕರುಣದಿ ವೈರಾಗ್ಯಭಾವವು

ಎಂದು ಪ್ರಾರಂಭವಾಗುವ, ಇದು ಏಳು ಸಾಲಿನ ಕೀರ್ತನೆ. ಗುರುಕರುಣೆಯನ್ನು ಪ್ರತಿಪಾದಿಸುತ್ತದೆ. ಗುರು ಕರುಣೆಯು ಗರುವಿಕೆಯನ್ನು ಬಿಡಿಸುತ್ತದೆ ಎನ್ನುತ್ತಾರೆ. ನಿಯಮಿತವಾಗಿ ಆದಿಪ್ರಾಸವು ಬಂದಿದೆ.

ದಾಸಭಾಗ್ಯವೇ ಭಾಗ್ಯ ಹರಿಕೊಟ್ಟ ಸೌಭಾಗ್ಯ

ದಾಸಭಾಗ್ಯಕೆ ಜಗದಿ ಸರಿಮಿಗಿಲಿಲ್ಲ (ಕೀ.೧೮೩, ಪುಟ-೨೩೬)

-ಎನ್ನುವ ಉಗಾಭೋಗವು ದಾಸತ್ವದ ಸೌಭಾಗ್ಯ, ಹರಿದಾಸರ ಸ್ಮರಣೆ, ಮಧ್ವಮತ ತತ್ವವನ್ನು ಪ್ರತಿಪಾದಿಸುತ್ತದೆ. ಆದಿಪ್ರಾಸವನ್ನೊಳಗೊಂಡಿದೆ. 'ಪರಿಪರಿ ದೇಹ ಧರಿಸಿ' (ಕೀ.೨೩೬, ಪುಟ-೧೯೫) ಎನ್ನುವ ಉಗಾಭೋಗವು ಆದಿಪ್ರಾಸವನ್ನೊಳಗೊಂಡಿದ್ದು ಗುರು ಮುದ್ದುಮೋಹನ ವಿಠಲರನ್ನು ಕುರಿತು ಗುರುಸ್ತುತಿ. ಅವರ ಬಗೆಗಿನ ಅಪಾರ ಭಕ್ತಿಯ ಸ್ವರೂಪವನ್ನಿಲ್ಲಿ ಕಾಣಬಹುದು. 'ವಿಕ್ರಮ ಸಂವ್ಸತರದಲ್ಲಿ' ಎನ್ನುವ ಉಗಾಭೋಗವು ತಂದೆ ಮುದ್ದುಮೋಹನ ವಿಠಲರಿಗೆ ಆಯುರಾರೋಗ್ಯ ಭಾಗ್ಯ ನೀಡಲು ಕೃಷ್ಣನನ್ನು ಬೇಡಿದ್ದಾರೆ. ಆದಿಪ್ರಾಸವನ್ನೊಳಗೊಂಡಿದೆ.

'ಐದೊಂದು ಅರಿಯ ಬಿಡಿಸೊ' ಎನ್ನುವ ಮುಂಡಿಗೆಯ ರೂಪದ ಉಗಾಭೋಗವೊಂದಿದೆ. ಹನ್ನೊಂದು ಸಾಲುಗಳನ್ನೊಳಗೊಂಡಿರುವ ಚಿಕ್ಕ ಉಗಾಭೋಗವಾದರೂ ಆದಿಪ್ರಾಸ, ಅಂತ್ಯಪ್ರಾಸವನ್ನೊಳಗೊಂಡಿದೆ. ಈ ಮುಂಡಿಗೆಯನ್ನು ಬಿಡಿಸುತ್ತಾ ಹೋದರೆ: (ಪುಟ:೪೨೯)

ಐದೊಂದು ಅರಿ-ಅರಿಷಡ್ವರ್ಗಗಳು

ಐದೆರಡು ಹೊದಿಕೆ-ತೃಣ, ಕ್ರಿಮಿ, ಪಶು, ಪಕ್ಷಿ, ನರ, ರಾಜನರಗಂಧರ್ವ, ಸುತ್ತ ಜನ್ಮಗಳ ಹೊದಿಕೆ

ಐದು ಮೂರು-ಅಷ್ಟಮದಗಳು

ಐದು ನಾಲ್ಕು-ನವವಿಧ ಭಕ್ತಿ

ಐದು ಐದು ಒಂದು-ಏಕಾದಶೇಂದ್ರಿಯಗಳು

ಐದರಿಂದಾದ ದೇಹ-ಪಂಚಭೂತಗಳು

ಐದು ಐದು ಅಧಿಪತಿಗಳು-ದಶವಿಶ್ವೇ ದೇವತೆಗಳು (ಪರೂರವ, ಆರ್ಧವ, ಧೂರಿ, ಲೋಚನ, ಕೃತು, ದಕ್ಷ, ಸತ್ಯ, ವಸು, ಕಾಮ, ಕಾಲ)

ಐದೊಂದು ವನಜಗಳ ತತ್ವ–ಜೀವ, ಪ್ರಕೃತಿ, ದೇಶ, ಕಾಲ, ಧರ್ಮ ಮತ್ತು ವೇದ.

–ಈ ಆರು ನಿತ್ಯ ತತ್ವಗಳ ಅರ್ಥ.

ಆದಿಪ್ರಾಸವುಳ್ಳ ನಾಲ್ಕುಸಾಲುಗಳ ಅತ್ಯಂತ ಚಿಕ್ಕ ಉಗಾಭೋಗವೊಂದಿದೆ (ಕೀ.೨೩೬, ಪುಟ:೨೯೦). ಆದಿಪ್ರಾಸವನ್ನೊಳಗೊಂಡ ಏಳು ಸಾಲಿನ ಒಂದು ಉಗಾಭೋಗವೊಂದಿದೆ. ಆಧ್ಯಾತ್ಮ ತತ್ವ ಅದರ ವಸ್ತು.

**ಸುಳಾದಿ**

ಇದು ತಾಳ ಪ್ರಧಾನ ರಚನೆ. ಧ್ರುವ, ಮಠ್ಯ, ಝುಂಪಕ, ತ್ರಿಪುಟ, ಅಟ್ಟ ಹಾಗೂ ಏಕ ಎಂಬ ಸಪ್ತ ತಾಳಗಳಲ್ಲಿ ಇರುತ್ತದೆ. ಶಾಸ್ತ್ರೀಯ ಸಂಗೀತದ 'ಸಾಲಗಸೂಡ'ವೇ ಸುಳಾದಿಯಾಗಿ ಪರಿವರ್ತಿತವಾಯಿತೆಂಬುದು ವಿದ್ವಾಂಸರ ಮತ. ನುಡಿಯಲ್ಲಿ ಪಾದಗಳ ಸಂಖ್ಯೆ ನಿಯಮಿತವಿಲ್ಲ. ಸಂಗೀತದ ಹಿನ್ನೆಲೆಯಲ್ಲಿ ಸಾಹಿತ್ಯ ಚೌಕಟ್ಟಿನಲ್ಲಿ ಸುಳಾದಿ ಮೂಡಿ ಬರುತ್ತದೆ.[೩] ಮಹಿಳಾಕೀರ್ತನಕಾರರ ಕೀರ್ತನೆಗಳಲ್ಲಿ ಸುಳಾದಿಯ ಪ್ರಯೋಗವಿದೆ.

ಭೀಮವ್ವನ 'ವಾರಿಧಿಯೊಳಗೆ ಒಡ್ಯಾಡಿ ನಾರುವುದೇನು' ಎನ್ನುವ ಸುಳಾದಿ (ಕೀ.೯೨, ಪುಟ–೧೮೩–೧೮೬) ಆದಿಪ್ರಾಸಗಳನ್ನೊಳಗೊಂಡಿದ್ದು, ಕೃಷ್ಣನ ದಶಾವತಾರವನ್ನು ವರ್ಣಿಸುತ್ತದೆ. ಧ್ರುವತಾಳದಲ್ಲಿದೆ. ಮೊರೆಹೋಗುವ ಸುಳಾದಿ 'ನೀರಶಯನನೆ ನಿಂತು ಕೇಳುವ ಮಾತು' (ಪುಟ–೧೮೪), ಎನ್ನುವ ಸುಳಾದಿ ಆದಿ ಅಂತ್ಯಪ್ರಾಸವನ್ನೇನೂ ಒಳಗೊಂಡಿಲ್ಲ. ಮಠ್ಯತಾಳದಲ್ಲಿ ರಚಿತವಾಗಿದೆ. 'ನೇಮನಿತ್ಯವು ನಿನ್ನ ನಾಮಬಿಟ್ಟವಗ್ಯಾಕೆ' ಎನ್ನುವುದು ರೂಪಕತಾಳದ ಸುಳಾದಿ. ಇದು ಹರಿನಾಮ ಸ್ಮರಣೆಯ ಮಹತ್ವ ತಿಳಿಸುತ್ತದೆ. ಅಟ್ಟತಾಳದ ಸುಳಾದಿ 'ಮಗನ ಕರೆದು ಮುಕ್ತಿ ಪಡದ ಅಜಾಮಿಳನ ನೋಡು' ಎನ್ನುವುದು ಕೃಷ್ಣನ ಲೀಲಾವಿನೋದಗಳನ್ನು ಹೇಳುತ್ತದೆ. ಝುಂಪೆತಾಳದ 'ವಾಸುದೇವನೆ ನೀನು ಏಸುದೇವನ ಸುತನೆ' ಎನ್ನುವ ಸುಳಾದಿಯು ಆದಿಪ್ರಾಸವನ್ನು ಒಳಗೊಂಡಿದೆ. ಭವಪಾಶದಿಂದ ಮುಕ್ತಿ ಕೊಡಲು ಭೀಮವ್ವ ಬೇಡಿದ್ದಾರೆ.

ವಿವಿಧ ತಾಳಗಳಲ್ಲಿ ಸುಳಾದಿ ರಚಿಸಿರುವುದು ಅವ್ವನವರ ರಚನಾ ಸಾಮರ್ಥ್ಯವನ್ನು, ಸಂಗೀತ, ತಾಳ ಜ್ಞಾನವನ್ನು ಹೇಳುತ್ತದೆ.

**ಧ್ರುವ ತಾಳ**

ವಾರಿದಿಯೊಳಗೆ ಒಡ್ಯಾಡಿ ನಾರುವುದೇನೊ ಮಂ–
ದರವ ಹೊತ್ತು ನೀ ಧರನಾ ಹೊರುವುದೇನು
ಊರು ಬಗೆದು ಕರುಳ್ಹಾರ ಹಾಕುವುದೇನು
ದೂರ ಬೆಳೆದು ಸುಳ್ಳ ಪೋರನೆನಿಪದೇನು
ದೂರಾಗಿ ಜನನಿ ಕೊಂದ ಸ್ವಾರಸ್ಯಗಳೇನು
ನಾರುಟ್ಯಾರಣ್ಯದಿ ನಾರಿ ಬಿಡುವುದೇನು ಅ
ಪಾರ ಹೆಂಡಿರ ಸಂಸಾರ ಘೋರವಿದೇನು

ಜಾರಾಗಿ ಜನಕೆ ಶರೀರ ತೋರುವುದೇನು
ಕ್ರೂರ ಕಲಿಗಳ ನೀ ಸಂಹಾರ ಮಾಡುವುದೇನು
ಧೀರ ನಮ್ಮೆದುರು ನಿಲ್ಲಬಾರದೇನು
ಮಾರಜನಕ ಭೀಮೇಶ ಕೃಷ್ಣನೆ
ಮರೆಯಾಗಿದ್ದರೇನೊ ಮರೆಯದಂತಿರೋ

(ಕೀ೯೨, ಪುಟ:೧೮೩)

**ಮಠ್ಯತಾಳ**

ನೀರಶಯನನೆ ನಿಂತು ಕೇಳೆನಮಾತು ನೀ ದಶ ಅವ
ತಾರ ಆಗಲೀ ಪರಿಯಿಂದ
ದಾರಿಂದ ನಿನಗೇನುದ್ಧಾರವಾಗುವುದೇನೊ ಸ್ವಾಮಿ
ಶ್ರೀರಮಣನೆ
ಕಾರುಣ್ಯನಿಧಿ ಕಾಮಧೇನು ಕಲ್ಪವೃಕ್ಷ ನೀನೆಂದು ತಿಳಿದಿದ್ದೆ
ಗೋ ವೃಂದಾವನ ಪಾದ ಗೋವರ್ಧನೋದ್ಧಾರ ಭುವನಾದಿ
ಪತಿಯೆ ನೀ ಬಹುಮಾನಕರ್ತನೆ

ಅವನಿಪಾಲಕ ನಿನ್ನವನೆಂದು ರಕ್ಷಿಸಿ ಜನವ ಪುರದ ಹಾದಿ
ಮೆಟ್ಟಿಸದಿರೆನ್ನ ಜನನ ಮರಣ ಸ್ಥಿತಿ ಜಾತಕಾಲಕು ನೀನೆ
ಜನನಿ ಜನಕರು ಹಿಂದೆಷ್ಟು ಮುಂದೆಣಿಕಿಲ್ಲ ವನಜಪತಿಯೆ
ವೈಸಲಿ ಬೇಕು ಎನಭಾರ ನನಗೂ ನಿನಗೂ ಬಿಟ್ಟಿದ್ದಲ್ಲೋ
ಭೀಮೇಶ ಕೃಷ್ಣ ಅನುಮಾನವ್ಯಾತಕೀಗೆನ್ನ ಮಾನ ಕಾಯ್ದುಕೊಳ್ಳೊ

–(ಕೀ೯೨, ಪುಟ:೧೮೪)

**ರೂಪಕತಾಳ**

ನೇಮ ನಿತ್ಯವು ನಿನ್ನ ನಾಮ ಬಿಟ್ಟವಗ್ಯಾಕೆ
ಸ್ನಾನಯಾತಕೆ ನಿರ್ಮಲಚಿತ್ತನಾಗದೆ
ಮೌನ ಮಂತ್ರವು ಯಾಕೆ ಮನಶುದ್ಧಿಯಿಲ್ಲದೆ
ದಾನವ್ಯಾತಕೆ ಕಾಮಕ್ರೋಧವ ಬಿಡದೆಲೆ
ಆನಕದುಂ(ದುಭಿಗಳಿ)ಲ್ಲದೆ ಅದರೊಳು
ಗಾನವ್ಯಾತಕೆ ಗಾರ್ದಭಸ್ವರನಂದದಿ
ಧೇನುಪಾಲಕನ ಬಿಟ್ಟೇನು ಕರ್ಮಂಗಳ
ಮಾಡಿದರದು ವ್ಯರ್ಥ ಆಗುವುದಲ್ಲದೆ
ನಾಲಿಗಿಲ್ಲದ ಗಂಟೆ ಬಾರಿಸಲದರಿಂದ
ನಾದವುಂಟಾಗುವುಂಟಾಗೋದೇ ನಾಕಾಣೆನೆಲ್ಲೆಲ್ಲೂ

ನಾರಾಯಣನೆಂಬೊ ನಾಲ್ಕು ಅಕ್ಷರವು
ನಾಲಿಗೆಲಿರಲು ನರಕಭಯವಿಲ್ಲವು
ಶ್ರೀ ಭೂರಮಣ ಭೀಮೇಶ ಕೃಷ್ಣನೆ ಭವ
ಸಾಗರ ದಾಟಿಸಿ ಸುಖದಿಂದಿಡುವುದೊ

–(ಕೀ೯೨, ಪುಟ:೧೮೪)

**ಅಟ್ಟತಾಳ**

ಮಗನ ಕರೆದು ಮುಕ್ತಿ ಪಡೆದಜಾಮಿಳನ ನೋಡು
ಸುಜನ ಪ್ರಹ್ಲಾದ ಸುರರಿಂದ ಮಾನಿತವಾದ
ಭುಜಬಲಿಯಾದ ಧ್ರುವ ನಿಜಲೋಕದಲ್ಲಿಹ
ಭಜಿಸುತ ಬಂದ ದರಿದ್ರ ಧನಿಕನಾದ
ಅಜಭವ ನಾರಂದ ಸುರಮುನಿಗಳು ನಿನ್ನ
ಪದವ ಭಜಿಸಿ ಮುಕ್ತಿಪಡೆದರಾನಂದವ.....
........................................................
ಅಡಿಗೆರಗುವೆನೊ ಅನಂತ ಹಸ್ತಗಳಿಂದ ಪಿಡಿಯೆನ್ನ ಕೈಯ
ಭೀಮೇಶ ಕೃಷ್ಣಯ್ಯ

–(ಕೀ೯೨, ಪುಟ:೧೮೫)

**ಝುಂಪೆತಾಳ**

ವಾಸುದೇವನೆ ನೀನು ವಸುದೇವನ ಸುತನೆ
ವಾಸವಿ ಸಖನಾದ ಸಾಸಿರಫಣಿಶಯನ
ದೇಶದೇಶದಿ ವ್ಯಾಪ್ತ ಏ ಸಿರಿಪತಿ ಕೇಳೊ
ಮೋಸವಾದ ಭವ ಪಾಶದೊಳಗೆ ಸಿಲ್ಕಿ
......................................................
ಭೂಸುರರಿಗೆ ಒಡೆಯನಾದ ಭೀಮೇಶ ಕೃಷ್ಣ ಸಂ
ತೋಷ ಸದಾನಂದ ನೀಡೊ ಎನಗೆ ಗೋವಿಂದ

–(ಕೀ ೯೨, ಪುಟ:೧೮೫)

**ಅಡಿ ಟಿಪ್ಪಣಿಗಳು**

೧. ಕೀರ್ತನಕಾರರು –ಎಚ್.ಎಸ್.ವೆಂಕಟೇಶ ಮೂರ್ತಿ, ಪು–೩, ೧೯೭೩
೨. ರಂಗವಿಠಲ ಸಂಪುಟ:೧, ಸಂಚಿಕೆ:೭, ಫೆ.೨೦೧೦, ಪುಟ: ೯–೧೦, ಲೇ: ಡಾ.ವ್ಯಾಸಕೆರೆ ಪ್ರಭಂಜನಾಚಾರ್ಯ
೩. ಶ್ರೀ ವಾದಿರಾಜರ ಕೀರ್ತನೆಗಳು; ಸ.ದಾ.ಸಾ., ಸಂ–೩, ಪುಟ–೩೫

# ಅಧ್ಯಾಯ– ನಾಲ್ಕು

## ಕೀರ್ತನೆಗಳಲ್ಲಿ ವಸ್ತು ವೈವಿದ್ಯತೆ

೪.೧ ದಶಾವತಾರಗಳು
೪.೨ ಆತ್ಮ ನಿವೇದನೆ
೪.೩ ವಿಶೇಷ ರಚನೆಗಳು
೪.೪ ಅವತಾರತ್ರಯರ ಸ್ತುತಿಗಳು
೪.೫ ನಿಂದಾ ಸ್ತುತಿಗಳು
೪.೬ ಲಾಲಿ ಹಾಡುಗಳು
೪.೭ ಕ್ಷೇತ್ರ; ಕ್ಷೇತ್ರಮೂರ್ತಿ

# ಅಧ್ಯಾಯ–ನಾಲ್ಕು

## ಕೀರ್ತನೆಗಳಲ್ಲಿ ವಸ್ತು ವೈವಿಧ್ಯತೆ

ಕೃತಿ ರಚನೆಯ ಮುನ್ನ ದೈವ, ಗುರು, ಪತಿಯನ್ನು ಪ್ರಾರ್ಥಿಸುವ ಸಂಪ್ರದಾಯವನ್ನು ಮಹಿಳಾಕೀರ್ತನಕಾರರು ಅನುಸರಿಸಿದ್ದಾರೆ. ಕೆಲವೆಡೆ ಕೃತಿಯ ವಸ್ತುವನ್ನು ಪ್ರಸ್ತಾಪಿಸುತ್ತಾ, ಇದನ್ನು ರಚಿಸುವ ಶಕ್ತಿಗಾಗಿ ಪ್ರಾರ್ಥಿಸಿದ್ದಾರೆ. ಕೆಲವು ಬಿಡಿ ಪ್ರಾರ್ಥನಾ ಪದ್ಯಗಳು ಇವೆ. ಅದರಲ್ಲಿ ಕೃತಿ ರಚನೆಯ ಉದ್ದೇಶವಿರುವುದಿಲ್ಲ, ಕೃತಿ ರಚಿನೆಯ ಶಕ್ತಿಗಾಗಿ ಪ್ರಾರ್ಥಿಸುತ್ತಾರೆ. ಇಷ್ಟದೈವವನ್ನು, ಗುರುವನ್ನು, ಪತಿಯನ್ನು ಪ್ರಾರ್ಥಿಸುವ ಸಂಪ್ರದಾಯವು ಕಂಡುಬರುತ್ತದೆ. ಪ್ರಾರ್ಥನಾ ಪದ್ಯಗಳು ಜನಪದ ಸೊಬಗಿನಿಂದ ಕಂಗೊಳಿಸುತ್ತವೆ.

### ೪.೧ ದಶಾವತಾರಗಳು

ಶ್ರೀಕೃಷ್ಣನು ಗೀತೋಪದೇಶದ ಕಾಲದಲ್ಲಿ ಅರ್ಜುನನಿಗೆ 'ಯದಾ ಯಹಾ ಹಿ ಧರ್ಮಸ್ಯ ಗ್ಲಾನಿರ್ಭವತಿ ಭಾರತ/ ಅಭ್ಯುತ್ಥಾನಮಧರ್ಮಸ್ಯ ತದಾತ್ಮಾನಂ ಸೃಜಾಮ್ಯಹಮ್// ಪರಿತ್ರಾಣಾಯಾ ಸಾಧೂನಾಂ ವಿನಾಶಾಯ ಚ ದುಷ್ಕೃತಾಮ್/ ಧರ್ಮಸಂಸ್ಥಾಪನಾರ್ಥಾಯ ಸಂಭವಾಮಿ ಯುಗೇ ಯುಗೇ// ಎಂದು ಹೇಳಿದ್ದಾನೆ.

ಹೀಗೆ ಕೃಷ್ಣನು ದುಷ್ಟರನ್ನು ಶಿಕ್ಷಿಸಲು, ಶಿಷ್ಟರನ್ನು ರಕ್ಷಿಸಲು ಯುಗಯುಗಳಲ್ಲಿಯೂ ಅವತಾರ ತಾಳಿದ್ದೆ ಈ ದಶಾವತಾರಗಳು – ಮತ್ಸ್ಯ, ಕೂರ್ಮ, ವರಾಹ, ನಾರಸಿಂಹ, ವಾಮನ, ಪರಶುರಾಮ, ರಾಮ, ಕೃಷ್ಣ, ಬೌದ್ಧ ಮತ್ತು ಕಲ್ಕಿ.

### ಮತ್ಸ್ಯಾವತಾರ

ಸತ್ಯವ್ರತನೆಂಬ ರಾಜ ಒಂದು ದಿನ ನದೀತೀರದಲ್ಲಿ ಸಂಧ್ಯಾವಂದನೆ ಮಾಡುವಾಗ, ಅವನು ಬೊಗಸೆಯಲ್ಲಿ ನೀರನ್ನು ತೆಗೆದುಕೊಂಡನು. ನೀರಿನೊಡನೆ ಒಂದು ಸಣ್ಣ ಮೀನು ಬೊಗಸೆಯನ್ನು ಸೇರಿತು. ದೊಡ್ಡ ಮೀನುಗಳಿಂದ ತನ್ನನ್ನು ರಕ್ಷಿಸಬೇಕೆಂದು ಕೇಳಿಕೊಂಡಿತು. ಸತ್ಯವ್ರತನು ಅದನ್ನು ತನ್ನ ಕಮಂಡಲದಲ್ಲಿ ಇರಿಸಿಕೊಂಡನು. ಸ್ವಲ್ಪ ಹೊತ್ತಿನಲ್ಲಿಯೇ ಮೀನು ಬೆಳೆದು ದೊಡ್ಡದಾಗಿ ಕಮಂಡಲವು ಕಾಣದಾಯಿತು. ಸತ್ಯವ್ರತನು ಮೀನನ್ನು ಮಡುವಿನಲ್ಲಿ ಬಿಟ್ಟನು. ಮೀನು ಬೆಳೆದು ಅದೂ ಸಾಲದಾಯಿತು. ಮೀನನ್ನು ಸಮುದ್ರಕ್ಕೆ ಬಿಟ್ಟನು. ಅದು ಬೃಹದಾಕಾರ ತಾಳಿ ಸತ್ಯವ್ರತನನ್ನು ಕುರಿತು 'ರಾಜ, ಇನ್ನೇಳು ದಿನಗಳಲ್ಲಿ ಪ್ರಳಯವಾಗುವುದು. ಭೂಮಿಯಲ್ಲವೂ ಸಂಪೂರ್ಣವಾಗಿ ಮುಳುಗುವುದು. ಆಗ ನಿನ್ನ ಬಳಿಗೆ ಒಂದು ನಾವೆಯು ಬರುವುದು. ಭೂಮಿಯ ಸಮಸ್ತ ವಸ್ತುಗಳ ಬೀಜಗಳನ್ನು ತೆಗೆದುಕೊಂಡು ನೀನು ಸಪ್ತರ್ಷಿಗಳೊಡನೆ ಆ ನಾವೆಯನ್ನು ಏರು.

ಪ್ರಳಯಕಾಲವು ಕಳೆಯುವ ತನಕ ಅದು ಅಪಾಯಕ್ಕೆ ಒಳಗಾಗದಂತೆ ನಾನು ರಕ್ಷಿಸುವೆನು' ಎಂದು ಹೇಳಿ ಅಂತರ್ದಾನವಾಯಿತು. ಮುಂದೆ ಹಾಗೇ ನಡೆಯಿತು.

ಪ್ರಳಯಕಾಲದಲ್ಲಿ ಬ್ರಹ್ಮನು ತನ್ನ ಸೃಷ್ಟಿ ವ್ಯಾಪಾರಗಳನ್ನೆಲ್ಲಾ ನಿಲ್ಲಿಸಿ ನಿದ್ರಿಸುತ್ತಾನೆ. ಆ ಸಮಯದಲ್ಲಿ ಅವನ ಮುಖದಿಂದ ಹೊರಟ ವೇದಗಳನ್ನು ಹಯಗ್ರೀವ ಎಂಬ ರಾಕ್ಷಸನು ಅಪಹರಿಸಿಕೊಂಡು ಹೋಗಿ ಸಮುದ್ರದಲ್ಲಿ ಅಡಗಿಸಿದನು. ಆಗ ಮತ್ಸ್ಯರೂಪಿ ಭಗವಂತನು ಆ ರಾಕ್ಷಸನನ್ನು ಕೊಂದು ವೇದಗಳನ್ನು ಆತನಿಂದ ಪಡೆದನು. ಪ್ರಳಯಕಾಲದ ನಂತರ, ಅವುಗಳನ್ನು ಬ್ರಹ್ಮನಿಗೆ ಹಿಂದಿರುಗಿಸುವನು.

**ವರಾಹಾವತಾರ**

ಹಿಂದೆ ಲೋಕವೆಲ್ಲವೂ ಜಲಮಯವಾಗಿದ್ದಾಗ ಬ್ರಹ್ಮನು ಆ ಜಲವನ್ನೆಲ್ಲಾ ಕುಡಿದು ಭೂಮಿಯನ್ನು ಸ್ಥಾಪಿಸಿದನು. ಆನಂತರ ಅವನು ದೇವ ದಾನವರನ್ನು, ಸಕಲ ಜೀವಿಗಳನ್ನು, ವೃಕ್ಷಾದಿಗಳನ್ನು ಸೃಷ್ಟಿಸುವಷ್ಟರಲ್ಲಿ ಆ ಭೂಮಿಯು ಮುಳುಗಿ ಹೋಯಿತು. ಉಪಾಯಕಾಣದೆ ಬ್ರಹ್ಮನು ಚಿಂತಿಸುತ್ತಿರಲು ಅವನ ಮೂಗಿನ ಹೊಳ್ಳೆಯಿಂದ ಚಿಕ್ಕದೊಂದು ವರಾಹವು ಹೊರಗೆ ಬಂದಿತು. ತಕ್ಷಣವೇ ಮಹಾಗಾತ್ರಕ್ಕೆ ಬೆಳೆದ ಅದು ಸಮುದ್ರಕ್ಕೆ ಹಾರಿ ಜಲವನ್ನು ಸೀಳಿಕೊಂಡು ಕೆಳಗಿಳಿದು ಮುಳುಗಿ ಹೋಗಿದ್ದ ಭೂಮಿಯನ್ನು ತನ್ನ ಕೋರೆ ದಾಡೆಗಳಿಂದ ಮೇಲೆತ್ತಿ ತಂದಿತು.

ಇದೇ ಸಮಯದಲ್ಲಿ ಕಶ್ಯಪ ಪುತ್ರನಾಗಿ ದಿತಿಯಲ್ಲಿ ಜನಿಸಿದ ಆದಿದೈತ್ಯನಾದ ಹಿರಣ್ಯಾಕ್ಷ ಎಂಬ ರಾಕ್ಷಸನು ಬಲದಲ್ಲಿ ತನ್ನ ಸರಿಸಮಾನರಿಲ್ಲವೆಂದು ತಿಳಿದು ದೇವತೆಗಳನ್ನೆಲ್ಲಾ ಪೀಡಿಸುತ್ತಿದ್ದನು. ಆಗ ವರುಣನು ವಿಷ್ಣುವೊಬ್ಬನೇ ನಿನ್ನನ್ನು ಎದುರಿಸುವನು ಎಂದನು. ಹಿರಣ್ಯಾಕ್ಷನು ವಿಷ್ಣುವನ್ನು ಹುಡುಕುತ್ತ ಹೊರಟನು. ದಾರಿಯಲ್ಲಿ ಸಿಕ್ಕ ನಾರದನು 'ವಿಷ್ಣುವು ಭೂಮಿಯನ್ನು ಎತ್ತಲು ವರಾಹ ರೂಪಿಯಾಗಿ ಸಮುದ್ರ ಗರ್ಭಕ್ಕೆ ತೆರಳಿರುವನು' ಎಂದನು. ಇದನ್ನು ಕೇಳಿದ ಕೂಡಲೇ ಹಿರಣ್ಯಾಕ್ಷ ಸಮುದ್ರದಲ್ಲಿ ಇಳಿದನು. ವಿಷ್ಣುವಿಗೂ ಹಿರಣ್ಯಾಕ್ಷನಿಗೂ ಬಹುಕಾಲ ಘನಘೋರ ಯುದ್ಧ ನಡೆಯಿತು. ಕೊನೆಗೆ ವಿಷ್ಣುವು ಅವನನ್ನು ವಧಿಸಿದನು.

**ಕೂರ್ಮಾವತಾರ:** ದೇವಾಸುರರಿಗೆ ಸಮುದ್ರವನ್ನು ಮಥಿಸಿ ಅಮೃತವನ್ನು ಕುಡಿದು ಅಮರರಾಗಬೇಕೆಂಬ ಬಯಕೆ ಉಂಟಾಯಿತು. ಅದಕ್ಕಾಗಿ ಅವರು ಮಂದರ ಪರ್ವತವನ್ನು ಕಡಗೋಲಾಗಿ ಮಾಡಿಕೊಂಡು ಸರ್ಪರಾಜನಾದ ವಾಸುಕಿಯನ್ನು ಹಗ್ಗವಾಗಿ ಉಪಯೋಗಿಸಿ ಸಮುದ್ರವನ್ನು ಮಥಿಸಲಾರಂಭಿಸಿದರು. ಆದರೆ ತಳದಲ್ಲಿ ಆಧಾರವಿಲ್ಲದೆ ಮಂದರಪರ್ವತವು ಮುಳಗಲಾರಂಭಿಸಿತು. ಆಗ ವಿಷ್ಣುವು ಆಮೆಯ ರೂಪ ತಾಳಿ ಸಮುದ್ರವನ್ನು ಪ್ರವೇಶಿಸಿ ಮಂದರವು ಕೆಳಗಿಳಿಯದಂತೆ ತನ್ನ ಬೆನ್ನ ಮೇಲೆ ಕೂರಿಸಿಕೊಂಡನು.

**ನರಸಿಂಹಾವತಾರ:** ಹಿರಣ್ಯಾಕ್ಷನ ಸಹೋದರನಾದ ಹಿರಣ್ಯಕಶಿಪು ಅತ್ಯಂತ ಪ್ರಭಲನಾದವನು, ಹಿರಣ್ಯಾಕ್ಷನನ್ನು ವಧಿಸಿದ ವಿಷ್ಣುವನ್ನು ದ್ವೇಷಿಸಲಾರಂಭಿಸಿದನು. ಬ್ರಹ್ಮನನ್ನು ಕುರಿತು ತಪಸ್ಸು ಮಾಡಿ ಅಮಿತ ಬಲವನ್ನು ಸಂಪಾದಿಸಿಕೊಂಡನು. ಆದರೆ ಅವನ ಮಗನಾದ ಪ್ರಹ್ಲಾದನು

ಹರಿಭಕ್ತನು. ಮಗನನ್ನು ತನ್ನ ದಾರಿಗೆ ತರಲು ಹಿರಣ್ಯಕಶಿಪು ಪ್ರಯತ್ನಿಸಿದನು. ಕೊನೆಗೆ ಕೊಲ್ಲಿಸಲು ತೀರ್ಮಾನಿಸಿದನು. ಆದರೆ ಸಾಧ್ಯವಾಗಲಿಲ್ಲ. ಅವನು ಪ್ರಹ್ಲಾದನನ್ನು ಕುರಿತು 'ಹರಿಯು ಸರ್ವಾಂತರಯಾಮಿಯಾಗಿದ್ದರೆ ಈ ಕಂಬದಿಂದ ಹೊರಬರಲಿ' ಎಂದನು. ಪ್ರಹ್ಲಾದ ಪ್ರಾರ್ಥಿಸಲು ಹರಿಯು ಮನುಷ್ಯದೇಹ ಮತ್ತು ಸಿಂಹದ ಮುಖವನ್ನು ಹೊಂದಿದ ನರಸಿಂಹನಾಗಿ ಕಂಬದಿಂದ ಉದ್ಭವಿಸಿ ಬಂದನು. ಬ್ರಹ್ಮನ ವರವು ಹುಸಿಯಾಗದಂತೆ ಉಪಾಯದಿಂದ ಹಿರಣ್ಯಕಶಿಪುವನ್ನು ವಧಿಸಿದನು.

**ವಾಮನಾವತಾರ:** ಇಂದ್ರ ಪಟ್ಟವನ್ನು ಗಳಿಸಿಕೊಳ್ಳುವುದಕ್ಕೋಸ್ಕರ ಬಲಿ ಎಂಬ ರಾಕ್ಷಸನು ವಿಶ್ವಜಿತ್ ಯಾಗವನ್ನು ಮಾಡಿ, ಅಮಿತ ಬಲ ಸಂಪಾದಿಸಿ ಸ್ವರ್ಗಕ್ಕೆ ತೆರಳಿದನು. ಬಲಿಗೆ ಹೆದರಿ ಇಂದ್ರನು ಸ್ವರ್ಗವನ್ನು ಬಿಟ್ಟು ಓಡಿದನು. ಬಲಿಯ ನಿವಾರಣೆಗಾಗಿ ಕಶ್ಯಪನ ಮಗನಾಗಿ ಅಧಿತಿಯ ಗರ್ಭದಲ್ಲಿ ವಾಮನನಾಗಿ ಜನಿಸಿದನು. ಈ ಬ್ರಹ್ಮಚಾರಿಗೆ ಬಲಿಯು ಅಶ್ವಮೇದಯಾಗ ಮಾಡುವ ವಿಷಯ ತಿಳಿಯಿತು. ವಾಮನನು ಯಜ್ಞಶಾಲೆಗೆ ಬಂದು ದೀಕ್ಷಾ ಬದ್ಧನಾಗಿ ಕುಳಿತಿದ್ದ ಬಲಿಯನ್ನು ಮೂರಡಿ ನೆಲವನ್ನು ದಾನವಾಗಿ ಬೇಡಿದನು. ಬಲಿಯು ದಾನವನ್ನು ಕೊಟ್ಟನು. ವಾಮನನು ಬೃಹದಾಕಾರವಾಗಿ ಒಂದಡಿಯಿಂದ ಸಮಸ್ತ ಭೂಮಂಡಲವನ್ನು, ಇನ್ನೊಂದರಿಂದ ಆಕಾಶವನ್ನಳೆದನು, ಮೂರನೆಯ ಹೆಜ್ಜೆಯನ್ನು ತನ್ನ ತಲೆಯ ಮೇಲೆ ಇಡಲು ಬಲಿಯು ಹೇಳಿದಾಗ ವಾಮನನು ಮೂರನೆಯ ಪಾದವನ್ನು ಅವನ ತಲೆಯ ಮೇಲಿಟ್ಟು ಪಾತಾಳಕ್ಕೆ ತುಳಿದನು.

**ಪರಶುರಾಮಾವತಾರ:** ಕಾರ್ತವೀರ್ಯಾರ್ಜುನನೆಂಬ ಪ್ರಬಲ ರಾಜ ಸಂಚರಿಸುತ್ತಾ ಜಮದಗ್ನಿಯ ಆಶ್ರಮಕ್ಕೆ ಬಂದನು. ಋಷಿಯು ದೇವಲೋಕದ ಕಾಮಧೇನುವನ್ನು ಕರೆಸಿ ರಾಜನ ಪರಿವಾರವನ್ನು ಉಪಚರಿಸಿದನು. ಋಷಿಯು ಕೇಳಿದ್ದನ್ನೆಲ್ಲಾ ಅದು ಕೊಟ್ಟಿತ್ತು. ರಾಜನಿಗೆ ಕಾಮಧೇನುವನ್ನು ಪಡೆಯುವುದರಲ್ಲಿ ಆಸಕ್ತಿಯುಂಟಾಗಿ ಬಲತ್ಕಾರದಿಂದ ಅಪಹರಿಸಿಕೊಂಡು ಹೋದನು. ಜಮದಗ್ನಿಯ ಮಗ ಪರಶುರಾಮನು ಅವನನ್ನು ಬೆನ್ನಟ್ಟಿ ಹೋಗಿ ಕೊಡಲಿಯಿಂದ ಸಂಹರಿಸಿ ಕಾಮಧೇನುವನ್ನು ಹಿಂದಕ್ಕೆ ತಂದನು.

ಪರಶುರಾಮನ ತಾಯಿ ರೇಣುಕಾದೇವಿ ನೀರನ್ನು ತರಲು ಹೋದಾಗ ಚಿತ್ರರಥನೆಂಬ ಗಂಧರ್ವನು ಜಲಕ್ರೀಡೆಯಾಡುತ್ತಿದ್ದುದನ್ನು ನೋಡುತ್ತಾ ನಿಂತಳು. ಆಶ್ರಮಕ್ಕೆ ಹಿಂತಿರುಗುವುದು ತಡವಾಯಿತು. ದಿವ್ಯದೃಷ್ಟಿಯಿಂದ ಜಮದಗ್ನಿ ಕಾರಣ ತಿಳಿದನು. ತಾಯಿಯ ಶಿರಶ್ಛೇದ ಮಾಡುವಂತೆ ಮಕ್ಕಳಿಗೆ ಆಜ್ಞಾಪಿಸಿದನು. ಯಾರೂ ಆ ಕಾರ್ಯಕ್ಕೆ ಮುಂದಾಗದಿರಲು ಪರಶುರಾಮನು ತನ್ನ ತಂದೆಯ ಅಪ್ಪಣೆಯಂತೆ ಅವಿಧೇಯರಾದ ಸಹೋದರರನ್ನು, ತಾಯಿಯನ್ನೂ ಕಡಿದು ಹಾಕಿದನು. ತೃಪ್ತನಾದ ತಂದೆಯು ಬೇಕಾದ ವರವನ್ನು ಬೇಡು ಎಂದು ಕೇಳಿದಾಗ ತನ್ನ ತಾಯಿಯನ್ನು, ಸಹೋದರರನ್ನು ಬದುಕಿಸಿ ಕೊಡಬೇಕೆಂದು ಕೇಳಿಕೊಂಡನು, ಅಲ್ಲದೆ ಹಿಂದಿನ ಘಟನೆಗಳು ಅವರ ನೆನಪಿನಲ್ಲಿ ಉಳಿಯದಂತೆ ಬೇಡಿದನು. ಋಷಿಯು ಅನುಗ್ರಹಿಸಿದನು.

ಕಾರ್ತವೀರ್ಯಾರ್ಜುನನ ಮಕ್ಕಳು ಸೇಡು ತೀರಿಸಿಕೊಳ್ಳಲು ಕಾಯುತ್ತಿದ್ದರು. ಒಂದು ದಿನ ಪರಶುರಾಮ ಆಶ್ರಮದಲ್ಲಿ ಇಲ್ಲದಿದ್ದಾಗ ಸಮಾಧಿ ಸ್ಥಿತಿಯಲ್ಲಿದ್ದ ಜಮದಗ್ನಿಯನ್ನು ಕಡಿದರು.

ಹಿಂದಿರುಗಿದ ಆ ರಾಮನು ಅದನ್ನು ನೋಡಿ ತನ್ನ ಪರಶುವನ್ನು ಎತ್ತಿಕೊಂಡು ಅವರನ್ನೆಲ್ಲಾ ಸಂಹರಿಸಿದನು. ಅಲ್ಲದೆ ಭೂಮಿಯ ಮೇಲೆ ಕ್ಷತ್ರಿಯ ವಂಶವನ್ನೇ ನಿರ್ವಂಶ ಮಾಡುತ್ತೇನೆಂದು ೨೧ಬಾರಿ ಭೂಮಿಯನ್ನು ಸುತ್ತಿ ಕ್ಷತ್ರಿಯರನ್ನು ಸಂಹರಿಸಿದನು. ಅವರ ರಕ್ತದಲ್ಲಿ ತಂದೆಗೆ ತರ್ಪಣವನ್ನು ಕೊಟ್ಟು ಮಹೇಂದ್ರ ಪರ್ವತಕ್ಕೆ ತೆರಳಿದನು.

**ರಾಮಾವತಾರ:** ದಶಾವತಾರದಲ್ಲಿ ವಿಷ್ಣು ಮತ್ತು ಕೃಷ್ಣನಂತೆ ಪ್ರಮುಖವಾದ ಅವತಾರ ರಾಮನದು. ಶ್ರೀರಾಮನು ಅಯೋಧ್ಯೆಯ ರಾಜ ದಶರಥನ ಮಗ. ತಂದೆಯ ವಾಕ್ಯವನ್ನು ಪರಿಪಾಲನೆ ಮಾಡಲು ಸಹೋದರ ಲಕ್ಷ್ಮಣ ಮತ್ತು ಸೀತೆಯೊಂದಿಗೆ ವನವಾಸಕ್ಕೆ ತೆರಳಿದನು. ವನವಾಸದ ಅವಧಿಯಲ್ಲಿ ರಾವಣನೆಂಬ ರಾಕ್ಷಸ ಸೀತೆಯನ್ನು ಅಪಹರಿಸಲು ರಾಮನು ಸುಗ್ರೀವನ ಕಪಿ ಸೇನೆಯ ಬಲದಿಂದ ಸಮುದ್ರಕ್ಕೆ ಸೇತುವೆ ಕಟ್ಟಿ ಲಂಕೆಗೆ ಹೋಗಿ ರಾವಣನನ್ನು ವಧಿಸಿ ಸೀತೆಯನ್ನು ಕರೆತಂದನು. ಅನೇಕ ವರ್ಷಗಳವರೆಗೆ ಸುಖದಿಂದ ರಾಜ್ಯಭಾರ ಮಾಡಿದನು. ಏಕಪತ್ನೀ ವ್ರತಸ್ಥನಾಗಿ, ಆದರ್ಶಕ್ಕೆ ಹೆಸರಾಗಿ ಪುರಾಣಗಳಲ್ಲಿ ರಾಮ ಪ್ರಸಿದ್ಧನಾಗಿದ್ದಾನೆ.

**ಕೃಷ್ಣಾವತಾರ:** ದ್ವಾಪರ ಯುಗದ ಕೊನೆಯಲ್ಲಿ ದುಷ್ಟರಿಂದ ಭೂಮಿಯ ಭಾರವು ಹೆಚ್ಚಾದ್ದರಿಂದ ಅದನ್ನು ನಿವಾರಿಸಲು ಶ್ರೀಕೃಷ್ಣನು ವಸುದೇವ ದೇವಕಿಯರಿಗೆ ಮಗನಾಗಿ ಜನಿಸಿದನು. ಬಾಲ್ಯದಲ್ಲೆ ಅದ್ಭುತ ಕಾರ್ಯಗಳೆಸಗುತ್ತ ದುಷ್ಟರನ್ನು ಸದೆಬಡಿದು ಕೊನೆಗೆ ಕುರುಕ್ಷೇತ್ರ ಯುದ್ಧದಲ್ಲಿ ಪಾಂಡವರ ಬೆಂಬಲಕ್ಕೆ ನಿಂತು ದುರ್ಮಾರ್ಗಿಗಳಾದ ಕೌರವರನ್ನು ನಾಶಪಡಿಸಿದನು. ಸಮರ್ಥ ರಾಜಕಾರಣಿಯಾಗಿ ಕಂಗೊಳಿಸಿದನು.

**ಬೌದ್ಧಾವತಾರ:** ಭಾರತದಲ್ಲಿ ದೇವತೆಗಳ ಶತ್ರುಗಳಾದ ರಾಕ್ಷಸರು ವೈದಿಕ ವಿಧಿಗಳಲ್ಲಿ ಬಹಳ ಆಸಕ್ತಿಯನ್ನು ವಹಿಸಿದಾಗ ಲೋಕ ರಕ್ಷಕರಾದ ರಾಜರುಗಳು ಅಸುರೀ ಶಕ್ತಿಯನ್ನು ತೋರಿಸಿದಾಗ ಭಗವಂತನು ಬೌದ್ಧಾವತಾರವನ್ನು ಎತ್ತಿದನು. ತಾನು ದೈವಬ್ರಾಹ್ಮಣರಲ್ಲಿ ಭಕ್ತಿಯಿಲ್ಲ ಪಾಶಂಡನಾಗಿ ನಟಿಸಿ ತನ್ನ ಮಾರ್ಗಕ್ಕೆ ಸೆಳೆದು ಧರ್ಮವನ್ನು ಉಪದೇಶಿಸಿದನು. ಇದು ಗೌತಮ ಬುದ್ಧನನ್ನು ಕುರಿತು ಹೇಳಿದ ಮಾತಾಗಿರಬೇಕು. ಯಜ್ಞಯಾಗಾದಿಗಳ ಹೆಸರಿನಲ್ಲಿ ಬೌದ್ಧ ಧರ್ಮದ ಕಾಲದಲ್ಲಿ ನಡೆಯುತ್ತಿದ್ದ ಪ್ರಾಣಿಬಲಿಯನ್ನು ತಡೆದು ಅಹಿಂಸಾತತ್ವವನ್ನು ಜನರಲ್ಲಿ ಸಾರಿದ ಬುದ್ಧದೇವನೇ ಭಾಗವತದಲ್ಲಿ ಹೇಳಿದ ಮುಂದೆ ಸಂಭವಿಸಬೇಕಾಗಿದ್ದ ಬೌದ್ಧಾವತಾರವಾಗಿರಬೇಕು. ತತ್ವ ವಿಚಾರಗಳ ಮೇಲೆ ಹೂಡುವ ವಾದ ವಿವಾದಗಳು ಫಲವಿಲ್ಲದವು. ಅಹಿಂಸೆ, ಪ್ರಾಣಿದಯೆ, ಪರಹಿತರ ಸಾಧನೆಗಳೇ ಮಾನವ ಜೀವನವನ್ನು ರೂಪಿಸಬಲ್ಲವುಗಳೆಂದು ಸಾರಿದ ಬುದ್ಧನು ಹಿಂದಿನ ಕಾಲದ ಸಿದ್ಧಾಂತಗಳ ದೃಷ್ಟಿಯಲಿ ಪಾಶಂಡ ಧರ್ಮ ಪ್ರವರ್ತಕನಾದನು.

**ಕಲ್ಕ್ಯಾವತಾರ:** ದಶಾವತಾರಗಳಲ್ಲಿ ಕೊನೆಯ ಅವತಾರವೇ ಕಲ್ಕ್ಯಾವತಾರ. ಕಲಿಯುಗದ ಕೊನೆಯಲ್ಲಿ ಕಲಿಯ ಅವತಾರವಾಗುವುದೆಂದು ಭಾಗವತದಲ್ಲಿ ಹೇಳಿದೆ. ವರ್ಣಾಶ್ರಮ ಧರ್ಮಗಳು ಇಲ್ಲದಂತಾದಾಗ ರಾಜರು ಪ್ರಜಾಪೀಡಕರಾದಾಗ ಜನರಲ್ಲಿ ದುರ್ವರ್ತನೆ ಹೆಚ್ಚಾದಾಗ ಸಜ್ಜನರಿಗೆ ನೆಲೆ ಇಲ್ಲದಾದಾಗ ಭಗವಂತನು ಕಲ್ಕಿಯಾಗಿ ಭೂಮಿಯಲ್ಲಿ ಅವತರಿಸುವನು. ವಿಶ್ವಕರ್ಮನೆಂಬ

ಬ್ರಾಹ್ಮಣನ ಪುತ್ರನಾಗಿ ಜನಿಸಲಿರುವ ಕಲ್ಕಿಯು ಪ್ರಜಾಪೀಡಕರಾದ ರಾಜರನ್ನು ಸದೆಬಡಿದು ಲೋಕದಲ್ಲಿ ಶಾಂತಿ ಸುಖಗಳು ನೆಲೆಸುವಂತೆ ಮಾಡುವನು. ಭೂಮಿಯ ಮೇಲೆ ಕಲ್ಕಿಯ ಅವತಾರದ ನಂತರ ಮತ್ತೆ ಕೃತಯುಗ ಪ್ರಾರಂಭವಾಗುವುದು. ಚಂದ್ರ, ಸೂರ್ಯ, ಬೃಹಸ್ಪತಿಗಳು ಏಕರಾಶಿಯಲ್ಲಿ ಸೇರಿದಾಗ ಕೃತಯುಗವು ಆರಂಭವಾಗುವುದು ಎಂದು ಭಾಗವತದಲ್ಲಿ ಹೇಳಿದೆ.

ದಶಾವತಾರಗಳ ವರ್ಣನೆಯು ದಾಸಸಾಹಿತ್ಯದ ಸಂಪ್ರದಾಯ. ಕೃಷ್ಣ ಭಕ್ತಿಯನ್ನು ಸಡಗರದಿಂದ ವರ್ಣಿಸುವ ಹರಿದಾಸಿಯರು ದಶಾವತಾರಗಳನ್ನು ಪದೇ ಪದೇ ವರ್ಣಿಸುತ್ತಾರೆ. ದಶಾವತಾರದ ಭವ್ಯ ಕಲ್ಪನೆಯಿಂದ ಕೀರ್ತನೆಯು ಕಳೆಗಟ್ಟಿದೆ.

**ಮಹಿಳಾ ಕೀರ್ತನಕಾರರ ಕೀರ್ತನೆಗಳಲ್ಲಿ ಕಂಡುಬರುವ ದಶಾವತಾರಗಳು:**

ಮಹಿಳಾಕೀರ್ತನಕಾರರ ಕೀರ್ತನೆಯಲ್ಲಿ ದಶಾವತಾರದ ವರ್ಣನೆಯು ಸಾಂಪ್ರದಾಯಿಕವಾದದ್ದು. ಕೃಷ್ಣ ಭಕ್ತರಾದ ಅವರು ಕೃಷ್ಣನ ವರ್ಣನೆಯನ್ನೇ ತಮ್ಮ ಕೀರ್ತನೆಗಳ ಜೀವದ್ರವ್ಯವಾಗಿಸಿಕೊಂಡಿದ್ದರಿಂದ ಎಲ್ಲ ಮಹಿಳಾ ಕೀರ್ತನಕಾರರ ಕೀರ್ತನೆಗಳಲ್ಲೂ ಕೃಷ್ಣನ ದಶಾವತಾರಗಳ ವರ್ಣನೆ ಇದ್ದೇ ಇವೆ. ಅವಕಾಶವಿದ್ದೆಡೆಯಲ್ಲೆಲ್ಲಾ ದಶಾವತಾರಗಳನ್ನು ಉತ್ಸಾಹದಿಂದ ವರ್ಣಿಸುತ್ತಾರೆ.

ಗಲಗಲಿ ಅವ್ವನವರ ಕೀರ್ತನೆ (ಸ.ದಾ.ಸ ಗಲಗಲಿ ಅವ್ವನವರ ಕೀರ್ತನೆಗಳು, ಪು–೧೧೪–೧೫, ಕೀ.ಸಂಖ್ಯೆ:೮೭) 'ದನವ ಕಾಯುವವನೆ ದೈನ್ಯಬಡುವವನೆ' ಎಂದು ಪ್ರಾರಂಭವಾಗುವ ಮುಯ್ಯಕೊಡುವ ಹಾಡಿನಲ್ಲಿ ಸಾಂದರ್ಭಿಕವಾಗಿ ನಾರುವ ಮೈಯ್ಯವ ನೀರೊಳು ಅಡಗಿದ ಹಂದಿ ಮೈಯ್ಯವನೆ ಮಹಾಕೋಪಿ ಎಂಬಲ್ಲಿ ವರಾಹಾವತಾರವನ್ನು, ಕೊಡಲಿಯ ಪಿಡಿಕೊಂಡ ಬಿಡದೆ ಮಾತೆಯ ಕೊಂದ ಎನ್ನುವ ಸಾಲಿನಲ್ಲಿ ಪರಶುರಾಮಾವತಾರವನ್ನು ಜಾರ ಚೋರನೆಂದು ಹೆಸರಾದೆ ಎನ್ನುವಲ್ಲಿ ಕೃಷ್ಣಾವತಾರವನ್ನು ಭಂಡಕಾರನಂತೆ ದೇಹ ಕಂಡ ಜನಕೆಲ್ಲಾ ತೋರಿ ಪುಂಡುಗಾರನಂತೆ ಹಯವೇರಿ ಎನ್ನುವಾಗ ಕಲ್ಕಿಯ ಅವತಾರವನ್ನು ವರ್ಣಿಸಿದ್ದಾರೆ. ಮುಯ್ಯ ಹಿಂತಿರುಗಿಸಿದ ಹಾಡಿನಲ್ಲಿ ಕೃಷ್ಣ–ಅರ್ಜುನರ ಸಂವಾದ ಏರ್ಪಡುತ್ತದೆ. ಅದರಲ್ಲಿ ಅರ್ಜುನನು ದಶಾವತಾರಗಳನ್ನು ಅಣಕವಾಡಿನಂತೆ ಬಳಸಿದ್ದಾನೆ.

ಹೆಳವನಕಟ್ಟೆ ಗಿರಿಯಮ್ಮ ಬರೆದಿರುವ (ಸ.ದಾ.ಸ. ಹೆ.ಗಿ.ಕೀರ್ತನೆಗಳು, ಪು:೧) 'ಇಂತಾವಗ್ಯಾಂಗೆ ಮನಸೋತೆ' ಎನ್ನುವ ಕೀರ್ತನೆಯಲ್ಲಿ ನಾರುವ ಮೈಯ ಬಿಚ್ಚಿ ಎನ್ನುವಲ್ಲಿ ವರಾಹವತಾರ, ಬಿಡದೆ ಸ್ತ್ರೀಯರ ಗೋಕುಲದಲ್ಲಿ ಮೆರೆದ' ಎನ್ನುವಲ್ಲಿ ಕೃಷ್ಣಾವತಾರ 'ಬತ್ತಲೆ ನಿಂದಿದ್ದನೀಗ ತೇಜಿ ಹತ್ತಿ ಮೆರೆವುದೊಂದು ಯೋಗ' ಎಂದು ಕಲ್ಕಿಯ ಅವತಾರವನ್ನು ವರ್ಣಿಸಿದ್ದಾಳೆ. ವಿಶೇಷವೆಂದರೆ ಏನ ಹೇಳಲಿ ಈತನಿರುವ ಭಕ್ತರ ಮನಾಧೀನ (ಪುಟ–೪) ಎನ್ನುವ ಕೀರ್ತನೆಯಲ್ಲಿ ಬರುವ ಮೂರು ನುಡಿಗಳಲ್ಲೂ ಪದೇ ಪದೇ ದಶಾವತಾರದ ವರ್ಣನೆಯಿದೆ. 'ಇಂತಹವನನ್ನು ಕಾಣೆ' ಎನ್ನುವ ನೆವದಲ್ಲಿ ಕೃಷ್ಣನನ್ನು ವರ್ಣಿಸುತ್ತಾಳೆ. ಈ ಪದ್ಯದಲ್ಲಿ ಮೂರು ಬಾರಿ ವರ್ಣನೆಯಾಗುವ ದಶಾವತಾರ ವರ್ಣನೆಯು ಇವಳಿಗೆ ಕೃಷ್ಣನ ಮೇಲಿರುವ ಭಕ್ತಿಯ ಪ್ರತೀಕವಾಗುತ್ತದೆ. 'ನಾರಾಯಣ ನಮ್ಮ ಈತ' (ಪುಟ–೧೧) ಎನ್ನುವ ಕೀರ್ತನೆಯಲ್ಲಿ ಎರಡು ನುಡಿಗಳಲ್ಲೂ ದಶಾವತಾರದ

ವರ್ಣನೆಯಿದೆ. 'ಪಾಹಿ ಪರಮಾನಂದ' (ಪುಟ-೧೪) ಎನ್ನುವ ಕೀರ್ತನೆಯ ವಸ್ತುವೂ ದಶಾವತಾರದ ವರ್ಣನೆಯ ವಸ್ತುವೆ. 'ಬಹಳ ನಂಬಿದೆ' (ಪುಟ-೧೫) ಎನ್ನುವ ಕೀರ್ತನೆಯಲ್ಲಿ ಎರಡು ಬಾರಿ ದಶಾವತಾರದ ವರ್ಣನೆ ಬಂದಿದೆ. 'ಮೂರು ಜಗವ ಕುಣಿಸುವಂಥ ಗಾರುಡಿಗ ಇವದಾರಕ್ಕ' (ಪುಟ-೧೭) ಎನ್ನುವ ಕೀರ್ತನೆಯಲ್ಲಿ ದ್ವಿಪದಿಯಲ್ಲಿ ದಶಾವತಾರವನ್ನು ವರ್ಣಿಸಿದ್ದಾಳೆ. 'ಹೊನ್ನ ತಾ ಗುಬ್ಬಿ' (ಪು:೨೨) ಎನ್ನುವ ಕೀರ್ತನೆಯು ದಶಾವತಾರವನ್ನೇ ವರ್ಣಿಸುತ್ತದೆ. 'ಹೊಳೆವ ಮೈಯ್ಯವ, ಕಲ್ಲ ಹೊರುವ, ಕಡಲೊಳಾಡುವ, ತಿಳಿಯ ಎರಡಂಗನೆ ತಿರವ ಪರಶುವಿಡಿದ, ಕೋಡಗಕುಲವಾಳುವ, ಗೋವಕಾಯುವ, ಕಾಂತೆಯರ ವ್ರತಗಳನಳಿವ, ಅಶ್ವವೇರಿ ಮೆರೆವ...ಹೀಗೆ ಚಿಕ್ಕ ಮಾತುಗಳಲ್ಲೇ ದಶಾವತಾರವನ್ನು ವರ್ಣಿಸಿರುವುದು ಸೊಗಸಾಗಿದೆ.

ಭೀಮವ್ವನವರ 'ನಂದನ ಪುತ್ರನ ಆಜ್ಞೆಯಿಂದ ಉದ್ಭವವಾದ' (ಸ.ದಾ.ಸ. ಸಂಪುಟ-೧೯, ಪುಟ.೧೫೬) ಎನ್ನುವ ಕೀರ್ತನೆಯಲ್ಲಿ ಬಾಲಕೃಷ್ಣನ ಲೀಲೆಗಳನ್ನು ವರ್ಣಿಸುವ ನೆವದಲ್ಲಿ ದ್ವಿಪದಿಯಲ್ಲಿ ದಶಾವತಾರಗಳನ್ನು ವರ್ಣಿಸಿದ್ದಾಳೆ. ಮಹಾಭಾರತದಲ್ಲಿನ ದ್ರೌಪದಿಯ ವಸ್ತ್ರಾಪಹರಣದ ವರ್ಣನೆಯ ಸಂದರ್ಭದಲ್ಲಿ (ಪುಟ-೧೨೧, ಕೀ.೭೪) ದ್ರೌಪದಿಯು ಕೃಷ್ಣನನ್ನು ಕರೆಯುವಾಗ ಸಾಂದರ್ಭಿಕವಾಗಿ ದಶಾವತಾರಗಳನ್ನು ವರ್ಣನೆಯಲ್ಲಿ ಕೈಗೆತ್ತಿಕೊಂಡಿದ್ದಾರೆ. ವಿಶೇಷವೆಂದರೆ ಒಂದನ್ನೊಂದು ಸಾಲಿನಲ್ಲಿ ಒಂದೊಂದು ಅವತಾರ ಹೇಳುತ್ತ ಐದು ದ್ವಿಪದಿಗಳಲ್ಲಿ ದಶಾವತಾರ ಮುಗಿಸಿದ್ದಾರೆ. 'ಕೇಳೋ ನಂದ ಇದು ಏನು ಚಂದ' (ಪು-೧೩೭, ಕೀ.೭೯) ಎನ್ನುವ ಕೀರ್ತನೆಯಲ್ಲಿ ದಶಾವತಾರದ ವರ್ಣನೆಯಲ್ಲಿ ಸರಳ ಕನ್ನಡ ಪದಗಳ ಬಳಕೆಯನ್ನು ಗಮನಿಸಬಹುದು. ಅವ್ವನ ಪದಶಕ್ತಿಯನ್ನು ಗಮನಿಸಬಹುದಾಗಿದೆ. 'ಕಣ್ಣ ತೆರೆದು ಉದುಕದೊಳಾಡುವವನು' (ಮತ್ಸ್ಯ), ಸಣ್ಣ ಮೋರೆಯ ಮಾಡಿ ಬಗ್ಗುವನು (ಕೂರ್ಮ), ಮಣ್ಣ ಕೆದರುತ (ವರಾಹ), ಅಸುರ ಕರುಳ್ಹಾರ್ಹಾಕುವನು (ನಾರಸಿಂಹ), ತಿರುಕನಂದದಿ ಬೇಡಿಕೊಂಬುವನು (ವಿಷ್ಣು), ತಾಯ್ಹಂತಕನು (ಪರಶುರಾಮ), ದೊರೆತನ ಬಿಟ್ಟಡವಿಯಲಿರುವವನು(ರಾಮ), ಮಾತುಳನ ಕೊಲ್ಲುವನು (ಕೃಷ್ಣ), ಬೌದ್ಧ ರೂಪದಿ ಲಜ್ಜೆಗೆಡಿಸುವವನು(ಬುದ್ಧ), ಎದ್ದು ತುರಗನೇರ್ರ್ಹೋಡಿ ಹೋಗುವನು(ಕಲ್ಕಿ). ಕೆಲವು ಕೀರ್ತನೆಗಳಲ್ಲಿ ದಶಾವತಾರದ ವರ್ಣನೆಯಲ್ಲಿ ಬೌದ್ಧಾವತಾರದ ವರ್ಣನೆಯಿಲ್ಲ, ಕಲ್ಕಿಯ ಅವತಾರದ ವರ್ಣನೆಗಳಿಲ್ಲದ ಪದ್ಯಗಳು ಕೀರ್ತನೆಗಳು ಕಂಡುಬರುತ್ತವೆ. 'ಸತ್ರಾಜಿತನ ಗೃಹಕ್ಕೆ) ಎಂಬ ಪಲ್ಲವಿಯಿಂದ ಪ್ರಾರಂಭವಾಗುವ ಕೀರ್ತನೆಯಲ್ಲಿ (ಕೀ.ಸಂಖ್ಯೆ:೧೨೦, ಪುಟ:೨೨೭) ಕೃಷ್ಣ-ಸತ್ಯಭಾಮೆಯರೊಂದಿಗಿನ ಸಂವಾದದ ನೆವದಲ್ಲಿ ದಶಾವತಾರದ ವರ್ಣನೆಯನ್ನು ತರಲಾಗಿದೆ. ಕೃಷ್ಣನು ತನ್ನ ಗುರುತು ಹೇಳುವ ನೆಪದಲ್ಲಿ ತನ್ನ ದಶಾವತಾರಗಳನನು ತಾನೇ ವರ್ಣಿಸಿಕೊಳ್ಳುವ ಅಪರೂಪದ ತಂತ್ರವನ್ನು ಒಳಗೊಂಡ ಕೀರ್ತನೆ. ಭಾಮೆಯ ಮನೆಗೆ ಬಂದ ಕೃಷ್ಣ ಬಾಗಿಲು ತೆರೆಯಲು ಕೇಳಿಕೊಳ್ಳುತ್ತಾ 'ಉದಯದೊಳು ಮುಣುಗಿ ಬ್ಯಾಗ ಮದಕದಿಂದ್ಹಯವ ಕೊಂದು ತವಕದಿ ವೇದವ ತಂದೆ ನಾನು ಭಾಮೆ ಥಳಥಳಿಸುವ ಮತ್ಸ್ಯ ನಾನೆ' ಎಂದರೆ ಭಾಮೆ: ಹೊಳೆವೊ ಮತ್ಸ್ಯನಾದರೆ ಶರಧಿ ಹುಡುಕತ ಹೋಗೋ ನಿನಗಾವಾಸ ಸ್ಥಾನಯಿದಲ್ಲ ಕೃಷ್ಣ ಜಲವೆನ್ನ ಮನೆಯೊಳಗಿಲ್ಲ ಎನುತ್ತಾಳೆ. 'ಮಣ್ಣು ಕೆದರುತಲೋಗ್ಹಿರಣ್ಯಾಕ್ಷನಸೀಳಿ ಮನ್ನಿಸ್ಯವನಿಯ ತಂದೆ ನಾನೇ ಭಾಮೆ ಚನ್ನಿಗ ವರಾಹ

ನಾ ಬಂದೀನೆ' ಎನಲು, ಭಾಮೆ: ವರಾಹ ನೀನಾದರೆ ಗಿರಿಗಂಹರವ ಸೇರೊ ಮನೆಗೆ ಬರುವೋದುಚಿತವಲ್ಲ ಕೃಷ್ಣ ಮೆಲುವ ಬೇರೆನ್ನ ಮನೆಯೊಳಿಲ್ಲ ...ಎನ್ನುತ್ತಾಳೆ. ಹೀಗೆ ಸ್ವಾರಸ್ಯವಾಗಿ ನಾಟಕೀಯವಾಗಿ ದಶಾವತಾರದ ವರ್ಣನೆಗಳು ವಿಶೇಷ. 'ಸರ್ಪಭೂಷಣ ಸುತನ' (ಕೀ.೧೪೨, ಪು:೩೧೯) ಎಂದು ಪ್ರಾರಂಭವಾಗುವ ದೀರ್ಘ ಕಥನ ಕೀರ್ತನವು ಸುದಾಮನ ಕತೆಯನ್ನೊಳಗೊಂಡಿದೆ. ಕತೆಯಲ್ಲಿ ಬಡವನಾದ ಸುದಾಮನು 'ಬಾಳ ಬಡವನೆಂದು ಯನ್ನ... ಎನ್ನುವ ಪದ್ಯದಲ್ಲಿ ದಶಾವತಾರದ ನಿಂದಾಸ್ತುತಿಯಿದೆ. ನಿಂದಾಸ್ತುತಿಯಲ್ಲಿಯೂ ದಶಾವತಾರದ ವರ್ಣನೆಯ ಅವಕಾಶ ಮಾಡಿಕೊಂಡಿರುವುದು ಅವ್ವನವರ ದಶಾವತಾರದ ಪದ್ಯಗಳ ವೈವಿಧ್ಯತೆಯನ್ನು ದೃಢಪಡಿಸುತ್ತದೆ.

ಯದುಗಿರಿಯಮ್ಮನವರ 'ಅಭಯವನ್ನಿತ್ತು ಕಾಯೋ ರಂಗಯ್ಯ' (ಸ.ದಾ.ಸ. ಸಂಪುಟ–೧೮, ಭಾಗ–೪, ಕೀ.೪, ಪುಟ–೪) ಎನ್ನುವ ಕೀರ್ತನೆಯಲ್ಲಿ ದಶಾವತಾರದ ಬಣ್ಣನೆಯಿದೆ. ಸರಳ ಪದಗಳ ಬಳಕೆಯಲ್ಲಿ ಹೇಳಿದ್ದರೂ ನೇರವಾಗಿ ದಶಾವತಾರಗಳನ್ನು ಹೇಳಿಲ್ಲ. ಹರಪನಹಳ್ಳಿ ಭೀಮವ್ವನವರಲ್ಲೂ ಇಂತಹ ಪ್ರಯೋಗಗಳು ಕಂಡುಬರುತ್ತವೆ. 'ಶ್ರೀರಂಗನಾಥ ನಂಬಿದೆ ನಿನ್ನ ನಾನೇ ಅನಾಥ' (ಪುಟ–೨೮, ಕೀ.೧೪) ಎನ್ನುವ ಕೀರ್ತನೆಯು ಆತ್ಮನಿವೇದನಾ ಸ್ತುತಿ. 'ಯದುಗಿರಿಯ ವಾಸ ನಾರಾಯಣ...(ಪುಟ–೩೯, ಕೀ.೨೪) ಎನ್ನುವ ಕೀರ್ತನೆ ಮೇಲುಕೋಟೆಯ ಚೆಲುವನಾರಾಯಣನನ್ನು ಕುರಿತಾದದ್ದು. ದಶಾವತಾರವನ್ನು ಇದರಲ್ಲಿ ವರ್ಣನೆಗೆ ತೆಗೆದುಕೊಂಡಿದ್ದರೂ ಪೂರ್ಣ ದಶಾವತಾರದ ವರ್ಣನೆಯಿಲ್ಲ.

ನಾಡಿಗರ ಶಾಂತಾಬಾಯಿಯವರ ಕೀರ್ತನೆ 'ನಾರಾಯಣಾ ನಿನ್ನ ಸ್ಮರಣೆಯಲ್ಲಿ' (ಸಂ:೧೮, ಭಾಗ–೪, ಪು–೧೧೯, ಕೀ.೧೦) ಎನ್ನುವುದೊಂದು ಮೊರೆಯ ಪದ್ಯ. ಇದರಲ್ಲಿ ದಶಾವತಾರದ ಪೂರ್ಣ ವರ್ಣನೆಯು ಬಂದಿದೆ. ಮಂಗಳಾರತಿಯ ಪಾಡಿದೆ...(ಪು:೧೪೩, ಕೀ.೧೫) ಎನ್ನುವ ಸಂಪ್ರದಾಯದ ಹಾಡಿನಲ್ಲಿಯೂ 'ನೀರೋಳಾಡಿದಾ ಮತ್ಸ್ಯ ಕೂರ್ಮ ವರಾಹವತಾರಗೇ, ಕರುಳ ಮಾಲೆ ಧರಿಸಿದ ಲಕ್ಷ್ಮಿನಾರಸಿಂಹಗೆ, ಬಲಿಯ ದಾನವನ್ನೇ ಬೇಡಿ ಮಾತೆ ಶಿರವನಳಿದವಗೆ, ಛಲದಿ ದೈತ್ಯನ ಕೊಂದು ತಾಯಿಗೆ ಬಾಯಲ್ಲಿ ಜಗವ ತೋರ್ದವಗೆ, ಬೆತ್ತಲಾಗಿ ನಿಂತಿದ್ದ ಉತ್ತಮ ಬೌದ್ಧ ಕಲ್ಕಿಗೆ' ಎಂದು ವರ್ಣಿಸಲಾಗಿದೆ. 'ಲಾಲಿ ಕಶ್ಯಪ ಗೋತ್ರ' (ಪು:೧೪೪, ಕೀ.೧೬) ಎನ್ನುವ ಲಾಲಿ ಹಾಡಿನಲ್ಲಿಯೂ ದಶಾವತಾರದ ವರ್ಣನೆಯೇ ವಸ್ತುವಾಗಿದೆ. 'ಮಂಗಳ ಮಹಾರಾಯ...'(ಪುಟ:೧೭೦) ಎನ್ನುವ ಮಂಗಳದ ಹಾಡಿನಲ್ಲಿ ದಾಸರ ಭಾಗ್ಯಗೆ, ಕೇಸರಿ ಮುಖದವಗೆ, ಮಚ್ಛ ರೂಪನಿಗೆ, ಸ್ವಚ್ಛ ಕೂರ್ಮನಿಗೆ, ಸ್ವಚ್ಛ ವರಹನಿಗೆ, ನರಸಿಂಹಗೆ, ಶ್ರೀಕೃಷ್ಣಗೆ, ಬಿಚ್ಚ ವಸ್ತ್ರ, ಹಯ ಹತ್ತಿದ ಹರಿಗೆ ಎಂದು ದಶಾವತಾರದ ಅವತಾರಗಳನ್ನು ಬಣ್ಣಿಸಲಾಗಿದೆ.

ಓರಾಬಾಯಿ ಲಕ್ಷ್ಮಿದೇವಮ್ಮನವರ ಕೃತಿಯಲ್ಲಿ (ಕೀರ್ತನೆ–೧೬, ಪುಟ:೧೪೪) 'ಲಾಲಿ ಕಾಶ್ಯಪ ಗೋತ್ರ' ಎನ್ನುವ ಲಾಲಿ ಹಾಡಿನಲ್ಲಿ ಬೌದ್ಧಾವತಾರದ ಹೊರತಾಗಿ ದಶಾವತಾರದ ವರ್ಣನೆ ಬಂದಿದೆ. ಸರಸ್ವತಿಬಾಯಿಯವರ ಕೀರ್ತನೆ (ಪುಟ–೫೫೮, ಕೀ.೫೦) ದಶಾವತಾರವನ್ನು ವರ್ಣಿಸುವ

ಪೆಪ್ಪರಮೆಂಟಿನ ಆಧುನಿಕ ಉಪಮೆನ್ನೊಳಗೊಂಡಿದೆ. ಇದು ಪುರಂದರ ದಾಸರ 'ಕಲ್ಲು ಸಕ್ಕರೆ ಕೊಳ್ಳಿರೋ' ಕೀರ್ತನೆಯನ್ನು ನೆನಪಿಸುತ್ತದೆ.

ನಾಲ್ಕುವೇದವನೊಂದೇ ಬಾರಿಗೆ
ನಾಲ್ಕು ಹಸ್ತದಿ ತಂದ ಪೆಪ್ಪರ್ ಮೆಂಟ್

ಭೂಮಿಯ ತಂದ ಸೂಕರರೂಪ
ದ ದಿವ್ಯ ಪೆಪ್ಪರ್ ಮೆಂಟ್
ಭುವಿಯೊಳ.....
ಮೊರೆಯ ತೋರಿದಾ ಪೆಪ್ಪರ್ ಮೆಂಟ್

ಧರುಣಿಯ ಪಾದದಿಂದಾಕಾಶಾಪಾತಾಳಾತ್ವರ
ಮೂರು ಪಾದದ ಪೆಪ್ಪರ್ ಮೆಂಟ್
ಧುರುಣಿಪಾಲರ ಉರುಳಿಸಿ ಕೆಡಹಿದ
ಕೊಡಲಿ ಮಹಿಮೆಯ ಪೆಪ್ಪರ್ ಮೆಂಟ್

ಮಂಗನ ಜೊತೆಯಲಿ ಸೇರಿ ನಾರಿಯ
ಇಂಬನರಿತ ದಿವ್ಯ ಪೆಪ್ಪರ್ ಮೆಂಟ್
ಭೂಜಂಗುಳಿ ನಡುಗಲು ಭೋರ್ಗರೆಯಲು ಮಳೆ
ಪುಟ್ಟ ಕಿರುಬೆರಳಲಿ ಮಂದರನೆಗಹಿದ ಪೆಪ್ಪರ್ ಮೆಂಟ್

ತ್ರಿಪುರ ಸತಿಯರ ವ್ರತವಳಿಯಲು ತಾ
ಸುಖಮಯ ವಸನರಹಿತದಾ ಪೆಪ್ಪರ್ ಮೆಂಟ್
ಕತ್ತಲೆಯನ್ನು ಹರಿಸುವ ದಿವ್ಯ ಸೂರ್ಯತೇಜ
ಶತಕಿರಣ ತೇಜ ಪೆಪ್ಪರ್ ಮೆಂಟ್

ನಂಜನಗೂಡು ತಿರುಮಲಾಂಬನವರ (ಪುಟ–೩೪೦, ಕೀ.೫೯) ಹರಿನಾಮ ಸಂಕೀರ್ತನೆಯಲ್ಲಿ ನಾಲ್ಕು ನುಡಿಗಳಲ್ಲಿ ದಶಾವತಾರದ ವರ್ಣನೆಯಿದೆ, ಸರಳವಾಗಿದೆ. ರಾಧಾಭಾಯಿಯವರ 'ಭಕ್ತವತ್ಸಲ ಸ್ವಾಮಿ ಭಯನಿವಾರಣಾ ದೇವ' (ಪು–೪೪೪, ಕೀ.೬) ಎನ್ನುವ ಕೀರ್ತನೆಯಲಿ ದಶಾವತಾರದ ವರ್ಣನೆಯಿದೆ. ಬೌದ್ಧಾವತಾರ ಹೊರತಾಗಿದೆ. ಕಳಸದ ಸುಂದರಮ್ಮನವರ ಕೀರ್ತನೆ 'ಮೂಲ ನಾರಾಯಣ ವಟಪತ್ರಶಾಯಿ..' (ಪು–೪೮೪, ಕೀ.೯) ಎನ್ನುವ ಕೀರ್ತನೆ ದ್ವಿಪದಿಯಲ್ಲಿರುವ ಮೊರೆಯ ಪದ್ಯ. ಇದು ದಶಾವತಾರದ ವರ್ಣನೆಗೆ ಮೀಸಲಾಗಿದ್ದರೂ ಬೌದ್ಧಾವತಾರ ವರ್ಣಿಸಿಲ್ಲ. ಗುಂಡಮ್ಮನವರ ಲಭ್ಯವಿರುವ ಕೀರ್ತನೆಗಳಲ್ಲಿ ದಶಾವತಾರದ ವರ್ಣನೆಗಳು ಕಂಡುಬಂದಿಲ್ಲ. ಸರಸ್ವತಿಬಾಯಿಯವರ 'ಎಂಥಾ ಗೌಳಿಗಾರನಮ್ಮ...' ಮತ್ತು 'ಕೊಡು ಕೃಷ್ಣನೆ' (ಕೀ. ಸಂ.೧೧, ಪು–೫೭೩ ಮತ್ತು ಕೀ.೨೬, ಪು–೫೩೭) ಎಂಬ ಕೀರ್ತನೆಗಳಲ್ಲಿ ಬೌದ್ಧಾವತಾರವನ್ನು ಹೊರತುಪಡಿಸಿ ಇತರ ಅವತಾರಗಳನ್ನು ವರ್ಣಿಸಲಾಗಿದೆ.

ನಿಡಗುರಕಿ ಜೀವೂಬಾಯಿಯವರ ಕೀರ್ತನೆ(ಸ.ದಾ.ಸಾ. ಸಂಪುಟ:೧೮, ಭಾಗ-೨,ಪುಟ-೪೪, ಕೀ.೩೦ ಮತ್ತು ಪು.೧೯೫, ಕೀ.೧೫೦) 'ಬಾ ಹರಿ ಬಕುತರ ಭಯ ಪರಿಹರಿಸುತಾ', 'ಅನಾಥ ರಕ್ಷಕ' ಎನ್ನುವ ಕೀರ್ತನೆಗಳಲ್ಲಿ ದಶಾವತಾರದ ವರ್ಣನೆ ಬಂದಿದೆ. 'ಮಂಗಳಾರತಿ ಮಾಡಿರೆ' (ಕೀ.೧೪೬) ಎನ್ನುವ ಕೀರ್ತನೆಯಲ್ಲಿ ಬೌದ್ಧಾವತಾರದ ಹೊರತಾದ ವರ್ಣನೆಯು ಕಂಡುಬರುತ್ತದೆ. 'ದೇವತೆಗಳ ಬಲ ಹೆಚ್ಚಾಗಿರಲು' ಎನ್ನುವ ಆರ್ಯದಲ್ಲಿ ದ್ವಿಪದಿಯಲ್ಲಿ ದಶಾವತಾರದ ವರ್ಣನೆಯಿದೆ (ಪು.೩೦೦), ವಚನದಲ್ಲಿ (ಪು.೧೭೬) ದಶಾವತಾರದ ವರ್ಣನೆ ಪುನರಾವರ್ತನೆಯಾಗಿದೆ. ಸಂವಾದಿ ರೂಪದಲ್ಲಿ (ಪುಟ-೨೬) ದಶಾವತಾರದ ವರ್ಣನೆ ಬಂದಿರುವುದನ್ನು ಕಾಣಬಹುದು. 'ಪತಿ ಮಂದಿರದಲ್ಲಿ ಸುಖವಾಗಿ ಬಾಳು' (ಪುಟ-೧೬೭, ಕೀ.೧೨೬) ಎಂದು ಪ್ರಾರಂಭವಾಗುವ ಇದು ಸಂಪ್ರದಾಯದ ಹಾಡು. ಮಗಳನ್ನು ಗಂಡನ ಮನೆಗೆ ಕಳುಹಿಸುವಾಗ ಅವಳಿಗೆ ಹೇಳುವ ಬುದ್ಧಿವಾದವಿದೆ. 'ಬಿಟ್ಟ ಕಂಗಳು ಮುಚ್ಚಿದವನು ಎನಬೇಡ' (ಮತ್ಸ್ಯ) ಬೆಟ್ಟ ಬೆನ್ನಲಿ ಪೊತ್ತನೆನಲುಬೇಡ (ಕೂರ್ಮ), ಗಟ್ಟಿ ನೆಲವನು ಕೆದರಿ ಅಲಸಿದನೆನಬೇಡ (ವರಾಹ), ಹೊಟ್ಟೆಯ ಕರುಳನು ಬಗೆದವನೆನಬೇಡ (ನಾರಸಿಂಹ), ಪೊಡವಿ ಪಾಲಕರ ಕೆಡಹಿದನು ಎನಬೇಡ (ಪರಶುರಾಮ), ಮಡದಿಯ ತಂದ ಕಪಿಯ ಒಡೆಯನು ಎನಬೇಡ (ರಾಮ), ತುಡುಗತನದಿ ಪಾಲ್ಬೆಣ್ಣೆ ಚೋರನೆಂದೆನಬೇಡ (ಕೃಷ್ಣ), ಉಡುಗೆ ಉಡದ ಮಾನಗೇಡಿ ಇವನೆನಬೇಡ (ಬೌದ್ಧ), ತುಡುಗತನದಿ ರಾವುತನಾದನೆನಬೇಡ (ಕಲ್ಕಿ) ಎನ್ನುತ್ತಾ ಕೊನೆಗೆ ಒಡೆದು ಪೇಳದೆ ಗುಟ್ಟಾಗಡಿಗಿಸಿ ನಡೆಯಮ್ಮ ಎನ್ನುತ್ತಾಳೆ ತಾಯಿ. ಸಮುದ್ರಮಥನ ಕೃತಿಯಲ್ಲಿ ಹರಿಯ ದಶಾವತಾರಗಳನ್ನು ವರ್ಣಿಸುವ ವಿಶೇಷ ಪದ್ಯವೊಂದಿದೆ ಆದಿಲಕ್ಷ್ಮಿ ವನಮಾಲಿಕೆ ಹಿಡಿದು ಹರಿಯ ಕೊರಳಿಗೆ ಹಾಕಲು ಅವನನ್ನು ಹುಡುಕುತ್ತಾಳೆ. ವನಮಾಲೆ ಹಿಡಿದು ನಡೆದ ಅವಳು ವರ್ಣಿಸುವ ದಶಾವತಾರದ ಪದ್ಯ ಹೀಗಿದೆ:

ಸ್ವಚ್ಛ ಜಲನಿವಾಸಿಯಾದ ಮತ್ಸ್ಯನೊಲ್ಲೆ ನಾ
ಮುಚ್ಚಿ ಕೈಕಾಲು ನಡೆವ ಕೂರ್ಮನೊಲ್ಲೆ ನಾ

ಹುಡುಕಿ ನಾರು ಬೇರು ಮೆಲುವ ವರಾಹನೊಲ್ಲೆ ನಾ
ಕಿಡಿಕಿಡಿಯುದುರುವ ನಯನದ ನರಸಿಂಹನೊಲ್ಲೆ ನಾ

ಬೆಡಗಲಿ ಭೂಮಿಯನೆ ಅಳೆದ ಹುಡುಗನೊಲ್ಲೆ ನಾ
ಕೊಡಲಿ ಪಿಡಿದು ಬಿಡದೆ ನೃಪರ ಕಡಿವನೊಲ್ಲೆ ನಾ

ಮಡದಿ ನೀಗಿ ವನವನಗಳ ಚರಿಪನೊಲ್ಲೆ ನಾ
ಬಿಡದೆ ಭೂಪ ಸ್ತ್ರೀಯರಿಗೊಲಿದ ತುಡುಗನೊಲ್ಲೆ ನಾ

ಶುದ್ಧ ನಾರೇರ ವ್ರತವನಳಿದ ಬೌದ್ಧನೊಲ್ಲೆ ನಾ
ಮುದ್ದು ತೇಜಿ ನೇರಿ ಮೆರೆದ ಕಲ್ಕ್ಯನೊಲ್ಲೆ ನಾ.

ಅಂಬಾಬಾಯಿಯವರ ಕೀರ್ತನೆಯಲ್ಲಿ (ಪು:೧೪, ಕೀ.೧೦) ಮೂರು ಬಾರಿ ದಶಾವತಾರದ ವರ್ಣನೆಗಳು ಒಂದೇ ಪದ್ಯದಲ್ಲಿ ಪುನರಾವರ್ತನೆಯಾಗಿದೆ. ಕೃಷ್ಣಭಕ್ತಿ, ವೈಷ್ಣವ ಸಂಪ್ರದಾಯದ ಅನುಸರಣೆ ಇದಕ್ಕೆ ಕಾರಣವಿರಬಹುದು. ಇತರ ಹರಿದಾಸಿಯರ ಒಂದೇ ಪದ್ಯದಲ್ಲಿ ಪದೇ ಪದೇ ದಶಾವತಾರದ ವರ್ಣನೆಗಳು ಬಂದಿರುವುದನ್ನು ಕಾಣಬಹುದು. 'ನೀರೊಳಾಡ ಭಾರಪೊತ್ತು ಕೋರೆ ತೋರಿದೆ, ಘೋರರೂಪಿ ಬ್ರಹ್ಮಚಾರಿ, ಕ್ಷತ್ರಿಯಾರಿ, ನೀ ಶ್ರೀಹರಿರಾಮಕೃಷ್ಣ, ಬೌದ್ಧ, ಕಲ್ಕಿಯೇ ಎಂಬ ಹತ್ತು ಪದಗಳಲ್ಲಿಯೇ ದಶಾವತಾರವನ್ನು ವರ್ಣಿಸಲಾಗಿದೆ. 'ಪುಟ್ಟ ಪುಟ್ಟ ಶ್ರೀನಿವಾಸ..' ಎನ್ನುವ ಕೀರ್ತನೆಯಲ್ಲಿ ಇರುವ ಮೂರೂ ನುಡಿಗಳಲ್ಲೂ ಪದೇ ಪದೇ ದಶಾವತಾರದ ವರ್ಣನೆ ಇದೆ. ಹರಿಯ ಕೀರ್ತನೆಯೊಂದರಲ್ಲಿ (ಪುಟ-೬೬-೭೧, ಕೀ.೧೦೮) ಐದು ಸಾಲುಗಳುಳ್ಳ ದಶಾವತಾರದ ವರ್ಣನೆಯಿದೆ. ಅರುಣ ಉದಯದ ಮುನ್ನ ಯತಿಗಳು ಶರಣವತ್ಸಲನನ್ನು ಪೂಜಿಸಿ ಧ್ಯಾನಿಸುವ ಸೊಬಗಿನ ಪದ್ಯವೊಂದು (ಪುಟ-೫೫-೫೭, ಕೀ.೪೪) ಭಾಮಿನಿ ಷಟ್ಪದಿಯಲ್ಲಿ ರಚನೆಯಾಗಿದೆ. ಕೆಲವು ನುಡಿಗಳಲ್ಲಿ ಮಾತ್ರೆಗಳ ವ್ಯತ್ಯಾಸವಿದೆ.

ಪ್ರತಿ ನುಡಿಯ ಕೊನೆಗೆ ದಶಾವತಾರದ ವರ್ಣನೆ ಬರುತ್ತದೆ.

ನೋಡಿದೆನು ವರ ಮಚ್ಚ ಕೂರ್ಮನ
ನೋಡಿದೆನು ಧರಣೀಶ ನೃಹರಿಯ
ನೋಡಿದೆನು ವಾಮನನ ಭಾರ್ಗವರಾಮ ಚಂದ್ರನನು
ನೋಡಿದೆನು ಕಡಗೋಲ ಕೃಷ್ಣನ
ನೋಡಿದೆನು ವರಬುದ್ಧ ಕಲ್ಕಿಯ
ನೋಡಿದೆನು ಗುರು ವರದ ಗೋಪಾಲಕೃಷ್ಣವಿಠಲನ

ಸುಪ್ರಭಾತವನ್ನು ಹೋಲುವ ವಿಭಿನ್ನ ಶೈಲಿಯ ಪದ್ಯವೊಂದಿದೆ. (ಪುಟ-೭೧, ಕೀ.೭೪)

ಅಜಗೆ ವೇದವನಿತ್ತು ಅಸುರನ್ನ ಕೊಂದು ನೀ
ಭುಜಗಶಯನನೆ ಮಲಗಿದ್ಯಾ
ಋಜುಗಣವಂದಿತನೆ ಬೆನ್ನಲಿ ಗಿರಿಪೊತ್ತ
ಆಯಾಸದಿಂ ಮಲಗಿದ್ಯಾ
ದ್ವಿಜಧ್ವಜನೆ ಭೂಮಿಯನು ಮೇಲೆತ್ತಿ ತಂದು
ಸಾಕಾಗಿಲ್ಲಿ ಶಯನಿಸಿದೆಯಾ
ಭಜಿಸಿದ ಬಾಲಕನ ಪಿತನೊಡನೆ ಕಾದಾಡಿ
ಬಳಲಿ ನೀ ಪವಡಿಸಿದೆಯಾ ಸ್ವಾಮಿ

ಇಂದ್ರ ಪದವಿಗೆ ಬಂದ ಬಲೀಂದ್ರನ ನೆಲಕೊತ್ತಿ
ಬಂದಿಲ್ಲಿ ಮಲಗಿಪ್ಪೆಯಾ
ಕೊಂದು ಜನನಿಯ ಚಿಂತೆಯಿಂದ ಮನದಿ ನೊಂದು
ಬಂದಿಲ್ಲಿ ಮಲಗಿಪ್ಪೆಯಾ

ತಂದೆ ತಾಯಿಯ ಆಜ್ಞೆಯಿಂದ ಅಡವಿಯ ಅಲೆದು
ಬಂದಿಲ್ಲಿ ಮಲಗಿಪ್ಪೆಯಾ
ಮಂದರೋದ್ಧರ ಶ್ರೀಶ ಮಾವನ್ನ ಕೊಂದು ನೀ
ಬಂದಿಲ್ಲಿ ಪವಡಿಸಿದೆಯಾ ಸ್ವಾಮಿ

ನಾರಿಯರ ವ್ರತಕೆಡಿಸಿ ನಾಚಿಕೆಯಿಂ ಬಂದು
ಏರಿ ಮಂಚವ ಮಲಗಿದ್ಯಾ
ಏರಿ ಕುದುರೆಯನು ದುಷ್ಟರ ಶಿರವ ತರಿಯುತ್ತ
ಸೇರಿ ಶೇಷನ ಮಲಗಿದ್ಯಾ
ಬಾರಿ ಬಾರಿಗೆ ಇಂಥ ಕಾರ್ಯಗಳ ಮಾಡಿಸಿ
ಬಳಲಿಲ್ಲಿ ಮಲಗಿಪ್ಪೆಯಾ
ನಾರದಾದ್ಯರ ಗಾನ ಕೇಳುನಾನಂದದಿಂ
ನಿದ್ದೆಗೈಯುತ ಮಲಗಿದ್ಯಾ ಸ್ವಾಮಿ

.........................................................

ಏಳುಫಣಿಯ ಸರ್ಪನ ಮೇಲೆ ಮಲಗಿ
ಏಳು ಕಣ್ತೆರೆದು ನೋಡೋ

ಶ್ರೀಕೃಷ್ಣ ಬಾಲಲೀಲೆ ಎನ್ನುವ ಕೃತಿಯಲ್ಲಿ ಬರುವ ದಶಾವತಾರದ ವರ್ಣನೆಯ ಪದ್ಯ ಹೀಗಿದೆ:

ಜಲದಲ್ಲಿ ಇರುವಾನೆ ಕುಲಗಿರಿಯ ಪೊತ್ತಾನೆ
ನೆಲವನ್ನು ಬಗೆವ ಪಿರಿಯಾನೆ/ಪಿರಿಯಾನೆ ಬಾಲಕನ
ಛಲಕೆ ಸ್ತಂಭದಲಿ ಬಂದಾನೆ

ವಟುರೂಪ ಆದಾನೆ ಹಟಕೊಡಲಿ ಪೊತ್ತಾನೆ
ಅಟವಿಯ ಫಲವ ಮೆದ್ದಾನೆ/ಮೆದ್ದಾನೆ ಶುದ್ದಾನೆ
ಹಟಬಿಟ್ಟು ಇಲ್ಲಿ ಆಡ್ಯಾನೆ

ಶಿಶುಗೋಪಿಗಾದಾನೆ ವಸನವನು ಬಿಸುಟಾನೆ
ಹಸನಾದ ತೇಜಿ ಹತ್ಯಾನೆ/ಹತ್ಯಾನೆ ದುಷ್ಟರನು
ಕೊಸರಿ ಹಿಚುಕುತ್ತಾ ಮೆರೆದಾನೆ

ನಂಜನಗೂಡು ತಿರುಮಲಾಂಬ ಅವರ ಕೀರ್ತನೆಯೊಂದು (ಪುಟ-೪೧೮, ಕೀ.೪೫) ಹೀಗಿದೆ:

ಏನೆಂದು ಬಣ್ಣಿಪೆನೆ ಈ ನವ್ಯ ವಿಗ್ರಹನೆ
ಮನದನ್ನನಾದನೆ ವನಜನಯನೆ

ತೊಳೆದ ಕೆಂಡದ ಕಾಂತಿ ಮೊಳದುದ್ದ ಮೋರೆಯು
ಕೊಳಗುಳದ ಮನವಿತ್ತು ಮೊಳಗುತಿಹನು
ಕತ್ತಿಯನು ಪಿಡಿದೆತ್ತಿ ಉತ್ತಮಾಶ್ವವ ಹತ್ತಿ
ಅತ್ಯಂತ ರೋಷದಿಂ ಸುತ್ತುತಿಹನು
ಕೊಲೆಗೆ ಹೇಸದ ವರನೆ ಪಲಜನರ ಕಡಿದವನೆ

ಕಲಿತಾನೆ ಎನುತಿಹನೆ ಕಲ್ಕಿ ಎನುತಿಹನೆ ಕಲ್ಕಿ ಇವನೆ– ಇದು ಕಲ್ಕಿಯ ಅವತಾರವನ್ನು ಕಣ್ಣಿಗೆ ಕಟ್ಟುವಂತೆ ಚಿತ್ರಿಸಿರುವ ವಿಶೇಷ ಕೀರ್ತನೆ. ಕಲ್ಕಿಯ ವರ್ಣನೆ ಇನ್ನಾರ ಕೀರ್ತನೆಯಲ್ಲೂ ಕಂಡುಬರುವುದಿಲ್ಲ.

ಮಹಿಳಾಕೀರ್ತನಕಾರರು ದಶಾವತಾರದ ವರ್ಣನೆಗಳನ್ನು ಪದೇ ಪದೇ ತಂದಿರುವುದು ಸಾಮಾನ್ಯವಾದರೂ ಅಭಿವ್ಯಕ್ತಿಯಲ್ಲಿ ಭಿನ್ನತೆಯಿದೆ. ದಶಾವತಾರಗಳನ್ನು ಸರಳ ಬಾಷೆಯಲ್ಲಿ ಹಿಡಿದಿಟ್ಟಿರುವುದಲ್ಲದೆ ಕನ್ನಡತನ ಮೆರೆದಿರುವುದು ಅವರ ಭಾಷಾ ನೈಪುಣ್ಯತೆಗೆ ಸಾಕ್ಷಿಯಾಗಿದೆ. ಒಂದೇ ಮಾತಿನಲ್ಲಿ ದಶಾವತಾರವನ್ನು ಹೇಳಬಲ್ಲರು, ಒಮ್ಮೊಮ್ಮೆ ಇಡೀ ನುಡಿಯನ್ನೇ ಮೀಸಲಾಗಿಟ್ಟರೆ, ಹತ್ತು ಹನ್ನೆರಡು ನುಡಿಗಳಲ್ಲೂ ದಶಾವತಾರವನ್ನು ವರ್ಣಿಸಿರುವುದುಂಟು. ದಶಾವತಾರಗಳು ಶ್ರೀಹರಿಯ ವಿವಿಧ ಅವತಾರಗಳು. ಅವತಾರದಲ್ಲಿ ತೋರಿದ ಲೀಲೆಗಳು. ದಶಾವತಾರದ ನೆವದಲ್ಲಿ ಅವನ ಹಿರಿಮೆಯನ್ನು ಲೀಲೆಗಳನ್ನು ಹೇಳಲು ಅವಕಾಶ ಮಾಡಿಕೊಂಡಿದ್ದಾರೆ. ಪದೇ ಪದೇ ದಶಾವತಾರವನ್ನು ಬಣ್ಣಿಸಿದರೂ ಸ್ವಂತಿಕೆ, ಜಾಣ್ಮೆ, ವರ್ಣನಾಕೌಶಲ್ಯಗಳನ್ನು ಮೆರೆಯಲಾಗಿದೆ. ಈ ಪದ್ಯಗಳು ಇನ್ನೊಂದು ಓದಿಗೆ, ಕತೆಗೆ ಓದುಗರನ್ನು ಸೆಳೆಯುತ್ತವೆ. ಸಾಂದರ್ಭಿಕವಾಗಿ ದಶಾವತಾರಗಳನ್ನು ಬಿರುದಾವಳಿಗಳಾಗಿಯೂ ಬಳಸಿಕೊಳ್ಳಲಾಗಿದೆ. ಆರತಿ ಹಾಡು, ಲಾಲಿ ಹಾಡು, ಉರುಟಣೆಯ ಹಾಡು, ಮಂಗಳದ ಹಾಡು, ಹಾಗು ಅನ್ನಪ್ರಾಶನ ಮುಂತಾದ ಸಂಪ್ರದಾಯದ ಹಿನ್ನೆಲೆಯಲ್ಲಿಯೂ ದಶಾವತಾರದ ವರ್ಣನೆ ಬಂದಿರುವುದು ವಿಶೇಷ. ದಶಾವತಾರಗಳನ್ನು ವರ್ಣಿಸುವಾಗ ಹರಿದಾಸಿಯರು ತನ್ಮಯರಾಗುತ್ತಾರೆ, ಕಲ್ಪನೆ ಗರಿಗಟ್ಟುತ್ತದೆ. ಪದಗಳ ಅನುರಣನವಂತೂ ಕರ್ಣಮಧುರವಾಗಿರುತ್ತದೆ. ಅವತಾರಗಳ ಒಂದೊಂದು ಉದ್ಧಾರದ ಪ್ರಸ್ತಾಪನೆಯೂ ಇದೆ. ದಶಾವತಾರವನ್ನು ವರ್ಣಿಸುವ ಹೆಚ್ಚು ಪದ್ಯಗಳಲ್ಲಿ ಆದಿಪ್ರಾಸವಿದೆ. ಕೋಲಾಟದಲ್ಲಿ ದಶಾವತಾರದ ವರ್ಣನೆಯಿದೆ.

ಗಿರಿಯಮ್ಮನ ದಶಾವತಾರದ ಪದ್ಯಗಳಲ್ಲಿ ದಶಾವತಾರದ ವರ್ಣನೆ ಹಲವು ಬಾರಿ ಬಂದಿದ್ದರೂ, ಅದೇ ಪದಗಳು ಪುನರಾವರ್ತನೆಯಾಗದಂತೆ ವಿಶೇಷತೆ ಮೆರೆದಿದ್ದಾಳೆ. ಹರಪನಹಳ್ಳೀ ಭೀಮವ್ವ, ಗಲಗಲಿ ಅವ್ವ, ಹೆಳವನಕಟ್ಟೆ ಗಿರಿಯಮ್ಮ, ಯದುಗಿರಿಯಮ್ಮನ ಪದ್ಯಗಳಲ್ಲಿ ದಶಾವತಾರದ ವರ್ಣನೆಯು ದಟ್ಟವಾಗಿದೆ.

ಕೆಲವು ದಶಾವತಾರ ಪದ್ಯಗಳು ಪುನರುಕ್ತಿಯಾಗಿದ್ದು ಅಂತಹವುಗಳನ್ನು ಪ್ರಸ್ತಾಪಿಸಿಲ್ಲ. ಸಂಪ್ರದಾಯದ ಹಾಡುಗಳಲ್ಲಿಯೂ ದೀರ್ಘ ಕೃತಿಗಳಲ್ಲಿಯೂ ಸಾಂದರ್ಭಿಕವಾಗಿ ದಶಾವತಾರವನ್ನು

ವರ್ಣಿಸಲಾಗಿದೆ. ಉದಾ: ಗಿರಿಯಮ್ಮನ ಸೀತಾ ಕಲ್ಯಾಣದಲ್ಲಿ ರಾಮನ ಮುಖಕ್ಕೆ ಅರಿಶಿಣವನ್ನು ಹಚ್ಚುವಾಗ ಮುಖವನ್ನು ತೋರೆನ್ನುತ್ತ ಸೀತೆ ದಶಾವತಾರಗಳನ್ನು ಬಣ್ಣಿಸುತ್ತಾಳೆ. ಬಾಲಕೃಷ್ಣನ ಲೀಲೆಗಳನ್ನು ವರ್ಣಿಸುವಾಗ ದಶಾವತಾರಗಳನ್ನು ತಂದಿದ್ದಾರೆ.

ದಶಾವತಾರಗಳಲ್ಲಿ ಕನ್ನಡ ಪದಗಳನ್ನು ಬಳಸಿ ಮಹಿಳೆಯರಿಗಾಗಿ ಮನೆಭಾಷೆಯಲ್ಲಿ ಬರೆದಿರುವುದು ಮಹಿಳೆಯರಲ್ಲಿ ಪುರಾಣಪ್ರಜ್ಞೆಯನ್ನು ಜೀವಂತಗೊಳಿಸುವ ಪ್ರಯತ್ನವಾಗಿಯೂ ಕಂಡುಬರುತ್ತದೆ.

**೪.೨ ಆತ್ಮ ನಿವೇದನೆ**

ಆತ್ಮ ನಿವೇದನೆ ಎಂದರೆ ಭಗವಂತನಲ್ಲಿ ತನ್ನನ್ನು ತಾನು ಅರ್ಪಿಸಿಕೊಳ್ಳುವುದು ಎಂದು ಸರಳವಾಗಿ ಹೇಳಬಹುದು. ಇದರೊಟ್ಟಿಗೆ ಮನದ ಭಾವವನ್ನು ನುಡಿಯಾಗಿ ಹೇಳಿಕೊಳ್ಳುವುದು ಎಂದು ಅರ್ಥೈಸಿಕೊಳ್ಳಬಹುದು. ಭಕ್ತರಿಗೆ ಆತ್ಮೀಯ ಭಗವಂತ. ಅವನಲ್ಲಿ ಹೇಳಿಕೊಳ್ಳುವುದೇ ಆತ್ಮನಿವೇದನೆ. ಇದೊಂದು ಅರಿಕೆ.

ಆತ್ಮ ನಿವೇದನಾ ಪದ್ಯಗಳಲ್ಲಿ ಮಹಿಳಾಕೀರ್ತನಕಾರರ ಬದುಕಿನ ಚಿತ್ರಣವನ್ನು ಊಹಿಸಿಕೊಳ್ಳಬಹುದು. ಸಾಂಸಾರಿಕ ಬದುಕಿನ ಬಗ್ಗೆ ಅವರಿಗಿದ್ದ ವೈರಾಗ್ಯ, ಆಧ್ಯಾತ್ಮ ಬದುಕಿನ ಸೆಳೆತ, ಬದುಕಿನ ಕಷ್ಟಗಳಿಂದ ಪಾರು ಮಾಡೆಂದು ಪದೇ ಪದೇ ಬೇಡಿಕೊಳ್ಳುವ ಅವರ ಮೊರೆ ಕೇಳಿಬರುತ್ತದೆ. ಕೀರ್ತನಕಾರರು ನೇರವಾಗಿ ತಮ್ಮ ಬದುಕಿನ ಬಗ್ಗೆ ಏನನ್ನೂ ಹೇಳಿಕೊಂಡಿಲ್ಲ. ಆದ್ದರಿಂದ ಆತ್ಮನಿವೇದನಾ ಪದ್ಯಗಳಿಂದಲೇ ಬದುಕಿನ ಚಿತ್ರಣವನ್ನು ಕಟ್ಟಿಕೊಳ್ಳಬೇಕಾಗಿದೆ.

ಗಲಗಲಿ ಅವ್ವನವರ ರಚನೆಗಳಲ್ಲಿ ಮುಯ್ಯದ ಹಾಡುಗಳು ಮಾತ್ರ ಕಂಡುಬರುತ್ತವೆ.

ಹೆಳವನಕಟ್ಟೆ ಗಿರಿಯಮ್ಮ 'ಎಂದು ಕಾಹು(ಣು)ವೆ ಎನ್ನ ಮನೋಹರ' (ಕೀ.೩೩, ಪುಟ.೩೧)ಎಂಬ ಕೀರ್ತನೆಯಲ್ಲಿ 'ಭವ ಭವ ಭವವೀ ದುಃಖದಿ ನೊಂದೆನೊ' ಎನ್ನುತ್ತಾಳೆ. ಹೆಳವನಕಟ್ಟೆ ರಂಗನ ಚರಣ ಕಾಣಲು ಹಂಬಲಿಸುತ್ತಾಳೆ. 'ಏನಿದು ಬಯಲ.......ನೋಡಿದಿರಿಲ್ಲಿ' (ಕೀ.೩೪, ಪು-೩೨) ಎನ್ನುವ ಕೀರ್ತನೆಯಲ್ಲಿ 'ನಾನಾ ಜನ್ಮದಿ ಬಂದು ಹೊಂದಲಾರೆನೊ ನಿನ್ನ ಧ್ಯಾನವ ಕೊಡೊ' 'ನೀರಬೊಬ್ಬುಳಿಯಂದದ ದೇಹವ ನೆಚ್ಚ ದೂರ ಹೊತ್ತೆನು, ಯಾರೂ ಸರಿಯಿಲ್ಲೆಂಬಹಂಕಾರ ಪ್ರಪಂಚದೊಳು ಬಂಧನದಲ್ಲಿ ಸಿಲುಕಿದೆನು, ಎಂದಿಗೂ ನಿನ್ನ ನಾಮವನಿತ್ತು ಸದ್ಗತಿಯನ್ನು ತೋರಬೇಕೆಂದು ಹಂಬಲಿಸುತ್ತಾಳೆ. 'ಯವನವರೊಯ್ವಾಗ ಯಾರು ಸಂಗಡ ಇಲ್ಲ' 'ಆಸೆಯೆಂಬುದು ಬಿಡದು' 'ಭಾಷೆಯ ಕೊಡು ಮುಂದೆ ಜನುಮ ಬಾರದ ಹಾಗೆ' ಈ ರೀತಿ ಪ್ರಮಾಣ ಮಾಡಬೇಕು ಎಂದು ದೇವರನ್ನೇ ಒತ್ತಾಯಿಸುವಲ್ಲಿ, ಭವದ ಬಗೆ ಆಕೆಗಿರುವ ವೈರಾಗ್ಯವನ್ನು ಆಕೆಯ ನಿವೇದನೆಯ ಪರಿಯನ್ನು ಕಾಣಬಹುದು.

'ಕಡೆಗಣ್ಣಲಿ ನೋಡದಿರಯ್ಯ' (ಕೀ.೩೫, ಪು-೩೩) ಎನ್ನುವ ಕೀರ್ತನೆಯಲ್ಲಿ ಒಡೆಯ ' ನೀನಲ್ಲದೆ ಎನಗೆ ಬ್ಯಾರಿಲ್ಲವೊ ನೆಲೆಗಾಣದೆ ನಾನಾಪರಿ ಚಿಂತೆಗೆ ಒಳಗಾದೆನೊ ಬಳಲಿಸಬೇಡ

ಅಜಾಮಿಳನ ಉದ್ಧರಿಸಿದ ನೀನು ಎನ್ನ ಬಳಗದ ಅರಭಾರ ನಿನ್ನದು' 'ಹೇರೋಪ್ಪಿಸಿದ ಮೇಲ್ಯಾತರ ಸುಂಕವು' ಎಂದು ಪ್ರಶ್ನಿಸುವ, ಆ ಮೂಲಕ ಭಗವಂತನಲ್ಲಿ ಸಮರ್ಥಿಸಿಕೊಳ್ಳುವ ಪರಿ ಅನನ್ಯ.

'ರಾಯಾ ಕರುಣಾಕರನೆ ನೀಯನ್ನಾ' (ಕೀ.೩೬, ಪು-೩೩) ಎನ್ನುವ ಕೀರ್ತನೆಯಲ್ಲಂತೂ ಎಷ್ಟರಮಟ್ಟಿಗೆ ಶರಣಾಗುತ್ತಾಳೆಂದರೆ ನೀನಲ್ಲದೆ ಅನ್ಯತ್ರ ತಾಯಿ ತಂದೆಗಳಿಲ್ಲಾ, ನೀನಲ್ಲದೆ ಬಂಧುಬಳಗವೆನಗಿಲ್ಲಾ ನೀಯನ್ನ ಕಾಯೋ' ಎಂದು ಬೇಡುತ್ತಾಳೆ. ಹರಿಯ ದಶಾವತಾರಗಳನ್ನು, ಕೃಷ್ಣಾವತಾರವನ್ನು, ದ್ರೌಪದಿಯನ್ನು ರಕ್ಷಿಸಿದ್ದನ್ನು ನೆನೆಯುತ್ತಾ ಭಕ್ತರ ರಕ್ಷಣೆಗಾಗಿಯೇ ಅವತಾರಗಳನ್ನು ಎತ್ತುವ ಕರುಣಾನಿಧಿ ಕಾಯೊ' ಎನ್ನುತ್ತಾಳೆ.

'ದಯಾಪೂರ್ಣ ಗುಣನಿಧಿಯೆ' (ಕೀ.೩೭, ಪು-೩೫) ಎನ್ನುವ ಕೀರ್ತನೆ ಸ್ತುತಿಯೇ ಆಗಿದೆ. 'ಕೈಪಿಡಿದು ಕಾಯದಿಹುದು ನಿನಗುಚಿತವೇ' 'ವಿಹಿತವೇ ನಿನಗೆ ನಡುನೀರೊಳು ಕೈಬಿಡುವುದು?' ಎಂದು ಕೇಳುತ್ತಾಳೆ. 'ಇಳೆ ಸೃಷ್ಟಿಗಾಧಾರನೆಂಬ ಬಿರುದುಳ್ಳುಡೆ' 'ಸುಜನ ಮಂದಾರ ಸರಸಿಜ ಭವಪಿತ'ಎಂದು ನಿನ್ನ ಪ್ರಜೆಗಳು ಪೊಗಳುತ್ತಿಹರೆ 'ಕಡೆಹಾಯಿಸೊ' ಎನ್ನುತ್ತಾಳೆ 'ನಿನ್ನ ನಂಬಿದವರ ಕಾಯೊ.......'ಎನ್ನುವ ಕೀರ್ತನೆಯಲ್ಲಿ (ಕೀ.೩೯, ಪು-೩೬-೩೭) 'ಮತ್ತೆ ಮಂದ ಜ್ಞಾನದಿಂದ ಮೈಮರೆದು ಬರಲು...ತುತ್ತು ಮಾಡಿ ಪಿಡಿದು ಕುದುರೆ ಕ್ರೂರ ದಂತದಿ ಕತ್ತರಿಸುವ ಸಮಯದಲ್ಲಿ ಕಡೆಮಾಡಿ ಕಾಯೊ' ಎನ್ನುವ ನುಡಿಯಿದೆ, ಗಿರಿಯಮ್ಮನ ಬದುಕಿನಲ್ಲಿ ನಡೆದ ಘಟನೆ ಇದೆನ್ನಲಾಗಿದೆ. ಕಲಮದಾಸಿ ಗುರುರಾಯರ 'ಹರಿದಾಸರ ಕಥೆಗಳು 'ಕೃತಿಯಲ್ಲಿ ಇದನ್ನು ಪ್ರಸ್ತಾಪಿಸಲಾಗಿದೆ. 'ಒಮ್ಮೆ ಗಿರಿಯಮ್ಮ ಗುಡಿಗೆ ನೈವೇದ್ಯ ತೆಗೆದುಕೊಂಡು ಹೋದಾಗ, ಗುಡಿಯ ಬಾಗಿಲಲ್ಲಿ ಕಟ್ಟಿದ ಕುದುರೆಯು ಆಕೆಯ ಸ್ತನವನ್ನೇ ಕಚ್ಚಿತು, ಜನ ಸೇರಿದರೂ ಯಾರೂ ಬಿಡಿಸಲಿಲ್ಲ. ಗಿರಿಯಮ್ಮ ರಂಗನನ್ನು ಪ್ರಾರ್ಥಿಸಿ, ಕೀರ್ತನೆ ಹಾಡಿದಾಗ, ಬಿಟ್ಟಿತು' ಎಂದು ಪ್ರಸ್ತಾಪವಿದೆ. ಬದುಕಿನ ಪ್ರತಿಕ್ಷಣದಲ್ಲೂ ಭಗವಂತನಿಗೆ ಶರಣಾಗಿ 'ನಿವೇದನೆ' ಮಾಡಿಕೊಳ್ಳುತ್ತಿದ್ದ ಅವಳ ಶರಣಾಗತಿ ಭಾವವನ್ನಿಲ್ಲಿ ಕಾಣಬಹುದಾಗಿದೆ.

ಉಗಾಭೋಗ (ಕೀ.೪೧, ಪುಟ-೩೮) ವೊಂದರಲ್ಲಿ
'ಆಪತ್ತು ಬಂದ ಕಾಲಕ್ಕೆ ಆರಯ್ಯರೊಬ್ಬರಿಲ್ಲ
ಶ್ರೀಪತಿಯೆ ಕಡೆಹಾಯಿಸೊ
ತಂದೆ ತಾಯೆಂಬುದನು ನಾ
ನೊಂದು ಗುರುತನರಿಯೆ ನಿಮ್ಮ ಕಂದ-
ಳೆಂದೆನಿಸಿ ಕಡೆಹಾಯಿಸೊ' ಎಂದು ನಿವೇದಿಸಿಕೊಳ್ಳುತ್ತಾಳೆ.

ನಿಡಗುರಕಿ ಜೀವೂಬಾಯಿ 'ಅಪಮೃತ್ಯು ಪರಿಹರಿಸೊ ಶ್ರೀ ವೆಂಕಟೇಶ ಅಪರಾಧವೆಣಿಸದಲೆ ಉದ್ಧರಿಸೊ' (ಕೀ.೮೫, ಪುಟ-೧೧೫) ಎನ್ನುತ್ತಲೇ ತಮ್ಮ 'ಅಪರಾಧ'ಗಳನ್ನು ಹೇಳುತ್ತಾ 'ರಾಜಶೇಖರ'ನ (ಅನುಬಂಧ-೫, ಪುಟ-೨೩) (ಹರಿಸ್ಮರಣೆ ಮಾಡದೆ ಮೋಜಿನಿಂದ ಕಾಲಹಾಕಿ, ತಾನು ಮಾಡಿದ ಒಂದು ದಿನದ ಪೂಜೆಗಾಗಿ ಒಂದು ಕ್ಷಣ ವೈಕುಂಠಕೆ ಹೋಗುತ್ತಾನೆ. ನಂತರ

ನೋಡಿದವರಿಗೆ ನರಕ ಭಯವಿಲ್ಲೆಂದು ನರಕಕ್ಕೆ ಹೋಗಲು ನಿರಾಕರಿಸುತ್ತಾನೆ. ಹರಿ ಆತನ ಜಾಣ್ಮೆ ಮೆಚ್ಚುತ್ತಾನೆ.) ಕಥೆ ಹೇಳಿ 'ಹೀಗೆ ಭಕ್ತರ ಪೊರೆದೆ' 'ಬೇಗ ಪಾಲಿಸೊ' ಎಂದು ಕೇಳಿಕೊಳ್ಳುತ್ತಾರೆ.

'ಇಷ್ಟಾದರೂ ದಯಮಾಡು ಪಂಢರಿನಾಥ' (ಪು–೧೧೭, ಕೀ.೮೬) ಎನ್ನುವ ಕೀರ್ತನೆಯಲ್ಲಿ 'ದಾನಧರ್ಮವ ಕೊಡಲು ಧನವಿಲ್ಲ, ತೀರ್ಥಯಾತ್ರೆಗಳಿಂದ ಸೇವಿಸಲಸಮರ್ಥನಾಗಿರುವೆ, 'ಜ್ಞಾನಿಗಳೊಡನಾಡಿ ನಿನ್ನ ನಾನಾ ಲೀಲೆಗಳ ಧ್ಯಾನಿಸಲಿಲ್ಲ', ಕರೆಕರೆಗೊಳಿಸದೆ ಕಡಲಶಯನನೆ ಎನ್ನ ತೊಡರುಗಳನೆ ಬಿಡಿಸು ಎಂದು ಮೊರೆಯಿಡುತ್ತಾಳೆ.

'ಕರೆ ಕರೆ ಭವಗಳು ಮುಳುಗಿರುವೆ, ದುರಿತದೂರನೆ ದುಃಖ ತರತರ ವ್ಯಥೆಯಲಿ' (ಪು–೧೧೮, ಕೀ–೮೭) ಹಗಲಿರಳೆನ್ನದೆ ನಿಗಮವೇದ್ಯನ ನಾಮ ಬಗೆ ಬಗೆ ಹೊಗಳಿ ಕೊಂಡಾಡಿ ಸ್ತುತಿಸದಲೆ' 'ನಾನು ನನ್ನದು ಎಂಬ ಹೀನ ವೃತ್ತಿಗಳಿಂದ ಹಾನಿಯಾಯಿತು ಆಯು' ಎನ್ನುತ್ತಾಳೆ. 'ಯಾತಕೀ ನರದೇಹ' ಎಂದು ಪಶ್ಚಾತ್ತಾಪವಿದೆ, 'ಕರೆದು ರಕ್ಷಿಸು' ಎಂದು ಮೊರೆಯಿಡುತ್ತಾಳೆ. 'ದಯದಿ ವರಗಳ ನೀಡು ಮಮಸ್ವಾಮಿ' (ಕೀ.೮೮) ಕೀರ್ತನೆಯಲ್ಲಿ 'ನೊರೆ ಉದ್ಧರಿಸೆನ್ನ ಭವದಿಂದ ಕಾಕುಮತಿಗಳ ಬಿಡಿಸು ದಯದಿಂದ ನೀ ಪೊರೆಯದಿರಲು ಯಾತಕೀ ನರದೇಹ' ಎಂದು ಗೋಕುಲಾಪತಿಯನ್ನೇ ಕೇಳುತ್ತಾಳೆ. 'ಎತ್ತ ನೋಡಿದರಿಲ್ಲ ನಿನ್ನ ಸಮ ಉತ್ತಮರ ಕಾಣುವುದೆ ಮಿಥ್ಯವೊ ಸತ್ಯವಿದು ಪುರುಷೋತ್ತಮನೆ ಎನ್ನ ಚಿತ್ತದಲಿ ನಲಿನಲಿದು ಶ್ರೀಶ' ಎಂದು ಬೇಡುತ್ತಾಳೆ, ನೊಂದು ಬಳಲಿದೆ ದೇವ ಇಂದಿರೇಶ ಸರ್ವೇಶ ಶ್ರೀಶ ತಂದೆ ರಕ್ಷಿಸಿ ಸಲಹೊ', ಸ್ನಾನ ಜಪತಪದ ನೇಮಗಳ ಬಿಟ್ಟೆ, ಮೌನವನು ಬಿಟ್ಟೆ ದಾನ ಧರ್ಮವ ಕೊಡದೆ ಕೈಬಿಟ್ಟೆ ಶ್ರೀನಿವಾಸನ ಪೂಜೆ ನೇಮ ನಿಷ್ಠೆ ಮಾಡದಲೆ ಬಿಟ್ಟೆ ಶ್ವಾನ ಸೂಕರನಂತೆ ಹೊರೆದೆ ಹೊಟ್ಟೆ ಏನ ಹೇಳಲಿ ಪರರ ದ್ರವ್ಯಪಹರಿಸುತಿಹ ಹೀನ ಜನರ ಸಂಗಮಾಡಿ ಬಳಲಿದೆ' ಎನ್ನುತ್ತಾ ಎಲ್ಲವನ್ನೂ ನಿವೇದಿಸಿಕೊಳ್ಳುತ್ತಾಳೆ. (ಕೀ.೯೧) 'ತಂದೆ ತಾಯಿ ಬಂಧು ನೀನೆ ಪದ್ಮನಾಭ' (ಕೀ.೯೨) 'ಪಾಪಿಯೆಂದು ನೂಕದಿರು ಕರುಣಗಳರಸನೆ ಕಾಯೋ' (ಕೀ.೯೨), 'ಉದ್ಧರಿಸೆನ್ನನು ಉದ್ಧವಸಖನೆಂದು ನಂಬಿರುವೆ ಮನ್ಮನದ ಭಯಗಳವದ್ದು ಬಿಸುಡುತ ಸಲಹೊ' 'ಮೋಹದ ಬಂಧವ ಬಿಡಿಸಿ ರಕ್ಷಿಸೊ' ಎಂದು ಬಹುವಿಧದಲ್ಲಿ ಪ್ರಾರ್ಥಿಸುತ್ತಾಳೆ, (ಕೀ–೯೪) 'ಯಾಕೆ ನಿರ್ಧಯನಾದೆ...ಸಾಕಲಾರದೆ ಎನ್ನ ನೂಕಿ ಭವದೊಳಗೆ (ಕೀ.೯೭) ಎನ್ನುವಲ್ಲಂತೂ ಕಾಣುವ ಆರ್ದ್ರತೆ, ಶರಣಾಗತ ಭಾವ ಅನನ್ಯವಾದುದು. 'ನಿನ್ನ ನಾಮಸ್ಮರಣೆ ಮಾಡದೆ ಹಗಲಿರುಳು ಅನ್ಯವಿಷಯಗಳಿಂದ ನೊಂದು ಬಳಲಿದೆ' (ಕೀ. ೯೮) ಎಂದು ತನ್ನ ಸ್ಥಿತಿಯನ್ನು ನಾನಾ ಪರಿಯಲ್ಲಿ ಭಗವಂತನೆದುರು ಬಿಚ್ಚಿಡುತ್ತಾಳೆ. 'ಹಿಂದಿನ ಕರ್ಮಫಲದಲಿ ಬಂದು ಈ ಭವದಲಿ ಕಂದಿ ಕುಂದಿದೆನೊ ವ್ಯಥೆಯಲಿ, ಬಂಧ ವಿಮೋಚನಗೊಳಿಸೊ' (ಕೀ.೯೮) ಎಂದು ಬೇಡುತ್ತಾಳೆ. 'ಅಂಬುಜಾಕ್ಷನೆ ನಿನ್ನನೆ ನಂಬಿದೆನೊ' 'ಹಿಂದು ಮುಂದ್ಯಾರಿಲ್ಲವೆಂದು ನಂಬಿದೆ' 'ಕಡು ಲೋಭವನೆ ಬಿಟ್ಟು ದೃಢವಾದ ಅಭಯವನು ದಯಪಾಲಿಸೊ' ಎನ್ನುತಾ ಭಗವಂತನು ತನಗೆ ಕರುಣಿಸದಿರುವುದು ಅವನ ಲೋಭವೆಂದೇ ಜರಿಯುತಾಳೆ. ಭಕ್ತ ಮತ್ತು ಭಗವಂತನೊಂದಿಗಿನ ಸಲಿಗೆಯ ಭಾವವನ್ನು, ಭಕ್ತಿಯ ಪರಾಕಾಷ್ಠತೆಯನ್ನು ಇಲ್ಲಿ ಕಾಣಬಹುದು. (ಕೀ.೧೦೪).

ಹರಪನಹಳ್ಳಿ ಭೀಮವ್ವನಂತೂ 'ಮಂದ ಬುದ್ಧಿಯ ಮಹಾ ಮದಡ ಪಾಮರಭವ ಬಂಧನದೊಳು ಸಿಲುಕಿ ನೊಂದೆನಯ್ಯಾ ಸಂದೇಹ ಮಾಡದೆ ಸಲಹದಿದ್ದರೆ ನಿನ್ನ ಹೊಂದಿ ಬಾಳುವುದೆಂತೊ ಮುಂದರಿಯೆ' 'ನಿನ್ನ ಜಾಣತನ ಬಿಟ್ಟು ಅಗಣಿತ ಗುಣಮಹಿಮ ಅಂತರಾತ್ಮಕ ದೇವ ಬಗೆಬಗೆಯಲಿ ಸಲಹೊ' ಎಂದು ಭೇಡಿಸುವುದಲ್ಲದೆ ಚಿಗುರು ದೋಷದ ಕುಡಿಯ ಚಿವುಟಿ ಹಾಕುತ ನಿಮ್ಮ ಸುಗುಣಗಳನೆ ಬಿಟ್ಟೆನ್ನವಗುಣವೆಣಿಸಿದರೆ ಏನೋ ನಿನಗೆ ಅಪಕೀರ್ತಿ' ಎನ್ನುತ್ತಾಳೆ. 'ಈಗ ಒಪ್ಪಿಸುವೆನು', ಇಕೊ ನಿನ್ನ ಚರಣಕ್ಕೆ ಈ ದೇಹವರ್ಪಿಸುವೆ, ಭಾರವ ನೀ ವಹಿಸಲಿಬೇಕು ಎಂದು (ಕೀ.೫೦) ತಮ್ಮ ಮನಸ್ಥಿತಿಯನ್ನು ಭಗವಂತನ ಎದುರು ತೋಡಿಕೊಳ್ಳುವ ಭೀಮವ್ವ

'ಕಲ್ಲು ನಾಯೇನೋ ಕೈವಲ್ಯದಾಯಕನೇ
ಕಲ್ಲು ಕರುಣದಿಂದ್ಹೆಣ್ಣಾಗಿರಲುದ್ಧಾರ ಕೇಳೊ
(ಉಡಬಲ್ಲೆ ಉಣಬಲ್ಲೆ) ಉತ್ತಮ ಸಂಗ ಬಿಡಬಲ್ಲೆ
ನಡೆಯಬಲ್ಲೆನೊ ದುರ್ಮಾರ್ಗದಿಂದ
ಕಡುಕೋಪದಿಂದ ಕಠಿಣ ಮಾತನಾಡಲು ಬಲ್ಲೆ
ಕಡಲಶಯನನ್ನ ನಾನು ನುಡಿಯಲೊಂದರಿಯನು

ಕಾಮ ಕ್ರೋಧವ ಬಲ್ಲೆ ಮತ್ಸರ ಮದ ಲೋಭ
ಮೋಹಬಲ್ಲೆನೊ ಬಾಂಧವ ಭವದಿ
ಭೇದಬುದ್ಧಿಯ ಬಲ್ಲೆ ಮೂರುತಿ ನಿನ್ನ
ಆದಿಪಾದದಿ ಬಕುತಿ ಪರಮಾದರೊಂದರಿಯೆನು

ನಿಷ್ಠುರಾಡುತ ಜನರ ನಿಂದಿಸುವುದು ಬಲ್ಲೆ
ಕಷ್ಟ ದಾರಿದ್ರ್ಯ ಒಲ್ಲೆನ್ನಬಲ್ಲೆ
ದುಷ್ಟ ಅಲ್ಪರಿಗೆ ಬಾಯ್‌ತೆರೆಯಬಲ್ಲೆ ಭೀಮೇಶ
ಕಷ್ಟ ನಿನದಯ ಬೇಡಿಕೊಂಬೋದೊಂದರಿಯೆನೊ –(ಕೀ.೫೨)

– ನಿನ್ನ ದಯವೊಂದನ್ನು ಬೇಡಿಕೊಳ್ಳುವುದನ್ನು ನಾನರಿಯೆ ಅದನ್ನು ನೀನೇ ದಯಪಾಲಿಸಬೇಕೆಂದು ಭಗವಂತನಲ್ಲಿ ಬೇಡುವ ಮನಸ್ಸಿನ ಚಿತ್ರಣವನ್ನು ಇಲ್ಲಿ ನೀಡಿದ್ದಾಳೆ. ಮಾತಾಪಿತರು ಮೊದಲಿಲ್ಲ ಇನ್ನನ್ಯರಿಲ್ಲ ಅನಾಥನಿಂದೆನ್ನ ಕೈಯ ಪ್ರೀತಿಂದ ಹಿಡಿ ಪ್ರಿಯ ಎಂಬಲ್ಲಿ ಬದುಕಿನ ಚಿತ್ರಣವಿದೆ. 'ಒದಗಿ ಬರುವವೊ ಮೃತ್ಯು ಮೊದಲೆ ಅರಿಯದೆ ನಾ ಮದಡ ಬುದ್ಧಿಲಿ ನಿನ್ನ ಮರೆತು ಕಳೆವೆನೊ ಕಾಲ' ಎನ್ನುತ್ತಾ ಮೃತ್ಯು ಮುಟ್ಟದ ಮುನ್ನ ಸಲಹಬೇಕೆಂದು ಕೇಳಿಕೊಳ್ಳುತ್ತಾಳೆ. (ಕೀ.೫೩)

'ಸತ್ಯವಂತನೆ ಕೇಳಸತ್ಯ ಅಜ್ಞಾನ ಭವ ಕತ್ತಲೊಳಗೆ ಬಹು ಶತ್ರು ಸಮೂಹದಲ್ಲಿ ಸುತ್ತಿ ಬಳಲುವೆ ಕೇಳಾಪತ್ತು ಬಾಂಧವ' ಎನ್ನುವಲ್ಲೂ ಬದುಕಿನ ನೋವಿನ ಸುಳಿವಿದೆ.

ಕರಿಮರಿ ಬಳಗ ಬಂದೊದಗಿದರೇನು
ಪರಿಪರಿ ಕ್ಲೇಶವ ಬಿಡಿಸಲಿಲ್ಲ
ಹರಿ ನೀನೇ ಗತಿಯೆಂದರೆ ಆ ಕ್ಷಣದಲ್ಲಿ
ಕರಿಬಂಧನ ಪರಿಹರಿಸಿದೆ

ಪಿತರು ಮಾತೆಯರಿದ್ದೇನು
ಸುತರಾಪತ್ತಿಗೊದಗಲಿಲ್ಲ
ಗತಿ ನೀನೆಂದರೆ ಧ್ರುವ ಪ್ರಹ್ಲಾದರಿ
ಗ್ಹಿತ ಮಾಡಿದೆ ಶ್ರೀಪತಿ ಪರಮಾತ್ಮ

ಒಲ್ಲಭರೈವರಿದ್ದರೇನು ವಸನ
ದ್ರೌಪದಿಗುಡಿಸಲಿಲ್ಲ
ಪುಲ್ಲಾಕ್ಷನೆ ಗತಿಯೆಂದರೆ ನೀ ತಡ
ವಿಲ್ಲದಕ್ಷಯ ನೀಡಿದೆ ದೊರೆಯೆ

ಮನೆ ಧನ ದಾನ್ಯಗಳಿದ್ದುದು ಧನಂಜಯ
ನ್ವನವಾಸಗಳನು ಬಿಡಿಸಲಿಲ್ಲ
ವನಜಾಕ್ಷನೆ ವಾರಣಾವತಿ ದೊರೆತನ
ವಿನಯದಿ ಕೊಟ್ಟದಿಂದಿರಾಪತಿಯ

ಯಾರಿದ್ದರೂ ಭವಘೋರ
ದುರಿತ ಯಮಭಾದೆಗಳ ತಪ್ಪಿಸುವೋರಿಲ್ಲ
(ಕೀ.೫೭)

ಎನ್ನುವ ಕೀರ್ತನೆಯಲ್ಲಂತೂ ಭವದ ಬಂಧಗಳ ಗತಿಯನ್ನೂ ಪರಮಾತ್ಮನಲ್ಲಿ ಶರಣಾಗಲೇಬೇಕಾದ ಅನಿವಾರ್ಯತೆಯನ್ನೂ ಚಿತ್ರಿಸಿದ್ದಾಳೆ.

ಸತ್ಯರೊಳು ನಾನಲ್ಲ ಅಹಲ್ಯೆ ದ್ರೌಪದಿ ಭಕ್ತಿ
ಮೊದಲೆನಗಿಲ್ಲ ಪಾಂಡವರ ದುರಿತಾಪತ್ತು
ಕಳೆದ್ಯೋ ನೀಯೆಲ್ಲ ಕೇಳೆನ್ನ ಸೊಲ್ಲ
ಭಕ್ತಾಧೀನನೆ ಭಯನಿವಾರಣ
ಇಷ್ಟು ಭವಭಯ ಬಿಡಿಸಿ ಭೀಮೇಶ ಕೃಷ್ಣ ನಿನ್ನ ದಯ
ವಿಟ್ಟು ಕರುಣಿಸೊ ವಂದಿಸುವೆನು (ಕೀ.೬೬) –ಎಂದು ಬೇಡುತ್ತಾಳೆ.

ಪುತ್ಥಳಿ ಮನೆಯಲೆಯಿರಲು
ಹಿತ್ತಾಳೆ ಬಯಸುವೆನ್ಹರಿಹರಿ
ಬಿಟ್ಟು ನಿನ್ನೀಗನ್ಯ ವಿಷಯದಿಂ

ದ್ದುಟ್ಟುವುದೆ ಸುಖ ಹರಿಹರಿ
ದೊರೆಯೆ ನೀನಿರಲನ್ಯರಿಗೆ ಬಾಯಿ
ತೆರೆಯಲ್ಯಾಕಿನ್ನ್ಹರಿ (ಕೀ.೬೭)

'ಕಲ್ಲುಹಿಟ್ಟಾಗಿ ರಂಗವಾಲಿ ಎನಿಸುವುದು
ಕಲ್ಲಿಗೆ ಕಡೆಯಾದೆ'

ಈಸು ಮಾತ್ಯಾಕೆಶೋಧೆ ಕೂಸಿನಾಲಾಪೊಂದರಲ್ಲಿ
ಲೇಸು ಕಾಂಬುವುದು ಭೀಮೇಶ ಕೃಷ್ಣಗೆ ಬ್ಯಾಗ (ಕೀ.೭೦)
ಎನ್ನುವ ಮನೋನಿರ್ಧಾರ ಆಕೆಯದು.

**ಅಂಬಾಬಾಯಿಯವರು:**

'ಅಭಯಪ್ರದಾನ ಮಾಡೊ ಇಭಗಿರಿವಾಸ
ಮೃತ್ಯು ಬೆನ್ಹತ್ತಿರೆ ಕತ್ತರಿಸುವ ಮಹ
ಶಕ್ತ ನೀನಿರುತಿರೆ ಮತ್ತಾರ ಬೇಡಲಿ
ನಿನ್ನ ಕಿಂಕರರಾಗಿ ನಿನ್ನ ಸೇವೆಯ ಮಾಳ್ಪ
ಉನ್ನಂತ ಅಭಿಲಾಶೆಯನ್ನು ಸಲ್ಲಿಸೊ

ಹಿಂದಿನ ಎಡರುಗಳೊಂದೊಂದರಲಿ ಕಾಯ್ದೆ
ಇಂದು ಮುಂದೂ ಕಾಯೊ (ಕೀ.೨೧೨)
ಎಂದು ಶರಣಾಗಿದ್ದಾರೆ.
ಅಪರಿಮಿತವಾಗಿ ನೊಂದೆನಯ್ಯಾ
ತಪಿಸುವುದು ನಿನಗುಚಿತವೆ
ಗರುವಿಕೆಯಬೆ ಬಿಡಿಸು
ಶರಣರ ಪೋಷಿಸು
ಸುರವರ ನಿನ್ನಂಘ್ರಿಗೆರಗಿ ಭಿನ್ನೈಸುವೆ
ಕರೆಕರೆಗೊಳಿಸುವುದುಚಿತವೆ
ತೊರೆದರೆ ಎನ್ನಪೊರೆವರ‍್ಯಾರೊ
ಥರವಲ್ಲ ನಿನಗಿನ್ನು ಕೇಳಿದು
ಪೊರೆಯದಿದ್ದರೆ ನಗರೆ ಭಕ್ತರು (ಕೀ.೨೧೪)
ಎಂದು ಭಗವಂತನನ್ನು ಪ್ರಶ್ನಿಸುತ್ತಾರೆ.

ದೇಹಸ್ಥನೆಂದೆನಿಸಿ ಎನ್ನ
ದೇಹ ಮಧ್ಯದಿ ಕಾಣದಿಹರೆ
ದೇಹಗಳನು ಧರಿಸಲಾರೆ

ದೇಹ ಮೋಹವ ಬಿಡಿಸದಿಪ್ಪರೆ

ಕರ್ಮದಲ್ಲಿ ಶ್ರದ್ಧೆಯಿಲ್ಲ
ಧರ್ಮದಲ್ಲಿ ಬುದ್ಧಿಯಿಲ್ಲ
ನಿರ್ಮಲದ ಜ್ಞಾನವಿಲ್ಲ

ಅಂಧಕಾರದಿ ಎನ್ನನಿರಿಸಿ
ಚಂದವೇನೋ ಹೀಗೆ ಮಾಳ್ಪದು (ಕೀ.೨೧೫)

ಎಂದು ಪರಿಪರಿಯಾಗಿ ಕೇಳುತ್ತಾಳೆ.

ಕರಮುಗಿದು ಎರಗಿದರು ಶಿರಬಾಗಿ ನಮಿಸಿದರು
ಚರಣದಲಿ ತನುಮನ ಒಪ್ಪಿಸಿದರು
ಕರಗಲಿಲ್ಲವೊ ಮನಸು ಕರುಣಪುಟ್ಟಲು ಕಾಣೆ
ಭರವಸೆಯು ನಿನ್ನಲ್ಲಿ ಮೂಡಲಿಲ್ಲ

ಶಿರದಿ ಕರವಿಡಲಿಲ್ಲ ತೊರೆದೆಯೊ ಜರಿದೆಯೊ
ವರಭಕ್ತಿ ಸಾಲದೊ ಗರುವಿಕೆಯೊ ದೊರೆತನವೊ

'ಸರಿಯಿಲ್ಲ ಸರಿಯಿಲ್ಲ ಕರುಣಾಳು ಎಂಬುವೆ ಬಿರುದುಳಿವ ತೆರವಿಲ್ಲ'

ಕರೆದು ಮನ್ನಿಸೊ ಪಾಂಡುರಂಗವಿಠಲ ದೇವಾ
ವರಪುಂಡರೀಕಗೆ ಒಲಿದದ್ದು ನಿಜವಾಗೆ
ಪರಿಪರಿಯ ಭಕ್ತರನು ಪೊರೆದದ್ದು ನಿಜವಾಗೆ
ಹರಿದಾಸ ಸಂತತಿಗೆ ಮನೆದೈವ ನಿಜವಾಗೆ
ಸರಿಯಿಲ್ಲದಾ ದೈವ ನೀನೆಂದು ನಿಜವಾಗೆ

ಎಂದು ದೇವರನು ತರಾಟೆಗೆ ತೆಗೆದುಕೊಂಡಂತಿದೆ.

'ಗುರುಕೊಟ್ಟ ವರಬಲದಿ ಶರಣುಪೊಂದಿದೆ ನಿನಗೆ ಚರಣದಲಿ ಬಿದ್ದಿರುವೆ' (ಕೀ.೨೧೭)

ಎನ್ನುವ ಅನನ್ಯ ಶರಣಾಗತಿ ಮೆರೆದಿದ್ದಾರೆ. ಭಕ್ತನು ಭಗವಂತನೆಡೆಗಿರುವ ತನ್ನ ಅನನ್ಯ ಪ್ರೀತಿಯಿಂದಾಗಿ ತೆಗೆದುಕೊಳ್ಳುವ ಸಲುಗೆಯಿದು.

ನಾನೆ ಭ್ರಮಿಸಿದೆನೊ ವಿಷಯಸಂಗ
ನೀನೆ ನಲಿದಿತ್ತೆಯೊ
ದೇಹಕ್ಕೆ ಹಿತಕರವೊ ಇಲ್ಲವೇ ಮನ
ದಾಹಕ್ಕೆ ಮೃತಕರವೊ

ಪಾಪಕ್ಕೆ ಕಾರಣವೊ ಈ ಕರ್ಮಗಳ
ಳಾಪದುದ್ಧಾರಕವೊ

'ವ್ಯಾಪಾರದ್ವಯನಿಂದು ನೀ ಪ್ರೀತನಾಗೆಲೊ' (ಕೀ.೨೧೮)

ಎನ್ನುತ್ತಾ ತನ್ನ ಕಾಡುವ ದ್ವಂದ್ವವನ್ನು ಭಗವಂತನ ಮುಂದಿಡುತ್ತಾರೆ.

ನೀರಿನಲ್ಲಿ ಮುಳುಗುತಿರೆ ತೋರದಲಿ ಪೋಗುವರೆ
ಯಾರು ಕರಪಿಡಿವರ್‍ಯ್ಯೆ ತೋರು

ಕನಸಿನೊಳಗೊಂದು ಪರಿ ಮನಸಿನೊಳಗೊಂದು ಪರಿ
ಬಿಸುಗುದೈವರ ಗಂಡ ಪರಿಹರಿಸು ಗಂಡಾ

ಮುಳುಗಿಹೆನು ಸಂಸಾರಗಣಿಸಲಾಗದ ಕರ್ಮ (ಕೀ.೨೨೧)

ಎಂದು ತನ್ನ ಸ್ಥಿತಿ ಅರುಹುತ್ತ ಕರವ ಪಿಡಿದು ಧಣಿಸು ನಿನ ದಾಸತ್ವ ಧರೆಯ ಮೇಲೆ ಎನ್ನುವುದೊಂದೇ ಬೇಡಿಕೆಯಾಗಿ ಉಳಿಯುತ್ತದೆ.

ಯಾರಿಗೇನೆಸಗಿದೆ ಆರನಾದೂಷಿಸಿದೆ
ಆರನಾನಿಂದಿಸಿದೆನೊ
ಆರನಾ ವಂಚಿಸಿದೆ ಆರನು ನಾನಹಂ
ಕಾರದಿ ನೊಡಿದೆನೊ ಈರೀತಿ ನೊಂದೆನು (ಕೀ.೨೨೩) ಎಂದು ಪಶ್ಚಾತ್ತಾಪ

ಪಟ್ಟು

ಜೋಕೆಯಿಂದಲಿ ಎನ್ನ ಕಾಯಬೇಕಲ್ಲದೆ

ನೂಕಿದರೆನ್ನನು ಸಾಕುವರ್‍ಯಾರೊ ದೊರಿ (ಕೀ.೨೨೩) ಎಂದು ಅನನ್ಯವಾಗಿ ಶರಣಾಗಿದ್ದಾರೆ.

**ಯದುಗಿರಿಯಮ್ಮ**

ಸಂಸಾರವೆಂಬ ಸರ್ಪಕಚ್ಚಿ ವಿಷಕ್ಷಣದಲ್ಲಿ ತಲೆಗೇರಿತು
ಎಂದಿಗಾದರೂ ಮುಕ್ತಿಯ ಕೊಡುವೆಯೆಂದಾನಂದ
ದಿಂದಿರುತಿದ್ದೆನೊ ಇಂದು ಈ ಸಂಸಾರ ಬಂಧನದೊಳಗೆ ನಾ
ಒಂದು ನಿಮಿಷ ಜೀವಿಸಲಾರೆನು ರಂಗ (ಕೀ.೧೩)

ಮಾಡಬಾರದ ಮಾಡಿದೆ ಈ ಸಂಸಾರದೆ ನೋಡಬಾರದ
ನೋಡಿದೆ ಆಡಬಾರದ ವಾರ್ತೆಗಳನಾಡಿದೆ ಇನ್ನು
ಗಾಡನೆ ಮುಕ್ತಿಯ ನೀಡೊ (ಕೀ.೧೩)

ಎನ್ನುತ್ತಾ ತಾವು ಮಾಡಿದ ಶತಾಪರಾಧಗಳನ್ನು ನಿವೇದಿಸಿ ಮುಕ್ತಿಗಾಗಿ ಬೇಡುತ್ತಾರೆ.

ಅಪಾರವಾದ ಸಂಸಾರ ಸಾಗರವ
ಪಾರುಗಾಣುವುದು ಎಂದಿಗೊ ರಂಗಯ್ಯ

ಕೆಟ್ಟನುಡಿಯು ನಿಷ್ಟುರ ವಾಕ್ಯಂಗಳ
ಬಿಟ್ಟುಬಿಡುವುದೆಂದಿಗೊ ರಂಗಯ್ಯ

ಕೃಷ್ಣಮೂರುತಿ ನಿಮ್ಮ ಪುಟ್ಟ ಪಾದದೊಳೆನ್ನ
ಥಟ್ಟನೆ ಸೇರಿಸಯ್ಯಾ (ಕೀ.೧೫)

ಎನ್ನುತ್ತಾ ಬದುಕಿನ ವೈರಾಗ್ಯದಿಂದಾಗಿ ಮುಕ್ತಿಗಾಗಿ ಬೇಡುತ್ತಾರೆ.

ಶಾಂತಾಬಾಯಿಯು

ಬೆಂದೆನು ನಾ ಭವದೊಳಗೆ ಎನ್ನ
ತಂದೆ ನೀ ಕಾಯೊ ನಿಜಪದದೊಳಗೆ
ಹಿಂದಿನ ಪ್ರಾರಬ್ಧ ಬವಣೆಯ ತೀರಿಸಿ
ಮುಂದೆ ನೀ ಸಲಹೊ ಪರಮಪುರುಷನೆ ಹರಿ (ಕೀ.೨)

ಎಂದು ಭಗವಂತನಲ್ಲಿ ನಿವೇದಿಸಿಕೊಳ್ಳುತ್ತಾರೆ.

ಒಲವಿನ ಸಂಸಾರ ಸ್ಥಿರವೆಂದು ನಂಬುತ್ತಾ
ಬರಿದೆ ಪೋಗದೆ ನಿಜದರಿಪನೋಳ್ ನಿಲಿಸೆನ್ನ ಹರಿಯೆ (ಕೀ.೭)

ಉರುಗನ್ನೆಡೆಯ ನೆರಳ ಸ್ಥಿರವೆಂದು ಕಪ್ಪೆಯು ನಿಂತ
ತೆರದಿ ವಿಷಯದೊಳಗೆ ಬೆರೆದು ಬೆಂದೆನು ನಾ
ದುರಿತ ದುಷ್ಟಗಣದಿ ಹರಿದು ಮೃತ್ಯುವನೆ ಮರೆದು
ಅರಿವು ಮಾಯವಾಗಿರು ಎನ್ನ ಸ್ತರದ ಆತ್ಮಪ್ರಭೆಯ ಮರೆತು (ಕೀ.೧೨)

ಎನ್ನುತಾ ಸಂಸಾರ ಅಸ್ಥಿರವೆಂಬುದನ್ನು ಮೃತ್ಯುವನ್ನು ಮರೆತಿದ್ದೆನೆಂಬುದನ್ನು ಹೇಳುತ್ತ ಅರಿವು ಮೂಡಿಸುವಂತೆ ಕೋರಿಕೊಳ್ಳುತ್ತಾರೆ.

ಯಾವಾಗಲು ನಿನ್ನ ಸೇವೆಯೊಳಿರುವಂತೆ
ಕಾವುದೆನ್ನಯ ನಿಜದೀ ಕೃಪಾನಿಧೇ
ಈ ಪರಿಯಿಂದನಾ ಭಾರಿ ಭವದಿ ನೊಂದೆ
ತೊರೋ ನಿನ್ನಯ ಚರಣ ನಾರಾಯಣ

ಆಶಾಪಾಶದಲಿ ನಾ ಘಾಸಿಯಾದೆನೊ ದೇವ
ವಾಸನೆಯೊಳು ತೊಳಲಿ ಬಹುಬಳಲಿ
ನೀರ ಮೇಲಣ ಗುಳ್ಳೆಯಂತೆ ತೋರುವ ಕಾಯ
ಸೇರಿ ನಂಬಿದೆ ಭರದಿ ಬಹುವಿಧದಿ (ಕೀ.೨೭)

ಎನ್ನುವ ಸಾಲುಗಳಲ್ಲಿ ಸ್ಥಿರಗೊಂಡ ಸಂಸಾರದ ಬಗೆಗಿನ ವಿರಕ್ತಿಯನ್ನು, ಭಗವಂತನೆಡೆಗಿನ ಭಕ್ತಿಯನ್ನು ಕಾಣಬಹುದಾಗಿದೆ.

**ನಂಜನಗೂಡು ತಿರುಮಲಾಂಬನವರು**

ನೀರಗುಳ್ಳೆಯ ತೆರದಿ ಕರಗುವ ಸಾರವಿಲ್ಲದ ಭವದಿ
ಮೂರುದಿನದ ಬಾಳೆಂದು ನೆನೆಯದೆ ಹಾರಾಡುವರೆ ನಿಂದು

ಮಾರಪಿತನ ಪದಸಾರಸವನು ನೆನೆ (ನೆನೆದು)
ನೀರಶೇಷಗಿರಿವರನೆ ಗತಿಯೆನೆ (ಕೀ.೫೧)

ಎಂದು ಭಗವಂತನೆಡೆಗಿನ ಹಂಬಲವನ್ನು ವ್ಯಕ್ತಪಡಿಸಿದ್ದಾರೆ.

**ರಾಧಾಬಾಯಿಯವರು**

ಅಪ್ಪ ವೆಂಕಟಸ್ವಾಮಿ ತಪ್ಪು ಸಾಸಿರಗಳ
ಒಪ್ಪಿಕೊಂಡು ಎಮ್ಮ ರಕ್ಷಿಸುವನು
ಆಪದ್‌ದ್ಭಾಂಧವನೇ ಅನಾಥಬಂಧುವೆ (ಕೀ.೬)

ನಿನ್ನ ಹೊರತು ಪೊರೆವರನ್ಯರ ಕಾಣೆನೊ ಘನಮಹಿಮ
ಶ್ರೀ ಕರುಣಾ  ಸಂಪನ್ನ ತಡವ್ಯಾಕೋ (ಕೀ.೭)

ಭಕ್ತವತ್ಸಲ ನೀನಭಯವಿತ್ತ ಮೇಲೆ ಭಯವ್ಯಾತಕೊ ನಮಗಿನ್ನು (ಕೀ.೭)

ಒಂದು ದಿನವೂ ನಿಮ್ಮ ನಾಮ ನುಡಿಯಲಿಲ್ಲವೊ ನಾನು
ಮಂದಮತಿ ನಾನಾದೆ ಗುರುರಾಘವೇಂದ್ರ ಕುಂದುಗಾ
ಳೆಣಿಸದಿರು ನೊಂದೆನಯ್ಯ ನಾನು ತಂದೆಯಂದದಿ
ಕಾಯೊ ಗುರುರಾಘವೇಂದ್ರ

ತಾಳು ತಾಳು ತಾಳಬೇಕೆನ್ನುವಿರೊ ಗುರುವೆ
ಇನ್ನೆಷ್ಟು ದಿನ ತಾಳಬೇಕೊ ತಿಳಿಯದು
ಈ ಸಂಸಾರ ಶರಧಿಯೊಳ್ ಮುಳುಗಿ ಬಳಲಿದೆ
ಘಾಸಿಗೊಂಡಿಹೆ ಕೃಪೆಮಾಡ್ಯೆ
ಈ ವಿಧ ಬವಣೆಯ ಪಡಲಾರೆನೊ (ಕೀ.೨೦)

ಎಂದು ಕಷ್ಟವನ್ನು ಹೇಳಿಕೊಳ್ಳುತ್ತಾರೆ. – ಇನ್ನೆಷ್ಟು ದಿನ ತಾಳಬೇಕೋ ಎಂದಿರುವುದು ಭವದ ಬೇಗೆಯ ತೀವ್ರತೆಯನ್ನು ಸೂಚಿಸುತ್ತದೆ.

ಎತ್ತ ಪೋಗಲಿ ನಾನೇನು ಮಾಡಲಿ ದೇವಾ ಎಂತು
ದಾರಿಯ ಕಾಣೆ ಸಂತೈಸು
ತಂದೆ ನೀ ಕೈಯ ಬಿಟ್ಟರಾರೆನ್ನ ಕಾಯ್ವರೊ ಮಂತ್ರಾಲಯ
ದೊರೆ ರಾಘವೇಂದ್ರ (ಕೀ.೨೨)

ಮೋಸ ಹೋದೆನಲ್ಲಾ ಬಲು ಘಾಸಿಗೊಂಡೆನಲ್ಲಾ
ಮಾಯಾಪಾಶದಿ ಸಿಲುಕಿದೆನಲ್ಲಾ ಉ
ಪಾಯವನರಿಯೆ ಪಾಲಿಸೈ (ಕೀ.೨೪)

ನಿಶೆ ಹಗಲು ನಿನ್ನನು ಸ್ತುತಿಸಿ ಬೇಡುವೆ ಪ್ರಭುವೆ

ಗತಿಗಾಣೆ ನಿನ್ನೊರತು ಈ ಪೃಥುವಿಯೊಳಗೆ
ಅತಿ ವ್ಯಥೆಯಲಿ ನೊಂದು ಮತಿಯಿಲ್ಲದಂತಿಹೆನು
ತ್ವರಿತದಿಂದಲಿ ಕಾಯೊ ಹೇ ಗುರುರಾಜ ಪ್ರಭುವೆ (ಕೀ.೨೫)

ಸಂಸಾರಸಾಗರದಿ ಬೆಂದು ಬಳಲಿರುವೆನಯ್ಯ
ಮುಂದೇನು ಗತಿಕಾಣೆ ಗಾಡಾಂಧಕಾರದೊಳು
ಮುಳುಗು ಬೆಂಡಾದನ್ನೆ ಕರುಣಿಸೈ
ತಂದೆ ತಾಯಿಯು ನೀನೆ ಬಂಧುಬಳಗವು ನೀನೆಂದು

ನಂಬಿದೆನ್ನೆ ಪ್ರಭುವೆ. (ಕೀ.೩೪)– ಎನ್ನುವಲ್ಲಿ ಮೋಸಹೋದೆ ನಾನು ಎನ್ನುವ ಪಶ್ಚಾತ್ತಾಪದ ಧ್ವನಿಯಿದೆ. ತಂದೆ ತಾಯಿಯು ನೀನೆ, ಬಂಧು ಬಳಗವೂ ನೀನೆ ಎನ್ನುವ ಸಾಲುಗಳು ಪುರಂದರದಾಸರ 'ಕಂಡು ಕಂಡು ನೀ ಎನ್ನ ಕೈ ಬಿಡುವರೇ ಕೃಷ್ಣ' ಎನ್ನುವ ಕೀರ್ತನೆಯನ್ನು ಥಟ್ಟನೆ ನೆನಪಿಸುತ್ತದೆ.

**ಕಳಸದ ಸುಂದರಮ್ಮನವರು**

ಕಾಮಪಾಶಕೆ ಶಿಲ್ಕಿದೆನು
ಬಾಯಾರಿ ಬಳಲಿದೆನೆ
ಹೀನಮತವೆನ್ನದೆ ಆಶಕೆ ಗುರಿಯಾದೆ

ನಾನು ನನ್ನದು ಎಂದೆ
ಧರ್ಮಾಂಧಳಾದೆ ಮೆರೆದೆ
ಗುರುಹಿರಿಯರಿಗೆ ಎರಗದೆ
ಹರಿ ನಿನ್ನ ಮರೆದೆ (ಕೀ.೨೩)

ಹರಮೂರ್ತಿ ನೋಡಲೊಲ್ಲಾದು ಯನ್ನ ಮನವು
ಪರಪುರುಷರ ನೋಡಿತು ಮನಸು
ಹೊಲೆಗೆಡಿಸಿತು ಪುರುಷೋತ್ತಮನ ಮರಿತಿತು

ಹರಿಕಥಾಶ್ರವಣ ಕೇಳದು ಎನ್ನ ಕರ್ಣಂಗಳು
ಪರವಾರ್ತೆಗೆ ಹೊತ್ತು ಸಾಲದು

ಹರಿನಿರ್ಮಾಲ್ಯವ ಕೊಳ್ಳದು ಯೆನ್ನಮೂಗು
ಪರಪುರುಷರಾ ಮೈಗಂಧವ ಆಘ್ರಾಣಿಸುವುದು
ಹರಿಯಾತ್ರೆಯ ಮಾಡಲಿಲ್ಲ ಯನ್ನ ಕಾಲು
ಜಾರಸ್ತ್ರೀಯರ ಮನೆಮನೆ ತಿರುಗಿದೆನು

ಎನ್ನ ಇಂದ್ರಿಯಗಳು ಈ ಪರಿ ವ್ಯರ್ಥವಾಯಿತು

ಎಷ್ಟು ಮೊರೆಹೊಕ್ಕರೇನು ಒಂದಿಷ್ಟು ದಯಪುಟ್ಟದು
ನಾನೀಗ ದ್ವೇಷಿಯೇನೊ ಶೇಷಶಯನ (ಕೀ.೨೫)

–ಎಂದು ಬದುಕಿನ ಕಹಿ ಅನುಭವಗಳನ್ನು, ಮಾತು ಕೇಳದ ಮನಸ್ಥಿತಿಯನ್ನು ಹರಿಯಲ್ಲಿ ನಿವೇದಿಸಿಕೊಳುತ್ತಾರೆ. ಸಂಸಾರದಲ್ಲಿ ಸಿಲುಕಿ ಕಷ್ಟಪಟ್ಟಿರುವ ಪರಿಯನ್ನು ನಿವೇದಿಸಿಕೊಂಡಿದ್ದಾರೆ. 'ನಾನೀಗ ದ್ವೇಷಿಯೇನೋ' ಎಂದು ಭಗವಂತನನ್ನು ಕೇಳುವ ಸಲುಗೆಯನ್ನು ತೋರಿದ್ದಾರೆ.

**ಸರಸ್ವತಿಬಾಯಿಯವರು**

ಕನಸಲಾದರು ನಿನ್ನ ಮನಸಿಜನೆ
ಮನನ ಮಾಡುತ ನೆನೆಯುವ
ಘನಕೃಪೆಯಿತ್ತು ಎನ್ನ ಜನುಮ ಸಾರ್ಥಕಗೊಳೆ
ಈತನು ನಿನಗರ್ಪಿಸಿಹೆ (ಕೀ.೧೨೦)

ದೇಹದೊಳಗಿದ್ದವರು ಬಾಹ್ಯ ವ್ಯಾಪಾರಕ್ಕೆಳೆಯೆ
ಈ ದೇಹ ಬಾಂಧವರು ಎಲ್ಲಾ ಎನ್ನ ದೇಹ ಕೀಳು ಮಾಡಿ ನೋಡಿ
ದಾಹ ಹತ್ತಿತೊ ನಿನ್ನಲ್ಲಿ

ರಂಗ ನಿನ್ನ ಸ್ತುತಿ ಮಾಡೆ ಹಂಗಿಸುವರು ಎಂದು ಇದ್ದೆ
ಹಂಗಿಸಿ ಭಂಗಿಸಿ ರಂಗಕ್ಕೆಳಸಿ ಎನ್ನ ನಿನ್ನ
ಅಂತರಂಗಕ್ಕೆ ಎಳೆತಂದೆ ಹರಿ
ರಂಗಾ ನಿನ್ನ ಸರಿ ಯಾರೊ (ಕೀ.೧೨೩)
ನೊಂದೆನಯ್ಯಾ ಈ ಭವದಿ ಸಿಲುಕಿ
ತಂದೆ ಎನ್ನ ಕಾವರಿಲ್ಲ
ಬಂಧ ಬಿಡಿಸಿ ಈ ಭವದಿಂದ ನಿನ್ನ
ಸಂದರುಶನವಿತ್ತು ಸಲಹೊ ಎನ್ನ (ಕೀ.೧೨೫)

ಜಪವ ನಾನರಿಯೆ ತಪವ ನಾನರಿಯೆ
ಉಪವಾಸ ವ್ರತ ಮೊದಲರಿಯೆ ದೇವಾ
ಅಪರಿಮಿತ ಪಾಪ ಗಳಿಸಿಹೆನು
ಸುಪವಿತ್ರನನು ಮಾಡೊ (ಕೀ.೧೨೭

ಎಂದು ವೈರಾಗ್ಯಭಾವದಿಂದ ಬದುಕಿನ ಎಡವುಗಳನ್ನು ಭಗವಂತನ ಮುಂದೆ ಹೇಳಿಕೊಳ್ಳುತ್ತಾ, ಶರಣಾಗತಳಾಗಿರುವ ನನ್ನನು ಉದ್ಧರಿಸಬೇಕು ಎಂದು ಬೇಡುತ್ತಾರೆ.

ಹರಿದಾಸಿಯರಲ್ಲಿ ಹೆಳವನಕಟ್ಟೆ ಗಿರಿಯಮ್ಮನವರದು ಆಯ್ಕೆ ಮಾಡಿಕೊಂಡ ಬದುಕು. ಉಳಿದವರು ವೈಧವ್ಯವನ್ನು ಅನುಭವಿಸಿದವರಿದ್ದಾರೆ, ದಾಂಪತ್ಯದ ಸೌಖ್ಯವನ್ನೂ ಕಂಡವರಿದ್ದಾರೆ.

ವಿಶೇಷವೆಂದರೆ ಎಲ್ಲರೂ ಈ ಭವದ ಬಂಧನ ಕಳೆಯಲು ಭಗವಂತನಲ್ಲಿ ಬೇಡುತ್ತಾರೆ. ಮುಕ್ತಿಗಾಗಿ ಹಾತೊರೆಯುತ್ತಾರೆ. ಆತ್ಮನಿವೇದನೆಯ ಪದ್ಯಗಳು ಇವರ ಅಂತರಂಗವನ್ನು ಬಹಿರಂಗಪಡಿಸುತ್ತವೆ.

**೪.೩ ವಿಶೇಷ ರಚನೆಗಳು**

ಮಹಿಳಾಕೀರ್ತನಕಾರರು ಸಾಂಪ್ರದಾಯಿಕ ರಚನೆಗಳ ಜೊತೆ ವಿಶಿಷ್ಟವಾದ ಹಾಡುಗಳನ್ನು ರಚಿಸಿದ್ದಾರೆ. ಆ ಮೂಲಕ ತಮ್ಮ ಭಿನ್ನತೆಯನ್ನು, ಪ್ರತಿಭೆಯನ್ನು ಸ್ವಂತಿಕೆಯನ್ನು ಮೆರೆದಿದ್ದಾರೆ. ಇದು ಕೃತಿ ರಚನೆಯು ಪ್ರಾಯೋಗಿಕ ಮನೋಭಾವನೆಯನ್ನು ಸೂಚಿಸುತ್ತದೆ. ಕೀರ್ತನೆಯಲ್ಲಿನ ವಸ್ತು ವೈವಿಧ್ಯತೆಯನ್ನು ಮಾತ್ರ ಇಲ್ಲಿ ಗಣಿಸಲಾಗಿದೆ.

**ರಾಶಿ ಹಾಡು** : ಇದು ಹರಪನಹಳ್ಳೀ ಭೀಮವ್ವನವರ 'ರಾಶಿ ಹಾಡು'. ಮೇಷ, ವೃಷಭ, ಕುಂಭ, ಸಿಂಹ, ಕನ್ಯೆ, ತುಲಾ, ವೃಶ್ಚಿಕ, ಧನು, ಮಿಥುನ, ಕರ್ಕಾಟಕ, ಮಕರ, ಮೀನ ಈ ೧೨ ರಾಶಿಗಳನ್ನು, ಒಡಪಿನ ರೂಪದಲ್ಲಿ ಹೇಳಿರುವ ವಿಶಿಷ್ಟವಾದ ಹಾಡು. (ಸಂ-೧೯, ಪು-೨೩೬, ೨೩೭, ಕೀ.ಸಂ.೧೨೬)

ಎಂಥ ರಾಸಿಯೋ ಶ್ರೀಕಾಂತನ ಮುಖಸೂನು
ನಿಂತು ಏರುವೋ ರಾಶಿನ್ಯಾವುದೊ ಇದನೆಲ್ಲರು ಪೇಳಿರಿ

ರಂಗ ಮೂರುತಿ ಸುತನೂರಿ ಏರಿವೋ ಹೆಸ
ರೊಂದುಕೊಂಬುವ ರಾಸಿನ್ಯಾವುದೊ ಇದನೆಲ್ಲರು ಪೇಳಿರಿ

ಇರುಳು ಹಗಲು ಮೈಯ್ಯ ತೊಳೆಯುತ ಮಣ್ಣಿನ
ಲ್ಹೊರಳುಲೆಪ್ಪುವ ರಾಸಿನ್ಯಾವುದೊ ಇದನೆಲ್ಲರು ಪೇಳಿರಿ

ಒದ್ದು ಮಾತಂಗನ ಗವಿಸ್ತಮುರಿದ ಪ್ರ
ಸಿದ್ಧನೆನಿಪ ರಾಸಿನ್ಯಾವುದೊ ಇದನೆಲ್ಲರು ಪೇಳಿರಿ

ಜೋಡು ವಂಶದಾರ ಮಾಡುವುದೀ ರತ್ನಂ
ದಾಡಿಕೊಂಬುವ ರಾಸಿನ್ಯಾವುದೊ ಇದೆನೆಲ್ಲರು ಪೇಳಿರಿ

ಜಗದೊಳಗೆಲ್ಲ ಭಾರಕರ್ತನಾಗಿ
ಏರಿಸಿಳುಹೋ ರಾಸಿನ್ಯಾವುದೊ ಇದನೆಲ್ಲರು ಪೇಳಿರಿ

ಅಂಧಕಾರದಲಿದ್ದು ಬಂದ ಜನರ ಮುಟ್ಟಿ
ದುಂದೆಬ್ಬಿಸುವ ರಾಸಿನ್ಯಾವುದೊ ಇದನೆಲ್ಲರು ಪೇಳಿರಿ

ದೊರೆಸುವ ತಾ ಬಂದು ಸರುವ ಜನರ ಮುಂದೆ
ಮುರಿದುಬಿಷ್ಣುವ ರಾಸಿನ್ಯಾವುದೊ ಇದನೆಲ್ಲರು ಪೇಳಿರಿ

ಭರದಿ ಬಂದು ಕಾಲಕೆದರುನ ತನ್ನಲ್ಲು
ಮುರಿಸಿಕೊಂಬುವ ರಾಸಿನ್ಯಾವುದೊ ಇದನೆಲ್ಲರು ಪೇಳಿರಿ

ರುಂಡ ಮಾಲೆಗಳೆಲ್ಲ ಗುಂಡಿನಂಥ ದೇಹ
ಕ್ಕೊಂದೇರಿಳಿವೊ ರಾಸಿನ್ಯಾವುದೊ ಇದನೆಲ್ಲರು ಪೇಳಿರಿ

ಹತ್ತರೊಳಗೆ ಒಂಬತ್ತು ಬಿಟ್ಟ ಹೆಸ
ರಿಟ್ಟುಕೊಂಬುವ ರಾಸಿನ್ಯಾವುದೊ ಇದನೆಲ್ಲರು ಪೇಳಿರಿ

ಯೋಚನೆ ಮಾಡಿ ಆಲೋಚಿಸಿ ನೋಡರನೇಕೆ
ಮೂಢಜ್ಞಾನಿಗೆ ತಿಳಿವೊದೆ ಇದನೆಲ್ಲರು ಪೇಳಿ

ಈಸು ರಾಶಿಗಳು ಭೀಮೇಶಕೃಷ್ಣನ ದಯ
ದೀಕ್ಷಣದಲ್ಲೆ ತಿಳಿದು ಪೇಳಿ ಇದನೆಲ್ಲರು ಪೇಳಿರಿ

ನಿಡಗುರಕಿ ಜೀವೂಬಾಯಿಯವರ ಕೀರ್ತನೆಯಲ್ಲಿ ಹುಣಸೆ ಹಣ್ಣನ್ನು ಕುರಿತಾದ ವಿಶೇಷವಾದ ಕೀರ್ತನೆಯೊಂದಿದೆ. ಹುಣಸೆ ಹಣ್ಣಿನ ಮಹತ್ವ, ವೈಶಿಷ್ಯವನ್ನು ಕುರಿತು ಇಲ್ಲಿ ಹೇಳಲಾಗಿದೆ. ಹುಣಸೆಯ ಹಣ್ಣು ಹರಿಯ ಅಪ್ಪಣೆಯಂತೆ ಭೂಮಿಯ ಮೇಲೆ ಬಂದಿದೆಯಂತೆ. ಹುಣಸೆ ಹಣ್ಣಾಗಿ ಹುಟ್ಟಿ ಎಲ್ಲರಿಗೂ ಬೇಕಾಗೊ ಎಂದು ಹರಿ ಆಜ್ಞಾಪಿಸಿದನಂತೆ. ಅನೇಕ ಹಣ್ಣುಗಳ ವಿಶೇಷಗಳನ್ನು ಹೇಳಿ ಎಲ್ಲ ಹಣ್ಣಿಗಿಂತ ಮಿಗಿಲಾದದ್ದೆ ಹುಣಸೆಹಣ್ಣು ಎನ್ನುತ್ತಾಳೆ. ನಿಡಗುರಿಕಿ ಅವಿಭಾಜ್ಯ ಕೋಲಾರ ಜಿಲ್ಲೆಯ ಚಿಂತಾಮಣಿ ತಾಲ್ಲೂಕಿನಲ್ಲಿದೆ. (ಇದು ಈಗ ಚಿಕ್ಕಬಳ್ಳಾಪುರದ ಜಿಲ್ಲೆಗೆ ಸೇರಿದೆ) ಹುಣಸೆ ಮರದ ತೋಪುಗಳು ಹೆಚ್ಚಾಗಿದ್ದು ಬಾಲ್ಯದಿಂದಲೂ ಈ ವಾತಾವರಣವು ಜೀವೂಬಾಯಿಯ ಮನಸ್ಸಿನ ಮೇಲೆ ಪ್ರಭಾವ ಬೀರಿದ್ದು ಅದು ಬರವಣಿಗೆಯಲ್ಲಿ ಕಾಣಿಸಿಕೊಂಡಿದೆ. ಈಗಲೂ ಆ ಹುಣಸೆ ತೋಪನ್ನು ಕಾಣಬಹುದಾಗಿದೆ. ಹುಣಸೆ ಹಣ್ಣಿನ ಪದ್ಯ ಹೀಗಿದೆ:

ಆ ಹಣ್ಣು ಈ ಹಣ್ಣು ನೆನಸಿ ಫಲವೇನೆ
ಈ ಹುಣಸೇಹಣ್ಣಿಗೆ ಸಮಬಾಹೋದೇನೆ

ಹಡಗಿಂದ ಬಂದಿತು ಉತ್ತತ್ತಿ ಹಣ್ಣು
ಬಡವರಿಗೆ ಬೇಕಾದ ಬಾಳೆಯ ಹಣ್ಣು
ಕೂತರೆ ಏಳದು ಕುಂಬಳದ್ದಲ್ಲ
ಎಲ್ಲರಿಗೂ ಬೇಕಾದ ಈ ಹುಣಸೇಹಣ್ಣು

ದಾಹವಡಗಿಸುವುದು ದ್ರಾಕ್ಷಿಯ ಹಣ್ಣು
ದೊರೆಗಳು ತಿನ್ನುವ ದಾಳಿಂಬೆ ಹಣ್ಣು
ಫರಂಗಿಯವರು ತಿನ್ನುವ ಪನ್ನೇರಳೆ ಹಣ್ಣು
ಎಲ್ಲರಿಗೂ ಬೇಕಾದ ಈ ಹುಣಸೇಹಣ್ಣು

ಅತಿ ಮಧುರವಾದ ಕಿತ್ತಳೆ ಹಣ್ಣು
ಯತಿಗಳಿಗಾನಂದ ಸೀತಾಫಲದ್ಹಣ್ಣು

ಅತಿರುಚಿಯಾದ ಅಂಜೂರದ ಹಣ್ಣು
ಎಲ್ಲರಿಗೂ ಬೇಕಾದ ಈ ಹುಣಸೇಹಣ್ಣು

ಮಾನವಂತರು ತಿನ್ನುವ ಮಾವಿನ ಹಣ್ಣು
ಜ್ಞಾನಿಗಳಿಗೆ ರಾಮನಾಮದ ಹಣ್ಣು
ದೀನಜನರು ತಿಂಬ ಮೂಸುಂಬೆ ಹಣ್ಣು
ಎಲ್ಲರಿಗೂ ಬೇಕಾದ ಈ ಹುಣಸೇಹಣ್ಣು

ಅಪರೂಪದಲ್ಲಿ ಬೆಳೆದ ಮಾದಳಹಣ್ಣು
ಕಪಿಗಳ ಸೀಬೆಯ ಹಣ್ಣು
ತಪಸ್ಸಿಗಳಾಹಾರ ಜಂಬುನೇರಳೆಹಣ್ಣು
ಎಲ್ಲರಿಗೂ ಬೇಕಾದ ಈ ಹುಣಸೇಹಣ್ಣು

ಪರಿ ಪರಿ ಔಷಧಕ್ಕೆ ಹೆರಳೆಯ ಹಣ್ಣು
ಮರ್ಯಾದೆಗೆ ಕೊಡುವ ನಿಂಬೆಯ ಹಣ್ಣು
ಪರಮ ರೂಪಿಯಾದ ಕರಬೂಜದ್ಹಣ್ಣು
ಎಲ್ಲರಿಗೂ ಬೇಕಾದ ಈ ಹುಣಸೇಹಣ್ಣು

ಹುಣಸೇಹಣ್ಣಿಲ್ಲದೆ ಭಾಂಡ ಶುದ್ಧಿಗಳಿಲ್ಲ
ಹುಣಸೇಹಣ್ಣಿಲ್ಲದೆ ಸ್ವಯಂಪಾಕ ರುಚಿಯು ಇಲ್ಲ
ಬಲ್ಲಿದರಿದರ ರುಚಿ ಎಲ್ಲ ಜನರುಗಳು
ಎಲ್ಲರಿಗೂ ಬೇಕಾದ ಈ ಹುಣಸೇಹಣ್ಣು

ಹುಣಸೇಕಾಯಿಯ ಕುಟ್ಟಿ ರಸವ ಮಾಡುವರು
ಹಣ್ಣನು ಕುಟ್ಟಿ ಅಣಿಮಾಡಿಡುವರು
ಹಣ್ಣಿನ ಬೆಲೆ ಮುಗಿಲಿಗೇರಿರಲು
ಎಲ್ಲರಿಗೂ ಬೇಕಾದ ಈ ಹುಣಸೇಹಣ್ಣು

ಹರಿಯ ಅಪ್ಪಣೆಯಂತೆ ಮರಹುಟ್ಟಿ
ಪರರಿಗೆ ಉಪಕರಿಸುವುದಿದು ಹರಿಯಾಜ್ಞೆ
ವರದಿ ಶ್ರೀ ಹರಿ ಕಮಲನಾಭ ವಿಠ್ಠಲನಿಚ್ಛೆ
ಎಲ್ಲರಿಗೂ ಬೇಕಾದ ಈ ಹುಣಸೇಹಣ್ಣು

ನಿಡಗುರಕಿ ಜೀವೂಬಾಯಿಯವರ ಇನ್ನೊಂದು ಕೀರ್ತನೆ (ಸಂ.೧೮, ಭಾಗ-೨, ಪು;೨೨೧,೨೨೨) ನೀರಿನ ಅಗತ್ಯ ಎಷ್ಟಿದೆ, ಅದರ ಮಹತ್ವ ಏನೆಂಬುದು ತಿಳಿಸುತ್ತದೆ. ಪುರಾಣದ ಘಟನೆಗಳನ್ನಾಧರಿಸಿದ ಉದಾಹರಣೆಗಳೊಂದಿಗೆ ತುಂಬಿರುವ ಈ ಪದ್ಯವು ಇಂತಹ ಹಾಡುಗಳನ್ನು

ಕುರಿತ ಇನ್ನೊಂದು ಮಹಿಳಾ ಕೀರ್ತನಕಾರರ ಕೀರ್ತನೆಗಳಲ್ಲಿ ಕಂಡು ಬರುವುದಿಲ್ಲ. ಜೀವೂಬಾಯಿಯವರ ಪಾಲಿಗೆ ನೀರು ಒಂದು ಬರಿಯ ಜಡವಲ್ಲ. 'ನೀರಜಾಕ್ಷನ್ ಜಲದಿ ವಾಸವಾಗಿಹನು', 'ನೀರಿನೊಳಗೆ ಮುಳುಗಿ ವೇದವ ತಂದು! ನೀರಿನೊಳಗಿ ಮುಳುಗಿ ಭಾರವ ಪೊತ್ತು ನಿಂತನು', 'ನೀರಿನೊಳು ಗಜದ ಶಾಪವ ಕಳೆದು ಪೊರೆದನು', 'ನೀರ ಮಧ್ಯದಿ ದ್ವಾರಕಾಪುರವ ರಚಿಸಿದನು'. ಐರಾವತ, ಕಾಮಧೇನು, ಚಂದ್ರನ ಹುಟ್ಟು ನೀರಿನಲ್ಲಿ. 'ಕಮಲಾಕ್ಷಿ ಪುಟ್ಟಿರುವ ಕಮಲ ಜಲದಲ್ಲಿಹುದು' ನೀರು ಸಾಮಾನ್ಯವಲ್ಲ ಎಂದಿದ್ದಾರೆ. ನೀರು ಮತ್ತು ನೀರೆ ಎಂಬ ಶಬ್ಧಗಳನ್ನು ಚಮತ್ಕಾರವಾಗಿ ಬಳಸಿದ್ದಾರೆ. ಆ ಹಾಡು ಹೀಗಿದೆ:

ನೀರಿನಿಂದಲೆ ಸರ್ವಫಲ ಬಾಹೋದು
ನೀರಜಾಕ್ಷನ ಸೇವೆ ಮಾಳ್ಪ ಸುಜನರಿಗೆ

ನೀರಿಲ್ಲದಲೆ ಯಾವ ಸಾಧನವು ನಡೆಯದು
ನೀರಿಲ್ಲದಲೆ ಯಾಗ ತಪಸ್ಸು ನಿಲ್ಲುವುದು
ನೀರಿಲ್ಲದಲೆ ಸ್ನಾನ ಆಚಾರಹೀನವು
ನೀರಿಲ್ಲದಲೆ ದೇವತಾರ್ಚನೆಯು ಇಲ್ಲವು

ನೀರೆಂದರೆ ಬರಿಯ ಜಡವಾದ ನೀರಲ್ಲ
ನೀರಜಾಕ್ಷನು ಜಲದಿ ವಾಸವಾಗಿದ್ದನು
ವಾರಿಜಾಸನ ಮುಖ್ಯ ಸುರರೆಲ್ಲ ಹರುಷದಲಿ
ನೀರಮಧ್ಯದೊಳಿರುವ ಹರಿಯಧ್ಯಾನಿಪರೆಲ್ಲ

ಉದಯಕಾಲದಿ ಮುಖವ ತೊಳೆಯ ಜಲವಿರಬೇಕು
ಮಧುಸೂದನನ ಮನೆಯ ಸಾರಿಸಲು ಜಲಬೇಕು
ಹೃದಯ ಶುದ್ಧದಿ ಸ್ನಾನ ಮಾಡೆ ಜಲವಿರಬೇಕು
ಮುದದಿ ಹರಿಪೂಜೆಗಗ್ರೋದಕವು ಬೇಕು

ಸಚ್ಚಿದಾನಂದನ ಅಭಿಷೇಕಕ್ಕೆ ಜಲಬೇಕು
ಮತ್ತೆ ಪಾಕವು ಮಾಡೆ ಜಲವುಬೇಕು
ಆರ್ತಿಯಿಂದ ಅತಿಥಿ ಪೂಜೆಗೆ ಉದಕಬೇಕು

ಉತ್ತಮರು ಮನೆಗೆ ಬಂದರೆ ಪಾದ ತೊಳೀಬೇಕು
ಮತ್ತೆ ಅವರಿಗೆ ಸ್ನಾನಕಣಿ ಮಾಡಬೇಕು
ಸುತ್ತ ಬೆಳೆಗಳಿಗೆಲ್ಲ ಮತ್ತೆ ನೀರಿರಬೇಕು
ಸತ್ಯ ಮೂರುತಿ ಪಾದದಂಗುಷ್ಟದಲಿ ಜನಿಸಿದ

ಹಸುಮಕ್ಕಳಿಗೆ ನಿತ್ಯ ಎರೆಯ ನೀರಿರಬೇಕು

ಕುಸುಮ ಪುಷ್ಪದ ಗಿಡಕೆ ನೀರುಬೇಕು
ವಸುದೇವಸುತನ ತೆಪ್ಪೋತ್ಸವಕೆ ಜಲಬೇಕು
ಎಸೆವ ಕಥಲಾರತಿಗೆ ಉದಕಬೇಕು

ನೀರಿನೊಳು ಹಾವಿನ ಮೇಲೆ ಮಲಗಿದ ಹರಿಯ
ನಾಭಿನಾಳದ ತುದಿಯಲಿರುವ ಕಮಲದಲಿ
ನೀರಜಾಸನನ ಪಡೆದಿರುವ ಮಹಿಮೆಯ ಕೇಳಿ
ನೀರಿನಲಿ ಹರಿಯ ಅವತಾರ ರೂಪಗಳುಂಟು

ನೀರಿನೊಳು ವಾರುಣಿಯಪತಿಯ ಶಯ್ಯದೊಳಿಹನು
ನೀರಿನೊಳು ಮುಳುಗಿ ವೇದನೆ ತಂದನು
ನೀರಿನೊಳು ಮುಳುಗಿ ಭಾರವ ಪೊತ್ತು ನಿಂತನು
ನೀರಜಾಕ್ಷನು ನಾರಬೇರ ಮೆದ್ದಿಹನು

ನೀರಜೋದ್ಭವಪಿತನು ಕ್ರೂರರೂಪವ ತಾಳ್ದ
ನೀರೆ ಅದಿತಿಯ ಪತ್ರನಾಗಿ ನಿಂತ
ನೀರಜಾಕ್ಷನು ಪರಶುವಿಡಿದು ಸಂಚರಿಸಿದನು
ನೀರೆಗೋಸುಗ ಸಾಗರಕೆ ಸೇತುವೆಯ ಕಟ್ಟಿದನು

ನೀರಿನೊಳು ಗಜವ ಶಾಪವ ಕಳೆದು ಪೊರೆದನು
ನೀರೆ ದೌಪದಿಯ ಅಭಿಮಾನವನು ಕಾಯ್ದು
ನೀರ ಮಧ್ಯದಿ ದ್ವಾರಕಾಪುರವ ರಚಿಸಿದನು
ನೀರಜಾಕ್ಷಯರ ಕೂಡಿ ನೀರೊಳಗೆ ಆಡಿದನು

ಕಮಲಾಕ್ಷಿ ಪುಟ್ಟಿರುವ ಕಮಲ ಜಲದಲ್ಲಿಹುದು
ಕಮಲನಾಭ ವಿಠ್ಠಲ ಜಲದೊಳೋಲ್ಯಾಡುವ
ಶ್ಯಮದ ಪರಿಹರಿಪ ಚಂದ್ರನು ಜಲದಿ ಪುಟ್ಟಿಹನು
ಕಾಮಧೇನು ಐರಾವತವು ಪುಟ್ಟಿದ ಜಲವಯ್ಯ

**ತರಕಾರಿ ಹಾಡು**

ಓರಾಬಾಯಿ ಲಕ್ಷ್ಮಿದೇವಮ್ಮನವರ ಒಂದು ಹಾಡು ಹೀಗಿದೆ. ಇದು 'ತರಕಾರಿ ಹಾಡು' ಎಂದೇ ಜನಪ್ರಿಯವಾಗಿದೆ. ಇದು ಶ್ಲೇಷೆಗಾಗಿ ಬರೆದದ್ದು ಎನಿಸುತ್ತದೆ. (ಕೀ.೨೦, ಪುಟ:೧೫೧)

ನಿನ್ನ ದಾಸರ ಬಿಟ್ಟನಾ ***ಬಾಳೆ*** ಕಾಯೊ
ಸಣ್ಣ ಮೂರುತಿ ನೀ ***ನೆಂಬೆ*** ಕಾಯೊ
ಮಾರ ಜನಕನೆ ಅಳಿದ ***ಮಾವನ್ನ*** ಕಾಯೊ

ಸಾರಿ ಕರೆದರೆ ನೀ <u>ಬಾರೆ</u> ಕಾಯೊ
ಮಾರಜನಕ ನರಸಿಂಹ ವಿಠಲ ನೀ
ಮಾಡಿದ್ದೆಲ್ಲವೊ ಎನಗೆ <u>ಸಮತೆ</u> ಕಾಯೊ

**೪.೪ ಅವತಾರತ್ರಯರ ಸ್ತುತಿಗಳು**

ಪ್ರಾಣದೇವರು ತ್ರೇತಾಯುಗದಲ್ಲಿ ಹನುಮಂತನಾಗಿಯೂ, ದ್ವಾಪರದಲ್ಲಿ ಭೀಮಸೇನನಾಗಿಯೂ, ಕಲಿಯುಗದಲ್ಲಿ ಮಧ್ವಾಚಾರ್ಯರಾಗಿ ಜನಿಸಿದ್ದರೆಂಬ ನಂಬಿಕೆ ಮಾಧ್ವರಲ್ಲಿದೆ. ಈ ಅವತಾರ ತ್ರಯರ ಕುರಿತಾದ ಸ್ತುತಿಗಳು ದಾಸಸಾಹಿತ್ಯದಲ್ಲಿ ಸಾಂಪ್ರದಾಯಿಕ ರಚನೆಗಳು. ಗಿರಿಯಮ್ಮವರು ಬರೆದಿರುವ ಹನುಮಂತನನ್ನು ಕುರಿತಾದ 'ಈತ ಆಂಜನೆ ಸುತನು ಭೀಮರಾಯ' 'ಭೀಮ ಹೋ ಭಲಾರೆ ನಿಸ್ಸೀಮ' ಎಂಬ ಎರಡು ಕೀರ್ತನೆಗಳಿವೆ. ಕೀರ್ತನೆಯಲ್ಲಿ ಭೀಮ ಎನ್ನುವ ಹೆಸರು ಬಳಸಿದ್ದರೂ ಹನುಮನ ಸಾಹಸಗಳನ್ನು ವರ್ಣಿಸುವ ಪದ್ಯವೆ ಹೊರತು ಭೀಮನನ್ನಲ್ಲ. ಮಧ್ವರ ಪ್ರಸ್ತಾಪವು ಕೀರ್ತನೆಗಳಲ್ಲಿ ಬರುವುದಿಲ್ಲ.

ಗಲಗಲಿ ಅವ್ವನವರು ಬರೆದಿರುವ 'ಹನುಮನ ಬಲಗೊಂಬೆ ಹರುಷದಲೆ' ಎನ್ನುವ ಕೀರ್ತನೆ ಅವತಾರ ತ್ರಯರ ಕುರಿತಾದದ್ದು. ಐದು ನುಡಿಗಳ ದ್ವಿಪದಿಯಲ್ಲಿ ರಚಿತವಾಗಿದೆ. ಪ್ರಾರಂಭದ ಮೂರು ನುಡಿಗಳು ಹನುಮನ ಸಾಹಸ ಕಾರ್ಯಗಳನ್ನು ವರ್ಣಿಸಿದರೆ 'ಕೃಷ್ಣನ ಸೇವೆಗೆ ಅತಿ ನಿಷ್ಟನೆನುತಲಿ, ದುಷ್ಟ ಕೌರವರ ಕೊಂದ ಶ್ರೇಷ್ಠನೆನುತಲೆ' ಎನ್ನುವ ಸಾಲುಗಳು ಭೀಮನನ್ನು 'ಶ್ರೀರಾಮೇಶಗೆ ಮೂಲ್ಯ ದಾಸನೆನುತಲೆ ವಾಸವಾದ ಬದರಿಯಲಿ ಮಧ್ವೇಶನೆನುತಲೆ' ಎನ್ನುವ ಸಾಲುಗಳಲ್ಲಿ ಮಧ್ವರ ಸ್ಮರಣೆ ಬಂದಿದೆ.

ಹರಪನಹಳ್ಳಿ ಭೀಮವ್ವನ 'ಎಂಥ ಮಹಿಮೆ' ಎನ್ನುವ ಕೀರ್ತನೆ ಪಲ್ಲವಿಯೊಂದಿಗೆ ಮೂರು ನುಡಿಗಳನ್ನು ಒಳಗೊಂಡಿದೆ. ಮೊದಲ ನುಡಿ ಹನುಮನು ಮಾಡಿದ ಸೇವೆಯನ್ನು ವರ್ಣಿಸಿದರೆ, ಎರಡನೆಯ ನುಡಿ ಪಾಂಚಾಲಿಯೊಂದಿಗೆ ಭೀಮನ ವನವಾಸ ದುರ್ಯೋಧನನ ವಧೆಯನ್ನು ಹೇಳುತ್ತದೆ. ಮೂರನೇ ನುಡಿ ಮಧ್ವರು ರಜತ ಪೀಠ (ಉಡುಪಿ)ದಲ್ಲಿ ಶ್ರೀಕೃಷ್ಣನನ್ನು ಪ್ರತಿಷ್ಠಾಪಿಸಿದುದನ್ನು ನೆನೆಯುತ್ತಾರೆ. 'ಕೊಡು ಕೊಡು ವರವ' (ಕೀ.೩೧) ಹನುಮನ್ನು ಕುರಿತದ್ದಾದರೆ 'ಜೈ ಭೀಮ' (ಕೀ.೩೨) ಎನ್ನುವ ಕೀರ್ತನೆಯಲ್ಲಿ ಅವತಾರ ತ್ರಯರ ವರ್ಣನೆಯಿದೆ. ಎಂಟು ಸಾಲುಗಳ ಚಿಕ್ಕ ಕೀರ್ತನೆ (ಕೀ. ೩೩) ಯೊಂದರಲ್ಲಿ:

ತಿರುವೀದಿಯ ಮೋರೆ ತಿರುವೀದಿಯ ಹನುಮ ತಿರುವೀದಿಯ
ದಂಡಕವನ ಕೋದಂಡರಾಮನ ಪಟ್ಟಿ
ದ್ದೆಂಡತಿಯ ಚೋರನ್ನಪ್ಪುರುಂಟ ನೋಡದೆ

ತರಳೆ ದ್ರೌಪದಿ ಸಭೆಯೊಳಗೆ ಉಟ್ಟಸನವ ಸೆಳೆದ
ಕೌರವನೆಂಬೊ ದುರುಳರ ನೋಡದೆ

ಮಧ್ವ ಮತಗಳೆಂಬೋ ಮರದ ಹಣ್ಣನು ಮೆದ್ದು
ಮುದ್ದು ಭೀಮೇಶ ಕೃಷ್ಣ ಎನ್ನದವರ ನೋಡಿ

ಎಂದು ಅವತಾರತ್ರಯರನ್ನು ಸ್ಮರಿಸಲಾಗಿದೆ.

ಹದಿನೆಂಟು ನುಡಿಗಳ 'ಬೊಮ್ಮಗಟ್ಟಿಯಲ್ಲಿದ್ದ ನಮ್ಮ ಪ್ರಾಣೇಶ' ಎನ್ನುವ ಕೀರ್ತನೆ ದ್ವಿಪದಿಯಲ್ಲಿದ್ದು ಹನುಮನ ಕಾರ್ಯಗಳನ್ನು ವರ್ಣಿಸಿದೆ. 'ಮರೆಯದೆ ಸಲಹೆನ್ನನು ಯಾದವಗಿರಿ ದೊರೆ ಮಂಗರಾಯ' ಎನ್ನುವಲ್ಲಿ ಹನುಮನ ಸ್ಮರಣೆಯಿದೆ. 'ಮೊದಲೆ ಪಾಲಿಸೆನ್ನ' ಎನ್ನುವ ಕೀರ್ತನೆಯಲ್ಲಿ ಮೊದಲಘಟ್ಟ ಹನುಮನನ್ನು ಸ್ಮರಿಸಿದ್ದಾಳೆ.

ನಿಡಗುರಕಿ ಜೀವೂಬಾಯಿಯವರು ಅವತಾರ ತ್ರಯರ ಬಗೆಗಿನ ನಂಬಿಕೆಯನ್ನು ಈ ಸ್ತುತಿಯಲ್ಲಿ ಹೇಳಿದ್ದಾರೆ.

ತ್ರೇತಾಯುಗದಲ್ಲಿ ರಘುಪತಿ ಸೇವೆಯ ಮಾಡುವೆನೆಂದು/ಸೀತೆಗುಂಗುರವಿತ್ತು/ಮಾತೆಯಾಜ್ಞೆಯ ಕೊಂಡು/ಘಾತಿಸದೆ ರಕ್ಕಸರ/ದೂತ ರಾವಣನ ಕಂಡು/ಭೀತಿಯಿಲ್ಲದೆ ಜನಕ/ಜಾತೆಯಳ ಕಳುಹೆನಲು/ ಆತ ಕೋಪದಿಂದಲಿ ತನ್ನ/ದೂತರಿಂದಲಿ ವಾಲ/ವಗ್ನಿಯಲಿ ದಹಿಸಿದೆನೆ/ಆ ಪುರವ ದಹಿಸಿ ಮೆರೆದೆ.

ದ್ವಾಪರದಿ ಶ್ರೀಕೃಷ್ಣನಂಘ್ರಿ ಸೇವಕನಾಗಿ/ಪಾಪಿ ಜರೆಸುತನ ಸೀಳಿ/ದ್ರೌಪದಿಯ ನುಡಿ ಕೇಳಿ/ ಪಾಪಿ ಕೀಚಕನನ್ನು ಕೋಪದಿಂ ಕೊಂದ ಮಹಿಮ/ಪಾಪಿ ದುರ್ಯೋಧನಾದಿಗಳ ಸಂಗಡ ಕಾದಿ/ ಸೋತು ಓಡಲು ದುರಳನು/ನೀತಿ ಬಿಡದಲೆ ಗದೆಯ/ಏಟಿನಿಂದವನ ತೊಡೆ/ಘಾತಿಸುತಲವನನಳಿದೆ/ ಮಧ್ವ ಮತದವರನುದ್ಧರಿಸಬೇಕೆಂದೆನುತ/ಮಧ್ಯಗೇಹದಲಿ ಜನಿಸಿ/ಶುದ್ಧ ಶಾಸ್ತ್ರಗಳನುದ್ಧರಿಸುತ ಜಗದೊಳಗೆ ಪ್ರಸಿದ್ಧನೆನುತ ಮೆರೆದೆ/ಮುದ್ದು ಕೃಷ್ಣನ ಪೂಜೆ/ಶ್ರದ್ಧೆ ಬಿಡದೆ ಮಾಡಿ ಉದ್ಧರಿಸಿ ಸಜ್ಜನರನು ಎನ್ನುತ್ತಾ ಮೂರು ನುಡಿಯಲ್ಲೂ ಅವತಾರ ತ್ರಯರನ್ನು ಸ್ಮರಿಸಿದೆ. (ಕೀ.೬೧)

'ಯಂತ್ರೋದ್ಧಾರಕ ರಾಯರ ಸ್ಮರಣೆಯ ಮಾಡಿ' (ಕೀ.೬೫) ಎನ್ನುವುದು ಹಂಪೆಯ ಯಂತ್ರೋದ್ಧಾರಕ ಹನುಮನ ಸ್ಮರಣೆ. ನುಡಿಗಳಲ್ಲಿ ಹನುಮನ ಸಾಹಸಗಳನ್ನು ವರ್ಣಿಸಿದೆ. ಸ್ಥಳ ಪುರಾಣದ ಬಗ್ಗೆ ಏನನ್ನೂ ಪ್ರಸ್ತಾಪಿಸಿಲ್ಲ. 'ಲಾಲಿ ಲಾಲಿ ಹನುಮ' (ಕೀ.೮೫) ಎನ್ನುವ ಕೀರ್ತನೆಯಲ್ಲಿ 'ಲಾಲಿ ಲಾಲಿ ಹನುಮ ಲಾಲಿ ಬಲಭೀಮ ಲಾಲಿ ಲಾಲಿ ಮಧ್ವರಾಯ ಗುರುವರ್ಯ' ಎಂದು ಅವತಾರ ತ್ರಯರಿಗೆ ಲಾಲಿ ಹಾಡಿರುವುದು ಅಪರೂಪದ ಕೀರ್ತನೆಯಾಗಿದೆ.

ಅಂಬಾಬಾಯಿಯ 'ಕುಲವ್ಯಾವುದಯ್ಯಾ ಕಪಿ ಕುಲನೆ' (ಕೀ.೧೦೬) ಎನ್ನುವ ಕೀರ್ತನೆಯು ಮುಂಡಿಗೆಯ ರೂಪದಲ್ಲಿದೆ.

ಕುಲವ್ಯಾವುದಯ್ಯ ಕಪಿಕುಲನೆ ನಿನಗೆ/ಒಲಿದಿಹನೆ ಹರಿ ನಿನಗೆ ಎಂದು ಜನ ನುತಿಸುವರು
ಮರಹಾರುವಂಥ ಮರ್ಕಟ ಕುಲದಲವತರಿಸಿ/ಶರಧಿ ಲಂಘಿಸುತ ದ್ವೀಪಾಂತರವಾಸಿ
ದುರುಳರನು ಸಂಹರಿಸಿ ದೊರೆಸುತರ ಸೇವಿಸಿ/ಕರದಿಯೆಂಜಲು ಕೊಂಡು ಮರವನೇರಿದನೆ
ಪ್ರಥಮ ಕುಲವನೆ ಬಿಟ್ಟು ದ್ವಿತೀಯ ಕುಲದೊಳಗುದಿಸಿ/ಹಿತವೆ ರಕ್ಕಸಿ ಸಂಗ ಪಥದಿ ನಿನಗೆ
ದಿತಿಜನಾಹತತಿ ಅನ್ನಗತಿಯಿಲ್ಲದೆಲೆ ತಿಂದು ಚತುರಕುಲಜನ ನೀನುತಿಸಿ ಹಿಗ್ಗಿದನೆ
ತುಳುವಂಶಜನೆ ನೀ ಲಲನೆ ಸಂಗವ ತೊರೆದು/ಅಲೆದೆ ಯತಿಯಾಗಿ ಈ ಇಳೆಯೆಲ್ಲವ/
ಕುಲನ್ಯೂನ ಗೋಪಾಲಕೃಷ್ಣವಿಠಲನ ಪದವಿ/ಒಲಿಸಲೋಡಿದೆ ಅದು ಬರದಂಥ ಗಿರಿಗೆ

–ಹಾಡಿನಲ್ಲಿ ಎಲ್ಲೂ ಹನುಮ ಭೀಮ ಮಧ್ವರೆಂಬ ಪದ ಬಳಕೆಯಾಗಿದೆ ಅವತಾರತ್ರಯರನ್ನು ಸ್ತುತಿಸಿದ್ದಾರೆ.

'ತೆಪ್ಪದುತ್ಸವ ನಿನಗೆ ಏನು ಹಿತವೊ' ಎನ್ನುವ ಕೀರ್ತನೆಯಲ್ಲಿ ಹನುಮನ ಶೌರ್ಯವನು ವರ್ಣಿಸಿದೆ.

'ನಿಷ್ಟೆಯಿಂದ ನಿಂತ ಈ ಪುಟ್ಟ ಕಪಿಯ ನೋಡೆ' (ಕೀ.೧೧೦) ಎನ್ನುವುದು ಅಪರೂಪದ ರಚನೆ. ಹನುಮನ ಚರಿತ್ರೆಯನ್ನು ಹೇಳುತ್ತದೆ. ಪ್ರತಿ ಸಾಲಿನ ಕೊನೆಗೆ 'ಪುಟ್ಟ ಕಪಿಯ ನೋಡೆ' ಎಂದು ಬರುತ್ತದೆ. ಇದು ಮೂರ್ತಿ ಚಿಕ್ಕದಾದರೂ ಕೀರ್ತಿ ದೊಡ್ಡದು ಎಂಬ ನಾಣ್ಣುಡಿಯನ್ನು ನೆನಪಿಗೆ ತರುತ್ತದೆ. ೯ ನುಡಿಗಳಿದ್ದು ದ್ವಿಪದಿಯಲ್ಲಿದೆ. 'ಬಂದ ಬಂದ ಕದರೂರಿನಿಂದ' (ಕೀ.೧೧೫) ಎನ್ನುವ ಕೀರ್ತನೆ ಕದರೂರಿನಲ್ಲಿ ಮುದ್ದು ಮೋಹನ ಗುರುಗಳು ಹನುಮನನ್ನು ಕರಿಗಿರಿವಾಸದಲ್ಲಿ ಪ್ರತಿಷ್ಠಾಪಿಸಿದ ದಾಖಲೆ ಹೀಗಿದೆ: ಶಾಲಿವಾಹನ ಶಕವು ಸಾವಿರ/ಮೇಲೆ ಶತಎಂಟರವತ್ತೊಂದು/ ಕಾಲ ಪಾಲ್ಗುಣ ಕೃಷ್ಣ ಪಂಚಮಿ/ಓಲೈಸುವ ಪ್ರಮಾಧಿ ವತ್ಸರ/ಶೀಲ ಗುರುವಾಸರದಿ ಬುಧರ/ ಮೇಳದಲಿ ವೇದೋಕ್ತದಿಂದಲಿ/ಶೀಲ ಶ್ರೀಕೃಷ್ಣದಾಸ ತೀರ್ಥರು/ ಲೀಲೆಯಿಂದ ಪ್ರತಿಷ್ಠಾಪಿಸಲು/ ರಾಮದೂತ ಶ್ರೀಹನುಮ ಬಂದನು.

'ಮೂರು ತುಂಡಾದ ಹನುಮನ ನೋಡಿರೆ' (ಕೀ.೧೨೧) ಎನ್ನುವ ಕೀರ್ತನೆ ಮೊದಲಘಟ್ಟ ಹನುಮನನ್ನು ಕುರಿತದ್ದು. ಮೊದಲಘಟ್ಟ ತುಂಗಾ ತೀರದ ಗ್ರಾಮ. ಅಲ್ಲಿ ಪ್ರಾಣದೇವರು ವ್ಯಾಸರಿಂದ ಪುನಃ ಪ್ರತಿಷ್ಠಾಪಿತವಾದ ಕೀರ್ತಿಯಿದೆ. ಮೊದಲು ವ್ಯಾಸರಾಜರೆ ಪ್ರತಿಷ್ಠಾಪಿಸಿದ್ದರು, ಕಿಡಿಗೇಡಿಗಳಾರೊ ಅದನ್ನು ಮೂರು ತುಂಡು ಮಾಡಿ ತುಂಗಾ ನದಿಯಲ್ಲಿ ಹಾಕುತ್ತಾರೆ. ವ್ಯಾಸರಾಜರು ಅದನ್ನು ಹುಡುಕಿ ತರಿಸಿ ಪುನಃ ಪ್ರತಿಷ್ಠಾಪಿಸಿದ ಮೇಲೆ ಏಳು ದಿನಗಳಲ್ಲಿ ಅದು ಏಕಶಿಲೆಯಂತೆ ಕೂಡಿಕೊಂಡಿತು. ಮೊದಲಘಟ್ಟಿಯ ಈ ಹನುಮನ ಕಥೆಯನ್ನು ಕೀರ್ತನೆಯು ಹೇಳುತ್ತದೆ.

'ಯಂತ್ರೋದ್ಧಾರ ಪಾಲಿಸೊ' (ಕೀ.೧೨೨) ಎನ್ನುವ ಕೀರ್ತನೆ ಹಂಪೆಯ ಯಂತ್ರೋದ್ಧಾರಕ ಹನುಮನನ್ನು ಕುರಿತಾದದ್ದು. ವಿಜಯನಗರದ ಅರಸರ ಗುರು ವ್ಯಾಸರಾಜರು ಪ್ರತಿಷ್ಠಾಪಿಸಿದ ೭೩೨ ಪ್ರಾಣದೇವರ ಮೂರ್ತಿಗಳಲ್ಲಿ ಹಂಪಿಯ ಯಂತ್ರೋದ್ಧಾರ ಹನುಮನೂ ಒಬ್ಬ. ತುಂಗಾ ನದಿಯ ಚಕ್ರತೀರ್ಥದ ದಡದಲ್ಲಿರುವ ಮಾತಂಗ ಬೆಟ್ಟದ ಮೇಲೆ ವ್ಯಾಸರು ಇದನ್ನು ಪ್ರತಿಷ್ಠಾಪಿಸಿದರು. ರಾಮನು ಹನುಮನಿಗೆ ಮೊದಲು ದರ್ಶನ ನೀಡಿದ ಸ್ಥಳವಿದು. ಇಲ್ಲಿ ವ್ಯಾಸರು ಅಂಗಾರಕದಿಂದ ಹನುಮಂತನ ಆಕಾರ ಬರೆದರು. ಅದು ಹಾರಿ ಹೋಯಿತು. ಮತ್ತೆ ಬರೆದರು. ಮತ್ತೆ ಹಾರಿತು. ಹೀಗೆ ಹನ್ನೆರಡು ಬಾರಿ ಆದಮೇಲೆ ಯಂತ್ರದಿಂದ ದಿಗ್ಬಂಧನ ಮಾಡಲು ಮೂರ್ತಿ ರೂಪ ತಳೆದು ನಿಂತಿತು. ಹಾರಿದ ಹನ್ನೆರಡು ಕಪಿಗಳನ್ನು ಮಾಲೆ ಮಾಡಿ ಯೋಗಾಸನಾರೂಢ ಹನುಮನಿಗೆ ಹಾರ ಹಾಕಿದರು ಎನ್ನುವ ಪ್ರತೀತಿ ಇದೆ. ಇದನ್ನೇ ಕೀರ್ತನೆಯು ಹೇಳುತ್ತದೆ. 'ಯಾಕೆ ದಯ ಬಾರದೊ ಕಾಂತೇಶ ಪ್ರಾಣೇಶ' ಎನ್ನುವ ಕೀರ್ತನೆಯು ಆತ್ಮನಿವೇದನಾ ಪದ್ಯ. 'ಅಂದು ಕನಸಿನಲ್ಲಿ ಶಿರದಲ್ಲಿ ಕರವಿಟ್ಟೆ/ಇಂದೆಲ್ಲಿ ಪೋಯಿತೋ ಆ ಕರುಣ/ಮೀಸಲ ದಾಸ್ಯರೆ ಆಶೆ ಮಾಡಿದೆ/ನೆಂದು ದೋಷವೆಣಿಸುವರೆ ಎನ್ನಲಿ ನೀನು' ಎಂದು ಹನುಮಲ್ಲಿ ಮೊರೆ ಹೋಗುವ ಪದ್ಯ. ಉಳಿದೆಲ್ಲ ಪದ್ಯಗಳು ಹನುಮನ ಶೌರ್ಯವನ್ನು ಹೇಳುತ್ತವೆ. ಅವತಾರತ್ರಯರ ಅದರಲ್ಲೂ ಹನುಮನ ಕುರಿತಾದ ವೈವಿಧ್ಯಮಯ ರಚನೆಯನ್ನು ಅಂಬಾಬಾಯಿಯವರ ಕೀರ್ತನೆಯಲ್ಲಿ ಕಾಣಬಹುದು.

ಕಳಸದ ಸುಂದರಮ್ಮನವರ ರಚನೆಗಳಲ್ಲಿ ಅವತಾರತ್ರಯರ ಮೂರು ಕೀರ್ತನೆಗಳು ಕಂಡುಬರುತ್ತವೆ. ಓರಾಬಾಯಿ ಲಕ್ಷ್ಮಿದೇವಮ್ಮನವರ ಕೃತಿಗಳಲ್ಲಿ ಹನುಮ ಭೀಮ ಮಧ್ವರ ಸ್ತುತಿಗಳು ಪ್ರತ್ಯೇಕವಾಗಿವೆ. ಈ ಕೀರ್ತನೆಗಳು ವಸ್ತು ಮತ್ತು ವೈವಿಧ್ಯತೆಯ ದೃಷ್ಟಿಯಿಂದಲೂ ಭಿನ್ನವಾದದ್ದಲ್ಲ.

ಗಲಗಲಿ ಅವ್ವನವರು ಅವತಾರತ್ರಯರನ್ನು ಸ್ತುತಿಸಿಲ್ಲ. ಗಿರಿಯಮ್ಮನವರ ಕೀರ್ತನೆಗಳಲ್ಲಿ ವೈವಿಧ್ಯತೆ ಇಲ್ಲ. ಭೀಮವವ್ವನವರಿಂದ ಅಂಬಾಬಾಯಿಯವರೆಗೆ ವಸ್ತು ಮತ್ತು ರಚನೆಯಲ್ಲಿ ಅವತಾರತ್ರಯರ ಸ್ತುತಿಗಳು ವೈವಿಧ್ಯಮಯವಾಗಿವೆ.

**೪.೫ ನಿಂದಾ ಸ್ತುತಿಗಳು**

ವೈವಿಧ್ಯಮಯ ದಾಸಸಾಹಿತ್ಯ ರಚನೆಯಲ್ಲಿ ನಿಂದಾಸ್ತುತಿಗೆ ಒಂದು ಸ್ಥಾನವಿದೆ. ಇಲ್ಲಿ ಬರುವ ಪಾತ್ರಗಳು ತನ್ನನ್ನೇ ತಾನು ನಿಂದಿಸಿಕೊಂಡು ದೈವವನ್ನು ನಿಂದಿಸುವುದು ಸಾಮಾನ್ಯ. ಆದರೆ ಇವುಗಳ ಹಿಂದೆ ಭಕ್ತಿ ಬಿಟ್ಟು ಬೇರೊಂದಿರದು. ಭಗವಂತನೆಡೆಗಿನ ಸಲುಗೆಯನ್ನು ಈ ನಿಂದಾಸ್ತುತಿಗಳಲ್ಲಿ ಕಾಣಬಹುದು. ಮನುಷ್ಯರ ನಡುವಿನ ಸಂಬಂಧಗಳಂತೆ ಪುರಾಣ ಪಾತ್ರಗಳ ನಡುವೆ, ಕಲ್ಪಿಸಿಕೊಂಡಿರುವ ಸಂಬಂಧಗಳು, ನಡವಳಿಕೆಗಳು, ನಿಂದಾಸ್ತುತಿಗಳ ಹುಟ್ಟಿಗೆ ಕಾರಣವಾಗಿವೆ. ವೈವಿಧ್ಯಮಯವಾದ ನಿಂದಾಸ್ತುತಿಗಳು ಮಹಿಳಾಕೀರ್ತನಕಾರರ ಕೀರ್ತನಗಳಲ್ಲಿಯೂ ಕಂಡುಬರುತ್ತವೆ. ಇದು ಸಲಿಗೆಯ ಪ್ರಕಟಮಾರ್ಗವಾಗಿಯೂ ಕಂಡುಬರುವುದುಂಟು.

ಗಲಗಲಿ ಅವ್ವನವರ ಮುಯ್ಯದ ಹಾಡಿನಲ್ಲಿ (ಕೀ.೮೩) ಬರುವ ನಿಂದಾ ಸ್ತುತಿಯಲ್ಲಿ ಅರ್ಜುನನು ಶ್ರೀಕೃಷ್ಣನನ್ನು ನಿಂದಿಸುತ್ತಾನೆ. ಕೃಷ್ಣ ಸಾಕು ನೀ ನಮ್ಮ ಸರಿಯೇನೊ/ಬಲಿಯ ಮನೆಯ ಬಾಗಿಲ ಕಾಯ್ದು ಬದುಕಿದಿ/ಚಿಕ್ಕಂದಿನಾರಭ್ಯ ವತ್ಸಗಳನೆ ಕಾಯ್ದು ತುಚ್ಛನಾಗಿದ್ಯೊ ಜನರೊಳು/ರುಕ್ಮಿಣಿಯ ಕೂಡಿ ಹೆಚ್ಚಿನವನೆಂದು ಹೆಸರಾದಿಯೊ/ಜನಸಿದಾಕ್ಷಣದಲ್ಲಿ ಜನನಿ ಜನಕರನಗಲಿಸಿದಿ/ದನಗಳ ಕಾಯ್ದ್ಯೋ/ಒಡಲಿಗಿಲ್ಲದೆ ಹೋಗಿ ತುಡುಗತನವ ಮಾಡಿ/ ಗಡಿಗಿ ಸಂದಿಲಿ ಅಡಗಿದೆಯೊ ಕೃಷ್ಣ/ ನಿನಗೆ ಬಡಿವಾರ ಬಂದ ಬಗೆ ಹೇಳೊ/ಸತ್ಯಭಾಮೆ ನಿನ್ನ ಹೊಸ್ತಿಲ ಹೊಗಲಿಕ್ಕೆ ಅತ್ಯಂತ ಪದವಿ ಒದಗಿತು ಕೃಷ್ಣ/ಹೆಂಡಿರ ಪುಣ್ಯದಿಂದ ಕಂಡೆಯಾ ಈ ಭಾಗ್ಯ- ಎಂದು ನಿಂದಿಸಿದರೆ, ಇನ್ನೊಂದು ಕೀರ್ತನೆಯಲ್ಲಿ ಕೃಷ್ಣನು ಅರ್ಜುನನ್ನು ಕುರಿತು (ಕೀ.೮೬) ಸಾಕೋ ಪಾರ್ಥ ನಿನಗ್ಯಾಕೊ ಬಡಿವಾರ/ ನೀನು ನಿಮ್ಮವಳು ತಿರುತಿರುಗಿ ಮಾರಿದರೆ/ಕಾಣಿಯ ಬೆಲೆಯ ಹೋಲಲಾರೆ/ನಿಲ್ಲದೆ ವೈರಿಗಳು ನಿನ ಮ್ಯಾಲೆ ಬಂದರೆ ಬಿಲ್ಲು ಕೆಳಗಿಟ್ಟು ಬೇಡಿಕೊಂಡೆಲೋ ಪಾರ್ಥ/ನಿನ್ನ ಪುಣ್ಯವ ಪಾರ್ಥ ಬಣ್ಣಸಲೊಶವಲ್ಲ/ಇನ್ನು ಸುಭದ್ರ ಒಲಿಯಲು ಸುಖದಿಂದ/ ಮಾನ್ಯವಾಗಿದ್ಯೊ ಜನರೊಳು/ಕನ್ಯೆ ಸುಭದ್ರ ನಿನ್ನ ಮದುವ್ಯಾಗಿ/ಅನ್ನ ವಸ್ತ್ರದ ನೆಲೆಗಂಡ್ಯೊ/ಗಿಳಿಮಾತಿನ ಜಾಣ ಹೊಳೆವು ಎಷ್ಟೋಳಲ್ಯೊ ಬಳೆಯನಿಟ್ಟಿದ್ದು ಮರೆತೇನೊ/ಸುಭದ್ರ ತಿಳಿಯದೆ ನಿನ್ನ ಬೆರೆದಳೊ ಪಾರ್ಥ/ಹೆರಳು ಹಾಕಿಸಿಕೊಂಡು ತಿಳಿಯಲಿಲ್ಲವೊ ಬುದ್ದಿ ಇಳೆಯೊಳು ಇದು ಅಪವಾದ/ದನಗಾಹಿ ನೀನೆತ್ತ ವನಜಕುಸುಮಗಳೆತ್ತ ಕನಕ ಕಬ್ಬಿಣಕ್ಕೆ ಸರಿಯೇನೊ.

**ದಶಾವತಾರದಲ್ಲಿನ ನಿಂದಾಸ್ತುತಿಯೊಂದು ಹೀಗಿದೆ**

ನಾರುವ ಮೈಯವ ನೀರೊಳು ಅಡಗಿದ/ಹಂದಿ ಮೈಯವನೆ ಮಹಾ ಕೋಪಿ/ತಿರುದುಂಬೊ ಹಾರುವನ ಗೊಡವೆ ನಮಗ್ಯಾಕೆ/ಕೊಡಲಿಯ ಪಿಡಕೊಂಡ ಪಡೆದಮಾತೆಯ/ಕೊಂದೆ ಒಡಲಿಗಿಕ್ಕದಲೆ ಮಡದಿಯ/ಒಡಲಿಗಿಕ್ಕದಲೆ ಮಡದಿಯ ಕೊಂಡೊಯ್ದು/ಅಡವಿಗಟ್ಟಿದ ಮಹಾಮಹಿಮನೆ/ ಜಾರ ಚೋರನೆಂದು ಜಗದೊಳು ಹೆಸರಾದಿ ಅಪಾರವಾದ ವನಿತೆಯರ ಒಗೆತನಕೆ/ನೀರು ತಂದಿದ್ದ ಮಹಾಮಹಿಮನೆ/

ಮುಯ್ಯ ಹಿಂದಿರುಗಿಸಿದ ಹಾಡಿನಲ್ಲಿ ಕೃಷ್ಣನ ಲೀಲಾ ವಿನೋದಗಳನ್ನು ನಿಂದಾಸ್ತುತಿಗಳಲ್ಲಿ ಬಳಸಲಾಗಿದೆ (ಕೀ.೨೦೪). ಪುಟ್ಟ ಕೂಸೆಂದು ಸ್ತನ ಕೊಟ್ಟ ನಾರಿಯ ಕೊಂದೆ/ಇಷ್ಟು ಕರುಣೆ ನಿನಗಿಲ್ಲೊ ದಯಾ ಬುದ್ದಿ/ಕೆಟ್ಟು ಹೋಯಿತೇನೋ ಪ್ರಳಯದಿ/ಕೃಷ್ಣ ಕೃಷ್ಣಾ ಎನುತ ಬಿಟ್ಟಳು ಪ್ರಾಣವ/ದೃಷ್ಟಿಗೆ ಬೀಳೋದು ತಡವೇನೊ/ನಿನ್ನ ವ್ಯಾಪ್ತಿ ಕೆಟ್ಟು ಹೋಯಿತೇನೋ ಪ್ರಳಯದಿ/

ಪಾಂಡವರು ಮುಯ್ಯ ತಂದ ಕೃಷ್ಣನನ್ನು ಸಭೆಗೆ ಆಹ್ವಾನಿಸುವಾಗ ಪರಸ್ಪರರು ಕೃಷ್ಣನನ್ನು ನಿಂದಿಸುವ ಅಪರೂಪದ ನಿಂದಾಸ್ತುತಿ ಹೀಗಿದೆ (ಕೀ.೧೯೨). ನಿಲ್ಲಿಸಬೇಕು ಯಾದವರ ಹೊಲ್ಲ ಗುಣದವರ/ಗೊಲ್ಲರು ನಮ್ಮ ಸರಿಯಲ್ಲವೊ ಧರ್ಮರಾಯ/ಒಡೆಯ ಧರ್ಮನು ಹರಿಯ ಅಡಿಗೆರಗುವನೆಂದ/ನಡೆದು ಹೋಗಲು ರಾಯ ತಡೆಯಬೇಕೆಂದ ಭೀಮ/ಕಂಜನಾಭನ ಮನೆಯ ಎಂಜಲು ಬಳೆವವನ/ರಂಜಿಸಿ ಕರೆಯಬೇಡ ಅಂಜಿಕೆಯೇನು ಅವನ/ಪಾರ್ಥನು ರಾಯಗೆ ಪ್ರಾರ್ಥಿಸಿ ಕೇಳಿಕೊಂಡ/ಸಾರಥಿಯ ಕರೆಯೊದು ಕೀರ್ತಿ ಅಲ್ಲವೊ ರಾಯ/ನಕುಲನು ರಾಯಗೆ ಯುಕ್ತಿಲೆ ಹೇಳಿಕೊಂಡ/ಸಖುನಯ್ಯನ ಕುಶಲವು ಮುಖವ ಮಾಡಿದವನಲ್ಲೊ/ಬಹಳ ಮನ್ನಿಸಬೇಡ ಕೇಳಿಕೊಂಡ ಸಹದೇವ.

**ಸಂವಾದಿ ರೂಪದ ನಿಂದಾಸ್ತುತಿಯೊಂದು ಮುಯ್ಯ ಹಿಂದಿರುಗಿಸಿದ ಹಾಡಿನಲ್ಲಿದೆ (ಕೀ.೨೦೫). ಕೃಷ್ಣಾರ್ಜುನರ ಸಂವಾದವಿದು**

ಕೃಷ್ಣ ಇನ್ಯಾತರ ಶ್ರೇಷ್ಠನೆ/ಸ್ತನ ಕೊಟ್ಟ ನಾರಿಯ ಕೊಂದುಬಿಟ್ಟನೆ/ಅರ್ಜುನ ಯಾತರ ಭಂಟನೆ/ ನಿರ್ಲಜ್ಯದಿ ಧನುಷ್ಯ ಕೆಳಗಿಟ್ಟಾನೆ/ಏನೇನು ಧೈರ್ಯವಿಲ್ಲವೊ ಕೃಷ್ಣಗೆ/ಬಲು ಮೀನಿನಿಂತ ಚಂಚಲವೊ/ ಇಷ್ಟು ಎದೆಗಾರನಲ್ಲವೊ ಪಾರ್ಥ/ಯುದ್ಧ ಬಿಟ್ಟರೆ ನಗುವೊರಲ್ಲವೊ/ನಾರಿಯ ಒಬ್ಬಗೆ ಒಪ್ಪಿಸಿಕೊಟ್ಯೊ/ ನೀ ಊರುಕೇರಿ ಹಂಬಲ ಬಿಟ್ಯೊ ಕೃಷ್ಣ/ವೈರಾಗ್ಯವ ತೋರಿಕೊಂಡ್ಯಲ್ಲೊ/ನಾಗನಾರಿಯ ಕೂಡಕೊಂಡ್ಯಲ್ಲೊ ಪಾರ್ಥ/ದ್ವಂದ್ವಯುದ್ಧವ ಮಾಡಿದವನಲ್ಲವೊ/ಕುದುರೆ ಚೆಂದಾಗಿ ಏರಿ ಓಡಲು ಬಲ್ಯೋ ಕೃಷ್ಣ/ಕರೆದರೆ ಯುದ್ಧಕೆ ಹ್ಯಾಗೆಂದು ನೀನು/ತಿರುಗಿದೆ ತೀರ್ಥಯಾತ್ರೆಗಳೆಂದು ಅರ್ಜುನ.

ಅವ್ವನವರ ಮುಯ್ಯದ ಹಾಡುಗಳಲ್ಲಿ ನಿಂದಾಸ್ತುತಿಗಳ ಹಲವು ಮಾದರಿಗಳು ಕಂಡುಬರುತ್ತವೆ. ಶ್ರೀಕೃಷ್ಣನ ಲೀಲೆಗಳು ಮತ್ತು ವಿಷ್ಣುವಿನ ದಶಾವತಾರಗಳು ಮಾತ್ರವಲ್ಲದೆ ದ್ರೌಪದಿ, ಸತ್ಯಭಾಮ, ರುಕ್ಮಿಣಿ, ಭೀಮ, ಅರ್ಜುನ ಮುಂತಾದವರ ಜೀವನದಲ್ಲಿ ಬರುವ ಸೂಕ್ಷ್ಮ ಸಂದರ್ಭಗಳನ್ನು ಅವರ ವ್ಯಕ್ತಿತ್ವದಲ್ಲಿನ ದೋಷಗಳನ್ನು ಬಹಿರಂಗಗೊಳಿಸುತ್ತವೆ.

**ಹೆಳವನಕಟ್ಟೆ ಗಿರಿಯಮ್ಮನ ಈ ಪ್ರಾರ್ಥನೆಯು ದಶಾವತಾರದ ನಿಂದಾಸ್ತುತಿ (ಕೀ.೧).**

ಇಂಥಾವಗ್ಯಾ್ಂಗೆ ಮನಸೋತೆ ಬಲು/ಪಂಥವಾಡಿದ ಜಗನ್ಮಾತೆ/ಆವಾಗ ನಾರುವ ಮೈಯ ಬಿಚ್ಚಿ ತೋರಿ ನಲಿವ ಕಾಲು ಕೈಯ/ ಕೋರೆಯ ಮಸೆಯುತ ಕೊಸರಿಕೊಂಡಸುರನ/ ಕರುಳನು ಬಗೆದಂತ ಅದ್ಭುತ ಮಹಿಮಗೆ/ ಬಡ ಬ್ರಾಹಣನಾಗಿ ತಿರಿದ ತನ್ನ/ ಹಡೆದ ತಾಯಿಯ ಶಿರವರಿದ/ ಮಡದಿಗಾಗಿ ದೊಡ್ಡಡವಿಯೊಳ್ಮನೆಯ ಕಟ್ಟಿ/ ಬಿಡದೆ ಸ್ತ್ರೀಯರ ಗೋಕುಲದಲ್ಲಿ ಮೆರೆದ/ ಬತ್ತಲೆ ನಿಂತಿದ್ದನೀಗ ತೇಜಿ/ ಹತ್ತಿ ಮೆರೆವದೊಂದು ಯೋಗ. -ಸರಳ ವಾಕ್ಯಗಳಲ್ಲಿ ನಿಂದಾಸ್ತುತಿಯನ್ನು ಬರೆದಿರುವುದು ವಿಶೇಷವಾಗಿದೆ.

**ನಿಡಗುರಕಿ ಜೀವೂಬಾಯಿಯ ಕೀರ್ತನೆಯೊಂದರಲ್ಲಿ (ಕೀ.೩೬) ಕೃಷ್ಣನ ಮಹಿಮೆಗಳನ್ನು ನಿಂದಾಸ್ತುತಿಯಾಗಿ ವರ್ಣಿಸಿದೆ.** ಅಂಡಜವಾಹನ ಅಖಿಳ ಮಹಿಮನೆನೆ/ಪಾಂಡವರ ಮನೆಯ ಊಳಿಗ ಮಾಡಬಹುದೆ/ಚಂಡನಾಡುವ ನೆವದಿಂದ ಕಾಳಿಂಗನ/ಮಂಡೆಯ ತುಳಿದು ನಾಟ್ಯವಾಡಬಹುದೆ/ಗಂಡುಗಲಿ ಅರ್ಜುನನು ರಥಕೆ/ಬಂಡಿಬೋನವ ಮಾಡಬಹುದೆ/ಪುಂಡಲೀಕನು ಇಟ್ಟಿಗೆಯ ಮೇ/ಲ್ಪಾಂಡುರಂಗ ನಿಲಿಸಬಹುದೆ.

**ಹರಪನಹಳ್ಳಿ ಭೀಮವ್ವ ಬರೆದಿರುವ ಶಿವನ ನಿಂದಾಸ್ತುತಿಯನ್ನೊಳಗೊಂಡ ಆಯ್ದ ನುಡಿಗಳು ಹೀಗಿವೆ.**

ಮೂರು ನೇತ್ರದಿ ನೋಡುತಿರುವವನೆ/ತನ್ನ ಬೂದಿ ಬಳಿದ ಮೈಯಲ್ಲೊ್ಳೆವೋನೆ/ದಾವ ಚಲುವ ರುದ್ರ ಕಾಣೆನೆ ಏನಂತೊಲಿದೆ/ಹಾವಿನ ಸರ ಹಾರಗೊಳಿತೇನೆ/ರುಂಡಮಾಲೆಯ ಕಂಡಂಜಿಕಿಲ್ಲವೇನೆ/ದಕ್ಷನ್ಯಜ್ಞವ ಧ್ವಂಸ ಮಾಡಿದವನಿಂತ ಮುಪ್ಪಿನವನ ಮತ್ತೆ ಕೂಡಿದೆ/ಸುತನ ಶಿರವ ಛೇದನ ಮಾಡಿ ಮಾಲೆ ಜಪಿಸಿದರಿನ್ನೆಂತ ಫಲವೇನೆ/ನಿರುತ ಸ್ಮಶಾನ ಮಂದಿರವೇನೆ/ ಭೂತ ಗಣ ನಿಮ್ಮ ಬಂಧು ಬಳಗವೇನೆ/ಉತ್ತಮ ರಥಕೆ ಗತಿಯಿಲ್ಲದೆ ಮುದಿಯೆತ್ತನೇರುವೋದು ಸಲ್ಲದೆ/ಹೋತನ ಶಿರ ಮಾವಗಿಟ್ಟನೆ/. ಕೃಷ್ಣಭಕ್ತರಾದ ಭೀಮವ್ವನವರು ಶಿವನನ್ನೂ ಸ್ಮರಿಸಿರುವುದನ್ನು ಇಲ್ಲಿ ಕಾಣಬಹುದು. ಹರಿ ಹರ ಬೇಧವಿಲ್ಲದೆ ಕೀರ್ತನೆಗಳು ರಚಿತವಾಗಿವೆ. ಶಿವನ ಕುರಿತಾದ ಅಪರೂಪದ ನಿಂದಾಸ್ತುತಿಯಿದು.

ನಿಂದಾ ಸ್ತುತಿಗಳು ಎನ್ನುವ ಮಾತಿನಲ್ಲೇ ಅದರ ಅರ್ಥವೂ ಅಡಗಿದೆ. ಇದು ನಿಂದಿಸುವುದಕ್ಕೆ ನಿಂದೆಯಲ್ಲ ಎಂಬುದನ್ನು ಮುಖ್ಯವಾಗಿ ಗಮನಿಸಬೇಕಿದೆ. ಇದು ಬೈಯ್ಯುವುದಲ್ಲ. ಸ್ತುತಿಸುವುದು. ದೇವರನ್ನು ನಿಂದಿಸಿ ಒಲಿಸಿಕೊಳ್ಳುವ ಒಂದು ವಿಧ. ವಿರೋಧವಲ್ಲ. ಪ್ರೀತಿ-ಸಲಿಗೆಯಿಂದ ಇವು ಹುಟ್ಟುತ್ತದೆ. ಜನಪದರಲ್ಲಿ ಮಾರಮ್ಮನಂಥ ದೇವತೆಗಳನ್ನು ವಿಪರೀತವಾಗಿ 'ಅಸಾದಿ'ಯು ನಿಂದಿಸುತ್ತಾನೆ. ತೀರಾ ಕೆಟ್ಟ ಮಾತುಗಳೂ ಬರುತ್ತವೆ. ಮುನಿಸಿಕೊಳ್ಳುವಂತೆ ಮಾಡಿ ಒಲಿಸಿಕೊಳ್ಳುವುದು ಇಲ್ಲಿಯ ಉದ್ದೇಶ. ಪುರಂದರದಾಸರು 'ಯಾರು ಬದುಕಿದರಯ್ಯ ಹರಿ ನಿನ್ನ ನಂಬಿ......' ಎಂದರೆ ಭದ್ರಾಚಲ ರಾಮದಾಸರು-'ಯಾರಪ್ಪನ ಒಡವೆಯೆಂದು....'ಎಂದು ರಾಮನನ್ನು ಕೇಳುತ್ತಾರೆ. ಇಂಥವು ಭಕ್ತಿಯ ಮೂಲಕವೇ ಪ್ರಕಟಗೊಳ್ಳುತ್ತವೆ. ಹಾಗಾಗಿಯೆ ನಿಂದಾಸ್ತುತಿಗಳು ಜನಪ್ರಿಯವಾಗಿವೆ.

### ೪.೬ ಲಾಲಿ ಹಾಡುಗಳು

ಸಾಂಪ್ರದಾಯಿಕ ರಚನೆಗಳಲ್ಲಿ ಲಾಲಿಹಾಡಿನದು ವಿಶೇಷ ಸ್ಥಾನ. ಮಕ್ಕಳು ಮನೆಯ ದೀಪ. ಸಂತಾನಕ್ಕಾಗಿ ದಂಪತಿಗಳು ಪಡುವ ಪಾಡು ಹೇಳ ತೀರದು. 'ಮಕ್ಕಳಿಲ್ಲದವರಿಗೆ ಮೋಕ್ಷವಿಲ್ಲ'

ಎನ್ನುವ ನಂಬಿಕೆ ಮನೆಮಾತಾಗಿದೆ. ಮಕ್ಕಳನ್ನು ಪಡೆದವರು 'ಹೆತ್ತವರಿಗೆ ಹೆಗ್ಗಣ ಮುದ್ದು' ಎನ್ನುವಂತೆ ಮುದ್ದಿಸುತ್ತಾರೆ. ಮಗುವಿನ ದೋಷವು ಗೌಣವಾಗುತ್ತದೆ.

ನಮ್ಮ ಜನಪದರು 'ಕೂಸು ಇದ್ದ ಮನೆಗೆ ಬೀಸಣಿಗೆ ಯಾತಾಕ, ಕೂಸು ಕಂದಯ್ಯಾ ಒಳಹೊರಗ ಆಡಿದರಾ ಬೀಸಣಿಕೆ ಗಾಳಿ ಸುಳಿದಾವ' ಎನ್ನುತ್ತಾರೆ. ಇಂಥ ಮಕ್ಕಳು ಹೆತ್ತವರಿಗೆ ಮಾತ್ರವಲ್ಲ ಎಲ್ಲರಿಗೂ ಕಣ್ಣಿಗೆ ಹಬ್ಬವನ್ನೇ ಉಂಟುಮಾಡುತ್ತಾರೆ.

ಲಾಲಿಹಾಡಿನಲ್ಲೊಂದು ವಿಶೇಷವೆಂದರೆ ಅದು ಸಂಗೀತ ಮತ್ತು ಸಾಹಿತ್ಯ ಎರಡರಿಂದಲೂ ಸಮ್ಮಿಳಿತವಾದ್ದು. ಕೇಳಿ ಆನಂದಿಸುವಂತಾದ್ದು. 'ಶಿಶುರ್ವೇತ್ತಿ ಪಶುರ್ವೇತ್ತಿ ವೇತ್ತಿಗಾನ ರಸಂ ಪಣಿಃ' ಆದ್ದರಿಂದ ಮಾತೆಯರು ಮಗುವಿಗಾಗಿ ಹಾಡುಕಟ್ಟಿ ಹೇಳುತ್ತಾರೆ.

ಲಾಲಿ ಹಾಡುಗಳನ್ನು 'ಜೋಗುಳದ ಹಾಡು'ಗಳೆಂದೂ ಕರೆಯುತ್ತಾರೆ. ಇಂಗ್ಲಿಷ್‌ನಲ್ಲಿ ಜೋಗುಳದ ಹಾಡಿಗೆ Lullaby ಎನ್ನುತ್ತಾರೆ. Theresa C. Breakely ಯು 'A type of song sung by mothers and nurses the world over to coax their babies to sleep, a cradle song (Fr Berceuse, Ger.Wiegenlied, Gr. Nannari Smata, L.Leres neniae Etc.). the simplest form merely a humming or a repetition of monotonous and soothing sounds, often accompanied by a gentle rocking of the child in the arms or in its bed or carrier, is almost too slight to be called a song and is heard even among people who otherwise show little musical development'[1] ಎನ್ನುತ್ತಾರೆ.

ಅಮ್ಮ ಮಡಿಲಲ್ಲಿ ಮಗುವನ್ನು ಮಲಗಿಸುವಾಗ ಮೆಲ್ಲಗೆ ಬೆನ್ನಮೇಲೆ ತಟ್ಟುತ್ತಾ ಹೇಳುವ ಹಾಡು ಜೋಲಿಗೆ ಹಾಕಿ ತೂಗುವಾಗ ಹಾಡುವ ಹಾಡು. ಜೋಜೋ ಎನ್ನುವ ಶಬ್ದಕ್ಕಿಂತ ಲಾಲಿ ಎನ್ನುವ ಶಬ್ದ ಮೃದುವಾಗಿಯೂ ಸ್ವರ ಮಾಧುರ್ಯದಿಂದ ಕೂಡಿದ್ದಾಗಿರುತ್ತದೆ. ಇಂಗ್ಲೀಷ್ ಪದದಲ್ಲಿಯೂ (Lullaby) ಲಾಲಿ ಕೇಳಿಸುತ್ತದೆ. ಹಾಲಿಗೆ ಕಲಭಾಷೆ (ಬಾಲಭಾಷೆ)ಯಲ್ಲಿ 'ಲಾಲ' ಎನ್ನುತ್ತಾರೆ. ಲಾಲವನ್ನು ಕುಡಿಸಿ ಅಮ್ಮ ಮಗುವನ್ನು ಮಲಗಿಸುವಾಗ ಹಾಡುವ ಹಾಡೇ ಲಾಲಿಹಾಡು. ಲಾಲ ಪದದಿಂದಲೇ ಲಾಲಿ ಹುಟ್ಟಿರಬೇಕು. ಇವು ಮಕ್ಕಳನ್ನು ಬರಿ ನಿದ್ದೆ ಮಾಡಿಸಲು ಹಾಡುವ ಹಾಡುಗಳಲ್ಲ. ಇವುಗಳಲ್ಲಿ ತಾಯಿಯ ಹಾರೈಕೆ ಇರುತ್ತದೆ. ತನ್ನ ಮಗು ಉತ್ತಮನಾಗಬೇಕೆಂಬ ಹಂಬಲವಿರುತ್ತದೆ. ರಾಷ್ಟ್ರಕವಿ ಕುವೆಂಪು ಅವರು 'ಜೋಗುಳದ ಹರಕೆಯಿದು ಮರೆಯದಿರು ಚಿನ್ನ' ಎಂದು ಹಾಡಿರುವುದರಲ್ಲಿ ಇದರ ವ್ಯಾಪ್ತಿಯನ್ನು ಗುರುತಿಸಬಹುದಾಗಿದೆ. ಇದನ್ನು ಗಮನಿಸಿದಾಗ ಲಾಲಿ–ಜೋಗುಳದ– ಹಾಡುಗಳು, ಹರಕೆ–ಹಾರೈಕೆಯ ಪ್ರೀತಿಯ ಹಾಡುಗಳಾಗಿವೆ ಎನ್ನಬಹುದು. ಮಕ್ಕಳು ನಿದ್ರೆಗೆ ಜಾರುತ್ತಿರುವಾಗ ಮನಸ್ಸು ಶಾಂತವಾಗಿರುತ್ತದೆ. ಮೊದಲ ಗುರುವೆನಿಸಿದ ತಾಯಿ ಲಾಲಿ ಮೂಲಕವೇ ಇಂಥ ಸಂದರ್ಭದಲ್ಲಿ ಆಧ್ಯಾತ್ಮ ಬೋಧಿಸುತ್ತಾಳೆ. ಕರ್ತವ್ಯಪರತೆ ಕಲಿಸುತ್ತಾಳೆ.

ಲಾಲಿ ಹಾಡುಗಳಲ್ಲಿ ಮಕ್ಕಳನ್ನು ಭಕ್ತರು ಭಗವಂತನೆಂದು ಭಾವಿಸಿ ಅವನ ಲೀಲೆಗಳನ್ನು ವರ್ಣಿಸುವ ಹಾಡುಗಳಿವೆ. ಮಹಿಳಾ ಕೀರ್ತನಕಾರರು ಬರೆದಿರುವ ಉತ್ಸವ ಗೀತೆಗಳಲ್ಲಿ, ಉಯ್ಯಾಲೋತ್ಸವದ ಸಾಂದರ್ಭಿಕ ಗೀತೆಗಳಲ್ಲಿ, ಕಥನರೂಪದಲ್ಲಿಯೂ ಲಾಲಿ ಹಾಡುಗಳುಂಟು.

ಹೆತ್ತ ತಾಯಿಗೆ ಕಂದನ ಮೇಲಿನ ಪ್ರೇಮ ಅಪಾರ. ಅವರಿಬ್ಬರ ಸಂಬಂಧ ಯಶೋದೆ-ಕೃಷ್ಣರ ಅನುಬಂಧ. ಪ್ರತಿ ತಾಯಿಯೂ ತನ್ನನ್ನು ಯಶೋದೆಗೂ ಮಗುವನ್ನು ಕೃಷ್ಣನಿಗೂ ಹೋಲಿಸಿಕೊಂಡು ಹಾಡಿ ಸುಖಿಸುತ್ತಾಳೆ. ಅನುಭೂತಿ ಹೊಂದುತ್ತಾಳೆ. ಎಲ್ಲ ಮಕ್ಕಳು ಕೃಷ್ಣರೇ ಆಗುತ್ತಾರೆ. ಕೃಷ್ಣನ ಬಾಲಲೀಲೆಗಳನು, ತುಂಟಾಟ, ಮುದ್ದು ಮಾತುಗಳು ಆಕರ್ಷಣೀಯವಾಗಿರುವುದು ಇದಕ್ಕೆ ಕಾರಣ. ಮಹಿಳಾ ಕೀರ್ತನಕಾರರು ಭಾಗವತ ಸಂಪ್ರದಾಯವನ್ನು ಅನುಸರಿಸಿ ಹೆಚ್ಚಾಗಿ ಕೃಷ್ಣಭಕ್ತಿಯನ್ನು ಮೆರೆದಿರುವುದರಿಂದ ಕೃಷ್ಣನನ್ನು ವರ್ಣಿಸುವ ದಶಾವತಾರ ವರ್ಣಿಸುವ ಲಾಲಿ ಹಾಡುಗಳು ಕಂಡು ಬರುತ್ತವೆ. ದಾಸರ ಪ್ರಭಾವವನ್ನು ಅಲ್ಲಗೆಳೆಯುವಂತಿಲ್ಲ. ಇದರ ಜೊತೆಗೆ ಭರತ, ಮಹಾಲಕ್ಷ್ಮಿ, ಸರಸ್ವತಿ, ಪಾರ್ವತಿ ಎಂದೂ ಭಾವಿಸಿ ಹಾಡಿದ್ದಾರೆ.

ಮೊದಲ ಮಹಿಳಾ ಕೀರ್ತನಕಾರ್ತಿ ಗಲಗಲಿ ಅವ್ವನವರ 'ಜೋಗುಳದ ಹಾಡು' ಎಲ್ಲ ಮಹಿಳಾ ಹರಿದಾಸರ ಕೀರ್ತನೆಗಳಿಗಿಂಲೂ ದೀರ್ಘವಾದದ್ದು ಮತ್ತು ಸಾಂಪ್ರದಾಯಕ ವಿಧಿಗಳೆಲ್ಲದರ ವರ್ಣನೆ ಇಷ್ಟು ಸ್ಪಷ್ಟವಾಗಿ ವಿಧಿವತ್ತಾಗಿ ಮತ್ತಾರ ಜೋಗುಳದ ಹಾಡುಗಳಲ್ಲೂ ಕಂಡುಬರುವುದಿಲ್ಲ. ಈ ಹಾಡಿನ ಕೊನೆಯ ನುಡಿಯಲ್ಲಿ 'ತಂದೆ ರಾಮೇಶ್ವಂಗೆ ರಕ್ಷೆಯನ್ನಿಟ್ಟು ಆನಂದಪಟ್ಟರು ಗೋಕುಲದವರು ಜೋಜೋ' ಎಂದು ಕೊನೆಗೊಳ್ಳುವುದರಿಂದ ಇದು ಅವ್ವನವರ ಪದ್ಯವೆಂದೇ ಪರಿಗಣಿಸಲಾಗಿದೆ. ೫೮ ನುಡಿಗಳನ್ನು ಒಳಗೊಂಡಿದ್ದು ಪ್ರತಿ ನುಡಿಯು ೪ ಸಾಲುಗಳಿಂದ ಕೂಡಿದ ಅತ್ಯಂತ ಸರಳ ಮಾತಿನ ಸುಲಭ ಧಾಟಿಯಲ್ಲಿ ನಿರೂಪಿತವಾಗಿದೆ. ಮಗು ಕೃಷ್ಣನನ್ನು ವಿಧಿವತ್ತಾಗಿ ತೊಟ್ಟಿಲಲ್ಲಿ ಮಲಗಿಸಿ ಜೋಗುಳ ಹಾಡುವ ಪ್ರಸ್ತಾಪವಿದೆ. ಸೆರೆಯಲ್ಲಿ ಜನಿಸಿದ ಕೃಷ್ಣನನ್ನು ವಸುದೇವನು ಕಂಸನ ಭಯದಿಂದ ಎತ್ತಿಕೊಂಡು ಹೋಗುತ್ತಾನೆ. ಗೋಕುಲದ ಯಶೋಧೆಯ ಬಳಿಯಲ್ಲಿಟ್ಟು ಯಶೋದೆಯ ಮಡಿಲಲ್ಲಿದ್ದ ಹೆಣ್ಣು ಕೂಸನ್ನು ಒಯ್ದು ದೇವಕಿಯ ಬದಿಯಲ್ಲಿಟ್ಟನೆಂಬುವುದರಿಂದ ಕೀರ್ತನೆ ಆರಂಭಗೊಳ್ಳುತ್ತದೆ. ಕ್ರಮವಾಗಿ ಮಗುವಿಗೆ ಜಾತಕರ್ಮ ಮಾಡಿ, ತೊಟ್ಟಿಲಿಡುವ ಶಾಸ್ತ್ರವನ್ನು ಹಂತಹಂತವಾಗಿ ವರ್ಣಿಸಲಾಗಿದೆ. ಪ್ರತಿ ನುಡಿಯು ಕೊನೆಯಲ್ಲಿ ಜೋಜೋ ಎನ್ನುವುದರಿಂದ ಕೊನೆಗೊಳ್ಳುತ್ತದೆ.

ಸಂಪ್ರದಾಯದಂತೆ ದೀರ್ಘ ಕೀರ್ತನೆಯು ಪ್ರಾರಂಭಕ್ಕೆ ಗಣಪತಿ, ಶಾರದೆಯ ಸ್ತುತಿಯಾಗಿದೆ. ನಂದಗೋಪನ ಕಂದನ 'ನಾಬಿನಾಲ ಭೇದಿಸುವ' ಶಾಸ್ತ್ರಿದಿಂದ ಜಾತಕರ್ಮ, ಬಾಣಂತಿಸುಖ ಹತ್ತು-ಹನ್ನೊಂದನೇ ದಿನದ ಶಾಸ್ತ್ರ, ಯಜ್ಞ-ನಾಮಕರಣ ತೊಟ್ಟಿಲಿಗೆ ಹಾಕುವ ಶಾಸ್ತ್ರ, ಆರತಿ, ಗುಂಡಪ್ಪನ ಶಾಸ್ತ್ರ, ಮಗುತೂಗುವ ನೆವದಲ್ಲಿ ದಶಾವತಾರದ ವರ್ಣನೆ, ಕೃಷ್ಣನಿಗಿರುವ ಹೆಸರುಗಳನ್ನು ಇಲ್ಲಿ ಪ್ರಸ್ತಾಪಿಸಲಾಗಿದೆ. ಮಧ್ವ ಸಂಪ್ರದಾಯವೆನ್ನಬಹುದಾದ 'ಯತಿಗಳಂತರ್ಯಾಮಿ ಮಧ್ವಮುನಿರಾಯ' ಎಂದು ಸ್ಮರಿಸಲಾಗಿದೆ.

ಲವಕುಶರ ಕಾಳಗದ ವಸ್ತುವನ್ನು ಹೊಂದಿರುವ ಹೆಳವನಕಟ್ಟೆ ಗಿರಿಯಮ್ಮನ 'ಲವಕುಶನ ಹಾಡು' ಎನ್ನುವ ದೀರ್ಘಕೀರ್ತನೆಯಲ್ಲಿ ಲವಕುಶರ ಜನನ, ಜಾತಕರ್ಮ, ಪುರುಡು ಸಂಪ್ರದಾಯಗಳನ್ನೆಲ್ಲಾ ಪ್ರಸ್ತಾಪಿಸುವ ಸಂದರ್ಭದಲ್ಲೂ ಸೀತೆ ಜೋಗುಳದ ಹಾಡಿನ ಪ್ರಸ್ತಾಪವಿಲ್ಲ. 'ತಂದೆಯ ತೋಳು ತೊಡೆಯ ಮೇಲೆ ಆಡದೆ ಕಂದರಿನ್ಯಾರಿಗೆ ಮುದ್ದೆ' ಎನ್ನುವ ಸೀತೆಯ ಮನವನ್ನೂ ಮಾಯೆ ಸಾಗರದಂತೆ ಕವಿಯುತ್ತದೆ. ಸಾಂದರ್ಭಿಕವಾಗಿದ್ದರೂ ಜೋಗುಳದ ಪ್ರಸ್ತಾಪವಾಗಿಲ್ಲ. ತಟ್ಟನೆ 'ಜನಕರಾಯನ ಮಗಳು ಬನಕೆ ತೊಟ್ಟಿಲ ಕಟ್ಟಿ' ಎನ್ನುವ ಜನಪದರ ಹಾಡು ನೆನಪಾಗಿ ಕಾಡದಿರುವುದಿಲ್ಲ.

ಉದ್ಧಾಳಿಕನ ಕತೆಯಲ್ಲೂ ಉದ್ದಾಳಿಕನಿಗೆ ತಾಯಿಯಿಲ್ಲದ ತನ್ನ ಮಗುವನ್ನು ಸಲಹುವ ಪ್ರಸಂಗ ಬರುತ್ತದೆ. 'ಕಟ್ಟಿದ ಪರ್ಣಶಾಲೆಯಲಿ ಕಂದಗೆ ಕೃಷ್ಣಾಜಿನದ ತೊಟ್ಟಿಲನು/ಎತ್ತಿಕೊಂಡು ಹೋಗಿ ಮಲಗಿಸಿ ಹೆಸರನು/ ಇಟ್ಟನು ನಾಶಿಕೇತೆನುತ ಅತ್ತರೆ ಜೇನುತುಪ್ಪವ ತಂದು ಉಣಿಸುವ ತೊಟ್ಟಲು ಹಿಡಿದು ತೂಗುವನು ಎಂದು ನೇರವಾಗಿ ತೊಟ್ಟಿಲ ಪ್ರಸ್ತಾಪ ಬಂದು ಮರೆಯಾಗುತ್ತದೆ. ಉಂಗು ಉಕ್ಕುಯೆಂಬ ಸುತನ ಲಾವಣ್ಯವನ್ನು ಕಂಡು ಹಿಗ್ಗುತ್ತಾನೆ, ಕುಳ್ಳಿರಿಸೊಮ್ಮೆ ಅಲ್ಲಲ್ಲೆ ಸಾಗಿಸುತ್ತಾನೆ, ನಿಲ್ಲಿರಿಸೊಮ್ಮೆ ನೋಡುತ್ತಾನೆ, ಮೆಲ್ಲನೆ ತೊಡಲ್ನುಡಿಗಳ ಕೇಳಿ ಹಿಗ್ಗುವ ಗಲ್ಲಕೆ ಮುತ್ತನೀಡುತ್ತಾನೆಂದು ತಾಯ್ತನವನ್ನು ತಂದೆ ಅನುಭವಿಸುವ ಚಿತ್ರಣವನ್ನು ಕಣ್ಣಿಗೆ ಕಟ್ಟುವಂತೆ ನೀಡಿದರೂ ಪ್ರಾಸಂಗಿಕವಾಗಿ ಎಲ್ಲಿಯೂ ಜೋಗುಳದ ಪ್ರಸ್ತಾಪವಿಲ್ಲದಿರುವುದು ಆಶ್ಚರ್ಯ ತರುತ್ತದೆ.

ಉದ್ಧಾಳಿಕನು ಪುರುಷನಾದ್ದರಿಂದ ಜೋಗುಳದ ಹಾಡಿನ ಪ್ರಸ್ತಾಪವನ್ನು ತಂದಿಲ್ಲ ಎಂದುಕೊಳ್ಳಬಹುದು. ಆದರೆ ಚಂದ್ರಹಾಸನ ಕಥೆಯಲ್ಲಿ, ಚಂದ್ರಹಾಸನನ್ನು ಸಾಕಿರುವವಳು ದಾಸಿ. ಆಕೆ, 'ದೇಶಾಧಿಪತಿಯ ಗರ್ಭದಿ ಬಂದು ನಿನಗೀಗ ಹಾಸುವ ವಸ್ತ್ರಗಳಿಲ್ಲ ಬೀಸಿ ತೂಗುವರೆ ತೊಟ್ಟಿಲು ಇಲ್ಲ' ಎನುತಲಿ ಬೇಸತ್ತು ಅಳಲುವಳು. ಆಗಲೂ ಜೋಗುಳದ ಪ್ರಸ್ತಾಪವಿಲ್ಲ.

ಗಿರಿಯಮ್ಮನ ಇನ್ಯಾವ ಕೃತಿಗಳ ವಸ್ತುವಿನಲ್ಲಿ ಜೋಗುಳದ ಪ್ರಸ್ತಾಪಕ್ಕೆ ಅವಕಾಶವಿಲ್ಲ. ಬಾಲಲೀಲೆಗಳನ್ನು ಶಬ್ದ ಚಿತ್ರಗಳಾಗಿ ಕಟ್ಟಿಕೊಡುವ ಗಿರಿಯಮ್ಮ ಜೋಗುಳದ ಹಾಡಿನ ಸವಿಯುಣುವ ಭಾಗ್ಯದಿಂದ ಓದುಗರು ವಂಚಿತರಾದರೆನಿಸುತ್ತದೆ.

ಗಿರಿಯಮ್ಮನ ಪ್ರತಿಭೆ 'ಚಿಪ್ಪಿನೊಳಗೆ ಮುತ್ತೊಡೆದಂತೆ' ಸಹಜವಾದದ್ದು. ಹಾಗಾಗಿ ಗಿರಿಯಮ್ಮನ ಗಮನ ಕಥೆಯ ಮುಖ್ಯಯ ಗುರಿಯ ಕಡೆಗೆ ಕೇಂದ್ರೀಕೃತವಾಗಿದ್ದು, ವೇಗವು ಅನಿವಾರ್ಯವಾಗಿ ಅದು ಅಷ್ಟು ಮುಖ್ಯವಲ್ಲವೆಂದು ಆಕೆಗೆ ಕಂಡಿರಬೇಕೆಂದು ತೀರ್ಮಾನಕ್ಕೆ ಬರಬಹುದು. ಲಭ್ಯವಿರುವ ಬಿಡಿ ಕೀರ್ತನೆಗಳಲ್ಲೂ, ಉತ್ಸವಗೀತೆಗಳಲ್ಲೂ ಜೋಗುಳದ ಹಾಡುಗಳ ಪ್ರಸ್ತಾಪ ಇಲ್ಲದಿರುವುದು ಆಶ್ಚರ್ಯ ತರುತ್ತದೆ.

ಹರಪನಹಳ್ಳಿ ಭೀಮವ್ವನವರ ಕೀರ್ತನೆಗಳಲ್ಲಿ 'ಲಾಲಿ ರಕ್ಕಸವೈರಿ ನಿನ್ನ ಪಾದ ಸೇವೆಯಿಂದಲಿ, ಸುಖಿಸೋಳೋ ಲಕ್ಷ್ಮಿಲೋಲ ಪಾಡಿ ತೂಗುವಳೋ [(ಕೀ.ಸಂ. ೧೧೯, ಪುಟ-೨೨೭, ಹ.ಭೀ.ಕೀ-ಸ.ದಾ.ಸಾ. ಸಂ.-೧೯] ಎನ್ನುವ ಲಾಲಿ ಹಾಡಿದೆ. ಆಲದೆಲೆಯ ಮೇಲಣ ಕೃಷ್ಣ, ಹದಿನಾಲ್ಕು

ಲೋಕ ತನ್ನುದರದಲ್ಲಿಡುವ ಪದುಮಾಕ್ಷ 'ಕೃಷ್ಣನಿಗೆ ಅಜಭವ ಸುರರು ಭಜಿಸಿ, ನಾರಿಯರೆಲ್ಲ ಬಿಡದೆ ಹರಿಯ ತೊಟ್ಟಲಿಗಿಟ್ಟು ತೂಗುತ್ತಾರೆ'.- ಇನ್ಯಾವ ದೀರ್ಘ ಹಾಗೂ ಬಿಡಿ ಕೀರ್ತನಗಳಲ್ಲೂ ಇದರ ಪ್ರಸ್ತಾಪವಾಗಿರುವುದಿಲ್ಲ.

ನಿಡುಗುರಕಿ ಜೀವೂಬಾಯಿಯವರ ಕೀರ್ತನೆಗಳಲ್ಲಿ (ಪುಟ ೧೫೨, ಕೀ. ೧೧೩-ನಿಡಗುರಕಿ ಜೀವೂಬಾಯಿಯವರ ಕೀರ್ತನೆಗಳು) ನಾರಾಯಣನ ನಾಮದಿಂದ ಪ್ರಾರಂಭವಾಗುವ ಪಲ್ಲವಿ-ಅನುಪಲ್ಲವಿಯಿದ್ದರೂ, 'ಮೂಕಾಂಬಿಕೆ ಮಲಗೆ ತೂಗುವೆ ಹರುಷದಲಿ' ಎನ್ನುತ್ತಾ ಮುಂದಿನ ನುಡಿಗಳಲ್ಲಿ ಮೂಕಾಂಬಿಕೆಯ ಸೌಂದರ್ಯದ ವರ್ಣನೆ ಇದೆ.

ಜೋಗುಳಪದದಲ್ಲಿ (ಕೀ. ೧೧೭) ಸೀತೆ ಕುರಿತಾದ ಜೋಗುಳದ ಹಾಡು ಸೀತೆಯ ಸೌಂದರ್ಯದ ವರ್ಣನೆಯಿದೆ.

ಈ ಎರಡೂ ಸಂದರ್ಭಗಳಲ್ಲಿ ಮೊದಲನೆಯ ಕೀರ್ತನೆ ಅನಿರುದ್ಧ ಪ್ರದ್ಯುಮ್ನ ಸಂಕರ್ಷಣ ಜೋಜೋ ವಾಸುದೇವ ನಾರಾಯಣ ಜೋಜೋ ಎಂದು ನಾರಾಯಣನ ನಾಮಸ್ಮರಣೆಯಿಂದ ಮೊದಲಾಗಿ ಮೂಕಾಂಬಿಕೆಯ ಸೌಂದರ್ಯವಣೆ ಇರುವುದು. ಎರಡನೇ ಕೀರ್ತನೆಯನ್ನು ಕೌಶಿಕ ಯಜ್ಞದ ಪಾಲನರಸಿಯ, ಕೌಸಲ್ಯಾದೇವಿಯ ಕಂದನ ಕಮಣೀಯ, ಎಂದೆಲ್ಲಾ ಪುರುಷನ ಮೂಲಕವೇ ಸ್ತ್ರೀಯನ್ನು ಗುರುತಿಸುವ ಸಾಂಪ್ರದಾಯಿಕ ಬರಹವನ್ನು ಕಾಣಬಹುದು.

ಕೀ-೧೨೩ ಪುಟ-೧೬೩, ಭಗವಂತನ ಜೋಗುಳ ಹಾಡುವ ನೆಪದಲ್ಲಿ ಗುರು ಉರುಗಾದ್ರಿ ವಿಠಲದಾಸವರ್ಯರನ್ನು ಅವರು ಗುರು, ತಂದೆ ಮುದ್ದುಮೋಹನ ವಿಠಲದಾಸರನ್ನು ನೆನೆಯುತ್ತಾಳೆ. ಅವರು ಅನೇಕ ಶಿಷ್ಯರಿಗೆ ಅಂಕಿತನೀಡಿದ್ದರು ಅಂಕಿತಗಳ ಪಟ್ಟಿಯೇ ಇದೆ. ಕೀ-೧೨೪ ಜೋಗುಳದ ನೆಪದಲ್ಲಿ ದಶಾವತಾರದ ವರ್ಣನೆ ಬರುತ್ತದೆ. ಕೀ-೧೫೧ರಲ್ಲಿ (೧೯೬) ಕೃಷ್ಣನ ಜೋಗುಳ ಲೀಲಾ ವಿನೋದಗಳನ್ನು ದ್ವಿಪದಿಯಲ್ಲಿ ವರ್ಣಿಸಲಾಗಿದೆ. 'ಸಾಧಾರಣ ವತ್ಸರದಲಿ ಸಲಹುವ' ಎಂದು ಹೇಳುವುದು ಪದ್ಯರಚನಾ ಕಾಲವನ್ನು ಸೂಚಿಸುತ್ತದೆ. ಶ್ರೀರಾಮಜನನ ಮತ್ತು ಸೀತಾಕಲ್ಯಾಣ ಎನ್ನುವ ದೀರ್ಘ ಕೀರ್ತನೆಯಲ್ಲಿ ರಾಮಜನನದ ಸಂದರ್ಭದಲ್ಲಿ ಶ್ರೀರಾಮ ಜೋಗುಳಪದ ತರಲಾಗಿದೆ.

ಒಟ್ಟಿನಲ್ಲಿ ಜೀವೂಬಾಯಿಯವರ ಜೋಗುಳದ ಹಾಡುಗಳ ವಸ್ತುಗಳು ರಚನಾಶೈಲಿಯಲ್ಲೂ, ವಸ್ತುವಿನಲ್ಲೂ ವೈವಿಧ್ಯತೆಯನ್ನು ಮರೆದಿವೆ.

ಅಂಬಾಬಾಯಿಯ ಕೀರ್ತನೆಗಳಲ್ಲಿ (ಪು-೩೩೨;ಕೀ-೨೫೬) ತಾವೇ ಪೂಜಿಸುತ್ತಿದ್ದ ಶ್ರೀಕೃಷ್ಣನ ಸ್ತುತಿಗಾಗಿ ಜೋಗುಳದ ಪದ ರಚಿಸಿದ್ದಾರೆ. ವಿಗ್ರಹಾರಾಧನೆ ಒದಗಿದ ಸಂದರ್ಭ ಹಾಗೂ ಕಾಪಾಡೆಂದು ಮೊರೆಹೋಗುವ ವಸ್ತುವಿದೆ.

ಗೋಪಿಯು ಕೃಷ್ಣನನ್ನು ತೂಗುತ್ತ ಹಾಡುವ ಸಾಲುಗಳು ದಶಾವತಾರವನ್ನು ಹೀಗೆ ಬಿಚ್ಚಿಡುತ್ತವೆ.

ಕಡಲೊಳಗೆ ಗೃಹವಂತೆ ಮಡದಿ ಚಂಚಲಳಂತೆ

ಕಡುಕ್ರೂರ ಸರ್ಪಶಯನನಂತೆ/ಶಯನನಂತೆ ಕಂದಮ್ಮ
ಮೃಢನೊಡೆಯ ಪೊಡವಿಗರಸಂತೆ

ಮಚ್ಚನಾಗಿ ಹರಿಯು ತುಚ್ಛತಮನನು ಕೊಂದು
ಅಚ್ಯುತನು ವೇದ ತಾ ತಂದ/ ತಾ ತಂದ ಕಾಲಕ್ಕೆ
ಹೊಚ್ಚಿ ತೂಗುವರು ಇಲ್ಲಂತೆ

ಗಿರಿಯ ಬೆನ್ನಲಿ ಪೊತ್ತು ತರುಣಿ ರೂಪವನಾಂತು
ಸುರರಿಗಮೃತವನು ತಾನೆರೆದು/ಎರೆದು ಶ್ರಮಪಟ್ಟ
ಮರೆಸಿ ತೂಗುವರು ಇಲ್ಲಂತೆ

ಧರಣಿ ಚೋರನ ಕೊಂದು ಘುರಘುರನೆ ಚೀರುತಿರೆ
ಎರೆದು ಬಿಸಿನೀರು ಪಾಲುಣಿಸಿ/ಪಾಲುಣಿಸಿ ತೂಗುವರು
ವರಹನಿಗೆ ಯಾರು ಇಲ್ಲಂತೆ

ಕಂದನಾ ಮೊರೆ ಕೇಳಿ ಕಂಬದಿಂದಲಿ ಬಂದು
ಸಂದಕಾಲದಲಿ ಅಸುರನ್ನ/ಅಸುರನ್ನ ಕೊಂದಂತ
ಕಂದನ್ನ ತೂಗ್ವೋರಿಲ್ಲಂತೆ

ವ್ರತಗೈದು ಅಧಿತಿ ತಾ ಸುತನ ಪಡೆದರೆ ಮಗುವು
ಅತಿ ಬೇಗ ಬೆಳೆದು ಬಲಿಯಾಗ/ಬಲಿಯಾಗಕ್ಕೋಡಿದರೆ
ಸುತನೆಂದು ತೂಗುವರು ಯಾರುಂಟು

ಪುಟ್ಟತಲೆ ಕೋಪದಲಿ ಇಟ್ಟು ಹೆಗಲಲಿ ಕೊಡಲಿ
ತೊಟ್ಟು ತಿರುಗಿದರೆ ರಂಗನ್ನ/ರಂಗನ್ನ ತೊಟ್ಟಿಲೊಳು
ಇಟ್ಟು ತೂಗುವರು ಯಾರಮ್ಮಾ

ಕೌಸಲ್ಯ ಸುತನೆಂದು ಪೋಷಿಸುವ ಕಾಲದಲಿ
ಶ್ರೀಶ ಶ್ರೀರಾಮನ್ನ ಕೌಶಿಕನು/ಕೌಶಿಕನು ಕರೆದೊಯ್ಯೆ
ಆಶೆಯಲಿ ತೂಗಲಿಲ್ಲಂತೆ

ಮುದ್ದು ಕೂಸಾಗೀಗ ಸದ್ದು ಮಾಡದೆ ಮಲಗೊ
ಕದ್ದು ವೈದಾರೊ ತಪಸಿಗಳು/ತಪಸಿಗಳು ಮುನಿಗಳಿಗೆ
ಮುದ್ದುಕೃಷ್ಣನ್ನ ಕೊಡಲಾರೆ

ಉಟ್ಟಬಟ್ಟೆಯ ಬಿಚ್ಚೆ ಅಷ್ಟು ಜನ ನಗುವೋರು
ಕೆಟ್ಟೆ ಕೂಸೆಂದು ಜರಿಯುವರು/ಜರಿಯುವರು ಚೆಣ್ಣನ್ನ
ಪುಟ್ಟನೆಂದ್ಯಾರು ತೂಗುವರು

ಹರಿಯನೇರುತ ನೀನು ಹರಿದೋಡಿ ಪೋದರೆ
ಹರಿ ನಿನ್ನ ಲಾಲಿಪರು ಯಾರಯ್ಯ/ಯಾರಯ್ಯಾ
ನಾಕಾಣೆ ಹರಸಿ ತೂಗುವೆನು ಮಲಗಮ್ಮ

ಜೋಜೋ ಪಾಡುವೆ ರಂಗ ಜೋಜೋ ಪಾಡುವೆ ಕೃಷ್ಣ
ಜೋಜೋ ಎನ್ನ ಭಂಗಾರಿ/ಭಂಗಾರಿ ಸಿಂಗಾರಿ
ಜೋಜೋ ಲಾಲಿಸುತ ಮಲಗಮ್ಮ

ಮಗುವನ್ನು ತೂಗುವ ನೆವದಲ್ಲಿ ದಶಾವತಾರದ ಬಣ್ಣನೆಯಿದೆ. ರಾಧಾಬಾಯಿಯ (ಸಂ.೧೮, ಪು-೨೫೨) 'ತೂಗಿರೆ ರಂಗನ್ನ ತೂಗಿರೆ ಕೃಷ್ಣನ್ನ' ಎನ್ನುವ ಲಾಲಿ ಹಾಡಿನಲ್ಲಿ ತಿರುಪತಿ ತಿಮ್ಮಪ್ಪನ ಕುರಿತಾಗಿ ಹಾಡಿದ್ದು ಕೃಷ್ಣಾವತಾರ-ರಾಮಾವತಾರ ವೆಂಕಟರಮಣನ ಅವತಾರಗಳ ವರ್ಣನೆಯಿದೆ.

ಲಭ್ಯವಿರುವ ಉಳಿದ ಕೀರ್ತನಕಾರ್ತಿಯರ ಕೃತಿಗಳಲ್ಲಿ ಲಾಲಿ ಹಾಡುಗಳು ಕಂಡುಬರುವುದಿಲ್ಲ.

**೪.೭ ಕ್ಷೇತ್ರ: ಕ್ಷೇತ್ರಮೂರ್ತಿ**

ಕೀರ್ತನ ಸಾಹಿತ್ಯದಲ್ಲಿ ಕ್ಷೇತ್ರ ಸಂಚಾರ, ಕ್ಷೇತ್ರ ಮಹಾತ್ಮೆಗಳು ಅಧಿಕವಾಗಿ ಕಂಡುಬರುತ್ತವೆ. 'ಮುದದಿ ಭಜಿಸುವೆನು ಚೆನ್ನಕೇಶವ' ಎನ್ನುವ ಕೀರ್ತನೆಯಲ್ಲಿ ಕೇಶವದಾಸರು 'ಪಾದದ್ವಯ ನಿನ್ನ ಯಾತ್ರೆಯ ಮಾಡಲಿ' ಎಂದು ಬೇಡುತ್ತಾರೆ. ಕ್ಷೇತ್ರ ಸಂಚಾರ ಮಹಾಕಾವ್ಯಗಳಲ್ಲಿಯೂ ಒಂದು ಭಾಗವಾಗಿಯೇ ಬರುತ್ತದೆ. ಕ್ಷೇತ್ರ ಸಂಚಾರ-ದರ್ಶನ-ದೈವ ಪ್ರಶಂಸೆ, ಕೀರ್ತನಕಾರರಲ್ಲಿ ಸಾಮಾನ್ಯ ಇದರಿಂದ ಪುಣ್ಯಾರ್ಜನೆ ಸಾಧ್ಯ ಎಂಬ ನಂಬಿಕೆ ಜಗತ್ತಿನಾದ್ಯಂತ ಕಂಡುಬರುತ್ತದೆ. ಮಹಿಳಾಕೀರ್ತನಕಾರರು ಇದಕ್ಕೆ ಹೊರತಾಗಿಲ್ಲ. ಇವರ ಸಾಹಿತ್ಯಕ್ಕೂ ಕ್ಷೇತ್ರ ಸಂಚಾರಕ್ಕೂ ಅವಿನಾಭಾವ ಸಂಬಂಧವಿದೆ. ದಾಸಸಾಹಿತ್ಯ ಚರಿತ್ರೆಯನ್ನು ತಿರುಗಿ ನೋಡಿದಾಗ ಮಹಿಳಾ ಕೀರ್ತನಕಾರರೆಲ್ಲ ಕ್ಷೇತ್ರ ಸಂಚಾರ ಮಾಡಿದವರೇ ಎಂದು ಕಂಡುಬರುತ್ತದೆ. ಅವರು ಸಂಚಾರಿ ಜೀವಿಗಳು. ಕ್ಷೇತ್ರದಿಂದ ಕ್ಷೇತ್ರಕ್ಕೆ ಪ್ರವಾಸ ಕಾಲದಲ್ಲಿ ಸಾಹಿತ್ಯ ಪ್ರಚಾರದ ಜೊತೆ ಜೊತೆಗೆ ಧರ್ಮ ಪ್ರಚಾರ ಕಾರ್ಯವನ್ನೂ ಕೈಗೊಂಡಿದ್ದವರು. ಮಹಿಳಾಕೀರ್ತನಕಾರರು ಸಂಚರಿಸಿದ ಕ್ಷೇತ್ರಗಳು, ಕಂಡ ಕ್ಷೇತ್ರ ಮೂರ್ತಿಗಳು, ಮತ್ತು ಕೃತಿಯಲ್ಲಿ ಪ್ರಸ್ತಾಪಿತವಾಗಿರುವ ಕ್ಷೇತ್ರಗಳ ಪೌರಾಣಿಕ ಹಿನ್ನೆಲೆಯ ಜೊತೆಗೆ ಕೃತಿಗಳಲ್ಲಿ ಪ್ರಸ್ತಾಪಿತವಾಗಿರುವ ದೃಷ್ಟಿಕೋನವನ್ನು ಚರ್ಚಿಸಲಾಗಿದೆ.

ಭಗವಂತನು ಭಕ್ತನ ಅಧೀನನಾಗಿರುವಾಗ ಭಕ್ತನಿದ್ದಲ್ಲಿ ಭಗವಂತನು ಬರಬೇಕೇ ಹೊರತು ಸರ್ವಾಂತರಯಾಮಿಯಾದ ಭಗವಂತನನ್ನು ಹುಡುಕಿಕೊಂಡು ಭಕ್ತರು ತೀರ್ಥಯಾತ್ರೆ ಹೋಗುವ ಅಗತ್ಯವಾದರೂ ಏನಿದೆ ಎಂಬ ಪ್ರಶ್ನೆ ಏಳುತ್ತದೆ. ತೀರ್ಥಯಾತ್ರೆಯನ್ನು ಭಕ್ತಿಪಂಥವು ಬೆಂಬಲಿಸಿದೆ. ಹರಿದಾಸ ಪರಂಪರೆಯಲ್ಲಿ ತೀರ್ಥಕ್ಷೇತ್ರ ದರ್ಶನ ಮಾಡುವುದು ದಾಸನ ಲಕ್ಷಣಗಳಲ್ಲಿ ಒಂದೆಂದು ಹೇಳಿದೆ. ನಮ್ಮ ಹಿರಿಯರು ಮಾಡುವ ಪ್ರತಿಯೊಂದು ನೇಮಗಳಿಗೂ ಅರ್ಥವಿದೆ. ವೈಜ್ಞಾನಿಕ ದೃಷ್ಟಿಯಿಂದ ಇದನ್ನು ಅವಲೋಕಿಸಿದಾಗ ತೀರ್ಥಕ್ಷೇತ್ರಗಳು ನದೀತೀರದಲ್ಲಿ ಇರುತ್ತವೆ. ನದಿಗಳು

ಸಾಮಾನ್ಯವಾಗಿ ಬೆಟ್ಟಗಳಲ್ಲಿ ಹುಟ್ಟಿ ಹರಿದು ಬರುವಾಗ ಭೂಮಿಯಲ್ಲಿನ ಖನಿಜಾಂಶಗಳನ್ನು ಒಳಗೊಂಡಿರುತ್ತವೆ. ಇಂತಹ ನೀರಿನಲ್ಲಿ ಸ್ನಾನ ಮಾಡುವುದರಿಂದ, ಪ್ರಕೃತಿಯ ಮಡಿಲು ಪ್ರಶಾಂತ ವಾತಾವರಣ ಅನೇಕ ರೋಗಗಳಿಂದ ಮುಕ್ತಗೊಳಿಸುತ್ತದೆ. ತೀರ್ಥಕ್ಷೇತ್ರದಲ್ಲಿ ಸೇರುವ ವಿವಿಧ ಸಂಸ್ಕೃತಿಯ ಸಂಸ್ಕಾರಗಳ ಜನರಿಂದ ಅವುಗಳ ಚರ್ಚೆಗೆ ವಿಚಾರ ವಿನಿಮಯಕ್ಕೆ ಅವಕಾಶವಿರುತ್ತದೆ. ನಂಬಿಕೆಯಿಂದಲೇ ಔಷಧಿಗಳಿಂದ ಗುಣವಾಗದ ಎಷ್ಟೋ ರೋಗಗಳು, ಸಮಸ್ಯೆಗಳು ಬಗೆಹರಿಯುತ್ತವೆ. ದೇವರಿಗೆ ಸಲ್ಲಿಸುವ ವಿವಿಧ ರೀತಿಯ ದೈಹಿಕ ಸೇವೆಗಳಿಂದ ಶರೀರಕ್ಕೆ ವ್ಯಾಯಾಮ ಉಂಟಾಗುತ್ತದೆ. ಕ್ಷೇತ್ರಗಳಲ್ಲಿನ ಹೋಮಗಳ ಧೂಮ, ಕರ್ಪೂರದ, ತುಪ್ಪದ ಬತ್ತಿಗಳ ಧೂಮ ಸುತ್ತುವರೆದಿರುವ ಸಾತ್ವಿಕ ವಾತಾವರಣ ಮನಸ್ಸಿಗೆ ಶಾಂತಿ ನೆಮ್ಮದಿ ನೀಡುತ್ತವೆ. ಒಮ್ಮೆ ಅದರ ಅನುಭವದ ರುಚಿ ಕಂಡ ಮನಸ್ಸು ಬದುಕಿನುದ್ದಕ್ಕೂ ಅದನ್ನು ಅಳವಡಿಸಿಕೊಳ್ಳುವ ಪ್ರಯತ್ನ ಮಾಡುವುದರಿಂದ ಉತ್ತಮ ಸಂಸ್ಕಾರ ಆ ಮೂಲಕ ಉತ್ತಮ ಸಾಮಾಜಿಕ ಪರಿಸರ ನಿರ್ಮಾಣಕ್ಕೆ ಸಹಕಾರಿಯಾಗುತ್ತದೆ, ಪ್ರವಾಸ ಸಾಹಿತ್ಯ ರಚನೆಯು ಸಾಧ್ಯವಾಗುತ್ತದೆ. ಇದರಿಂದ ಆಯಾ ಪ್ರಾಂತ್ಯಗಳ ಜನಜೀವನ, ಸಂಸ್ಕೃತಿ, ಆಚಾರ-ವಿಚಾರಗಳನ್ನೊಳಗೊಂಡ ಮಾನಿವಿಕ ಚರಿತ್ರೆಗೆ ಬೇಕಾದ ಆಕರಗಳು ದೊರೆಯುತ್ತವೆ. ಇದು ಆಯಾ ಕಾಲದ ಚಾರಿತ್ರಿಕ ದಾಖಲೆಗಳೂ ಹೌದು.

**ಮುಳಬಾಗಲು**

ಮಹಾಭಾರತ ಯುದ್ದದ ನಂತರ ಅರ್ಜುನನ ರಥವು ಸುಟ್ಟು ಭಸ್ಮವಾಯಿತು. ಭಸ್ಮವಾಗುವ ಮುನ್ನ ರಥದಲ್ಲಿದ್ದ ಹನುಮಧ್ವಜವನ್ನು ಅರ್ಜುನನು ಭಾಸ್ಕರ ಕ್ಷೇತ್ರವೆಂದೇ ಪ್ರಸಿದ್ಧವಾದ ಮುಳಬಾಗಲಿನಲ್ಲಿ ಪ್ರತಿಷ್ಠಾಪಿಸಿದ. ಅಂದಿನಿಂದ ಇಂದಿನವರೆಗೂ ಕೇತಕಿ ಪುಷ್ಪವನ್ನು ಅನೂಚಾನವಾಗಿ ಪ್ರಾಣದೇವರ ಪೂಜೆಗೆ ಸಮರ್ಪಿಸಲಾಗುತ್ತಿದೆ. ಮುಳಬಾಗಲು ಕ್ಷೇತ್ರದ ಮುಖ್ಯಪ್ರಾಣನ ಮಹಾತ್ಮೆಯನ್ನು ಪುರಾಣಗಳಲ್ಲಿ ನಿವೇದಿಸಲಾಗಿದೆ.

**ಕರಿಗಿರಿ**

ಈಗಿನ ದೇವರಾಯನದುರ್ಗವೇ ಪುರಾಣ ಕಥೆಗಳಲ್ಲಿನ ಕರಿಗಿರಿ ಎನ್ನಲಾಗಿದೆ. ದೇವದತ್ತ ಮತ್ತು ಧನಂಜಯನೆಂಬ ಗಂಧರ್ವರು ಸತ್ಯಲೋಕದ ಬ್ರಹ್ಮನ ಸಭೆಯಲ್ಲಿ ಗಾಯನ ಮಾಡುತ್ತಿದ್ದರು. ಮಧೋನ್ಮತ್ತರಾದ ಗಂಧರ್ವರು ಭೃಗು ಋಷಿಗಳನ್ನು ಅವಮಾನ ಮಾಡಿದರು. ಕೋಪಗೊಂಡ ಋಷಿಗಳು ನೀವಿಬ್ಬರೂ ಒಂದು ರೂಪದಿಂದ ಮಧಿಸಿದ ಆನೆಯಾಗಿ ಮತ್ತೊಂದು ರೂಪದಿಂದ ಜಡವಾದ ಪರ್ವತವಾಗಿ ಭೂಲೋಕದಲ್ಲಿ ಜನಿಸಿರೆಂದು ಶಾಪ ಕೊಟ್ಟರು. ಭಯಭೀತರಾದ ಗಂಧರ್ವರು ಋಷಿಗಳಲ್ಲಿ ಕ್ಷಮೆ ಬೇಡಿದರು. ಭೃಗು ಋಷಿಗಳು ಶ್ರೀಹರಿಯು ರಾಮಚಂದ್ರನಾಗಿ ಭೂಲೋಕದಲ್ಲಿ ಅವತಾರ ಮಾಡುತ್ತಾನೆ. ರಾಮನು ವನವಾಸ ಮುಗಿಸಿ ಸೀತಾ ಸಮೇತನಾಗಿ ಶ್ರೀ ಲಕ್ಷ್ಮಿನರಸಿಂಹ ದೇವರ ದರ್ಶನಕ್ಕೆ ಬರುತ್ತಾನೆ ಆಗ ನಿಮ್ಮ ಶಾಪ ವಿಮೋಚನೆಯಾಗುತ್ತದೆ ಎಂದು ಹೇಳಿದರು. ಅಂದಿನಿಂದ ಈ ಕ್ಷೇತ್ರವು ಕರಿಗಿರಿ, ಇಭಾಚಲ, ಕುಂಜರಗಿರಿ, ಭಜಗಿರಿ, ಹಸ್ತಗಿರಿ, ಜಲಗಿರಿ ಮುಂತಾದ ಹೆಸರುಗಳಿಂದ ಕರೆಯಲ್ಪಟ್ಟಿದೆ.

**ದ್ವಾರಕ**

ದ್ವಾರಕೆಯು ಮುಕ್ತಿಧಾಮ, ಮೋಕ್ಷಪುರಿ ಎಂಬ ಹೆಸರುಗಳನ್ನು ಪಡೆದಿದೆ. ಶ್ರೀಕೃಷ್ಣನು ನೂರು ವರ್ಷ ಇಲ್ಲಿ ಆಡಳಿತ ನಡೆಸಿ ದ್ವಾರಕಾಧೀಶ ಎನಿಸಿಕೊಂಡನು.

ಕೃಷ್ಣಾವತಾರ ಕಾಲದ ಈ ಪಟ್ಟಣಕ್ಕೆ ಹಿಂದೆ ಕುಶಸ್ಥಲೀ ಎಂದು ಕರೆಯುತ್ತಿದ್ದರು. ವಿಶ್ವಕರ್ಮನು ನಿರ್ಮಿಸಿದ ಸಮುದ್ರ ಮಧ್ಯದ ಪಟ್ಟಣವಿದು.

**ಮಥುರಾ**

ಇತಿಹಾಸ ಪುರಾಣಗಳಲ್ಲಿ ಮಥುರೆಯನ್ನು ಮಧುಪುರಿ ಎಂದು ಕರೆಯಲಾಗಿದೆ. ವರಾಹ, ಪದ್ಮ, ನಾರದೀಯ, ವಿಷ್ಣುಪುರಾಣ, ಮಹಾಭಾರತ, ವನಪರ್ವಗಳಲ್ಲಿ ಈ ಕ್ಷೇತ್ರದ ಮಹತ್ವ ತಿಳಿಸಿದ್ದಾರೆ. ಮಧು ರಾಕ್ಷಸನು ಈ ಪಟ್ಟಣದಲ್ಲಿ ನೆಲೆಸಿದ್ದರಿಂದ ಇದಕ್ಕೆ ಮಧುಪುರಿ ಎಂದು ಹೆಸರು ಬಂದಿತು. ಶ್ರೀಕೃಷ್ಣನು ಅವತರಿಸಿದ್ದು ಇಲ್ಲಿಯೇ.

ಅಯೋಧ್ಯಾ ಮಥುರಾ ಮಾಯಾ
ಕಾಶಿ ಕಾಂಚಿ ತಥೈವಚಾ
ಅವಂತಿ ದ್ವಾರಕಾಶ್ಚೈವ
ಸಪ್ತೈತೇ ಮೋಕ್ಷದಾಯಕಾಃ

ಭಾರತದ ಸಪ್ತ ಮೋಕ್ಷದಾಯಕ ಪವಿತ್ರ ತೀರ್ಥಕ್ಷೇತ್ರಗಳಲ್ಲಿ ಇದೊಂದು. ಶ್ರೀಕೃಷ್ಣನ ಲೀಲಾಸ್ಥಳ. ಶ್ರೀಕೃಷ್ಣನು(ವರಾಹಪುರಾಣದಲ್ಲಿ ಮಥುರೆಯ ಬಗೆಗೆ ಹೇಳಿರುವ ಶ್ಲೋಕ ಹೀಗಿದೆ೧೫೨-೮-೧)

ನಾ ವಿದ್ಯತೇ ಚ ಪಾತಾಲೇ
ನಾಂತರಿಕ್ಷೇ ನ ಮಾನುಷೇ
ನ ಮಾನಂ ಮಥುರಾಯ ಹಿ
ಪ್ರಿಯಂ ಮಮ ವಸುಂಧರೇ
ಸಾ ರಮ್ಯ ಚ ಸುಶಸ್ತಾ ಚ
ಜನ್ಮಭೂಮಿಸ್ಥಥಾ ಮಮ

ಪೃಥ್ವಿದೇವಿಯೇ ಪಾತಾಳ ಅಂತರಿಕ್ಷ ಅಂದರೆ ಭೂಮಿಯಿಂದ ಸ್ವರ್ಗಾದಿಲೋಕಗಳವರೆಗೂ ಹಾಗು ಸಮಸ್ತ ಭೂಲೋಕದಲ್ಲಿ ನನಗೆ ಮಥುರೆಯಷ್ಟು ಪ್ರಿಯವಾದ ಸ್ಥಳ ಬೇರೊಂದಿಲ್ಲ. ಅದು ರಮ್ಯವಾದದ್ದೂ ಪ್ರಶಸ್ತವಾದದ್ದೂ ಆಗಿ ನನ್ನ ಜನ್ಮಭೂಮಿಯೇ ಆಗಿದೆ.

ಮಹಾಮಾಘ್ಯಾಂ ಪ್ರಯಾಗೇ ಚ
ಯತ್ಮಫಲಂ ಲಭತೇ ನರಾಃ
ತತ್ಫಲಂ ಲಭ್ಯತೇ ದೇವಿ
ಮಥುರಾಯಂ ದಿನೇ ದಿನೇ (ವರಾಹಪುರಾಣ: ೧೫೨-೧೩-೧೪)

ಮಾಘ ಮಾಸದ ಹುಣ್ಣಿಮೆಯಂದು ಮಖಾ ನಕ್ಷತ್ರವು ಸೇರಿದಾಗ ಸಂಕ್ರಾಂತಿಯ ಕಾಲದಲ್ಲಿ ಪ್ರಯಾಗದಲ್ಲಿ ಸ್ನಾನ ಮಾಡಿದರೆ ಲಭಿಸುವ ಫಲವು ಮಥುರೆಯಲ್ಲಿ ವಾಸಿಸುವವರಿಗೆ ಸಹಜವಾಗಿಯೆ ಪ್ರತಿನಿತ್ಯವೂ ಲಭಿಸುತ್ತದೆ.

ಪೂರ್ಣಂ ವರ್ಷ ಸಹಸ್ರಂ ತು
ವಾರಣಾಸ್ಯಾಂ ಹಿ ಯತ್ನಲಂ
ತತ್ಫಲಂ ಲಭತೇ ದೇವಿ
ಮಥುರಾಯಾಂ ಕ್ಷಣೇನ ಹಿ (ವರಾಹಪುರಾಣ: ೧೫೨-೧೪-೧೬)

ಸಾವಿರ ವರ್ಷ ಕಾಶಿಯಲ್ಲಿ ವಾಸಮಾಡುವುದರಿಂದ ಲಭಿಸಬಹುದಾದ ಪುಣ್ಯ ಫಲವು ಮಥುರೆಯಲ್ಲಿ ಕ್ಷಣಕಾಲ ವಾಸಿಸುವುದರಿಂದ ಲಭ್ಯವಾಗುತ್ತದೆ.

**ಶ್ರೀರಂಗ**

ಶ್ರೀರಾಮನು ವಿಭೀಷಣನ ಭಕ್ತಿಗೆ ಮೆಚ್ಚಿ ವಿಭೀಷಣನನ್ನು ಸನ್ಮಾನಿಸುತ್ತಾನೆ. ಸೂರ್ಯಕುಲದ ಆರಾಧ್ಯದೈವವಾದ ರಂಗನಾಥದ ವಿಗ್ರಹವನ್ನು ವಿಭೀಷಣನು ಲಂಕೆಗೆ ಮರಳುವಾಗ ರಾಮ ಕೊಡುತ್ತಾನೆ. ಪ್ರಯಾಣದಲ್ಲಿ ಆಯಾಸ ಪರಿಹಾರಕ್ಕಾಗಿ ಕಾವೇರಿ ನದಿಯ ಮಧ್ಯೆ ಚಂದ್ರ ಪುಷ್ಕರಣಿ ದಡದಲ್ಲಿ ರಂಗನಾಥನನ್ನು ಭೂಸ್ಪರ್ಶ ಮಾಡಿಸುತ್ತಾನೆ. ನಂತರ ಅದನ್ನು ಅಲುಗಾಡಿಸಲು ಆಗುವುದಿಲ್ಲ. ಕಾವೇರಿ ದ್ವೀಪದಲ್ಲಿ ನಿಂತಿದ್ದರಿಂದ ಈ ಕ್ಷೇತ್ರವನ್ನು ಶ್ರೀರಂಗ ಎಂದು ಕರೆಯಲಾಗಿದೆ. ರಂಗನಾಥನು ಲಂಕೆಯನ್ನು ನೋಡುತ್ತಾ ವಿಭೀಷಣನನ್ನು ಅನುಗ್ರಹಿಸುತ್ತಿದ್ದಾನೆ. ಇಂದಿಗೂ ಪ್ರಾತಃಕಾಲದಲ್ಲಿ ಅಲಂಕಾರವು ಅದಲು ಬದಲಾಗಿರುವುದರಿಂದ ವಿಭೀಷಣನೇ ಬಂದು ರಂಗನಾಥನನ್ನು ಪೂಜಿಸುತ್ತಾನೆ ಎಂದು ಪ್ರತೀತಿಯಿದೆ.

**ಉಡುಪಿ**

ಉಡುಪಿಯ ಪುರಾತನ ಹೆಸರು ಉಡುಪ. ಉಡು ಎಂದರೆ ನಕ್ಷತ್ರ, ಪ ಎಂದರೆ ಪಾಲಿಸುವವನು (ಚಂದ್ರ). ಚಂದ್ರನು ಇಲ್ಲಿ ತಪ್ಪಸ್ಸು ಮಾಡುತ್ತಿದ್ದು ಶಿವನು ಅವನಿಗೆ ಚಂದ್ರಮೌಳೇಶ್ವರನ ರೂಪದಲ್ಲಿ ದರ್ಶನವಿತ್ತಿದ್ದನು ಎಂದು ಪ್ರತೀತಿಯಿದೆ. ರೌಪ್ಯಪೀಠಪುರ, ರಜತಪೀಠಪುರ ಹಾಗು ಶಿವಾಲಿ ಎಂಬ ಪುರಾತನ ಹೆಸರುಗಳಿಂದ ಈ ನಗರವು ಕರೆಯಲ್ಪಡುತ್ತಿದ್ದಿತು. ಇಲ್ಲಿ ಮಧ್ವಾಚಾರ್ಯರ ಸ್ಥಾಪಿಸಿದ ಅಷ್ಟಮಠವಿದೆ.

**ಫಂಡರಾಪುರ**

ವಿಠಲನು ಫಂಡರಾಪುರದಲ್ಲಿ ಭಕ್ತಜನರಿಂದ ಪೂಜೆಗೊಳ್ಳುವ ದೈವ. ಇವನು ವಿಜಯನಗರದಲ್ಲಿದ್ದನೆಂದು ಐತಿಹ್ಯವಿದೆ. ಮೂಲತಃ ಕನ್ನಡಿಗರ ಅಧಿದೈವ. ಆದ್ದರಿಂದಲೇ ಮಹಾರಾಷ್ಟ್ರದ ಸಾಧು ಸಂತರು 'ಕಾನಡೀ ವಿಠಲ' ಎಂದೇ ಕರೆದಿದ್ದಾರೆ. ವಿಠಲ ಎಂಬ ಶಬ್ದವು ವಿಷ್ಣು ಶಬ್ಧದ ಅಪಭ್ರಂಶ ರೂಪ. ವಿಷ್ಣು ಎಂಬುದು ವಿಟ್ಟು, ವಿರೋಬ, ವಿಠಲ ಎಂದಾಗಿರಬಹುದು. ವಿಠಲ, ಕೃಷ್ಣನ ಬಾಲರೂಪವೇ ಹೊರತು ಅವತಾರ ರೂಪವಲ್ಲ.

ಮಹಾರಾಷ್ಟ್ರ ರಾಜ್ಯದ ಸೊಲ್ಲಾಪುರ ಜಿಲ್ಲೆಯಲ್ಲಿರುವ ಒಂದು ಪುಣ್ಯಕ್ಷೇತ್ರ ಫಂಡರಾಪುರ. ಇಲ್ಲಿ ಭೀಮಾ ನದಿಯು ಅರ್ಧಚಂದ್ರಾಕಾರದಲ್ಲಿ ಹರಿಯುತ್ತಿದ್ದು ಅದನ್ನು ಚಂದ್ರಭಾಗಾ ನದಿಯೆಂದು ಕರೆಯುತ್ತಾರೆ. ಭಕ್ತರು ಇದನ್ನು ಭೂವೈಕುಂಠ, ದಕ್ಷಿಣಕಾಶಿ, ಭೀಮಾತೀರದ ಮಹಾಯೋಗ

ಪೀಠ, ಭಕ್ತಿ ಸಂಪ್ರದಾಯದ ಆಧ್ಯಪೀಠ ಎಂದಿದ್ದಾರೆ. ನಾಮದೇವನು "ಬಿಟ್ಟು ಫಂಡರಿಯ ವಾರಿ (ಯಾತ್ರೆ) ಮೋಕ್ಷ ಬಯಸುವವ ಭಿಕಾರಿ" ಎಂದಿದ್ದಾರೆ. ವಾರಕರಿ ಮತ್ತು ವಿಠಲನ ಸಂಪ್ರದಾಯದ ಭಕ್ತರು ಇಲ್ಲಿ ಬೇಟಿ ನೀಡುತ್ತಾರೆ. ಇಲ್ಲಿಯ ಆರಾಧ್ಯದೈವ ವಿಠಲನನ್ನು ಪಾಂಡುರಂಗ ಎಂದು ಕರೆಯಲಾಗುತ್ತದೆ. ಜ್ಞಾನೇಶ್ವರ, ಏಕನಾಥ, ತುಕಾರಾಮ, ನಾಮದೇವ ಮತ್ತು ಹರಿಭಕ್ತರ ನಾಲಗೆಯ ಮೇಲೆ ನಲಿದಾಡಿದೆ. ಪಂಢರವಿಠಲ, ವಿಠಲ ಅಂಕಿತವಿರುವ ಸಾವಿರಾರು ಕೀರ್ತನೆಗಳು ಕನ್ನಡದಲ್ಲಿ ದೊರೆಯುತ್ತವೆ.

ಕಾನಡಾ ವಿಠಲೂ ಪಂಡರೀಯೇ
ಕಾನಡೋ ಹೋ ವಿಠಲೂ ಕರ್ನಾಟಕೂ

– ಎಂದು ವಿಠಲನನ್ನು ಕನ್ನಡ ದೇವರಾಗಿ ಪಂಢರಪುರವನ್ನು ಕನ್ನಡಕ್ಷೇತ್ರವಾಗಿ ಬಹಳ ಸ್ಪಷ್ಟವಾಗಿ ಗುರುತಿಸಲಾಗಿದೆ.

ಗಲಗಲಿ ಅವ್ವನವರು ಕಾಶಿಯಲ್ಲಿ ತಮ್ಮ ಶಿಷ್ಯೆ ಪ್ರಯಾಗಮ್ಮ (ಭಾಗಮ್ಮ)ನ ಜೊತೆ ಇದ್ದಾಗ ಪ್ರಯಾಗಮ್ಮ ರೋಗ ಪೀಡಿತರಾಗಿದ್ದು ಅವ್ವನವರ ಆಜ್ಞಾನುಸಾರ ಭಾಗವತದ ತೃತೀಯ ಸ್ಕಂದವನ್ನು ಕನ್ನಡದಲ್ಲಿ ರಚಿಸಿ ರೋಗಮುಕ್ತರಾದಳಂತೆ.

'ಕಾಶಿ ಪಟ್ಟಣದಲ್ಲಿ ವಾಸಾದ ಭಾಗಮ್ಮನು ಕಟ್ಟಿದ ಪದ್ಯವನ್ನು ಭೂಸುರರೆಲ್ಲರೂ ಉದಾಸೀನ ಮಾಡದೆ ಲೇಸಾಗಿ ತಿದ್ದುವುದು' ಎಂದು ವಿನಯ ಮೆರೆದಿದ್ದಾರೆ ಭಾಗಮ್ಮ. ಇಲ್ಲಿ ಅವ್ವನವರು ಶಿಷ್ಯೆ ಭಾಗಮ್ಮನೊಂದಿಗೆ ಕಾಶಿ ಯಾತ್ರೆ ಮಾಡಿದ ದಾಖಲೆ ಇದೆ. (ಸ.ದಾ.ಸ. ಸಂ:೭, ಗ.ಅ.ಕೀ–ಪು–೩೧)

ಗಿರಿಯಮ್ಮನವರಿಗೆ ಹೆಳವನಕಟ್ಟೆ ರಂಗನಾಥ ಆರಾಧ್ಯ ದೈವ. ಗಿರಿಯಮ್ಮ ತನ್ನ ಬದುಕಿನ ಕೊನೆಯ ದಿನಗಳಲ್ಲಿ ಮೈಲಾರ, ಗೋಕರ್ಣ, ಪಿಳ್ಳಂಗಿರಿ, ಕೊಕ್ಕನೂರು ಕ್ಷೇತ್ರಗಳಿಗೆ ಹೋಗಿದ್ದಳೆಂದು ಶಿವಮೊಗ್ಗದ ಹೊನ್ನಾಳಿಯ ಸಮೀಪದ ಕಮ್ಮಾರಕಟ್ಟೆಯಲ್ಲಿ ಮಾರುತಿ ದರ್ಶನ ಮಾಡಿ ಶ್ರಾವಣ ಶುದ್ದ ಪಂಚಮಿಯಂದು ತುಂಗಭದ್ರೆಯ ಪೂರ್ಣ ಪ್ರವಾಹದಲ್ಲಿ ಅದೃಶ್ಯಳಾದಳೆಂದು ಅವಳ ಬದುಕಿನ ಕಥೆಯಿಂದ ತಿಳಿದುಬರುತ್ತದೆ.

ಹರಪನಹಳ್ಳಿ ಭೀಮವ್ವನವರು ಉಡುಪಿ, ಕೊಲ್ಲಾಪುರ, ಪಂಢರಾಪುರ, ಕಾಶಿ, ಗಯೆ, ಹೂವಿನಹಡಗಲಿ, ಮೊದಲಗಟ್ಟಿ, ಬೊಮ್ಮಗಟ್ಟಿ, ಆದವಾನಿ, ತಿರುಪತಿ ಕ್ಷೇತ್ರಗಳನ್ನು ದರ್ಶಿಸಿದ್ದಾಳೆ.

ಅಂಬಾಬಾಯಿಯವರು ಹರಿದಾಸರಂತೆ ವೇಶಭೂಷಣ ತೊಟ್ಟು ಕಾವಿ ವಸ್ತ್ರ ಧರಿಸಿ, ಕಾಲಿಗೆ ಗೆಜ್ಜೆ ಕಟ್ಟಿ ತುಳಸೀಮಾಲೆ ಹಾಕಿ, ಬಗಲಿಗೆ ತಂಬೂರಿ ಹಿಡಿದು ಜೋಳಿಗೆ ಹಾಕಿ, ತೀರ್ಥಯಾತ್ರೆ ಮಾಡುತ್ತಿದ್ದರು. 'ಅವರಿಗೆ ಅದೊಂದು ಪ್ರಿಯವಾದ ವಿಷಯವೇ ಆಗಿತ್ತು. ಕಾಲಿಗೆ ಗೆಜ್ಜೆ ಕಟ್ಟಿ ತಾಳವ ಲಜ್ಜೆಯ ತೊರೆದು ಬಾರಿಸುತ, ಮೂರ್ಜಗದೊಡೆಯ ಜಗಜನ್ನಾದಿ ಕಾರಣನೆಂದು ಗರ್ಜಿಸುತಲಿ ಸಂಸಾರ ಮಾಳ್ಪುದು' ಅವರಿಗೆ ಪ್ರಿಯವಾದುದು. ಕಷ್ಟಗಳನ್ನು ಧಿಕ್ಕರಿಸಿ ನಡೆಯಲು

ಅವರು ಆಯ್ದುಕೊಂಡ ಮಾರ್ಗವೂ ಹೌದು. ತೀರ್ಥಯಾತ್ರೆಯನ್ನು ಅವರು ವಿಜಯಯಾತ್ರೆಯೆಂದೇ ಕರೆಯುತ್ತಿದ್ದಳು. ತೀರ್ಥಯಾತ್ರೆ ಹೊರಡುವ ಮುನ್ನ ಗುರುಗಳ ಅನುಮತಿಯನ್ನು ಪಡೆದ ದಾಖಲೆಗಳು ಅವರ ದಿನಚರಿಯಲ್ಲಿವೆ.

ತೀರ್ಥಯಾತ್ರೆಯಲ್ಲಿ ಅವರು ದೇವಾಲಯಗಳ ಕಟ್ಟೆಗಳ ಮೇಲೆ ವಾಸ್ತವ್ಯ ಹೂಡುತ್ತಿದ್ದರು. ಗೋಪಾಳದ ಧಾನ್ಯದಿಂದ ಯಾರಾದರೂ ಗೃಹಸ್ತರ ಮನೆಯಲ್ಲಿ ಸ್ವಯಂಪಾಕ, ಬಿಡುವಿನ ಸಮಯದಲ್ಲಿ ಕೀರ್ತನೆಗಳ ರಚನೆ–ಹೆಂಗಳೆಯರಿಗೆ ಹೇಳಿಕೊಡುವುದು ಅವರ ದಿನಚರಿ. ಯಾರಾದರೂ ಕೊಟ್ಟ ಚಿಲ್ಲರೆ ಕಾಸೇ ತೀರ್ಥಯಾತ್ರೆಗೆ ಖರ್ಚು. ಹೀಗಾಗಿ ಇವರ ಬಹುಪಾಲು ಸಾಹಿತ್ಯ ತೀರ್ಥಯಾತ್ರೆಯ ಸಂದರ್ಭದಲ್ಲೇ ರಚಿತವಾಯಿತು. ಕರಿಗಿರಿ, ಕದಿರುಂಡಲಗಿ, ತಿರುಪತಿ, ಉಡುಪಿ, ಮಂತ್ರಾಲಯ, ಹಂಪೆ, ಪಂಢರಾಪುರ, ಸವಣೂರು, ರಿತ್ತಿ, ಭದ್ರಾವತಿ, ಮೊದಲಘಟ್ಟ, ಸಾಗರಕಟ್ಟೆ, ಶ್ರೀರಂಗಪಟ್ಟಣ, ತಿರುಮಕೂಡಲು, ನಂಜನಗೂಡು, ಮುಂತಾದ ಸ್ಥಳಗಳಿಗೆ ಹೋಗಿಬರುತ್ತಿದ್ದರು. ಕೊನೆಗೆ ತೀರ್ಥಯಾತ್ರೆಗೆ ಹೋಗಿದ್ದಾಗಲೇ ಕಾವೇರಿ ನದಿಯಲ್ಲಿ ಸ್ನಾನಮಾಡುವಾಗ ಜಲಸಮಾಧಿಯಾದರೆಂದು ತಿಳಿದುಬರುತ್ತದೆ. ಬದುಕಿಗೆ ನೆಮ್ಮದಿ ನೀಡಿದ ತೀರ್ಥಯಾತ್ರೆ ಅವರ ಅಂತ್ಯಕ್ಕೂ ಕಾರಣವಾಗುತ್ತದೆ.

ನಿಡಗುರಕಿ ಜೀವೂಬಾಯಿಯವರು ಹೆಚ್ಚು ತೀರ್ಥಕ್ಷೇತ್ರಗಳ ಭೇಟಿ ನೀಡಿದಂತೆ ಕಂಡುಬರುವುದಿಲ್ಲ. ಸಂಪ್ರದಾಯಸ್ಥ ಮನೆಯ ಹೆಣ್ಣುಮಗಳಾದ್ದರಿಂದ ಪುರಾಣ ಪುಣ್ಯ ಕತೆಗಳ ಶ್ರವಣ, ನಿಷ್ಠುರ ಬದುಕಿನ ವಾತಾವರಣ ಇವರ ಮೇಲೆ ಬೀರಿದ ಪ್ರಭಾವ ಅಪಾರ. ತಂದೆ ತಾಯಿಯನ್ನು ಕಳೆದುಕೊಂಡ ಮೇಲೆ ತೀರ್ಥಕ್ಷೇತ್ರ ಯಾತ್ರೆಯ ಕಡೆ ಇವರ ಮನಸ್ಸು ಹೊರಳಿದಂತೆ ಕಂಡುಬರುತ್ತದೆ.

ತನ್ನ 'ಶ್ರೀಪುರಂಧರ ವಿಠಲದಾಸರ ಚರಿತ್ರೆ' ಎನ್ನುವ ದೀರ್ಘಕೃತಿಯೊಂದರಲ್ಲಿ ಶ್ರೀನಿವಾಸ ನಾಯಕನು ಹರಿಯ ಆಜ್ಞೆಯಂತೆ ತನ್ನಲ್ಲಿದ್ದ ಐಶ್ವರ್ಯವನ್ನೆಲ್ಲಾ ದಾನಮಾಡಿ ಮಾರುತಿಯ ಮಂದಿರವೊಂದರಲ್ಲಿ ಇರುತ್ತಾನೆ. ಆಗ ಹರಿಯು

ಪಂಪಾಕ್ಷೇತ್ರದಲಿ ಚಕ್ರತೀರ್ಥ ಬಳಿಯ
ವ್ಯಾಸರಾಯರಲಿ ದಾಸನಾಗು ಎನ್ನುತ್ತಾನೆ. ಇಲ್ಲಿ ಹಂಪೆಯ ಪ್ರಸ್ತಾಪವು ಬರುತ್ತದೆ.

ಯದುಗಿರಿಯಮ್ಮನು ದಿವ್ಯ ಕ್ಷೇತ್ರ ದರ್ಶನ ಮಾಡಿ ಕ್ಷೇತ್ರಮೂರ್ತಿಗಳ ಕುರಿತು ಹಾಡು ರಚಿಸಿದ್ದಳೆಂದು ಕಥೆಗಾರ ರಘುಸುತ ಹೇಳುತ್ತಾರೆ.

ಓರಾಬಾಯಿ ಲಕ್ಷ್ಮಿದೇವಮ್ಮ ಆದವಾನಿ(ಯಾದಗಿರಿ)ಯಲ್ಲಿ ನೆಲೆಸಿದ್ದಳು. ಅಲ್ಲಿನ ದೈವ ಮಂಗರಾಯ (ಹನುಮಂತ). ಇವರು ತಿರುಪತಿ, ಸಿಂಹಾಚಲ, ಸೋದೆ ಮಠದ ರಾಘವೇಂದ್ರ ಮಠ, ಬಳ್ಳಾರಿಯ ಲಕ್ಷ್ಮಿನರಸಿಂಹ, ಉಡುಪಿ, ಗೋಕರ್ಣಗಳಿಗೆ ಬೇಟಿ ನೀಡಿದ್ದರೆಂದು ತಿಳಿದುಬರುತ್ತದೆ.

**ಕೃತಿಗಳಲ್ಲಿ ಕ್ಷೇತ್ರ ವರ್ಣನೆ**

**ದ್ವಾರಕ:** ಗಲಗಲಿ ಅವ್ವನವರ ಮುಯ್ಯದ ಹಾಡುಗಳಲ್ಲಿ ಮುಯ್ಯ ಕೊಡುವ, ಹಿಂದಿರುಗಿಸುವ ಸಂಪ್ರದಾಯದ ನೆವದಲ್ಲಿ ದ್ವಾರಕ ಮತ್ತು ಹಸ್ತಿನಾವತಿಗಳನ್ನು ಕಣ್ಣಿಗೆ ಕಟ್ಟುವಂತೆ ವರ್ಣಿಸಿದ್ದಾರೆ. ಸುಭದ್ರೆ, ದ್ರೌಪದಿಯರು ಮುಯ್ಯ ಕೊಡಲು ದ್ವಾರಕೆಗೆ ಬಂದರೆ ಕೃಷ್ಣನು ಸತ್ಯಭಾಮ, ರುಕ್ಮಿಣಿ ಮತ್ತು ಪರಿವಾರದೊಂದಿಗೆ ಮುಯ್ಯ ಹಿಂತಿರುಗಿಸಲು ಹಸ್ತಿನಾವತಿಗೆ ಬರುತ್ತಾನೆ. 'ತಿಂಗಳಿಗೆ ಸುಭದ್ರಾ ಬಂದೇನಾ' ಎಂದಿದ್ದ ಕೃಷ್ಣ ಬರಲಿಲ್ಲ. ಅವನು 'ವೈಭವದೊಳಗೆ ಮರೆತಾನಾ' 'ಮುಯ್ಯವ ಒಯ್ದರೆ ನೋಡಿ ಬರಬೇಕು' ಎನ್ನುತ್ತಾ ಸುಭದ್ರಾ

ದ್ವಾರಕಾಪುರದ ಶೃಂಗಾರ ವರ್ಣಿಸಲು
ಮೂರುಕಣ್ಣವಗೆ ವಶವಲ್ಲ
ಮೂರುಕಣ್ಣವಗೆ ವಶವಲ್ಲ ನಾಲ್ಕು
ಮುಖದವಗೆ ಬಲು ಮಿಗಿಲು ದ್ವಾರಕೆಯನ್ನು ವರ್ಣಿಸುತ್ತಾರೆ.

ಕೃಷ್ಣನು 'ವಿಶ್ವಕರ್ಮನ ಕರೆಸಿ ದ್ವಾರಕಾಪುರವನ್ನು ಕ್ಷಣದಾಗೆ ಜಲದೊಳು ನಿರ್ಮಿಸಲು' ಆಜ್ಞಾಪಿಸಿರುತ್ತಾನೆ. ದುಷ್ಟ ರಾಕ್ಷಸನನ್ನು ಅಟ್ಟಿ ಆಪನೊಳು ಮನೆ ಕಟ್ಟಿ ಪಟ್ಟದ ರಾಣಿಯರ ಒಯ್ದಿಡುತ್ತಾನೆ. ಹರಿಯು ವೈಕುಂತದ ಪರಿಯ ತೋರುವೆನೆಂದು ಧರೆಯ ಮೇಲಾಗ

ರನ್ನದ ಬಾಗಿಲು ಚಿನ್ನದ ಚೌಕಟ್ಟು
ಹೊನ್ನ ಕಳಸಗಳು ಹೊಳೆವೋವೆ
ಹೊನ್ನ ಕಳಸಗಳು ಹೊಳೆವೋವೆ

ಇದು ನಮ್ಮ ಪನ್ನಾಗಶಯನನ ಅರಮನೆ – ನಿರ್ಮಿಸಿದ.

ಈ ಅರಮನೆ ಪರಿಸರವನ್ನು ವರ್ಣಿಸಿರುವ ಬಗೆ ಅನನ್ಯವಾಗಿದೆ. 'ಮುತ್ತು ಮಾಣಿಕ ರತ್ನ ಕೆತ್ತಿಸಿದ ಕೋಟೆ ಹತ್ತಿರೆ ಹರವಾದ ಸರೋವರದೊಳಗೆ ಜತ್ತಾಗಿ ಆಡೋ ಗಿಳಿಗಳ ಹಿಂಡು' ಬಾಳೆ, ನಿಂಬೆ, ದಾಳಿಂಬೆ ವನ ಎಲೆತೋಟದಲ್ಲಿ ಕುಣಿಯುವ ಕಪಿ ಹಿಂಡು, ನೆಲ್ಲಿ, ನೇರಲ, ನಿಂಬೆ, ಮಲ್ಲಿಗೆ ವನದಲ್ಲಿ ಕೋಕಿಲ ಸ್ವರಗೈಯ್ವ ಸೊಬಗು ಆಲ, ಅಶ್ವತ್ಥ, ಪಲಾಶ ಭಾರಿಯ ವೃಕ್ಷ ವನದಲ್ಲಿ ನೋಡಿದರೆ ನೀರಾ ಮೇಲಾಡೊ ಹಂಸೆ, ದೂರಾಗಿ ಬೆಳೆದ ಅಡಕೆ, ತೆಂಗು ಇದ್ದರೆ ವನದಲ್ಲಾಡುವ ಮನುಗು ಬೆಕ್ಕು, ಕಸ್ತೂರಿ ಮೃಗ, ನವಿಲು ಹಿಂಡುಗಳಿವೆ.

ಪಟ್ಟಣದ ಬೀದಿಗಳಲ್ಲಿ ಮುತ್ತಿನಂಗಡಿ, ನಗರದ ಎಡಬಲ ನೋಡುತ ಕತ್ತೆತ್ತಿ ನೋಡಿದರೂ ಕಡೆಯಿಲ್ಲ.

ಸಾರಾಮೃತವುಳ್ಳ ಕ್ಷೀರ ನವನೀತ
ಸಾರಿ ಮಾರುವರು ಕಡೆಯಿಲ್ಲ
ಹಸಿರು ಬಳೆ ತೊಟ್ಟು ಕುಸುರಿನ
ಸಿಂಬೆಯಲಿ ಮೊಸರ ಗಡಿಗೆ

ಎಸಗುತ ಮಾರುವ ಬಿಸಜ ನೇತ್ರಿಯರು–ರಮಿಯರಸು ಒಮ್ಮೊಮ್ಮೆ ಬೀದೀಲೇ ಸುಮ್ಮನೆ ಸುಳಿದು ಬಕುತರ ಸಲಹುತ್ತಾನೆ.

ಬಜಾರದೊಳಗೆ ತೇಜೀ ಆನೆ ಸಾಲು ನೀಟಾದ ಬೀದಿಲಿ-ಥಾಟಾದ ಮನೆಗಳು ಮಾಟಾದ ಅಂಗಡಿ ಅಚ್ಚ ಜರತಾರಿ ಹೆಚ್ಚಿನ ಜವಳಿಯ... ಹಚ್ಚಿ ಮಾರುವರು ಕಡೆಯಿಲ್ಲ. ಜವಳಿ ಅಂಗಡಿಯ ಮುಂದೆ ಹವಳಗಾರರು, ಅಲ್ಲಿ ಕೊಳ್ಳುವ ನಾರಿಯರು ಕಡೆಯಿಲ್ಲ. ಬುಕ್ಕಿಟ್ಟು ಪರಿಮಳ ದ್ರವ್ಯ ಪೊಟ್ಟಣ ಕಟ್ಟಿ ತರತರಹ ನಾರಿ ತರತರಹ ದ್ರವ್ಯ ಕೊಟ್ಟು ಕೊಂಬುವರು ಕಡೆಯಿಲ್ಲ. ನಾಲ್ಕು ದಿಕ್ಕಿಗೆ ಆಕಳ ಹಿಂಡು ಎತ್ತೆತ್ತ ನೋಡಿದರೂ ಮುತ್ತಿನ ಪಲ್ಲಕ್ಕಿ....

'ಎಷ್ಟು ಸಂತಸವಮ್ಮಾ ದ್ವಾರಕೆ ಸಂತುಷ್ಟನಾದನು ಬೊಮ್ಮ' 'ಕೃಷ್ಣನ ಹಾಡುತ ಪಾಡುತ ಜನರೆಲ್ಲ ಉತ್ಕೃಷ್ಟರಾಗಿಹರು ಎಂದು ದ್ವಾರಕೆಯ ಸಮೃದ್ಧತೆ ಮತ್ತು ವೈಭವವನ್ನು ಕಣ್ಣಿಗೆ ಕಟ್ಟುವಂತೆ ಅವ್ವ ಚಿತ್ರಿಸುತ್ತಾರೆ.

ಮುಯ್ಯ ಹಿಂತಿರುಗಿಸುವಾಗ ಚಿತ್ತಜನಯ್ಯ ಅರ್ಥೀಲೆ ಹಸ್ತಿನಾವತಿಗೆ ಹೋಗುತ್ತಾನೆ. 'ನದಿ ನದಿಗಳ ದಾಟಿ ಮುದದಿಂದ ಮುಯ್ಯಕ್ಕೆ ಬರಲು ಇದೇ ವೈಕುಂಠ ಹೌದೇನಾ' ಎನ್ನುವಂತೆ ನಗರಿ ಬೆಳಗುತ್ತದೆ.

ದಾರಿಯುದ್ದಕ್ಕೂ ಸಾಲುವನ, ತರಣಿ ಸರೋವರ, ಗಗನಕ್ಕೆ ಸರಳಾಗಿ ಬೆಳೆದ ಮರ ಆಲ ಅಶ್ವತ್ಥ ಶಾಲ ಶಾಬರ ವೃಕ್ಷ. ಸಾಲು ಮಂಟಪ, ಪ್ಯಾಟಿ ಬಜಾರು ಸಾಲು ಕೋಟಿ ಸೂರ್ಯರ ಬೆಳಕಲೆ ಒಪ್ಪುವ ನಗರಿ 'ಸತ್ಯಲೋಕ ಹೌದೇನಾ' ಎನಿಸುತ್ತದೆ. 'ಅಟ್ಟಾಲದ ಮ್ಯಾಲೆ ದಿಟ್ಟಾದ ಗೊಂಬೆಗಳು ಕೃಷ್ಣಗೆ ಕೈಯ ಮುಗಿವಂತಿವೆ' ಚಂದದ ಮನೆಗಳಿಗೆ ಮುತ್ತಿನ ಹಂದರ ತೋರಣಗಳೆಷ್ಟು ರಂಗವಾಲಿ ಸೊಬಗು ತಾರಕ್ಕಿ ಹೊಳೆವಂತೆ ತೋರೋ ದೀವಿಗೆಗಳಿಂದ ಹಸ್ತಿನಾಪುರ ಕಂಗೊಳಿಸುತ್ತಿದೆ. ಬಲರಾಮನು ಹಲವು ಚಿತ್ರದ ದ್ವಾರ ನೋಡಿ ಬಲು ಬೆರಗಾಗುತ್ತಾನೆ. ಸುಂದರ ಉದ್ಯಾನ ಅಂದಾಗಿ ಬೆಳೆದ ತುಳಸಿಯ ವೃಂದಾವನ ಜನಕ್ಕೆಲ್ಲ ಚಂದ ತೋರುತ್ತದೆ. ಹಸ್ತಿನಾಪುರದ ಬಾಲೆರಿನ್ನೆಂತಾ ಚೆಲುವರು, ಒಳಗಿದ್ದ ಮಿತ್ರೇರಿನ್ನೆಂತ ಚಲುವರು? ಬರಿಯ ಮಾಣಿಕದ ಗೋಡೆ ಸರಿಯಾದ ಕನ್ನಡಿ ಪರಿ ಪರಿ ರತ್ನ ಹೊಳೆವೋವೆ___ಒಳಗಿದ್ದ ದೊರಗಳಿನ್ನೆಂತ ಚಲುವರು ಎನ್ನುವ ಉತ್ಪ್ರೇಕ್ಷೆಯಿದೆ. ಧರ್ಮರಾಯನ ರಾಜ್ಯದಲ್ಲಿ 'ಇಲಿ ಬೆಕ್ಕಿಗೆ ಹಿತ, ಹುಲಿ ಮೊಲಕೆ ಹಿತ, ಅಪ್ಪನ ರಾಜ್ಯದಿ ಸರ್ಪ ಕಪ್ಪೆಗೆ ಹಿತ, ಆನೆ ಸಿಂಹಕೆ ಹಿತ' ಎನ್ನುತ್ತಾರೆ. ಶ್ರೀಕೃಷ್ಣ ಬಂದನೆಂದಾಗ ನಗರಿ ಶತಕೋಟಿ ದೀವಟಿಗೆಗಳಿಂದ ಬೆಳಗುತ್ತದೆ.

ದ್ವಾರಕೆಯನ್ನು ವರ್ಣಿಸಿದಷ್ಟು ಹಸ್ತಿನಾಪುರದ ವೈಭವವನ್ನು ಅವ್ವ ವರ್ಣಿಸಲು ಹೋಗಿಲ್ಲ. ಹೊಸದಾದ ಯಾವ ವರ್ಣನೆಗಳೂ ಇಲ್ಲ. ಕೃಷ್ಣ ಭಕ್ತಿಯನ್ನು ಮೆರೆಯುವುದು ಕಾರಣವಿರಬಹುದು. ಮುಯ್ಯ ಕೊಡುವ (ಸ.ದಾ.ಸಾ. ಸಂ:೧೧, ೧೨,೧೩) ಹಾಡೊಂದರಲ್ಲಿ 'ಪಾರ್ಥನರಿಸಿಯರು ಪ್ರಾರ್ಥಿಸಿ ಕೈಮುಗಿಯೆ ತೀರ್ಥಯಾತ್ರೆಗಳೆಲ್ಲಾ ಕ್ಷೇತ್ರಮೂರ್ತಿಗಳು ಗೆಲಿಸಲು' ಎನ್ನುವ ಪ್ರಾರ್ಥನಾ ಪದ್ಯದೊಂದಿಗೆ ರಚಿತವಾಗಿದೆ. ತೀರ್ಥಕ್ಷೇತ್ರವನ್ನು ಸುತ್ತಿದ ಅನುಭವವನ್ನು ಕ್ಷೇತ್ರಮೂರ್ತಿಗಳನ್ನು ಪ್ರಾರ್ಥಿಸುವ ಮೂಲಕ ಪರಿಚಯಿಸುವ ನಿಲುವನ್ನಿಲ್ಲಿ ಕಾಣಬಹುದಾಗಿದೆ. ರಾಮೇಶ್ವರ, ಹಂಪಿ, ಕುಂಭಕೋಣ, ಶ್ರೀರಂಗ, ಬೇಲೂರು ಚನ್ನಕೇಶವ, ಅಹೋಬಲ, ಅಳಗಿರಿರಂಗ, ಮುಷ್ಣಿವಾಸಿ

ಚಲುವನಾರಾಯಣ, ಕನ್ಯಾಕುಮಾರಿ, ಸುಬ್ರಹ್ಮಣ್ಯ, ಹಂಪಿ ವಿರೂಪಾಕ್ಷ, ಹಂಪಿಯ ಯಂತ್ರೋದ್ಧಾರಕ ಹನುಮನನ್ನು 'ಬಲಗೊಂಡು' ಗೆದ್ದು ಬರಬೇಕೆಂದು ಬೇಡುತ್ತಾರೆ. ಗೋಕರ್ಣ, ಹಿಮವಂತ, ಕೇದಾರ, ಗೋಕುಲ, ಬೃಂದಾವನ, ಮಥುರೆ, ಕರವೀರಪುರದ ಪಂಢರಿನಾಥ, ಬದರಿನಾರಾಯಣ, ಅಯೋಧ್ಯಾ, ಗಯಾ, ಕಾಶಿ ವಿಶ್ವೇಶ್ವರ, ಹರಿಹರ, ಗಲಗಲಿಯ ನರಸಿಂಹ ಎಲ್ಲರನ್ನೂ ಮುಯ್ಯ ಗೆಲಿಸೆಂದು ಬಲಗೊಳ್ಳುತ್ತಾರೆ.

ಗಿರಿಯಮ್ಮನವರ ಆರಾಧ್ಯ ದೈವ ಮಲೆಬೆನ್ನೂರಿನ ಮೈಲಾರಲಿಂಗ, ಹೆಳವನಕಟ್ಟೆ ರಂಗ. 'ತಿಳಿಯದೋ ನಿನ್ನಾಟ ವೆಂಕಟರಮಣ' ಎನ್ನುತ್ತಾ ದಶಾವತಾರಗಳನ್ನು ವರ್ಣಿಸುತ್ತಾರೆ. 'ತಾರಮ್ಮಾ ಶ್ರೀರಂಗನ ಧಾಮನ ತಂದು ತೋರಮ್ಮಾ' ಎನ್ನುತ್ತಾ ಬೃಂದಾವನದೊಳಾಡುವ ಹೆಳವನಕಟ್ಟೆವಾಸನ ಜಾಲಿಹಾಳ ವೆಂಕಟೇಶನ-ಇನಿಯನ ಕರೆತಾರೆ' 'ಬಾಲೆ ನಿನಗೆ ಕಂಠಮಾಲೆಯ ಕೊಡುವೆ' 'ಗೋವಿಂದನ ಕಾಣದೆ ಒಂದು ನಿಮಿಷ ಯುಗವಾಗಿ ತೋರುತ್ತಲಿದೆ' ಎನ್ನುತ್ತಾರೆ. (ಸ.ದಾ.ಸಾ. ಸಂ:೧೮, ಭಾಗ-೧, ಕೀರ್ತನೆ-೭) ಕೃಷ್ಣನ ಪರಮಭಕ್ತೆಯಾದ ಗಿರಿಯಮ್ಮ ಅವನ ಲೀಲಾವಿನೋದವನ್ನು, ಅವನ ದಶಾವತಾರವನ್ನು ಪದೇ ಪದೇ ವರ್ಣಿಸುತ್ತಾರೆ. 'ಹ್ಯಾಂಗಿರಲಿನ್ನು ರಂಗನ ಬಿಟ್ಟೆನ್ನ ಹ್ಯಾಗಿರಲಿ ಮಂಗಳಾತ್ಮಜ ಹೆಳವನಕಟ್ಟೆ ರಂಗನ ಬಿಟ್ಟು' ಎನ್ನುವ ಕೀರ್ತನೆ. (ಸ.ದಾ.ಸಾ. ಸಂ:೧೮, ಭಾಗ-೧, ಕೀರ್ತನೆ-೨೪)

'ವಿಶ್ವಪತಿ ಇಂದು ಶೇಖರ...'ಎನ್ನುವ ಕೀರ್ತನೆಯಲ್ಲಿ (ಸ.ದಾ.ಸಾ. ಸಂ:೨೮, ಭಾಗ-೧, ಕೀರ್ತನೆ-೩೦) ಗೋಕರ್ಣ ಕ್ಷೇತ್ರದ ಹಾಗೂ ಮಹಾಬಲೇಶ್ವರನ ವರ್ಣನೆ ಇದೆ. 'ಬಲ್ಲವರು ಇದು ಭಾವಿಸಿ ಕಾಶಿಗಿಂತ ಮಹಿಮೆ ವೆಗ್ಗಳವಹುದೆನುತ' ಎನ್ನುತ್ತಾರೆ. 'ಇಂದ್ರಾದಿಗಳಿಗೆ ವರವಿತ್ತ ಮಹಾಬಲಲಿಂಗನ ಕಂಡೆ' ಎನ್ನುತ್ತಾರೆ.

ಮಂಗಳಂ ಮುಖ್ಯಪ್ರಾಣೇಶಂಗೆ (ಕೀರ್ತನೆ-೨೮, ಪುಟ:೨೬) ಎನ್ನುವ ಮಂಗಳದ ಹಾಡಿನಲ್ಲಿ 'ಬಲು ದೈತ್ಯರನ್ನೆಲ್ಲಾ ಗೆಲಿದು ಸ್ಥಿರವಾಗಿ ನಿಂದು ಭಕ್ತರ ಹೊರವ ದೂತ ಛಲದಂಗ ಹನುಮ' ಎನ್ನುತ್ತಾರೆ. ಹನುಮನ ಪ್ರತಾಪಗಳನ್ನು ವರ್ಣಿಸುತ್ತಾರೆ. ಕೊಕ್ಕನೂರ ಹನುಮನನ್ನು ಗಿರಿಯಮ್ಮ 'ರಂಗಯ್ಯನ ಅಕ್ಕರುಳ್ಳತಿದಾಸ' ಎನ್ನುತ್ತಾರೆ. ಮುದ್ದೇನಹಳ್ಳಿ ಹನುಮನನ್ನು ನೆನೆಯುತ್ತಾರೆ. 'ಭೀಮಾ ಹೋ ಭಲಾರೆ ನಿಸ್ಸೀಮ' (ಕೀ-೨೭, ಪುಟ-೨೫) ಎನ್ನುವ ಕೀರ್ತನೆಯಲ್ಲಿ ಹನುಮನ ಸಾಹಸಗಳನ್ನು ವರ್ಣಿಸಿದ್ದಾರೆ. ವೀರ ಕದನ ಕಠೋರ ರಾಣೆಬೆನ್ನೂರ ಬಯಲಾಂಜನೇಯನನ್ನು ನೆನೆಯುತ್ತಾರೆ.

ಹರಿದಾಸ ಪರಂಪರೆಯಂತೆ ಗಿರಿಯಮ್ಮನವರು ಹನುಮ ಮತ್ತು ಭೀಮರನ್ನು ಸ್ತುತಿಮಾಡಿದ್ದಾರೆ. ಆದರೆ ಮಧ್ವರ ಸ್ತುತಿಯು ಎಲ್ಲೂ ಕಂಡುಬರುವುದಿಲ್ಲ. 'ಲವಕುಶರ ಹಾಡಿ'ನ ಪ್ರಧಾನ ಪೀಠಿಕೆ ಪದ್ಯಗಳಲ್ಲಿ ಕುಲದ ಸ್ವಾಮಿ ಕದ್ರಿ ನರಿಸಿಂಹನ ಬಲಗೊಂಡು 'ಗುರು ಮಧ್ವರಾಯರ ನೆನೆದು'(ಪುಟ-೨೨೩) ಎಂದು ಸ್ಮರಿಸುತ್ತಾರೆ.

ಗಿರಿಯಮ್ಮನವರ ತವರೂರಿನ ಆರಾಧ್ಯದೈವ ಮೈಲಾರಲಿಂಗ. ಹಾಗಾಗಿ ರಂಗ-ಲಿಂಗ ಇಬ್ಬರನ್ನೂ ಸ್ತುತಿಸಿ 'ಈತ ರಂಗನಾದ ಹರಿಯು ಆತ ಲಿಂಗನಾದ ಹರನು' 'ಈತ ಲಿಂಗದೇವ

ಶಿವನು ಆತ ರಂಗಧಾಮ ವಿಷ್ಣು' (ಕೀ–೫೧, ಪುಟ–೫೩) ಎಂಬ ಹರಿಹರರ ಸಮನ್ವಯ ಸಾರಿದ್ದಾರೆ.

'ರಕ್ಷಿಸಿ ಏಕನಾಥೆ' (ಕೀರ್ತನೆ ೩೧, ಪು–೨೯) ಎನ್ನುವ ಕೀರ್ತನೆಯು ಚಾಮುಂಡಿಯ ಕುರಿತಾದ ಸ್ತುತಿ. 'ಮಲೆ ಬೆನ್ನೂರಿನಲ್ಲಿ ನಿಂದೆ' ಎಂದಿರುವುದರಿಂದ ಮಲೆಬೆನ್ನೂರಿನ ಚಾಮುಂಡಿಯ ದೇವಸ್ಥಾನ ಕುರಿತಿದ್ದಿರಬೇಕು. ಆಕೆ ಚಾಮುಂಡಿಯನ್ನು 'ಹೆಳವನಕಟ್ಟೆ ರಂಗನ ಸಹೋದರಿ' ಎನ್ನುತ್ತಾರೆ.

ಹರಿದಾಸ ಪರಂಪರೆಯಂತೆ ಹರಪನಹಳ್ಳಿ ಭೀಮವ್ವನವರು ಕೃಷ್ಣನ ಲೀಲೆಗಳನ್ನು ವರ್ಣಿಸಿದ್ದಾರೆ. 'ಅಪ್ಪ ವೆಂಕೋಬನ' (ಸ.ದಾ.ಸಾ. ಸಂ:೧೯, ಕೀರ್ತನೆ–೧) ಕೀರ್ತನೆ ತಿರುಪತಿ ವೆಂಕಟೇಶನ ಚರಿತ್ರೆಯನ್ನು ಹೇಳುತ್ತದೆ. 'ನರಸಖ ನಾರಾಯಣಕರೆವಾಸ' (ಕೀ.೭) ಎಂದಿದ್ದಾರೆ. ಅವರ ಹುಟ್ಟೂರು ನಾರಾಯಣದೇವರಕೆರೆ ಎಂಬುದನ್ನಿಲ್ಲಿ ಸ್ಮರಿಸಬೇಕು. ೫ ನುಡಿಗಳ 'ನಾರಾಯಣಾ ನಿಮ್ಮ ನಾಮ ನಾಲಿಗೆಯಲಿರಲಿ' ಎನ್ನುವ ಕೀರ್ತನೆ ನಾರಾಯಣನ ಅವತಾರಗಳನ್ನು ವರ್ಣಿಸುತ್ತದೆ. 'ಪಂಥರಪುರವಾಸ ಪಾಲಿಸೋ ಶ್ರೀಶ' (ಕೀ.೫೮) ಕೀರ್ತನೆಯಲ್ಲಿ ಶ್ರೇಷ್ಠ ಭಕ್ತನು ಕೊಟ್ಟ 'ಇಟ್ಟಿಕಲ್ಲಿನ ಮೇಲೆ ಗಟ್ಯಾಗಿ ನಿಂತಿದ್ದ' 'ಲೋಕ ಲೋಕದೊಳಗಿದ್ದಾನೇಕ ಜೀವರನೆಲ್ಲ ಸಾಕಿ ಸಾಕಾಯ್ತೆ ಕರವೇಕೆ ಟೊಂಕದಲ್ಲಿಟ್ಟೆ', 'ಸೃಷ್ಟಿ ಸ್ಥಿತಿಯೋ ಜನಸಂರಕ್ಷಣೆ ಮಾಡಿ ನಿನ್ನ ರಟ್ಟೆ ಸೋತವೇ ಟೊಂಕಕಿಟ್ಟು ಕೈಯನು ನಿಂತೆ' ಎನ್ನುವ ಸಾಲುಗಳು ಪಂಥರಿನಾಥನ ಮೂರ್ತಿಯ ಚಿತ್ರಣವನ್ನು ಕಣ್ಣಿಗೆ ಕಟ್ಟಿಸುತ್ತವೆ. ಪ್ರಾರ್ಥನಾ ಪದ್ಯಗಳಲ್ಲಿ ಸಂಪ್ರದಾಯದಂತೆ ಗಜಮುಖ ಗಣಪನಂಬುಜ ಪಾದಕ್ಕೆರಗಿ ಭಕ್ತಿಂದೆ ಭಜಿಸಿ ತ್ರಿಜಗವಂದಿತನ ಕತೆಯ ಪೇಳುತ್ತಾರೆ. 'ಅಂಬಾ ನೀ ಹೂ ಪಾಲಿಸೆ' (ಕೀ–೯೬, ಪುಟ–೧೯೦) ಎನ್ನುವುದು ಪಾರ್ವತಿಯನ್ನು ಹೂ ಬೇಡಿದ

ಹಾಡು. 'ಎಷ್ಟು ಹೇಳಲಿ ವೆಂಕಟಗಿರಿಯ ದೃಷ್ಟಿಗೆ ಬಹು ಸಿರಿಯ' (ಕೀ–೧೨೩, ಪುಟ–೨೩೭) ಎನ್ನುತ್ತಾ ವೆಂಕಟೇಶನ ಕ್ಷೇತ್ರವನ್ನು ಅವನ ಮಹಿಮೆಯನ್ನು ಕೊಂಡಾಡುತ್ತಾರೆ. 'ಈಶಾನೀಶ್ವರರಿಬ್ಬರೊಂದೇನೇ' (ಕೀ–೧೨೮) ಎನ್ನುತ್ತಾ ಹರಿಹರರ ಸಮನ್ವಯ ಸಾರುತ್ತಾರೆ. ಕೀರ್ತನೆಯು ರಾಮಾಯಣ, ಮಹಾಭಾರತ, ಭಾಗವತಗಳ ಕತೆಯನ್ನೊಳಗೊಂಡಿರುವುದರಿಂದ ದ್ವಾರಕೆ ಹಸ್ತಿನಾವತಿಗಳು ನುಸುಳಿ ಬರುತ್ತವೆ. ರಾಮಾವತಾರ, ಕೃಷ್ಣಾವತಾರವನ್ನು ವರ್ಣಿಸುವ ಕೀರ್ತನೆಗಳು ಅಯೋಧ್ಯೆ–ದ್ವಾರಕೆಯನ್ನು ವರ್ಣಿಸುತ್ತವೆ.

ಅಂಬಾಬಾಯಿಯವರು ಮಂಡಲಗಿ ಹನುಮಂತನ ಬಗ್ಗೆ (ಕೀರ್ತನೆ ೧೦೪, ೧೦೮, ೧೧೧, ೧೨೩, ೧೨೪) ಹಂಪಿಯ ಯಂತ್ರೋದ್ಧಾರ ಹನುಮ (ಕೀರ್ತನ ೧೧೦, ೧೧೬, ೧೨೦, ೧೨೨), ಚಳ್ಳಕೆರೆ ಹನುಮಂತ (ಕೀರ್ತನೆ ೧೧೩, ೧೧೪), ಬೆಳಗಾವಿಯ ವೀಣೆ ಧರಿಸಿದ ಹನುಮ (ಕೀರ್ತನ ಸಂಖ್ಯೆ ೧೧೭, ೧೨೭), ಮೊದಲಘಟ್ಟದ ಹನುಮ (ಕೀ. ೧೨೧,೧೨೬)ರಲ್ಲಿ ಆಯಾ ಕ್ಷೇತ್ರಗಳ ಮಹತ್ವ, ಹನುಮ ಮಾಡಿದ ರಾಮನ ಸೇವೆ, ಭೀಮನಾಗಿ ತೋರಿದ ಕೃಷ್ಣ ಭಕ್ತಿ, ಆನಂದತೀರ್ಥರಾಗಿ ಮಾಡಿದ ವೇದವ್ಯಾಸರ ಸೇವೆಗಳನ್ನು ಚಿತ್ರಿಸಿದ್ದಾರೆ.

ಶ್ರೀವೆಂಕಟೇಶಸ್ತೋತ್ರದಲ್ಲಿ ಅಂಬಾಬಾಯಿ ತಿರುಪತಿಯ ಯಾತ್ರೆಯನ್ನು ಹೀಗೆ ವರ್ಣಿಸುತ್ತಾರೆ.

ಹಿಂದೇ ಮಾಡೀದ ಪುಣ್ಯ ಬಂದೂ ತಾ ಒದಗಿಗೊ
ಏಂದಾನ ಗಿರಿಯ ಯಾತ್ರೇ
ಸಂದೀಸೆ ವೇಂಕಟನ ಸಂದಾರುಶನದಿಂದ
ಬೆಂದೂ ಹೋಗುವುದು ದುರಿತ

ನಿಡಗುರಕಿ ಜೀವೂಬಾಯಿಯವರ 'ಉಡುಪಿ ಕೃಷ್ಣನ ನೋಡಿರಿ' ಎನ್ನುವ ಕೀರ್ತನೆಯಲ್ಲಿ (ಕೀ.೩, ಪುಟ–೫) ಮಧ್ವ ಸರೋವರ, ಅನಂತೇಶ್ವರ ವರ್ಣನೆ ಬರುತ್ತದೆ. ಮಧ್ವ ಸರೋವರವು ಉಡುಪಿಯ ಕೃಷ್ಣ ಮಠದಲ್ಲಿರುವ ಸರೋವರ. ಅನಂತೇಶ್ವರ ದೇವಾಲಯ ಉಡುಪಿಯ ಕೃಷ್ಣ ಮಠದ ಸಮೀಪದಲ್ಲಿರುವ ಪ್ರಾಚೀನ ದೇವಾಲಯ. ಅನಂತನನ್ನು ಈಶ್ವರನನ್ನು (ಹರಿ ಹರ) ನೆನಪಿಸುವ ದೇವಾಲಯ. 'ಎಂಥ ಚೆಲುವ ಶ್ರೀಹರಿ ಭಕ್ತರೋದ್ಧಾರಿ' ಎನ್ನುವ ಕೀರ್ತನೆ (ಸಂ:೭, ಪುಟ–೧೫)ಯಲ್ಲಿ ತಿರುಪತಿ ಕ್ಷೇತ್ರಕ್ಕೆ ಉರಗಗಿರಿ ಎಂದು ಹೆಸರಿಸಿದೆ. ಕೀರ್ತನೆ ತುಂಬಾ ವೆಂಕಟೇಶನ ವರ್ಣನೆಯಿದೆ. ಉರಗಗಿರಿ ವಾಸನ ಕತೆ ಹೀಗಿದೆ– ಒಮ್ಮೆ ವಾಯು ದೇವನು ನಾರಾಯಣನ ದರ್ಶನಕ್ಕಾಗಿ ವೈಕುಂಠಕ್ಕೆ ಬಂದ. ಶೇಷನಿಗೂ ವಾಯುವಿಗೂ ತಾನೇ ಶ್ರೇಷ್ಠ ಎಂಬ ಚರ್ಚೆ ನಡೆಯಿತು. ಅವರ ಶ್ರೇಷ್ಠತೆಯನ್ನು ಪರೀಕ್ಷಿಸಲು ಹರಿ ಪರೀಕ್ಷೆ ಒಡ್ಡಿದ. ಉತ್ತರ ದಿಕ್ಕಿನಲ್ಲಿ ಮೇರು ಪರ್ವತಕ್ಕೆ ಪುತ್ರನೆಂದೆನಿಸಿದ ಆನಂದಾದ್ರಿ ಇದೆ. ಶೇಷನು ಅದನ್ನು ಸುತ್ತಿಕೊಂಡು ನಿಲ್ಲಲಿ. ವಾಯುವು ಅದನ್ನು ಕದಲಿಸಲಿ ಎಂದಾಗ, ಹರಿ ಸ್ಮರಣೆ ಮಾಡಿದ ವಾಯು ಪರ್ವತವನ್ನು ದಕ್ಷಿಣ ದಿಕ್ಕಿಗೆ ಐವತ್ತೊಂದು ಸಾವಿರ ಯೋಜನ ದೂರಕ್ಕೆ ನೂಕಿಬಿಟ್ಟನು. ಆಮೇಲೆ ವಾಯುವಿನ ಅನುಗ್ರಹ ಪಡೆದ ಆ ಪರ್ವತ ಸುವರ್ಣಮುನಿ ನದಿಯ ಉತ್ತರ ದಡದಲ್ಲಿ ನಿಂತಿತು. ಆದಿಶೇಷ ಕ್ಷಮೆ ಬೇಡಿದ. ಇದು ದ್ವಾಪರ ಯುಗದಲ್ಲಿ ನಡೆದ ಕತೆ– ಇದೇ ಈಗ ತಿರುಪತಿ ಬೆಟ್ಟ.

'ಅವುತುಕೊಂಡಿ ಯಾಕೋ' ಎನ್ನುವ ವಿಷ್ಣುವಿನ ದಶಾವತಾರ ವರ್ಣಿಸುವ ಕೀರ್ತನೆಯಲ್ಲಿ 'ಕುಳಿತೆ ಕೂಡಲಿಯ ತೀರದಲಿ' ಎಂದು ಕೂಡಲಿ ಕ್ಷೇತ್ರದ ಪ್ರಸ್ತಾಪ ಬರುತ್ತದೆ. ಕೂಡಲಿ ಶಿವಮೊಗ್ಗಕ್ಕೆ ಹದಿನಾರು ಕಿ.ಮೀ. ಈಶಾನ್ಯಕ್ಕಿರುವ ಗ್ರಾಮ. ಇಲ್ಲಿ ಬ್ರಹ್ಮೇಶ್ವರ, ನರಸಿಂಹ, ರಾಮೇಶ್ವರ ಎಂಬ ಪ್ರಾಚೀನ ದೇವಾಲಯಗಳಿವೆ. ತುಂಗಾ ಮತ್ತು ಭದ್ರಾ ನದಿಗಳು ಸಂಗಮವಾಗುವುದರಿಂದ ಇದಕ್ಕೆ ಕೂಡಲಿ ಎಂಬ ಹೆಸರು ಬಂದಿದೆ.

'ಹರಿ ಮಂದಿರ ಹರಿ ಮಂದಿರ ಈ ಸ್ಥಳವು' (ಕೀ.೪೬) ಎನ್ನುವ ಕೀರ್ತನೆಯಲ್ಲಿ 'ಮೂಕಾಂಬಿಕಾ ನಾಮದಿಂದಲಿ ಪ್ರಜ್ವಲಿಸಿ ಮೂಕಾಸುರನನ್ನು ವಧಿಸಿದ ಶ್ರೀ ಕೋಲಾಪುರದಲ್ಲಿ...ಎಂದು ಕೊಲ್ಲಾಪುರದ ಪ್ರಸ್ತಾಪವಿದೆ.

ಅಂಬಾಬಾಯಿಯವರು ಕೀರ್ತನೆಗಳಲ್ಲಿ (ಕೀ.೧೧೦, ೧೧೬, ೧೨೦, ೧೨೨) ಯಂತ್ರೋದ್ಧಾರಕ ಹನುಮನನ್ನು ಸ್ಮರಿಸುತಾರೆ. ಇದರಲ್ಲಿ ಅವನ ಸಾಹಸಗಳನ್ನು ವರ್ಣಿಸಿದೆ. ವಿಜಯನಗರದ ಅರಸರ ಗುರುಗಳಾಗಿದ್ದ ವ್ಯಾಸರಾಜರು ಪ್ರತಿಷ್ಠಾಪಿಸಿದ ೭೩೨ ಪ್ರಾಣದೇವರ ಮೂರ್ತಿಗಳಲ್ಲಿ ಹಂಪೆಯ ಯಂತ್ರೋದ್ಧಾರಕ ಪ್ರಾಣದೇವರು ವಿಶಿಷ್ಟವಾದದ್ದು. ತುಂಗಾನದಿಯ

ಚಕ್ರತೀರ್ಥದ ದಡದಲ್ಲಿರುವ ಮಾತಂಗ ಬೆಟ್ಟದ ಮೇಲೆ ಯಂತ್ರೋದ್ಧಾರಕ ನಾಮಕ ಪ್ರಾಣದೇವರನ್ನು ವ್ಯಾಸರಾಯರು ಪ್ರತಿಷ್ಠಾಪಿಸಿದರು. ರಾಮನು ಹನುಮಂತನಿಗೆ ಮೊದಲು ದರ್ಶನ ನೀಡಿದ ಸ್ಥಳವಿದೆಂದು ಪ್ರತೀತಿಯಿದೆ. ಈ ಸ್ಥಳದಲ್ಲಿ ಒಂದು ಬಂಡೆಯ ಮೇಲೆ ವ್ಯಾಸರು ಅಂಗಾರದಿಂದ ಹನುಮಂತನ ಆಕಾರವನ್ನು ಬರೆದರು. ಆ ಆಕಾರ ಜೀವ ತಳೆದು ಹಾರಿಹೋಯಿತು. ಪುನಃ ಬರೆದಾಗಲೂ ಹಾರಿಹೋಯಿತು. ಹೀಗೆ ಹನ್ನೆರಡು ಬಾರಿ ಆದಾಗ, ಕೊನೆಗೆ ಯೋಗಾಸನಾ ರೂಢನಾದ ಹನುಮನ ಚಿತ್ರ ಬರೆದು ಯಂತ್ರದಿಂದ ದಿಗ್ಬಂಧನ ಮಾಡಿ ಹಾರಿ ಹೋಗಿದ್ದ ಹನ್ನೆರಡು ಕಪಿಗಳನ್ನು ಮಾಲಾಕಾರವಾಗಿ ಚಿತ್ರಿಸಿ ದ್ವಾದಶ ನಾಮಗಳನ್ನು ಇಟ್ಟರು. ಈ ಬಾರಿ ಮೂರ್ತಿ ಚಲಿಸಲಿಲ್ಲ. ಅದನ್ನೇ ಮೂರ್ತಿ ರೂಪದಲ್ಲಿ ಕೆತ್ತಿಸಿ ಪ್ರತಿಷ್ಠೆ ಮಾಡಿದರು. ಯಂತ್ರಗಳಲ್ಲಿ ಬರೆಯುವಂತೆ ಷಟ್ಕೋನವನ್ನು ಅದರ ಸುತ್ತ ವಲಯಾಕಾರವನ್ನು ಅದರ ಸುತ್ತಲೂ ಪದ್ಮದಳವನ್ನು ಒಂದರ ಮೇಲೆ ಒಂದಕ್ಕೊಂದು ಹೆಣೆದುಕೊಂಡಿರುವ ಹನ್ನೆರಡು ಕಪಿಗಳ ಯಂತ್ರವನ್ನು ಬಿಗಿದಂತೆ ಮಧ್ಯದಲ್ಲಿ ಧ್ಯಾನ ಮಗ್ನನಾದ ಪ್ರಾಣದೇವರನ್ನು ರೂಪಿಸಲಾಗಿದೆ. ಈ ಎಲ್ಲಾ ವಿವರಗಳನ್ನು ಕೀರ್ತನೆಗಳಲ್ಲಿ ಕೊಡಲಾಗಿದೆ.

ಇವರ ಕೀರ್ತನೆ (ಕೀ.೧೨೧, ೧೨೬)ಗಳಲ್ಲಿ ಮೊದಲಘಟ್ಟೇಶ ಎಂದು ಮೊದಲಘಟ್ಟದ ಪ್ರಾಣದೇವರನ್ನು ಕುರಿತಾದ ಕೀರ್ತನೆಗಳಿವೆ. ಮೊದಲಘಟ್ಟ ತುಂಗಾ ತೀರದ ಒಂದು ಗ್ರಾಮ. ವ್ಯಾಸರಾಜರಿಂದ ಸಂಸ್ಥಾಪಿಸಲ್ಪಟ್ಟಿದ್ದು ದುಷ್ಟರು ಯಾರೋ ಅದನ್ನು ಮೂರು ತುಂಡುಗಳಾಗಿ ಭಗ್ನಗೊಳಿಸಿ ತುಂಗೆಯಲ್ಲಿ ಎಸೆದರು. ವ್ಯಾಸರಿಗೆ ಸ್ವಪ್ನವಾಗಿ ಶೋಧಿಸಿದಾಗ ವಿಗ್ರಹದ ತುಂಡುಗಳು ದೊರೆತವು. ಅವುಗಳನ್ನು ಒಟ್ಟಿಗೆ ಸೇರಿಸಿ ಮತ್ತೆ ಪ್ರತಿಷ್ಠಾಪಿಸಿದಾಗ ಒಂದು ವಾರದಲ್ಲಿಯೇ ಅವು ಕೂಡಿಕೊಂಡವು.

ಯದುಗಿರಿಯಮ್ಮನವರು ಬರೆದಿರುವ 'ಕಂಡು ನಾ ಧನ್ಯನಾದೆನು' (ಕೀ.೧) ಶ್ರೀರಂಗನಾಥಸ್ವಾಮಿಯ ದಿವ್ಯಪಾದ ಕಮಲಗಳನ್ನು ಕುರಿತು ರಚಿಸಿದ ಸ್ತುತಿಪರ ಕೀರ್ತನೆ ಎಂದರೆ ಗಯಾ ಕ್ಷೇತ್ರದ ಶ್ರೀವಿಷ್ಣುಪಾದವನ್ನು ಕುರಿತಾದದ್ದು. ಇಲ್ಲಿನ ವಿಷ್ಣು 'ಗಧಾದರ' ಎನ್ನಿಸಿಕೊಂಡಿದ್ದಾನೆ. ಮುಕ್ತಿಗಾಗಿ ವಿಷ್ಣುಪಾದಗಳಿಗೆ ಶರಣಾಗಬೇಕೆಂಬುದು ವೈಷ್ಣವ ಸಂಪ್ರದಾಯ. ಕರಿಗಿರಿವಾಸ ವರದರಾಜ (ಕೀ.೧೯)ನಿಗೆ ಶರಣಾಗುವ ಭಾವ ತುಂಬಿದೆ. ಇದು ಕಾಂಚೀಪುರ, ತಮಿಳುನಾಡಿದ ಯಾತ್ರಾಸ್ಥಳ. ವಿಷ್ಣುಕಂಚಿಯನ್ನು ಕರಿಗಿರಿ, ಹಸ್ತಿಶೈಲ ಎಂದು ಕರೆಯುತ್ತಾರೆ. ವರದರಾಜ ಇಲ್ಲಿನ ಕ್ಷೇತ್ರಮೂರ್ತಿ. 'ಪಾರ್ಥಸಾರಥಿ ನಿಮ್ಮ ಸೇವೆಯ ಮಾಡಿ ಸಾರ್ಥಕವಾದೆನೊ' (ಕೀ.೨೦) ಎನ್ನುವ ಕೀರ್ತನೆಯಲ್ಲಿ ಆದಿಶೇಷನ ಮೇಲೆ ಮಲಗಿದ 'ಅನಾದಿರಂಗನ ಸೇವೆಗೆ' ಎಂದಿದೆ. ಇದು ಶಿವಮೊಗ್ಗಕ್ಕೆ ಐದು ಮೈಲಿ ದೂರವಿರುವ ತುಂಗಾ ತೀರದ ಗುಡ್ಡದ ಮೇಲಿನ ಅತಿ ಪ್ರಾಚೀನ ದೇವಾಲಯ. ಇದು ಉದ್ಭವಮೂರ್ತಿ ರಂಗನಾಥಸ್ವಾಮಿಯ ದೇವಾಲಯ. ಯದುಗಿರಿಯಮ್ಮನ ಆರಾಧ್ಯ ದೈವ. ಇಂದ್ರನು ಪ್ರತಿಷ್ಠಾಪಿಸಿದನೆಂಬ ಪ್ರತೀತಿ ಇದೆ. 'ದೃಷ್ಟಿಯಿದ್ಯಾತಕೆ ಉಡುಪಿ ಕೃಷ್ಣನ ನೋಡದ' (ಕೀ.೨೧) ಎನ್ನುವ ಕೀರ್ತನೆಯಲ್ಲಿ ಯದುಗಿರಿಯಮ್ಮನು ಉಡುಪಿ ಕೃಷ್ಣನ ಎದುರಿಗೇ ರಚಿಸಿದ

ಕೀರ್ತನೆ ಇದು. ಮಧ್ವರಾಯನಿಗೊಲಿದವನಾಗಿ, ಅಷ್ಟಮಠಗಳಿಂದಲೂ ಪೂಜಿಸಲ್ಪಡುವವನಾಗಿ ಕಡಗೋಲು ಹಿಡಿದು ನಿಂದಿರುವ ಕೃಷ್ಣ ಅವನು. 'ಯದುಗಿರಿವಾಸ ನಾರಾಯಣ' (ಕೀ.೨೪) ಎನ್ನುವ ಕೀರ್ತನೆ ಯದುಗಿರಿ (ಮೇಲ್ಕೋಟೆ) ಈಗಿನ ಮಂಡ್ಯ ಜಿಲ್ಲೆಯಲ್ಲಿದೆ. ಯದುಶೈಲ, ಯಾದವಗಿರಿ, ವೇದಾದ್ರಿ, ದಕ್ಷಿಣ ಬದರಿ, ಯತಿಶೈಲ ಎಂದೆಲ್ಲಾ ಕರೆಸಿಕೊಳ್ಳುವ ಅದರ ವಿವಿಧ ಹೆಸರುಗಳನ್ನು ಪ್ರಸ್ತಾಪಿಸುತ್ತಾ ಕ್ಷೇತ್ರಮಹಿಮೆ ಕೊಂಡಾಡುತ್ತಾರೆ. ಈ ವಿವಿಧ ಹೆಸರುಗಳು ಬಂದ ಪುರಾಣ ಕಲ್ಪಿತ ಕತೆಯ ಚಿತ್ರಣವಿದೆ. ಇವರ 'ಶೇಷಾದ್ರಿವಾಸ' (ಕೀ.೨೬) 'ಶ್ರೀನಿವಾಸಮೂರ್ತಿ' (ಕೀ.೨೭) ಕೀರ್ತನೆಗಳು ತಿರುಪತಿಯ ಶ್ರೀನಿವಾಸನ ಮೂರ್ತಿ ಮತ್ತು ಮಹಿಮೆ ವರ್ಣಿಸುತ್ತದೆ. 'ಮಂಗಳಂ ಸರಸ್ವತಿಯು' (ಕೀ.೨೮) ಕೀರ್ತನೆಯು ಶೃಂಗೇರಿ ಶಾರದಾಂಬೆಯ ಮಹಿಮೆಯನ್ನೊಳಗೊಂಡಿದೆ. 'ಶ್ರೀರಂಗ ಮಹಾತ್ಮಂ' ಎನ್ನುವ (ಕೀ.೨೯-೪೦) ಕೀರ್ತನೆಗಳು ಶ್ರೀರಂಗಕ್ಷೇತ್ರದಲ್ಲಿ ನಡೆಯುವ ಉತ್ಸವ, ವಿವಿಧ ಸೇವೆಗಳು, ಲಭ್ಯವಿರುವ ವಸತಿ ಗೃಹಗಳ ಪರಿಚಯ, ನಡೆಯುವ ಪ್ರಬಂಧ ಗೋಷ್ಠಿಗಳು, ಆಳ್ವಾರ್-ಆಚಾರ್ಯರ ವೈಷ್ಣವ ಪರಂಪರೆಯ ಸ್ತುತಿಗಳ ಬಗ್ಗೆ, ಮಾಸೋತ್ಸವ, ಧರ್ನುಮಾಸ ಸೇವೆ, ಕೊಟ್ಟಿಗೋತ್ಸವ, ಅರಯಾರ್ ಹಾಡು, ಮೋಹಿನಿ ಅಲಂಕಾರ, ಮಂಗಳದ ನುಡಿಗಳು ಮುಂತಾದ ಕ್ಷೇತ್ರ ಮತ್ತು ಶ್ರೀರಂಗನ ಮಹಾತ್ಮೆಗಳನ್ನು ಒಳಗೊಂಡ ಮಂಗಳದ ನುಡಿಗಟ್ಟುಗಳು.

ಓರಾಬಾಯಿ ಲಕ್ಷ್ಮಿದೇವಮ್ಮನವರ 'ನೋಡಿದೆನು ಭದ್ರಾಚಲ ವಾಸನ ನೋಡಿದೆನು' (ಕೀ.೧೮) ಎನ್ನುವ ಕೀರ್ತನೆಯಲಿ 'ಕಡುಹರುಷದಲಿ ರಾಮನ ತೊಡೆಯ ಮ್ಯಾಲೆ ಒಪ್ಪಿದ ಮಡದಿ ಸೀತಾದೇವಿ'ಯನ್ನು ಸಡಗರದಿ ನೊಡಿದ್ದಾರೆ. ಭದ್ರಾಚಲ ರಾಮನ. ಭದ್ರಾಚಲವು ಆಂದ್ರಪ್ರದೇಶದ ಹೈದರಾಬಾದಿನ ಹತ್ತಿರವಿರುವ ನಗರ. ಭದ್ರಾಚಲ ರಾಮನ ದೇವಾಲಯದ ಹತ್ತಿರ ಗೋದಾವರಿ ನದಿ ಇದೆ. ರಾಮದಾಸನೆಂಬುವವನು ಶ್ರೀರಾಮನ ಭಕ್ತ. ಹೈದರಾಬಾದಿನ ನಿಜಾಮ (ತಾನೀಶ)ನ ಪರವಾಗಿ ಕಂದಾಯ ವಸೂಲಿ ಮಾಡುವ ಕೆಲಸ ಮಾಡುತ್ತಿದ್ದನು. ರಾಮಭಕ್ತನಾದುದರಿಂದ ದೇವಾಲಯ ಅಂದಗೊಳಿಸಲು, ಛತ್ರ ಕಟ್ಟಿಸಲು ಹಣವನ್ನು ಬಳಸಿದರು. ಕಂದಾಯವನ್ನು ಸರ್ಕಾರಕ್ಕೆ ಸಲ್ಲಿಸದಿದ್ದಾಗ ಕಾರಣ ಕೇಳಿದ ನಿಜಾಮನಿಗೆ ರಾಮದಾಸರು ನಿಜ ಹೇಳಿದರು. ನವಾಬನು ಅವರನ್ನು ಗೋಲ್ಕೊಂಡ ಜೈಲಿನಲ್ಲಿಟ್ಟರು. ಸೆರೆಯಲ್ಲಿದ್ದಾಗ ರಾಮದಾಸರು ಗೋಡೆಯ ಮೇಲೆ ಬರೆದಿರುವ ರಾಮಾಯಣದ ಚಿತ್ರಗಳನ್ನು ಈಗಲೂ ಕಾಣಬಹುದು. ಹೀಗಿರುವಾಗ ಒಂದು ದಿನ ಇಬ್ಬರು ಸುಂದರ ತರುಣರು ಹಣದ ಥೈಲಿಗಳನ್ನು ತೆಗೆದುಕೊಂಡು ಬಂದು ತಾನೀಶನಿಗೆ ಒಪ್ಪಿಸಿದರು. ತಾವು ಭದ್ರಾಚಲ ರಾಮದಾಸನ ಸೇವಕರೆಂದು, ತಮ್ಮ ಹೆಸರು ರಾಮಣ್ಣ, ಲಕ್ಷ್ಮಣ್ಣ ಎಂದು ತಿಳಿಸಿದರು. ಆ ತರುಣರ ಸುಂದರ ರೂಪಕ್ಕೆ ಬೆರಗಾಗಿ, ತಾವು ಯಾರೆಂಬುದನ್ನು ನಿಜ ಹೇಳಬೇಕೆಂದು ಒತ್ತಾಯಿಸಿದಾಗ ರಾಮ ಲಕ್ಷ್ಮಣರ ದರ್ಶನವಾಯಿತು. ರಾಮದಾಸರಂತಹ ಭಕ್ತ ಶ್ರೇಷ್ಠರನ್ನು ಸೆರೆಯಲ್ಲಿಟ್ಟಿದ್ದಕ್ಕಾಗಿ ಪರಿತಪಿಸಿ ನವಾಬನು ಬಿಡುಗಡೆಮಾಡಿದನು. ಶ್ರೀರಾಮದಾಸರು ನನಗಾಗದ ದರ್ಶನ ತಾನೀಶನಿಗಾಯಿತಲ್ಲಾ ಅವನೇ ಮಹಾಭಕ್ತ ಎಂದು ಪ್ರಶಂಶಿಸಿದರು. ನಂತರ ಅವರಿಗೂ ರಾಮಲಕ್ಷ್ಮಣರ ದರುಶನವಾಯಿತು. (ಕಥೆ ಪುಟ ೭೦೯-೭೧೦).

'ನೋಡಿದೆನು ಶ್ರೀಶೈಲವಾಸನ' ಎನ್ನುವ ಇವರ ಕೀರ್ತನೆಯಲ್ಲಿ (ಕೀ.೧೯) 'ಸೋಂಪಿನಿಂದಲೇ ಬಂದೆನು ಸಾಕ್ಷಿ ಗಣಪನೆ, ಕೈಯ ಮುಗಿದು ಶ್ರೀಶೈಲ ಶಿಖರವ ಕಂಡೆ' ಎನ್ನುತ್ತಾರೆ. ಶ್ರೀಶೈಲವು ಆಂಧ್ರಪ್ರದೇಶದ ಒಂದು ಮಹಾನ್ ವೀರಶೈವ ಕ್ಷೇತ್ರ. ಕ್ಷೇತ್ರದ ಅಧಿದೈವ ಶ್ರೀಶೈಲ ಮಲ್ಲಿಕಾರ್ಜುನ. ಶಿವಶರಣೆ ಅಕ್ಕಮಹಾದೇವಿ ಈ ಮಲ್ಲಿಕಾರ್ಜುನನಿಗಾಗಿ ಬದುಕನ್ನೇ ಮುಡುಪಾಗಿಟ್ಟಳು. ರಾಜನನ್ನು ಕೈಹಿಡಿದಿದ್ದರೂ ಸರ್ವಸುಖ ತ್ಯಾಗಮಾಡಿ, 'ಮಲ್ಲಿಕಾರ್ಜುನನೆನ್ನ ಗಂಡನೆಂದು ಅವನಲ್ಲಿ ಐಕ್ಯವಾದಳು'.

ಕಳಸದ ಸುಂದರಮ್ಮನವರ (ಕೀ.೨೦) ಮತ್ತು ಓರಾಬಾಯಿ ಲಕ್ಷ್ಮಿದೇವಮ್ಮನವರ ಕೀರ್ತನೆಗಳಲ್ಲಿ ಸೋದೆ ಕ್ಷೇತ್ರದ ಪ್ರಸ್ತಾಪ ಮತ್ತೆ ಮತ್ತೆ ಬರುತ್ತದೆ. ಸೋದೆ ಅಥವಾ ಸೋಂದಾ (ಸ್ವಾದಿಪುರ) ಉತ್ತರಕರ್ನಾಟಕದ ಶಿರಸಿಯಿಂದ ಏಳೆಂಟು ಮೈಲಿ ದೂರದಲ್ಲಿದೆ. ವಾದಿರಾಜರ ಕಾರ್ಯಕ್ಷೇತ್ರವಿದು. ವಾದಿರಾಜರು ಸೋದೆಯಲ್ಲಿದ್ದಾಗ ಸೋದೆಯ ರಾಜನಾದ ಸರಸಪ್ಪನಾಯಕನು ವಾದಿರಾಜರಿಗೆ ಬೇಕಾದ ಎಲ್ಲ ಅನುಕೂಲಗಳನ್ನು ಮಾಡಿಕೊಟ್ಟನು. ಸರಸಪ್ಪನಾಯಕನ ಅಳಿಯನು ಅಕಾಲ ಮರಣಕ್ಕೆ ತುತ್ತಾದಾಗ ವಾದಿರಾಜರು ಲಕ್ಷ್ಮಿಶೋಬಾನೆಯನ್ನು ಬರೆದುಕೊಟ್ಟು ಅವನನ್ನು ಬದುಕಿಸಿದರು. ಸೋದೆಯಲ್ಲಿ ವಾದಿರಾಜರ ಮಂದಿರವಿದೆ. ಧವಳಗಂಗೆಯಿದ್ದಾಳೆ. ಪ್ರಾಣದೇವರಿದ್ದಾರೆ. ಭೂತರಾಜನಿದ್ದಾನೆ. ಪಂಚಬೃಂದಾವನವಿದೆ.

ಕಳಸದ ಸುಂದರಮ್ಮನವರ ಕೀರ್ತನೆಯಲ್ಲಿ ಮಧುರೆಯ ವರ್ಣನೆ ಬರುತ್ತದೆ. ಗೋಪಿಯರು ಕೃಷ್ಣನ ಮುಖಾರವಿಂದ ನೋಡಲು ಹಂಬಲಿಸುವ ವಸ್ತುವನ್ನಿದು ಒಳಗೊಂಡಿದೆ. 'ನೋಡಿ ದಣಿದವೆನ್ನ ಕಂಗಳು' (ಕೀ.೨೨) ಉಡುಪಿಯ ಅಷ್ಟಮಠಗಳ ಯತಿಗಳ ಸ್ತೋತ್ರ. ಸುದೀಂದ್ರತೀರ್ಥ, ವಿಬಧಪ್ರಿಯತೀರ್ಥರು, ವಿದ್ಯಾಪುಣ್ಯತೀರ್ಥ, ವಿಶ್ವೇಂದ್ರತೀರ್ಥರು, ವಿದ್ಯಾಸಮುದ್ರ ಶ್ರೀಪಾದಗಳವರು, ರಘುಮಾನ್ಯತೀರ್ಥರು, ಲಕ್ಷ್ಮೀಂದ್ರತೀರ್ಥರು, ವಿಶ್ವಮಾನ್ಯ ತೀರ್ಥರು ಇವರೇ ಅಷ್ಟಯತಿಗಳು.

ಶ್ರೀಮತಿ ರಾಧಾಬಾಯಿ ಮತ್ತು ಸರಸ್ವತೀಬಾಯಿಯವರ ಕೀರ್ತನೆಗಳು ಹಾಗೂ ಇತರ ಕೀರ್ತನಕಾರರಲ್ಲೂ ಗುರುವಂದನಾ ಸ್ತೋತ್ರಗಳು ಹಾಗೂ ಪ್ರಾರ್ಥನಾ ಪದ್ಯಗಳಲ್ಲಿ ರಾಘವೇಂದ್ರಯತಿಗಳ ಸ್ಮರಣೆಯಿದೆ. ರಾಘವೇಂದ್ರ ಯತಿಗಳು ಮಂತ್ರಾಲಯದ (ಮಂಚಾಲೆ) ಯತಿವರ್ಯರು. ಮಂಚಾಲೆ ಈಗಿನ ಆಂಧ್ರಪ್ರದೇಶದಲ್ಲಿದೆ. ಅಲ್ಲಿ ರಾಘವೇಂದ್ರಸ್ವಾಮಿಗಳ ಬೃಂದಾವನವಿದೆ. ಪರಿಮಳಾಚಾರ್ಯರೆಂದು ಪ್ರಸಿದ್ಧರಾದ ಇವರು ಮಧ್ವಾಚಾರ್ಯರ ಗ್ರಂಥಗಳಿಗೆ, ಉಪನಿಷತ್ತು, ಬ್ರಹ್ಮಸೂತ್ರ, ಗೀತಾದಿ ಗ್ರಂಥಗಳಿಗೂ ಟೀಕೆ ಟಿಪ್ಪಣಿ ಬರೆದಿದ್ದಾರೆ. ಹರಿದಾಸಿ ರಾಧಾಬಾಯಿಯವರಂತೂ ತಮ್ಮ ಕೀರ್ತನೆಗಳಲ್ಲಿ ಬಹುಪಾಲು ಕೀರ್ತನೆಗಳನ್ನು ರಾಘವೇಂದ್ರರ ಸ್ಮರಣೆಗಾಗಿಯೇ ಮೀಸಲಿಟ್ಟಿದ್ದಾರೆ. ಅವರು ಬದುಕನ್ನೇ ರಾಘವೇಂದ್ರಸ್ವಾಮಿಗೆ ಅರ್ಪಿಸಿದ ಅನನ್ಯ ಭಕ್ತೆ. ಪ್ರತಿ ಕೀರ್ತನೆಯಲ್ಲೂ ರಾಘವೇಂದ್ರ ಯತಿಗಳನ್ನು ದೈನ್ಯದಿಂದ, ಆರ್ತತೆಯಿಂದ, ಭಕ್ತಿಯಿಂದ ಬೇಡಿದ್ದಾರೆ. 'ಭಕ್ತ ವತ್ಸಲ ಸ್ವಾಮಿ ಭಯ ನಿವಾರಣಾ ದೇವ' (ಕೀ.೯) ಎನ್ನುವ ಕೀರ್ತನೆಯಲ್ಲಿ ತಿರುಪತಿ ಸ್ಥಳ ಮಹಾತ್ಮೆ ಕುರಿತಾದದ್ದು. 'ಹುತ್ತಾದೊಳಗೆ ಇದ್ದು ನೆತ್ತಿಯ ಬಡಕೊಂಡು ಭಕ್ತಾರ ಸಲಹಾಲು ಬಂದಿಹೆಯಾ' ಎಂದು ವೆಂಕಟೇಶನು ತಿರುಪತಿಯಲ್ಲಿ ನೆಲೆಸಿದ ಕಾರಣ ಪ್ರಸ್ತಾಪಿಸಿದರೆ

‘ಕಂಗಳಿಲ್ಲಾದವರು ಅಂಗಾವಿಕಲದವರು ಭಂಗಾವ ಪಡುತಲಿ ಬಂದಿಹರು’ ಎನ್ನುವಲ್ಲಿ ಭಕ್ತರು ಸ್ಥಳಕ್ಕೆ ದರ್ಶನಕ್ಕಾಗಿ ಹರಿದು ಬರುವ ರೀತಿ ಹೇಳುತ್ತಾರೆ.

ಮೋಸಾವಿಲ್ಲಿದೆ ಒಂದೂ ಕಾಸು ಬಿಡದೆ ಹಣ
ದೋಬಿಕೊಳ್ಳುತ ನೀ ನಿಂತಿರುವೆ
ಇಲ್ಲಾ ಎನುತ ಜನ ಮುಳ್ಳು ಮಾತಾಡಿದರೆ
ಯಲ್ಲಾನು ಕಸಕೊಂಡು ಕಳುಹುವಿಯೇ... ಎಂದು ವೆಂಕಟೇಶನನ್ನು ಲೇವಡಿ ಮಾಡಿದ್ದಾರೆ.

**ಅಡಿ ಟಿಪ್ಪಣಿಗಳು**

1. Standard Dictionary of Folklore, Mythology and Legend. Edited by Maria Leach. P.653.

ಅಧ್ಯಾಯ– ಐದು

# ಕಥನ ಕೀರ್ತನಗಳು

೫.೧ ರಾಮಾಯಣದ ಕಥೆಗಳು

೫.೨ ಮಹಾಭಾರತದ ಕಥೆಗಳು

೫.೩ ಭಾಗವತದ ಕಥೆಗಳು

೫.೪ ವ್ರತಕಥೆಗಳು

೫.೫ ಇತರ ಕಥೆಗಳು

# ಅಧ್ಯಾಯ–ಐದು

## ಕಥನ ಕೀರ್ತನಗಳು

ಕಥೆಗಳನ್ನಾಧರಿಸಿ ಬರೆದಿರುವ ಕೀರ್ತನೆಗಳನ್ನು ಕಥನ ಕೀರ್ತನೆಗಳೆಂದು ಹೇಳಬಹುದು. ಭಕ್ತಿಯೇ ಇವುಗಳ ಪ್ರೇರಕ ಮತ್ತು ವಾಹಕ. ಸಣ್ಣಕೀರ್ತನೆಗಳಲ್ಲಿ ನೇರ ಅಭಿವ್ಯಕ್ತಿಯಿದ್ದರೆ ಕಥನ ಕೀರ್ತನಗಳಲ್ಲಿ ಹರಿ, ಹರ ಮತ್ತು ಅವರ ಭಕ್ತರ ಕುರಿತಾದ ಕಥೆಗಳನ್ನು ಹೇಳಲಾಗಿದೆ. ಈ ಹಾಡುಗಳ ಆರಂಭಕ್ಕೆ ದೇವರ ಸ್ಮರಣೆ, ಪ್ರಾರ್ಥನಾ ಪದ್ಯಗಳಿವೆ. ಗುರುಸ್ತುತಿಯಿದೆ. ರಚನೆಗಳು ಮಾರ್ಗಪದ್ಧತಿಯಲ್ಲೇ ಸಾಗುತ್ತದೆ. ಇವರು ಪುರಾಣ ಪ್ರತಿಮೆಗಳನ್ನು ವಕ್ರತೆಗೆ ಒಳಪಡಿಸುವುದಿಲ್ಲ. ಬದಲಿಗೆ ತಮ್ಮಲ್ಲಿನ ಭಾಷಾ ಸಂಪತ್ತಿನಿಂದ ಮೆರಗುಗೊಳಿಸುತ್ತಾರೆ.

ಹೆಳವನಕಟ್ಟೆ ಗಿರಿಯಮ್ಮ, ಹರಪನಹಳ್ಳಿ ಭೀಮವ್ವ, ನಿಡಗುರಕಿ ಜೀವೂಬಾಯಿ, ರಾಧಾಬಾಯಿ, ಅಂಬಾಬಾಯಿ ಇವರ ಕೀರ್ತನೆಗಳಲ್ಲಿ ಪುರಾಣವನ್ನಾಧಿರಿಸಿದ ಕಥನ ಕೀರ್ತನೆಗಳಿವೆ. ಅಧ್ಯಯನದ ಅನುಕೂಲಕ್ಕಾಗಿ ಇವುಗಳನ್ನು ರಾಮಾಯಣದ ಕಥೆಗಳು, ಮಹಾಭಾರತದ ಕಥೆಗಳು, ಭಾಗವತದ ಕಥೆಗಳು, ವ್ರತ ಕಥೆಗಳು ಮತ್ತು ಇತರ ಕಥೆಗಳು ಎಂದು ವಿಭಾಗಿಸಿಕೊಳ್ಳಲಾಗಿದೆ. ಕೀರ್ತನಕಾರರ ಕಥೆ ಹೆಣೆಯುವ ತಂತ್ರವನ್ನು, ಕಥೆ ಬೆಳೆಸುವ ತಂತ್ರವನ್ನು, ಥಟ್ಟನೆ ದೃಶ್ಯಾಂತರ ಮಾಡುವ ತಂತ್ರವನ್ನು ಕೀರ್ತನೆಗಳಲ್ಲಿ ಕಾಣಬಹುದು. ಇತರ ಕಥೆಗಳಲ್ಲಿ ಪುರಾಣದ ಕಥೆಗಳನ್ನು ತಮ್ಮ ಆಶಯದಂತೆ ಬದಲಾಯಿಸಿಕೊಂಡು ಮೆರೆದಿರುವ ಪ್ರತಿಭೆಯನ್ನು ಕಾಣಬಹುದು.

ದೇವರುಗಳು ಇಲ್ಲಿನ ಸಜೀವ ಪಾತ್ರವಾಗುತ್ತಾರೆ. ಮಾನವ ಸಹಜ ಸ್ವಭಾವದಂತೆ ದೇವತೆಗಳೂ ಸಿಟ್ಟು, ಅಸೂಯೆ, ದ್ವೇಷ, ಶೃಂಗಾರ ಮುಂತಾದ ಭಾವಗಳನ್ನು ತಳೆಯುತ್ತಾರೆ. ಪೌರಾಣಿಕ ಕಥೆಗಳಿಗೆ ಕೀರ್ತನೆಗಳಾಗಿ ಹೊಸ ಜನ್ಮ ನೀಡಿರುವುದು ಮಹಿಳಾ ಕೀರ್ತನಕಾರರ ರಚನೆಗಳ ವಿಶೇಷತೆ. ಈ ಅಧ್ಯಾಯದಲ್ಲಿ ರಾಮಾಯಣ, ಮಹಾಭಾರತ, ಭಾಗವತಕ್ಕೆ ಸಂಬಂಧಿಸಿದ ಕಥೆಗಳೆಂದು ವಿಭಾಗಿಸಿ, ಕಥೆಗಳನ್ನು ಪರಿಚಯಿಸುವುದಕ್ಕಷ್ಟೇ ಸೀಮಿತವಾಗಿದೆ. ಇತರ ಕಥೆಗಳಲ್ಲಿ ಮಹಿಳಾಕೀರ್ತನಕಾರರ ಸ್ವಯಂಕಲ್ಪಿತ ಕಥೆಗಳನ್ನು ಪರಿಚಯಿಸಲಾಗಿದೆ.

**೫.೧ ರಾಮಾಯಣದ ಕಥೆಗಳು**

**ಲವಕುಶರ ಕಾಳಗ: (ಪಟದ ಸಂಧಿ)**

ರಾಮಾಯಣದ ಉತ್ತರಕಾಂಡದಲ್ಲಿ ಬರುವ ಕಥೆಯನ್ನು ಗಿರಿಯಮ್ಮ 'ಲವಕುಶರ ಕಾಳಗ' ಎಂಬ ಹೆಸರಿನಲ್ಲಿ ಕಥನ ಕೀರ್ತನೆಯನ್ನಾಗಿಸಿದ್ದಾರೆ. ಇನ್ನೂರ ಎಂಬತ್ತೊಂಬತ್ತು ನುಡಿಗಳನ್ನು ಒಳಗೊಂಡಿದೆ. ಲವಕುಶ – ಶತ್ರುಜ್ಞ ಮೊದಲಾದವರಿಗೆ ನಡೆಯುವ ಸಂಭಾಷಣೆಯಲ್ಲಿ ಭವಭೂತಿಯ ಉತ್ತರ ರಾಮಚರಿತದ ಪ್ರಭಾವ ಇರಬಹುದೆಂದು ಡಾ.ಸರೋಜಿನಿ ಮಹಿಷಿಯವರು ಗುರುತಿಸಿದ್ದಾರೆ.

ಲವಕುಶರ ಹಾಡಿನ ಪ್ರಾರಂಭಕ್ಕೆ ಹರಿ ಹರ ಬ್ರಹ್ಮ ಸರಸ್ವತಿಯನ್ನು ಗುರು ಸತ್ಯಬೋಧರನ್ನು, ಉಮ್ಮಿಯ ಪುತ್ರ ಗಣೇಶನನ್ನು, ಕುಲದ ಸ್ವಾಮಿ ಕದ್ರಿ ನರಸಿಂಹನನ್ನು ನೆನೆಯುತ್ತಾರೆ.

ಗರ್ಭಿಣಿಯಾದ ಸೀತೆಯು ಅರಣ್ಯದ ಋಷಿಗಳ ಆಶ್ರಮದಲ್ಲಿ ಸ್ವಲ್ಪ ಕಾಲ ಕಳೆಯಬೇಕೆಂದು ಅಪೇಕ್ಷಿಸುತ್ತಾಳೆ. ಅಷ್ಟರಲ್ಲಿ ಒಂದು ದಿನ ರಾಮ–ಲಕ್ಷ್ಮಣರು ಬೇಟೆಗೆ ಹೊರಡುತ್ತಾರೆ. ಈ ಸಂದರ್ಭವನ್ನು ಗಿರಿಯಮ್ಮ ಅರಣ್ಯದ ಸಸ್ಯಸಂಪತ್ತು, ಫಲಸಂಪತ್ತು, ಪ್ರಾಣಿ ಪಕ್ಷಿಗಳನ್ನು ಸುಂದರವಾಗಿ ವರ್ಣಿಸಲು ಬಳಸಿಕೊಂಡಿದ್ದಾಳೆ. ಬೇಟೆಯಾಡಿ ಬಳಲಿದ ರಾಮನು ಲಕ್ಷ್ಮಣನ ತೊಡೆಯ ಮೇಲೆ ಮಲಗುತ್ತಾನೆ. ಮುಂದೇನು ಆಗುತ್ತದೆ ಎಂದು ಕನಸು ಕಂಡ ರಾಮ ತಟ್ಟನೆ ಏಳುತ್ತಾನೆ.

ತಾಟಕಿಯು ಇಂದುವದನೆ ಮುಡಿಪಿಡಿದೆಳೆವೊದುಕಂಡೆ
ತುಂಡ ರಾವಣ ಕುಯ್ಯೊದ ಕಂಡೆ
ಇಂದು ನೀ ಸೀತೆಯ ಕರೆದೊಯ್ಯು ಕಾನನದಿ
ದಿಂಜಾರಿಳಿಸೋದು ಕಂಡೆ

ಮುನ್ನ ಅರಿಯದೆ ನಾವು ಬಂದೆವೊ ಲಕ್ಷ್ಮಣ
ಇನ್ನು ಸೀತೆಗೆ ಜಯವಿಲ್ಲ
–ಎಂದು ರಾಮನು ಕಂಡ ಕನಸನ್ನು ಲಕ್ಷ್ಮಣನಿಗೆ ವಿವರಿಸುತ್ತಾನೆ.

ಅವನ ಕನಸು ನಿಜವಾಗುತ್ತದೆ. ತಾಟಕಿಯು ಕೊರವಂಜಿಯ ವೇಷ ಧರಿಸಿ

ಅಯೋಧ್ಯೆಗೆ ಬರುತ್ತಾಳೆ. ಸೀತೆಯ ಪಾದಕೆ ಎರಗಿ ನಿಂತು ನಾಗಸಂಪಿಗೆಯನ್ನು ಮುಡಿ ಎಂದು ಕೊಟ್ಟಾಗ 'ದಾವದೇಶ ನೀನು ಏನು ಕಾರಣ ಬಂದಿ ಈ ನಾಡ ಗರತಿ ನೀನಲ್ಲ' ಎಂದು ಸೀತೆ ವಿಚಾರಿಸಲು 'ಈರೇಳು ಲೋಕವ ಸುತ್ತಿ ಬಂದೆ' ಎನ್ನುತ್ತಾಳೆ. ಹೊನ್ನು ಹಣ ಅನ್ನ ವಸ್ತ್ರವನ್ನು ಕೊಡುವೆನೆಂದಾಗ 'ಹೊನ್ನು ಹಣವನೊಲ್ಲೆ ಅನ್ನ ವಸ್ತ್ರವನೊಲ್ಲೆ ನಿನ್ನ ಭಾಗ್ಯವೂ ನಾನೊಲ್ಲೆ 'ಮುಂದಿನ ಅಸುರರೂಪ ನೀ ಬರೆ' ಎಂದು ಒತ್ತಾಯಿಸುತ್ತಾಳೆ. 'ಫನ್ನಂಗಧರ ರಾಮ ಬಂದರೆ ಬೈದಾರು' ಎಂದು ಅವಳನ್ನು ಸಾಗುಹಾಕಲು ಪ್ರಯತ್ನಿಸುವಾಗ ತಾಟಿಕಯು ಭಸ್ಮವನ್ನು ತೊಡೆದು ಅವಳನ್ನು ವಶಪಡಿಸಿಕೊಳ್ಳುತ್ತಾಳೆ. ಅದಕ್ಕೆ ಸೀತೆ ವನವಾಸಕ್ಕೆ ಬಂದಾಗ ತನಗೆ ರಾವಣನ ಅಂಗುಷ್ಟ ಮಾತ್ರ ಗೊತ್ತು ಎಂದರೂ ಬಿಡದೆ

ಅಂಗುಷ್ಟ ಎಂಬುದಕ ಮುಂದ ಪಾದವ ಬರಿ
ಹಿಂಬಡಕ ಕಾಲು ಚಂದಾದ ನಡ ಧಡ
ಹತ್ತುತಲೆಯವನ ಇಪ್ಪತ್ತು ತಲೆಗಳು
ಬೆಟ್ಟವ ಕೆದರಿದಂಥ ಕಾಯಕ
ಹತ್ತು ಶಿರಗಳ ಬರೆದಳು ಮುಂದೆರಡು ಪಾದ ಬರೆದಳು
ಒಂದರ ಹಿಂದೊಂದು ವರ್ಣಿಸಿ ಬರೆದಳು
ತಂದು ನಿಲ್ಲಿಸಿದಳು ರಾವಣನ

ಚಂದವಾಯಿತು ಸೀತೆ ವರವ ಕೊಡೆಂದಳು

ಎಂದೆಂದಿಗೂ ಅಳಿಯದಂಥೆ

ಸೀತೆಯು ಉರಿಯೊಳಗೆ ಅಡಗದೆ ಶರಧಿಯೊಳಗೆ ಮುಳುಗದೆ ಅಮರವಾಗಿರುವಂತೆ ವರ ನೀಡಿದರೂ 'ಕಿರಿಯ ಲಕ್ಷ್ಮಣದೇವ ಹೊಡೆದರೆ ಸಾಯೆಂದು' ವರವ ಕೊಟ್ಟಳು ಆ ಪಟಕ್ಕೆ. ಇಷ್ಟಾದ ಮೇಲೆ ರಾವಣನ ಪಟವನ್ನು ಮೇಲಕ್ಕೆ ಹಾರಿಸಿ ಕೊರವಿ ಮಾಯವಾಗುತ್ತಾಳೆ. ಚಿಂತೆಯಿಂದ ಸೀತೆ ಆ ಪಟವನ್ನು ಹಾಸಿಗೆಯ ಕೆಳಗಿಟ್ಟು ಮಲಗುತ್ತಾಳೆ. ದುಷ್ಟ ಕನಸುಗಳು ಬೀಳುತ್ತವೆ. ಶ್ರೀರಾಮ ಬೇಟೆ ಮುಗಿಸಿ ಬರುತ್ತಾನೆ. ಸೀತೆಗೆ ಹೇಳಿ ಕಳುಹಿಸುತ್ತಾನೆ. ಊಟ ಮುಗಿದ ಮೇಲೆ 'ಅಂಜುವ ಸೀತೆಯ ಕೈ ಹಿಡಿದು ಶ್ರೀರಾಮ ಬಂದು ಕುಳಿತ ಸಿಂಹಾಸನದ ಮೇಲೆ. ತಂದೆಯ ಕಾಲದ ಹಿರಿದೊಡ್ಡ ಸಿಂಹಾಸನ ತುಂಡಾದವೆರಡು ಭಾಗದಲಿ'. ಇಂದೇನು ಕಾರಣ ಎನ್ನುತ್ತ ಶ್ರೀರಾಮ ಬಂದು ಲಕ್ಷ್ಮಣನನ್ನು ಕೇಳಿ, ಹಾಸಿಗೆಯನ್ನು ತೆಗೆದು ನೋಡುತ್ತಾರೆ.

ಹಾಸುಕಿಯ ತೆಗೆಯಲು ಹತ್ತುತಲೆಯ ಕಂಡು
ಐಶ್ಚರ್ಯಪಟ್ಟು ನಸುನಕ್ಕು
ಏಸುದಿವಸ ಗಾಸಿಯಾಗಿ ಬರೆದೆ ಇವನ
ಏಸುದಿವಸ ಭೋಗಿಸಿದೆ –ಎಂದು ರಾಮ ಕೇಳುತ್ತಾನೆ.

ಮೋಸ ಮಾಡಿದಿ ಸೀತೆ ಎನ ಕೂಡ ಹೇಳದೆ
ಘಾತವಾಯಿತು ದೇವಿ –ಎಂದು ನೊಂದು ನುಡಿಯುತ್ತಾನೆ.

ಸೀತೆ ನಡೆದದ್ದನ್ನು ವಿವರವಾಗಿ ತಿಳಿಸುತ್ತಾಳೆ. 'ರಾಮಪಾದವೆ ಗತಿಯೆಂದು ನಂಬಿದೆ, ಬಂದ ಮಾರಿ ಒಲ್ಲೆನೆಂದರೆ ಬಿಡುವುದೆ' ಎನ್ನುತ್ತಾಳೆ. ಆದರೂ ರಾಮ ಸೀತೆಯನ್ನು ಕಾಡಿನಲ್ಲಿ ಕೊಂದು ಬರುವಂತೆ ಲಕ್ಷ್ಮಣನಿಗೆ ಅಪ್ಪಣೆ ಮಾಡುತ್ತಾನೆ. ಲಕ್ಷ್ಮಣದೇವ ತನಗೆ ಸ್ತ್ರೀ ಹತ್ಯಾ ದೋಷ ಬರುವುದೆಂದು ರಾಮನಲ್ಲಿ ಅಲವತ್ತುಕೊಂಡಾಗ 'ಆಳು ಕೊಂದ ಪಾಪ, ಅರಸಿ ಮಾಡಿದ ಪಾಪ ಭೂಮಿಯನಾಳುವ ರಾಯರಿಗೆ' ಎಂದು ಹೇಳಿ ಒಪ್ಪಿಸುತ್ತಾನೆ. ಅದರಂತೆ ಲಕ್ಷ್ಮಣ ಸೀತೆಯನ್ನು ಕಾಡಿಗೆ ಬಿಟ್ಟು 'ಅಡವಿ ಮೃಗವ ಕಡಿದು ಆಯುಧ ರಕ್ತವ ಮಾಡಿ' ರಾಮನಿಗೆ ತೋರಿಸುತ್ತಾನೆ. ಅರಣ್ಯದಲ್ಲಿ ವಾಲ್ಮೀಕಿ ಋಷಿಗಳು ಸೀತೆಯನ್ನು ಕಂಡು ಆಶ್ರಮಕ್ಕೆ ಕರೆದೊಯ್ಯುತ್ತಾರೆ. ಆಗ ಗರ್ಭಿಣಿಯಾಗಿದ್ದ ಸೀತೆಗೆ ಆರು ತಿಂಗಳು ತುಂಬಿದ ಮೇಲೆ ಸೀಮಂತ ಮಾಡಬೇಕೆಂದು ಆಶ್ರಮದವರು ಸಡಗರ ಪಡುತ್ತಾರೆ. ಸೀಮಂತದ ವರ್ಣನೆ ಬರುತ್ತದೆ. ಹೀಗೆ ದಿನಗಳು ಕಳೆದ ಮೇಲೆ ನವಮಾಸ ತುಂಬಿ ಮಕ್ಕಳ ಪಡೆಯುತ್ತಾಳೆ. ಲವ – ಕುಶರೆಂದು ಮಕ್ಕಳಿಗೆ ನಾಮಕರಣವಾಗುತ್ತದೆ. ಸೀತೆ 'ತಂದೆಯ ತೋಳು ತೊಡೆಯ ಮೇಲೆ ಆಡದೆ ಕಂದರಿನ್ನಾರಿಗೆ ಮುದ್ದು' ಎಂದು ಕೊರಗುತ್ತಾಳೆ. ದಿನ ತಳ್ಳುತ್ತಿರುತ್ತಾಳೆ. ದೊಡ್ಡವರಾದ ಮಕ್ಕಳಿಗೆ ಋಷಿ ಉಪನಯನ ಮಾಡಿ ಕುಲವಿದ್ಯೆ, ಗುರುವಿದ್ಯೆ, ರಣವಿದ್ಯೆ, ಧನುರ್ವಿದ್ಯೆಗಳನ್ನು ಕಲಿಸುತ್ತಾನೆ.

ಇತ್ತ ಶ್ರೀರಾಮನು ಅಶ್ವಮೇಧ ಯಾಗವನ್ನು ಮಾಡಬೇಕೆಂದು ನಿರ್ಧರಿಸುತ್ತಾನೆ. ಅಯೋಧ್ಯೆಯ ತುಂಬೆಲ್ಲಾ ಸಂಭ್ರಮ, ಸಂತಸ ಚಿನ್ನದ ಸೀತೆಯ ಒಳಗೊಂಡು ಶ್ರೀರಾಮ ಯಜ್ಞ ಮಾಡಲು ಮುಂದಾಗುತ್ತಾನೆ. ಯಜ್ಞದ ಕುದುರೆ ವಾಲ್ಮೀಕಿಯ ಆಶ್ರಮಕ್ಕೆ ಬರಲು ಲವಕುಶರು ಕುದುರೆಯನ್ನು ಕಟ್ಟಿಹಾಕುತ್ತಾರೆ. ಸೀತೆಗೆ ವಿಷಯ ತಿಳಿಯುತ್ತದೆ. 'ಬಾಲರೇ, ನಿಮಗಿಂಥ ತೇಜಿ ವಶವಾಗುವುದೇ, ತಳುವದೇ ಮೆಟ್ಟಿ ಕೊಲ್ಲುವುದು' ಎಂದು ಸಂಶಯ ವ್ಯಕ್ತಪಡಿಸಿದರೂ, 'ಕುಶದರ್ಭಿಯಿಂದಲಿ ಬಿಲ್ಲುಬಾಣವ ಮಾಡಿ ಶಿಶುಗಳಿಗೆ' ಕೊಡುತ್ತಾಳೆ. ಶತ್ರುಜ್ಞ, ಭರತ ಯುದ್ಧದಲ್ಲಿ ಸೋತ ಮೇಲೆ ಶ್ರೀರಾಮನು ಯುದ್ಧಕ್ಕೆ ಬರುತ್ತಾನೆ. ಎದುರು ನಿಂತ ಮಕ್ಕಳಿಬ್ಬರನ್ನು ನೋಡಿದ ಶ್ರೀರಾಮನು:

'ಕಂಡು ಮೋಹವ ತುಂಬಿ ಕಂದಗಳಿಬ್ಬರ
ಸಂಧಾನಕ್ಕೆ ಕರಿ' ಎಂದ
ಲಕ್ಷ್ಮಣನು ಸಂಧಾನಕ್ಕೆ ಕರೆಯುತ್ತಾನೆ
ಇಂದು ಶ್ರೀರಾಮರು ಬಂದರೇನಾಯ್ತು
ಬಂದು ಕಾಳಗವ ಕೂಡ ಹೇಳಿ
ಮಂದಿ ಕುದಿರಿ ನಮ್ಮ ಆಶ್ರಮವ ಹೊಕ್ಕರೆ
ಕಲಿಸೇವು ತಕ್ಕ ಬುದ್ಧಿಗಳ

–ಎಂದು ಲವಕುಶರು ಉತ್ತರಿಸುತ್ತಾರೆ. ಅವರ ದಿಟ್ಟ ಉತ್ತರಗಳಿಗೆ ಶ್ರೀರಾಮನು ಮೆಚ್ಚುತ್ತಾನೆ. ಕುಲಗೋತ್ರ ವಿಚಾರಿಸುತ್ತಾನೆ.

ನಿಮ್ಮ ಕುಲಗೋತ್ರವೆ ನಿಮ್ಮ ಪ್ರದೇಶವೇ,
ನಿಮ್ಮ ಗುರುವೆ ನಮ್ಮ ಗುರುವು
ಚೆನ್ನಾಗಿ ಸೂರ್ಯಕುಲವನು ಧರಿಸಿದ
ಪುಣ್ಯ ಮೂರುತಿ ಮಕ್ಕಳೆಂದರು

–ಮುಂದೆ ಅವರಿಬ್ಬರಿಗೂ ಕಾಳಗವಾಗುತ್ತದೆ. ಕಾಳಗವನ್ನು ಅಕ್ಕಿ ಎಳ್ಳು ಬೆರೆಸಿದಂತೆ ಎಂದು ವರ್ಣಿಸಲಾಗಿದೆ. ಕುಶನು ರಾಮನಿಗೆ ಬಾಣ ಎಸೆಯುತ್ತಾನೆ. ಅವರ ಬಾಣಗಳಿಂದ ರಾಮ–ಲಕ್ಷ್ಮಣರಿಬ್ಬರೂ ಮೂರ್ಛಿತರಾಗುತ್ತಾರೆ. ಹನುಮಂತನು ಜಾಂಬವಂತನನ್ನು ಹೆಗಲ ಮೇಲೆ ಕುಳ್ಳಿರಿಸಿಕೊಂಡು ಸೀತೆಯ ಹತ್ತಿರ ಹೋಗಿ ನಡೆದದ್ದನ್ನು ಹೇಳುತ್ತಾನೆ. ಸೀತೆ ನೆನೆಸಿಕೊಂಡು ಅಳುತ್ತಾಳೆ. ಆಗ ವಾಲ್ಮೀಕಿ ಬ್ರಹ್ಮನನ್ನು ಕುರಿತು ಪ್ರಾರ್ಥಿಸಿ ಕಮಂಡಲದ ಉದಕವನ್ನು ರಾಮ ಲಕ್ಷ್ಮಣರ ಮೇಲೆ ಚಿಮುಕಿಸಿದಾಗ ಅವರು ಎದ್ದು ಕೂರುತ್ತಾರೆ. ಮುನಿಯು ಲವ ಕುಶರನ್ನು ರಾಮನಿಗೆ ತೋರಿಸಿ 'ದಶರಥರಾಮನ ಉದರದಲ್ಲಿ ಜನಿಸಿದ ಸುತರಿವರು ಲವಕುಶರೆಂದ' ರಾಮನು 'ಸತಿಯು ನಮಗಿಲ್ಲ ಸುತರೆಲ್ಲಿ ಬಂದರು ಋಷಿಗಳೇ, ಹಾಸ್ಯ ಮಾಡುವಿರಾ' ಎಂದು ಕೇಳಿದಾಗ ನಡೆದ ಕಥೆಯನ್ನು ವಾಲ್ಮೀಕಿ ಹೇಳುತ್ತಾರೆ. ರಾಮ ಲಕ್ಷ್ಮಣನನ್ನು ಕರೆದು ನಿಜ

ವಿಚಾರಿಸುತ್ತಾನೆ. ಲಕ್ಷ್ಮಣನು ನಡೆದ ಸಂಗತಿಯನ್ನು ವಿನಯದಿಂದ ತಿಳಿಸುತ್ತಾನೆ. ಸಂತಸಗೊಂಡ ರಾಮನು ವಾಲ್ಮೀಕಿಯನ್ನು ಕುರಿತು

ದೇವಾ ನೀ ಪ್ರಾಣವ ಉಳುಹಿದ ಕಾರಣ
ಬಾಲರು ಜನಿಸೂ ಕಾರಣವು
ದೇವ ವಾಲ್ಮೀಕನು ಸಲಹಿದ ಕಾರಣ
ಅರಣ್ಯ ಅಯೋಧ್ಯವಹುದು- ಎನ್ನುತ್ತಾನೆ. ಮಕ್ಕಳು ರಾಮನಿಗೆ ನಮಸ್ಕರಿಸುತ್ತಾರೆ. ಎಲ್ಲರೂ ಅಯೋಧ್ಯೆಗೆ ಹಿಂದಿರುತ್ತಾರೆ. ಕಥೆ ಸುಖಾಂತ್ಯವಾಗುತ್ತದೆ.

**ಸೀತಾಕಲ್ಯಾಣ**

ಇದು ಹೆಳವನಕಟ್ಟೆ ಗಿರಿಯಮ್ಮನ ರಚನೆ. ಹೆಸರೇ ಸೂಚಿಸುವಂತೆ ಸೀತೆಯ ಕಲ್ಯಾಣವೇ ಈ ಕೀರ್ತನೆಯ ವಸ್ತುವಾಗಿದ್ದರೂ, ರಾಮನು ಬಿಲ್ಲು ಮುರಿದ ಪ್ರಸಂಗವಾಗಲೀ, ಕಲ್ಯಾಣದ ಪೂರ್ಣ ಚಿತ್ರಣವಾಗಲೀ ಕಂಡುಬರುವುದಿಲ್ಲ. ಮದುವೆಯ ನಾಲ್ಕನೆಯ ದಿನದಲ್ಲಿ ಆಚರಿಸುವ ಅರಿಶಿನೆಣ್ಣೆಯ ಶಾಸ್ತ್ರದ ಸಂಭ್ರಮವೇ ಹಾಡಿನ ವಸ್ತು. 'ರಾಮ ಜಾನಕಿಯ ಮಂಗಳುತ್ಸವದುರಟಣೆ'ಯ ಬಣ್ಣನೆಯಿದೆ. ಎಂಬತ್ತೇಳು ನುಡಿಗಳನ್ನು ಒಳಗೊಂಡಿದೆ. ಸರಳ ದೇಸೀ ನುಡಿಯಲ್ಲಿದೆ.

ಉರುಟಣೆಯ ಶಾಸ್ತ್ರಕ್ಕಾಗಿ ದಶರಥ ಮತ್ತು ಅವನ ಪತ್ನಿಯರು ಜನಕರಾಯನ ಮನೆಗೆ ಹೋಗುತ್ತಾರೆ. ಜನಕ ಅವರನ್ನು ಎದುರುಗೊಳ್ಳುತ್ತಾನೆ. ಜನಕ ಗದ್ದುಗೆ ಹಾಸಿ ಬೀಗರನ್ನು ಉಪಚರಿಸುತ್ತಾನೆ. ಸಮಾರಂಭಕ್ಕಾಗಿ ಬಂದ ಸುತ್ತಣ ರಾಯರಾಯರಿಗೆಲ್ಲಾ ರತ್ನಗಂಬಳಿ ಹಾಸುತ್ತಾನೆ. ರಾಮ-ಸೀತೆಯರ ಅಲಂಕಾರ ಮತ್ತು ರಾಮನನ್ನು ಹಸೆಗೆ ಕರೆಯುವ ಪರಿಯನ್ನು ದೀರ್ಘವಾಗಿ ವರ್ಣಿಸಲಾಗಿದೆ. 'ಕುಂದಣ ರತ್ನದಡ್ಡಿಕೆಯೊಳಗೆ ಹೊಂದಿಸಿ ನವರತ್ನ ಇರುವಂತೆ, ಹೇಮ ಖಚಿತ ರತ್ನಪೀಠದಲ್ಲಿ ಭೂಮಿಜೆ ಸಹಿತ ಕುಳಿತ ರಾಮ' ಹೀಗೆ ರಾಮ ಸೀತೆಯರು ವಜ್ರಮಾಣಿಕದ ಹಸೆಯಲ್ಲಿ ಕಂಗೊಳಿಸುತ್ತಾರೆ. ಕಹಳೆಗಳು ರಾಮನ ಮಹಿಮೆಯನ್ನು ಅವನ ವ್ಯಕ್ತಿತ್ವವನ್ನು ವರ್ಣಿಸುತ್ತವೆ. ಒಂಬತ್ತು ನುಡಿಗಳಲ್ಲಿ ಈ ವರ್ಣನೆ ತುಂಬಿದೆ. ರಾಮಸೀತೆಯರು ಕುಳಿತ ಹಸೆಗೆ ಕಾಮಿನಿಯರು ಹೇಮದ ಹರಿವಾಣದಲ್ಲಿ ಅಗ್ನಿಯನ್ನು ತಂದಿಡುತ್ತಾರೆ. ರಾಮ ಸೀತೆಯರು ವಿಘ್ನೇಶ್ವರನನ್ನು, ಋಷಿ ಪುಂಗವರನ್ನು ಪೂಜಿಸುತ್ತಾರೆ. ಕೌಸಲ್ಯ ದೇವಿ ಶ್ರೀರಾಮನಿಗೆ ಹಚ್ಚಲು ಅರಿಶಿನವನ್ನು ಸೀತೆಗೆ ಕೊಡುತ್ತಾಳೆ. ಸೀತೆಯು ಸಿರಿಮುಖವನ್ನು ತೋರೆಂದು ಹತ್ತು ನುಡಿಗಳಲ್ಲಿ ದಶಾವತಾರಗಳನ್ನು ನೆನೆಯುತ್ತಾಳೆ. ಶ್ರೀರಾಮನ ಪಾದಗಳಿಗೆ ಅರಿಶಿನವನ್ನು ಹಚ್ಚುತ್ತಾ ಪಾದ ಮಹಿಮೆಯನ್ನು ವರ್ಣಿಸುತ್ತಾಳೆ. ರಾಮನೂ ಸೀತೆಯ ಮುಖ ಕೈಕಾಲುಗಳಿಗೆ ಅರಿಶಿನ ಹಚ್ಚಿ "ಕ್ಷಿತಿಯೊಳು ರಾಮನ ಸತಿಯಾಗಿ ಜಗದೊಳು ಶೃತಿವಂತಳಾಗೆಂದು ಹರಸುತ್ತಾನೆ'. ಸೀತೆಗೆ ಅರಿಶಿನ ಹಚ್ಚುವ ಕಾರ್ಯವನ್ನು ಹಿರಿಯ ಮುತ್ತೈದೆಯಾಗಿ ಪಾರ್ವತಿಯೇ ನಡೆಸಿಕೊಡುತ್ತಾಳೆ. ಬಾಸಿಂಗ ಕಟ್ಟುವುದು, ಓಕುಳಿ ಆಡುವುದು, ಪರಸ್ಪರ ಮುತ್ತು ರತ್ನ ಹಿಡಿದು ನೀವಾಳಿಸಿ ತೆಗೆಯುವದರೊಂದಿಗೆ ಉರುಟಣೆಯ

ಶಾಸ್ತ್ರವು ಮುಗಿಯುತ್ತದೆ. ರಾಮಸೀತೆಯರಿಗೆ ಋಷಿ ಪತ್ನಿಯರು ಆಶೀರ್ವದಿಸಿ ತಾಂಬೂಲಗಳನ್ನು ನೀಡಿ ರತ್ನದಾರತಿಯನ್ನು ಬೆಳಗುತ್ತಾರೆ. ಫಲಸ್ತುತಿಯೊಂದಿಗೆ ಕೀರ್ತನೆ ಮುಕ್ತಾಯವಾಗುತ್ತದೆ.

ಆ ಕಾಲದ ಮದುವೆಯ ಶಾಸ್ತ್ರ ಸಂಪ್ರದಾಯಗಳ ಅದರಲ್ಲೂ ಉರುಟಣೆಯ ಶಾಸ್ತ್ರದ ನೋಟವೊಂದನ್ನು ಇಲ್ಲಿ ಕಾಣಬಹುದು. ದಶಾವತಾರಗಳನ್ನು ಬಣ್ಣಿಸುವಾಗ ಭಕ್ತಿಭಾವವು ಉಕ್ಕಿ ಹರಿಯುತ್ತದೆ. ಶ್ರೀರಾಮನ ಚರಣಗಳನ್ನು ವರ್ಣಿಸುವಾಗ ಚರಣ ಸುಳಾದಿ ನೆನಪಾಗುತ್ತದೆ.

**೫.೨ ಮಹಾಭಾರತದ ಕಥೆಗಳು**

ಮುಯ್ಯ ಕೊಟ್ಟ ಹಾಡುಗಳು ಮತ್ತು ಮುಯ್ಯ ಹಿಂದಿರುಗಿಸಿದ ಹಾಡುಗಳು ಎಂದು ಗಲಗಲಿ ಅವ್ವನವರ ೨೬೨ ಹಾಡುಗಳು ದೊರೆತಿವೆ. ಇದು ಮಹಾಭಾರತದ್ದೇ ಕಥಾವಸ್ತು. ವಿಷ್ಣುವಿನ ದಶಾವತಾರಗಳ ವರ್ಣನೆಯೂ ಬರುತ್ತದೆ. ಮುಯ್ಯ ಕೊಡುವ ಮತ್ತು ಹಿಂದಿರುಗಿಸುವ ಒಂದೇ ವಿಷಯವನ್ನು ಹಾಡಾಗಿಸಲಾಗಿದೆ. ಈ ಹಾಡುಗಳ ವಿಶೇಷವೆಂದರೆ ದ್ವಾರಕೆ ಮತ್ತು ಹಸ್ತಿನಾವತಿಗಳ ಆವರಣದ ಮಿತಿಯಲ್ಲಿಯೇ ಎಲ್ಲ ವರ್ಣನೆಗಳು, ವಾಗ್ವಾದಗಳು, ಸಂಭಾಷಣೆಗಳು, ನಿಂದಾಸ್ತುತಿಗಳು ರೂಪುಗೊಂಡಿವೆ.

ಸುಭದ್ರೆ ಮತ್ತು ದ್ರೌಪದಿಯರು ತಮ್ಮ ಅಣ್ಣಂದಿರಾದ ಕೃಷ್ಣ ಬಲರಾಮರನ್ನು ನೋಡಲು ಹಂಬಲಿಸಿ ಮುಯ್ಯದ ನೆವದಲ್ಲಿ ತವರಿಗೆ ಹೊರಟು ನಿಲ್ಲುತ್ತಾರೆ. 'ತಿಂಗಳಿಗೆ ಸುಭದ್ರ ಬಂದೆ ನಿನ್ನ ನೋಡಲು' ಎಂದ ಅಣ್ಣ ಕೃಷ್ಣ ಇನ್ನೂ ಬರಲಿಲ್ಲ ಎಂದುಕೊಳ್ಳುತ್ತಾ ಕೃಷ್ಣನ ಮನೆಯ ಅಷ್ಟೈಶ್ವರ್ಯ ನೆನೆಯುತ್ತಾ ಹೊರಡುತ್ತಾರೆ. ಸಖಿಯರು ಸುಭದ್ರೆಯನ್ನು ಕುರಿತು ರಾಮೇಶ ಯಾಕೆ ಮಧುರೆ ಬಿಟ್ಟ ಎಂದು ಕೇಳಲು ಕೃಷ್ಣನು ವಿಶ್ವಕರ್ಮನಿಂದ ದ್ವಾರಕಾಪುರ ನಿರ್ಮಿಸಿದ ಬಗೆಯನ್ನು ವರ್ಣಿಸುತ್ತಾಳೆ. ದ್ವಾರಕಾಪುರದ ವರ್ಣನೆ, ಪ್ರಕೃತಿ ವರ್ಣನೆ, ಕೋಟೆಗಳ ವರ್ಣನೆ, ವ್ಯಾಪಾರ ಬಜಾರುಗಳು ಹಾಡಿನಲ್ಲಿ ಸೊಗಸಾಗಿ ಮೂಡಿಬಂದಿದೆ. ಇವರ ಜೊತೆ ಅಷ್ಟದಿಕ್ಪಾಲಕರು ಪತ್ನಿ ಸಮೇತರಾಗಿ ತಮ್ಮ ವಾಹನಗಳಲ್ಲಿ ಬರುತ್ತಾರೆ. ದೇವ ದೇವರುಗಳೆಲ್ಲಾ ದಿಬ್ಬಣದಲ್ಲಿ ಪಾಲ್ಗೊಂಡ ಕಲ್ಪನೆ ಮನೋಹರವಾಗಿದೆ. ಸುಭದ್ರೆಯು ಪಂಥವ ಗೆಲಿಸೆಂದು ದೇವರನ್ನು ಪ್ರಾರ್ಥಿಸುವ ನೆವದಲ್ಲಿ ಅವ್ವನವರು ತೀರ್ಥಕ್ಷೇತ್ರ, ಕ್ಷೇತ್ರಮುನಿಗಳು, ಹನುಮ, ಭೀಮ, ಮಧ್ವ, ಭಾರತಿ, ಶೂರ್ಪಾಲಿಯ ಲಕ್ಷ್ಮಿನರಸಿಂಹನನ್ನು ನೆನೆಯುತ್ತಾರೆ.

ದ್ವಾರಕೆಯ ದಾರಿಗಳಲ್ಲಿ
ಹಸಿರುಬಳೆ ತೊಟ್ಟು ಕುಸುರಿನ ಸಿಂಬೆಯಲಿ
ಮೊಸರ ಗಡಿಗೆಯ ಎಸಗುತ ಮಾರುವ
ಬಿಸಜನೇತ್ರೆಯರು ಕಡೆಯಿಲ್ಲ

ಕೃಷ್ಣನ ಅರಮನೆಯಲ್ಲಂತೂ ರನ್ನದ ಬಾಗಿಲು, ಚಿನ್ನದ ಚೌಕಟ್ಟು, ಹೊನ್ನ ಕಳಸಗಳು ಹೊಳೆಯುತ್ತವೆ. ಕೃಷ್ಣನ ಒಡ್ಡೋಲಗದ ನೋಟ ಹೀಗಿದೆ:

ಅಂತರಂತರದಲೆ ಮಂತ್ರಿಗಳು ಕುಳಿತಾರೆ
ಕಂತುನಯ್ಯನ ಅರಮನೆಯೊಳಗೆ
ಅನಂತ ಪೂಜೆ ಬರಲಿ ಬಯಲು- ಇದೆ.

ಕಮಲನೇತ್ರೆಯರು ಧರಿಸಿದ ಆಭರಣಗಳ ವೈಭವ, ಶೃಂಗಾರಗಳಂತೂ ಕಣ್ಣು ಕೋರೈಸುತ್ತದೆ. ಇಂಥ ವೈಭವದ ದ್ವಾರಕೆಗೆ ಸುಭದ್ರಾ ಮುಯ್ಯ ತರುತ್ತಾಳೆ. ಮುಯ್ಯ ತಂದ ಸುದ್ಧಿಯನ್ನು ದೂತೆಯ ಮೂಲಕ ಕೃಷ್ಣನಿಗೆ ಹೇಳಿಕಳುಹಿಸುತ್ತಾರೆ. ತಿರುಗಿ ಬಂದ ದೂತೆ 'ರಮ್ಮಿ ಅರಸನ ಪಾದ ಜುಮ್ಮನೆ ಕಂಡು ಬಂದೆ, ನಿಮ್ಮ ಧ್ಯಾನದಲ್ಲೇ ಇರುವ ಧರ್ಮ ಪರಾಕು' ಎನ್ನುತ್ತಾಳೆ. ಶ್ರೀಕೃಷ್ಣನು ಪಾಂಡವರ ಆಗಮನದ ಸುದ್ದಿಯನ್ನು ಕೇಳಿ ಅರಮನೆಯನ್ನು ವಿಶೇಷವಾಗಿ ಸಿಂಗರಿಸುತ್ತಾನೆ. ಎಲ್ಲರೂ ನೋಡಿ ತಲೆದೂಗುತ್ತಾರೆ. ಸತ್ಯಭಾಮೆ ಮತ್ತು ರುಕ್ಮಿಣಿಯರು ಮಾತ್ರ ಎದುರುಗೊಳ್ಳಲು ಬರುವುದಿಲ್ಲ.

ಅಣ್ಣಾನ ಮನೆಗೆ ಬಂದು
ಸಣ್ಣಾ ಹೊತ್ತಾಯಿತು
ಅಣ್ಣಾನ ಮಡದಿ ಬರಲಿಲ್ಲ
ಅಣ್ಣಾನ ಮಡದಿ ಬರಲಿಲ್ಲ ರುಕ್ಮಿಣಿ
ಇನ್ನು ಬಾ ಅಭಯವ ಕೊಡುತೇವ

ಬಿಟ್ಟುಬರಲಾರಳಮ್ಮಯ್ಯ
ಪಟ್ಟ ಮಂಚವ ಭಾಮೆ
ಬಿಟ್ಟರೆ ರುಕ್ಮಿಣಿ ಕೃಷ್ಣನ
ಬೆರೆದಳೆಂಬ ಅಂಜಿಕಿಂದ-ಎಂದು ಛೇಡಿಸುತ್ತಾರೆ.

ಕೃಷ್ಣನು ರುಕ್ಮಿಣಿ ಸತ್ಯಭಾಮೆ, ಹದಿನಾರುಸಾವಿರ ನಾರಿಯರೊಡಗೂಡಿ ದ್ರೌಪದಿ ಸುಭದ್ರೆಯನ್ನು ಎದುರುಗೊಳ್ಳುತ್ತಾರೆ. ಪರಸ್ಪರ ಮೂದಲಿಸುತ್ತಾರೆ. ವಾಗ್ವಾದಗಳು ಜರುಗುತ್ತವೆ. ಬಲರಾಮನು ಅವರಿಬ್ಬರನ್ನು ಸಮಾಧಾನಪಡಿಸಿ ಆಹ್ವಾನಿಸುತ್ತಾನೆ. ಮುಂದೆ ಕೃಷ್ಣಾರ್ಜುನರ ಪರಸ್ಪರ ಮೂದಲಿಕೆಗಳು ನಡೆಯುತ್ತವೆ. ಅರ್ಜುನನ ಸಾಹಸಗಳು, ಮದುವೆಗಳು, ಹೇಡಿತನಗಳನ್ನು ಕೃಷ್ಣ ಬಯಲಿಗೆಳೆದರೆ, ಕೃಷ್ಣನ ದಶಾವತಾರಗಳನ್ನು ನಿಂದಾಸ್ತುತಿಗಳನ್ನಾಗಿ ಮಾಡಿಕೊಂಡ ಅರ್ಜುನ ದೊಡ್ಡ ವಾಗ್ಯುದ್ಧವನ್ನೇ ಮಾಡುತ್ತಾನೆ. ಮಧ್ಯೆ ಪ್ರವೇಶಿಸಿದ ಸುಭದ್ರೆ 'ಹೆಣ್ಣು ಕೊಟ್ಟಮ್ಯಾಲೆ ಹಿತವ ಚಿಂತಿಸಬೇಕು, ಅಣ್ಣಯ್ಯ ಎನ್ನಮುಖವ ನೋಡಿ ಕರುಣಿಸು- ಎನ್ನುತ್ತಾಳೆ. ಕೃಷ್ಣನು ಸಮಾಧಾನ ಪಡಿಸುತ್ತಾನೆ. ನಂತರ ಭೋಜನಕ್ಕೆ ಎಲ್ಲರನ್ನೂ ಆಹ್ವಾನಿಸುತ್ತಾರೆ. ಪರಸ್ಪರ ಕ್ಷಮೆ ಯಾಚಿಸುತ್ತಾರೆ.

ದೇವೀ ರುಕ್ಮಿಣಿ ನಮ್ಮಮ್ಮ ದೇವಕಿ ಸರಿಯಮ್ಮ
ನಾಕುಂದು ನಿನ್ನ ನುಡಿದೇನ
ನಾಕುಂದು ನಿನ್ನ ನುಡಿದಾ ಅಪರಾಧವ

ಭಾವದೊಳಿಡದೆ ಕರುಣಿಸು ಪ್ರೀತಿಯ ಮಾಡು

ಅತ್ತಿಗೆ ನೀನಮ್ಮ ಹೆತ್ತತಾಯಿ ಸರಿಯಮ್ಮ
ಅತ್ಯಂತ ನಿನಗೆ ನುಡಿದೇವ
ಅತ್ಯಂತ ನಿನಗೆ ನುಡಿದ ಅಪರಾಧವ
ಚಿತ್ತದೊಳಿಡದೆ ಕರುಣಿಸು ಪ್ರೀತಿಯ ಮಾಡು – ಎಂದು ವಿನಯದಿಂದ

ಕೇಳಿಕೊಳ್ಳುತ್ತಾ ಅಣ್ಣ-ಅತ್ತಿಗೆಯರ ಕಾಲು ತೊಳೆದು ಉಡುಗೊರೆಗಳನ್ನು ನೀಡುತ್ತಾರೆ. ಉಡುಗೊರೆ ಕೊಟ್ಟ ವಸ್ತ್ರಾಭರಣಗಳನ್ನು ಅವ್ವ ಸಡಗರದಿಂದ ವರ್ಣಿಸುತ್ತಾರೆ. ಬಂಧು ಬಳಗದ ಜೊತೆಗೆ ದಾಸಿಯರಿಗೆ, ರಂಗಯ್ಯನ ಗಿಳಿಗೆ, ರುಕ್ಮಿಣಿಯ ಬೆಕ್ಕಿಗೆ ಉಡುಗೊರೆಯ ವಿನಿಮಯವಾಗುತ್ತದೆ. ಸುಭದ್ರೆ, ದ್ರೌಪದಿಯರು ಮುಯ್ಯ ತೀರಿಸಬೇಕೆಂದು ರುಕ್ಮಿಣಿಗೆ ಥಟ್ಟನೆ ಆಣೆ ಇಡುತ್ತಾರೆ. ಜೊತೆಗೆ ಕೋತಿ ಹಿಂಡು, ಕರಡಿ ಹಿಂಡು, ಬೆಕ್ಕಿನ ಹಿಂಡು, ಸಿಂಹ, ಶಾರ್ದೂಲ, ಕಾಗೆಗಳ ಸಮೇತ ಬಂದು ಮುಯ್ಯ ಹಿಂದಿರುಗಿಸಬೇಕು ಎನ್ನುತ್ತಾರೆ. ಇಲ್ಲಿಗೆ ಮುಯ್ಯದ ಹಾಡಿನ ಮೊದಲ ಭಾಗ ಮುಕ್ತಾಯಗೊಳ್ಳುತ್ತದೆ.

ಮುಯ್ಯ ಹಿಂದಿರುಗಿಸಲು ಕೃಷ್ಣ ಪತ್ನಿಯರೊಡಗೂಡಿ, ಅಷ್ಟದಿಕ್ಪಾಲಕರು, ದೇವಾನುದೇವತೆಗಳೆಲ್ಲರೊಡನೆ ಹಸ್ತಿನಾವತಿಗೆ ಹೊರಡುತ್ತಾನೆ. ದಿಕ್ಕು ತುಂಬುತ್ತದೆ. ಹಾದಿ ಬೀದಿಗಳು ತುಂಬುತ್ತವೆ. ಅಂಬರ ತುಂಬುತ್ತದೆ. ಕೃಷ್ಣನ ಜೊತೆ ಮುಯ್ಯಕ್ಕೆ ಎಲ್ಲರೂ ಬಂದು ಸೇರುತ್ತಾರೆ. ಕೃಷ್ಣನ ಲೀಲೆಗಳನ್ನು ಅತಿಶಯವಾಗಿ ವರ್ಣಿಸಲಾಗಿದೆ. ಮುಯ್ಯ ಕೊಡುವ ಹಾಡಿನಲ್ಲಿರುವಂತೆಯೇ ಹಸ್ತಿನಾಪುರದ ಬೀದಿ, ಪಟ್ಟಣ, ವ್ಯಾಪಾರ, ವನ, ಪುಷ್ಪ, ಪರಿಸರವನ್ನು ವೀಕ್ಷಿಸುತ್ತ ಮೆರವಣಿಗೆ ಸಾಗುತ್ತದೆ. ವರ್ಣನೆಯು ಕಣ್ಣಿಗೆ ಕಟ್ಟುತ್ತದೆ. ಸುಭದ್ರೆ ದ್ರೌಪದಿಯರು, ರುಕ್ಮಿಣಿ ಸತ್ಯಭಾಮೆಯರೊಡನೆ ಪರಸ್ಪರ ಮೂದಲಿಕೆ, ಹಾಸ್ಯ, ವಿಡಂಬನೆಗಳಲ್ಲಿ ತೊಡಗುತ್ತಾರೆ. ಅವರ ಬದುಕಿನಲ್ಲಿ ನಡೆದ ಘಟನೆಗಳನ್ನೇ ಮೂದಲಿಸಲು, ಹಾಸ್ಯಮಾಡಿಕೊಳ್ಳಲು ಬಳಸಿಕೊಳ್ಳುತ್ತಾರೆ. ಕೃಷ್ಣನ ಲೀಲಾವಿನೋದಗಳನ್ನು, ದಾಂಪತ್ಯವನ್ನು ಹಾಸ್ಯಕ್ಕೆ ಗುರಿ ಮಾಡುತ್ತಾರೆ. ನಂತರ ಪರಸ್ಪರ ಕ್ಷಮೆಯಾಚಿಸುತ್ತಾರೆ, ಗೌರವಿಸುತ್ತಾರೆ. ಮುಯ್ಯವನ್ನು ಸತ್ಯಭಾಮೆ ರುಕ್ಮಿಣಿಯರು ವೈಭವದಿಂದ ಹಿಂದಿರುಗಿಸುತ್ತಾರೆ. ಸಂತೋಷ ಸಡಗರ ಸಂಭ್ರಮಗಳಿಂದ ಶುಭಹಾರೈಸುತ್ತಾ ಹಿಂದಿರುಗುತ್ತಾರೆ.

ಡಾ.ಟಿ.ಎಸ್.ನಾಗರತ್ನ ಅವರು ತಮ್ಮ 'ಹರಪನಹಳ್ಳಿ ಭೀಮವ್ವನ ಹಾಡುಗಳು' ಎನ್ನುವ ಕೃತಿಯಲ್ಲಿ "ಉತ್ತರ ಕರ್ನಾಟಕದಲ್ಲಿ ಮುಯ್ಯ ಕೊಡುವುದು ಒಂದು ಪದ್ಧತಿ. ಸಾಮಾನ್ಯವಾಗಿ ಮದುವೆಯ ಸಂದರ್ಭದಲ್ಲಿ ಗಂಡಿನ ಮನೆಯವರು ತಮ್ಮ ಗೌರವ, ಪ್ರತಿಷ್ಠೆಗಳ ಸಂಕೇತವಾಗಿ ಬಗೆಬಗೆಯ ವಸ್ತು, ವಸ್ತ್ರಾದಿಗಳನ್ನು ತೆಗೆದುಕೊಂಡು ಹೋಗಿ ಹೆಣ್ಣಿನವರಿಗೆ ಕೊಡುವರು. ಹೆಣ್ಣಿನವರು ಅದನ್ನು ಪಡೆದು ಅದಕ್ಕೂ ಮಿಗಿಲಾದ ವಸ್ತು, ವಸ್ತ್ರಾದಿಗಳಿಂದ ಮುಯ್ಯ ತೀರಿಸಬೇಕು" (ಪುಟ-೨೧, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿ.ವಿ. ಪೀಠಿಕೆ) ಎಂದಿದ್ದಾರೆ. ಈ ಸಂಪ್ರದಾಯವನ್ನು ಅವ್ವ ಪೌರಾಣಿಕ ಪ್ರಸಂಗ, ಪಾತ್ರಗಳ ಮೂಲಕ ಮುಯ್ಯದ ಹಾಡಾಗಿಸಿದ್ದಾರೆ. ಈ ಸಂದರ್ಭದಲ್ಲಿ

ಬೀಗರು ಕೇವಲ ಮನರಂಜನೆಗಾಗಿ ಪರಸ್ಪರರು ವಾಗ್ವಾದಿಸುವುದು, ನಿಂದಿಸುವುದು, ಛೇಡಿಸುವುದು ನಡೆಯುತ್ತದೆ. ಅವ್ವನವರ ಈ ಹೊಸ ಕಲ್ಪನೆ ವ್ಯಕ್ತಿಗಳ ಸಾಮಾಜಿಕ ಮತ್ತು ಕೌಟುಂಬಿಕ ಸಹಜ ಮನೋಧರ್ಮವನ್ನು ಅನಾವರಣಗೊಳಿಸಿದೆ. ಕಾವ್ಯದ ಸಹಜ ಚಲುವನ್ನು ತಂದುಕೊಟ್ಟಿದೆ.

**ಮೋರೆಗೆ ನೀರು ತಂದ ಹಾಡು**

ಮದುವೆಯ ಸಂದರ್ಭದಲ್ಲಿ ಹೆಣ್ಣಿನ ಕಡೆಯವರು ಬೆಳಗಾದಾಗ ಬೀಗರಿಗೆ ಮುಖ ತೊಳೆಯಲು ಬಿಸಿನೀರನ್ನು ತಂದುಕೊಡುವುದು ಉತ್ತರ ಕರ್ನಾಟಕದ ಒಂದು ಸಂಪ್ರದಾಯ. ಈ ಸಂಪ್ರದಾಯವನ್ನೆ ಅವ್ವನವರು **'ಮೋರೆಗೆ ನೀರು ತಂದ ಹಾಡು'** ಕೃತಿಯಲ್ಲಿ ಕಾಣಿಸಿದ್ದಾರೆ. ಹಾಗೆ ನೀರು ತಂದು ಕೊಡುವಾಗ ಬೀಗರುಗಳು ಮನರಂಜನೆಗಾಗಿ ಪರಸ್ಪರ ದೋಷಗಳನ್ನು ಎತ್ತಿ ಹಿಡಿಯುವುದು, ನಿಂದಿಸುವುದು, ವ್ಯಂಗ್ಯ ಹಾಸ್ಯದ ಧ್ವನಿಗಳಲ್ಲಿ ವಾಗ್ಯುದ್ಧ ನಡೆಸುತ್ತಾರೆ. ಪೌರಾಣಿಕ ಕತೆಗಳಲ್ಲಿ ಬರುವ ಪಾತ್ರಗಳ ಮೂಲಕ ಈ ಸಂಪ್ರದಾಯವನ್ನು ಅವ್ವ ನಿರೂಪಿಸಿದ್ದಾರೆ. ಈ ಸಂಭಾಷಣೆಗಳಲ್ಲಿ ಪರಸ್ಪರರಲ್ಲಿ ದ್ವೇಷವಾಗಲಿ, ದುರುದ್ದೇಶವಾಗಲಿ ಇರದೆ ಕೇವಲ ಮನರಂಜನೆಗಾಗಿಯೆ ಎನ್ನುವುದು ಗಮನಿಸಬೇಕಾದ ಸಂಗತಿಯಾಗಿದೆ.

'ಮೋರೆಗೆ ನೀರುತಂದ ಹಾಡುಗಳು' ದಶಾವತಾರವನ್ನು ನಿಂದಾಸ್ತುತಿಯ ರೂಪದಲ್ಲಿ ಚಿತ್ರಿಸಿವೆ. ಬೀಗಿತ್ತಿಯರಾದ ಭಾಗೀರಥಿ ಮತ್ತು ಅದಿತಿಯರು ಪರಸ್ಪರರನ್ನು ದೂಷಿಸುವ ಹಾಡುಗಳು ಇಲ್ಲಿ ಕಂಡು ಬರುತ್ತವೆ. ಅದಿತಿಯು ಭಾಗೀರಥಿಯ ಮನೆಗೆ ಮೋರೆ ತರಲು ನೀರು ತರುತ್ತಾಳೆ. ಇನ್ನೂ ನಿದ್ರೆಯ ಮಂಪರಿನಲ್ಲಿರುವ ಅದಿತಿಯನ್ನು ಕುರಿತು 'ಅಷ್ಟಪದವೇರಿ ಅದಿತಿಗಿಷ್ಟು ಎಚ್ಚರವಿಲ್ಲ/ ಅಷ್ಟೂರು ನೋಡಿ ನಗುವಂತೆ/ ಅಷ್ಟೂರು ನೋಡಿ ನಗುವಂತೆ ಕುಂಬಕರ್ಣ/ಸೋತೆಂತ ಕೊಟ್ಟ ಜಯಪತ್ರ'/ ಎಂದು ಹಾಸ್ಯ ಮಾಡುತ್ತಾಳೆ. ಅದಿತಿಯು, 'ಏನ ಜಾಹ್ನವಿ ನಿನ್ನ ಮಾನ ಬಹಳ ಮೀನಗೊಳಕಿನ ನೀರ ತಂದಿ ಕೇಳs/ಮಿತ್ರಿಯರು ನಾವೆಲ್ಲ ಅರ್ಥಿಯಿಂದ ಬರುವಾಗ ಸತ್ತ ಕನ್ನಡಿ ಬೆಳಕು ಕಂಡಿತಲs/ರತ್ನದರಮನಿಯೊಳಗೆ ಎತ್ತ ತೋರುವಾ ದಿಕ್ಕು ಕತ್ತಲಿs ಕವಿದಂತೆ ಕೌತುಕವ/ಗಂಗಿ ನೀ ಬಂದಿ ತಂಗಿಯರ ಒಡಗೂಡಿ ಗೋಡಿ ಕನ್ನಡಿ ಬೆಳಕು ಅಡಗಿತಲ್ಲ/ಗಾಢ ಸೂರ್ಯರ ಮೋರೆ ಬಾಡಿತು ಕೌತುಕ ಮೋಡ ಮುಸುಕಿದಂತೆ ಮಂದಿರದಿs/ – ಎನ್ನುತ್ತಾಳೆ. ಅದಕ್ಕೆ ಭಾಗೀರಥಿಯು 'ಅದಿತಿ ಕಶ್ಯಪರ ತಪಸ್ಸಿಗೊಲಿದು ಶ್ರೀಕೃಷ್ಣನು ವಸುದೇವ ದೇವಕಿಯರ ಮಗನಾಗಿ ಜನಿಸಿದ. ಪರಮಾತ್ಮನ ತಾಯಿಯಾದ ನಿನಗೆ ಅಭಿಷೇಕ ಮಾಡಲೆಂದು ನೀರು ತಂದರೆ ನೀನು ಹೀಗೆ ಅವಮಾನಿಸುವುದೆ? ಇದನ್ನು ಶ್ರೀಕೃಷ್ಣ ಒಪ್ಪುವನೆ?' ಎನ್ನುತ್ತಾಳೆ. ಪರಸ್ಪರರಲ್ಲಿ ವಿರಸದ ಮಾತುಗಳು ಕೊನೆಗೊಳ್ಳುತ್ತವೆ.

**ಶೃಂಗಾರ ತಾರತಮ್ಯ**

ಅವ್ವನವರ ಶಿಷ್ಯೆ ಪ್ರಯಾಗವ್ವ ಆಭರಣಗಳಿಗಾಗಿ ತನ್ನ ಪತಿಯನ್ನು ಪೀಡಿಸುತ್ತಾಳೆ. ಅವನು ಗಲಗಲಿ ಅವ್ವನವರ ಹತ್ತಿರ ಬಂದು ತನ್ನ ಕಷ್ಟವನ್ನು ಹೇಳಿಕೊಳ್ಳುತ್ತಾನೆ. ಆಗ ಪ್ರಯಾಗವ್ವನಿಗಾಗಿಯೇ ಈ ಕೃತಿಯನ್ನು ಅವ್ವ ರಚಿಸಿದರೆಂದು ಹೇಳಲಾಗುತ್ತದೆ.

ಈ ಕೃತಿಯಲ್ಲಿ ಹರಿಯ ನಂತರ ಉಳಿದ ದೇವರುಗಳನ್ನು ತಾರತಮ್ಯೋಕ್ತವಾಗಿ ನೆನೆಯುವಂತದ್ದನ್ನು ಕಾಣಬಹುದು. ನಾರಿಯರು ಶೃಂಗರಿಸಿಕೊಳ್ಳುವ ಆಭರಣಗಳ ವಿವರಗಳನ್ನು ಹೇಳಿದ್ದಾರೆ. ದೇವರುಗಳ ತಾರತಮ್ಯದ ಜೊತೆಗೆ ಆಭರಣ ತಾರತಮ್ಯವನ್ನು ಹೇಳಿರುವುದು ವಿಶಿಷ್ಟವಾಗಿದೆ. ಶ್ರೀಹರಿ ತತ್ವವನ್ನು ಪ್ರತಿಪಾದಿಸುವುದರ ಜೊತೆಗೆ ಆಭರಣಗಳು ಕೇವಲ ಅಲಂಕಾರಕ್ಕಲ್ಲ, ಅದು ವ್ಯಕ್ತಿಯ ಗುಣವನ್ನು, ವ್ಯಕ್ತಿತ್ವವನ್ನು ಪ್ರತಿಬಿಂಬಿಸುವಂತಹವು ಎಂದಿದ್ದಾರೆ. ಅಲ್ಲದೆ ಆಭರಣವನ್ನು ಧರಿಸುವುದಕ್ಕಿಂತಲೂ ನಡವಳಿಕೆಯೇ ಉನ್ನತ ಆಭರಣ ಎನ್ನುವ ಸೂಕ್ಷ್ಮ ಸಂಗತಿಯನ್ನು ಪ್ರತಿಪಾದಿಸಿದ್ದಾರೆ.

ಅವ್ವನವರ ಈ ಕೃತಿಯು ಅವರ ಹರಿಭಕ್ತಿ, ಪೌರಾಣಿಕ ಪ್ರಜ್ಞೆ ಹಾಗು ಆಭರಣಗಳ ಬಗೆಗಿನ ಅವರ ತಿಳುವಳಿಕೆಯನ್ನು ಎತ್ತಿ ಹಿಡಿದಿದೆ.

**ಬೀಗರ ಹಾಡುಗಳು**

ಗಲಗಲಿ ಅವ್ವನವರು ಬರೆದಿರುವ 'ಬೀಗರ ಹಾಡುಗಳು' ಬೀಗರು ಪರಸ್ಪರ ರಂಜನೆಗಾಗಿ ಮೂದಲಿಸುವುದು, ಬಯ್ದಾಡುವುದು ನಂತರ ಪರಸ್ಪರರು ರಾಜಿಯಾಗುವ ನಿಂದಾಸ್ತುತಿಯ ರೂಪದ ಹಾಡುಗಳು. ಕೃಷ್ಣಾವತಾರವನ್ನು ಕುರಿತ ವ್ಯಂಗ್ಯೋಕ್ತಿ ಹೀಗಿದೆ:

ಹೆಡೆಯ ತುಳಿದು ಬಂದ ಒಡೆಯ ರಾಮೇಶಗೆ ಕರಿಡಿಯಂಥ ಮಗಳ ಕರೆದು
ಕೊಟ್ಟಿರೆ ನೀವು॥
ಕರೆದರೆ ಬಾರರಾ ನರನ ಸಾರಥಿಯರ, ವೈದರ್ಭಿ ಓಡಿಸಿ ತಂದಾರ ಕೇಳಿರಿ ಜನರು
ಗಜಪುರದಲ್ಲೇ ಇವರ ಯಜಮಾನತ್ವ ಬಹಳ, ಭುಜಹಚ್ಚಿ ಎಂಜಲ ಬಳಿದಾರಾ (ಲೇ ಮತ್ತು ಪ್ರ:. ಪ್ರೊ. ಎಂ.ಆರ್.ಲಕ್ಷ್ಮಿದೇವಿ, ಪ್ರಕಟನ ವರ್ಷ: ೨೦೧೧, ಕೃತಿ: ಗಲಗಲಿ ಅವ್ವ- ಪುಟ-೨೨)

ಕಾಳಿಂಗ ಮರ್ದನ ಪ್ರಸಂಗವನ್ನು ಹೇಳುತ್ತ ಜಾಂಬವಂತನು ಮಗಳನ್ನು ವಿವಾಹ ಮಾಡಿಕೊಟ್ಟಿದ್ದಕ್ಕೆ ಆಕ್ಷೇಪಿಸುತ್ತಲೇ ಗಜಪುರದಲ್ಲೆ ಇವರ ಯಜಮಾನಿತ್ವ ಬಹಳ ಎನ್ನುತ್ತ ತಮ್ಮ ಹರಿಭಕ್ತಿ ಮೆರೆದಿದ್ದಾರೆ.

**ಚಂದ್ರಹಾಸನ ಕಥೆ**

ಇದು ಹೆಳವನಕಟ್ಟೆ ಗಿರಿಯಮ್ಮನ ರಚನೆ. ಇದು ಮಹಾಭಾರತದಲ್ಲಿ ಬರುವ ಚಂದ್ರಹಾಸನೆಂಬ ಭಕ್ತನ ಕಥೆ. ನಾಕು ಸಂಧಿಗಳನ್ನು ಒಳಗೊಂಡಿದ್ದು ಮುನ್ನೂರೈವತ್ತು ನುಡಿಗಳ ಸಾಂಗತ್ಯ. ಲಕ್ಷ್ಮೀಶನು ಜೈಮಿನಿ ಭಾರತದ ಚಂದ್ರಹಾಸೋಪಾಖ್ಯಾನ ತನ್ನ ಚಂದ್ರಹಾಸನ ಕಥೆಗೆ ಮೂಲ ಎಂಬುದನ್ನು ಕಾವ್ಯದ ಪ್ರಾರಂಭದಲ್ಲಿಯೇ ಗಿರಿಯಮ್ಮ ಹೇಳಿಕೊಂಡಿದ್ದಾಳೆ.

ಸುರಪುರವಾಸ ಲಕ್ಷ್ಮಿಯ ಕಾಂತ ಭಕ್ತರ್ಗೆ
ಒರೆದಂತ ಚಂದ್ರಹಾಸನ ಕಥೆಯನು
ಚರಿತೆಯ ಮಾಡಿ ವರ್ಣಿಸುವೆ (ನುಡಿ-೭)

ಭಕ್ತ ಚಂದ್ರಹಾಸ ಹರಿಭಕ್ತಿಯಿಂದಲೇ ತನಗೆ ಬಂದ ಕಷ್ಟಗಳನ್ನೆಲ್ಲಾ ಎದುರಿಸುತ್ತಾನೆ. ಭಗವಂತನ ಕೃಪೆಯಿಂದ ಮಾತ್ರ ಕಷ್ಟಗಳಿಂದ ಪಾರಾಗಬಹುದು ಎಂಬ ತತ್ವಕ್ಕೆ ನಿದರ್ಶನವಾಗಿ ಈ ಹಾಡು ಮೂಡಿಬಂದಿದೆ. ಕಾವ್ಯದ ಪ್ರಾರಂಭಕ್ಕೆ ಸಂಪ್ರದಾಯದಂತೆ ತನ್ನ ಆರಾಧ್ಯದೈವ ಹೆಳವನಕಟ್ಟೆ ರಂಗನನ್ನು, ಗಣಪತಿಯನ್ನು, ಶೃಂಗೇರಿಯ ಶಾರದೆ, ಮೈಲಾರಲಿಂಗನನ್ನು ನೆನೆಯುವುದರ ಜೊತೆಗೆ ವಿಶೇಷವೆಂದರೆ ಪತಿಯ ಪಾದವನ್ನು ನೆನೆಯುತ್ತಾಳೆ.

ಪಾಂಡವರು ಅಶ್ವಮೇಧಯಾಗವನ್ನು ಮಾಡಿದಾಗ ಕುದುರೆಯ ಹಿಂದೆ ಅರ್ಜುನನು ಹೋಗುತ್ತಾನೆ. ಯಾಗದ ಕುದುರೆಯನ್ನು ಚಂದ್ರಹಾಸನ ಮಗ ಮಕರಧ್ವಜ ಕಟ್ಟಿಹಾಕುತ್ತಾನೆ. ಆ ಸಂದರ್ಭದಲ್ಲಿ ಅರ್ಜುನನಿಗೆ ನಾರದರು ಚಂದ್ರಹಾಸನ ಕಥೆಯನ್ನು ಹೇಳುತ್ತಾರೆ.

ಕೇರಳ ದೇಶದ ರಾಜ ಧಾರ್ಮಿಕ. ಅವನಿಗೆ ಮೂಲಾ ನಕ್ಷತ್ರದಲ್ಲಿ ಮಗ ಹುಟ್ಟುತ್ತಾನೆ. ಜಾತ ಕರ್ಮ–ನಾಮಕರಣವನ್ನು ಮಾಡದೆ, ಧಾರ್ಮಿಕನು ಕಾಲವಾಗುತ್ತಾನೆ. 'ನಾಯಕರಿಲ್ಲದ ಕಾಯವಿದೇಕೆಂದು' ರಾಜಪತ್ನಿ ಸಾಯುತ್ತಾಳೆ. ರಾಜ್ಯವನ್ನು ಪರರಾಯರು ಬಂದು ಕಟ್ಟುತ್ತಾರೆ. ಪೋಷಣೆ ಮಾಡುವವರಿಲ್ಲದೆ 'ಪರಪುಟ್ಟ'ನಾದ ಮಗುವನ್ನು ದಾಸಿಯೊಬ್ಬಳು ಸಾಕುತ್ತಾಳೆ.

ದೇಶಾಧಿಪತಿಯ ಗರ್ಭದಿ ಬಂದು ನನಗೀಗ
ಹಾಸುವ ವಸ್ತುಗಳಿಲ್ಲ
ಬೀಸಿ ತೂಗುವರೇ ತೊಟ್ಟಿಲು ಇಲ್ಲ ಎನುತಲಿ
ಬೇಸತ್ತು ಅಳಲುವಳೊಮ್ಮೆ (ನುಡಿ–೨೪)

ಬಾಲಕನ ಲೀಲೆಗಳನ್ನು ಕಂಡು ಹಿಗ್ಗುತ್ತಾಳೆ. ಸ್ವಲ್ಪ ದಿನಗಳ ನಂತರ ದಾಸಿಯೂ ತೀರಿಕೊಳ್ಳುತ್ತಾಳೆ. ಚಂದ್ರಹಾಸ ಮತ್ತೆ ಅನಾಥನಾಗುತ್ತಾನೆ. ನೆರೆಯ ನಾರಿಯರೆಲ್ಲ

ಮಾಗಾಯಿ ಮುರವಿಟ್ಟು ಮನ್ನಿಸಿ ಕೆನೆಮೊಸ
ರೋಗರವನ್ನು ಉಣಿಸುವರು
ತೂಗುವರು ತೊಟ್ಟಿಲೊಳಗಿಟ್ಟು ತರಳನ
ರಾಗಗಾನದಲಿ ಪಾಡುವರು (ನುಡಿ–೨೮)

ಮಾತೃಹೃದಯಿಗಳಾದ ಸೂಳೆವೆಣ್ಣುಗಳು ಅವನನ್ನು ಸಾಕುತ್ತಾರೆ ಎನ್ನುವ ಮಾತಿನಲ್ಲಿ ಚಂದ್ರಹಾಸ ಅನಾಥನಾದರೂ ಸ್ತ್ರೀಕುಲದ ಸಹಜ ಮಾತೃತ್ವದ ಮಡಿಲಲ್ಲಿ ಬೆಳೆಯುವ ಬಗೆಯನ್ನು ಗಿರಿಯಮ್ಮ ವಾತ್ಸಲ್ಯದಿಂದ ವರ್ಣಿಸಿದ್ದಾಳೆ. ಹೀಗಿರುವಾಗ ದಾರಿಯಲ್ಲಿ ಅಕಸ್ಮಾತ್ತಾಗಿ ಅವನಿಗೊಂದು ಸಾಲಿಗ್ರಾಮ ದೊರೆಯುತ್ತದೆ. 'ಗಟ್ಟುಳ್ಳ ಗೋಲಿಯು ತನಗೆ ದೊರಕಿತೆಂದು' ಅದನ್ನು ಇಡಲು ಮನೆಯಿಲ್ಲದ್ದರಿಂದ ಬಾಯೊಳಗೆ ಇಟ್ಟುಕೊಂಡಿರುತ್ತಾನೆ. ದಿನವೂ ಪೂಜಿಸುತ್ತಾನೆ. ಮಂತ್ರಿ ದುಷ್ಟಬುದ್ಧಿಯ ಮನೆಗೆ ಭೋಜನಕ್ಕಾಗಿ ಬಂದ ಬ್ರಾಹ್ಮಣರು ಚಂದ್ರಹಾಸನ ಮುಖದಲ್ಲಿ ರಾಜಲಕ್ಷಣಗಳನ್ನು ಗುರುತಿಸುತ್ತಾರೆ. ಅವನು ಪರದೇಸಿಯೆಂದು ದುಷ್ಟಬುದ್ಧಿ ಹೇಳುತ್ತಾನೆ. ಅದಕ್ಕೆ ಬ್ರಾಹ್ಮಣರು ಇವನು ರಾಜ್ಯಕ್ಕೆ ಅಧಿಪತಿಯಾಗುವನೆಂದು ಭವಿಷ್ಯ ನುಡಿಯುತ್ತಾರೆ. ಮಂತ್ರಿ ದುಷ್ಟಬುದ್ಧಿಗೆ ಇದನ್ನು ಸಹಿಸಲಾಗುವುದಿಲ್ಲ.

ಕಟುಕರನ್ನು ನೇಮಿಸಿ ಚಂದ್ರಹಾಸನನ್ನು ಕೊಲ್ಲಿಸಲು ಪ್ರಯತ್ನಪಡುತ್ತಾನೆ. 'ನುಡಿನುಡಿಗೆ ನಾರಾಯಣಾ ಹರಿ' ಎನ್ನುವ ಗೋಳಿಡುವ ಬಾಲಕನನ್ನು ಕಂಡು ಕಟುಕರ ಮನಸ್ಸು ಕರಗುತ್ತದೆ. 'ಈ ತರಳನ ಪ್ರಾಣವನಳಿದರೆ ಬಲುಪಾತಕ' ಎಂದು ಅವನನ್ನು ಬಿಟ್ಟುಬಿಡುತ್ತಾರೆ. ಅವನ ಎಡಗಾಲಿನಲ್ಲಿದ್ದ ಆರನೆಯ ಬೆರಳನ್ನು ಕತ್ತರಿಸಿಕೊಂಡು, ಕೊಂದ ಗುರುತು ಎಂದು ಮಂತ್ರಿಗೆ ತೋರಿಸಿ ಉಡುಗೊರೆ ಪಡೆದು ಹೋಗುತ್ತಾರೆ. ಬೇಟೆಗೆ ಬಂದಿದ್ದ ಚಂದ್ರಾವತಿಯ ಪುಳಿಂದರಾಯನಿಗೆ ಚಂದ್ರಹಾಸ ಅಳುವುದು ಕೇಳುತ್ತದೆ. ಅವನನ್ನು ತನ್ನೊಂದಿಗೆ ಕರೆದುಕೊಂಡು ಹೋಗಿ ಚಂದ್ರಹಾಸನೆಂದು ಹೆಸರಿಟ್ಟು ಊರಿಗೆಲ್ಲ ಸಕ್ಕರೆ ಹಂಚುತ್ತಾನೆ. ಮಂತ್ರಿ ದುಷ್ಟಬುದ್ಧಿಗೆ ಇದು ತಿಳಿಯುತ್ತದೆ. ವಿಷ ಕೊಟ್ಟು ಕೊಲ್ಲುವಂತೆ ಮಗನಿಗೆ ಪತ್ರ ಬರೆದು ಚಂದ್ರಹಾಸನ ಕೈಯಲ್ಲೇ ಕೊಟ್ಟು ಕಳುಹಿಸುತ್ತಾನೆ.

ಒಂದು ಲಿಖಿತ ಸಹಸ್ರ ಲಿಖಿತವು ಎಂದು
ಭಾವಿಸಿ ನಿನ್ನ ಮನದಿ
ಸಂದೇಹವಿಲ್ಲದೆ ವಿಷವ ಕೊಡುವುದು
ಮುಂದಕ್ಕೆ ಲೇಸುಂಟು ನಮಗೆ

ಎಂದಿರುವ ಪತ್ರವನ್ನು ಮಂತ್ರಿಯ ಮಗಳು 'ತಪ್ಪುಂಟು ಇದರೊಳು ಕೆಡುವುದು ಕಾರ್ಯ, ಕೈ ತಪ್ಪೆಂದು ಮನದಲ್ಲಿ ತಿಳಿದು', 'ವಾಕಾರವನೆ ಚೆಳ್ಳುಗುರಿಂದಲಿ ತಿದ್ದಿ ಯೇಕಾರವನೇ ಮಾಡಿದಳು'. ಮಂತ್ರಿಯ ಮಗ ಪತ್ರ ಬಿಚ್ಚಿ ಓದುತ್ತಾನೆ. ಆ ಪತ್ರದಲ್ಲಿ 'ಸೀಮೆಗರಸು ಇವನಹನು ಕಾಣುತ ಶೀಘ್ರದಿ ವಿಷಯೆ ಕೊಡುವುದುತ್ತಮವು',

ಒಂದು ಲಿಖಿತ ಸಹಸ್ರ ಲಿಖಿತವು ಎಂದು
ಭಾವಿಸಿ ನಿನ್ನ ಮನದಿ
ಸಂದೇಹವಿಲ್ಲದೆ ವಿಷಯೆ ಕೊಡುವುದು ಮುಂದಕ್ಕೆ

ಲೇಸುಂಟು ನಮಗೆ– ಎಂಬುವುದನ್ನು ಓದಿಕೊಂಡು ತಂಗಿಗೆ ಚಂದ್ರಹಾಸನನ್ನು ಕೊಟ್ಟು ಮದುವೆ ಮಾಡುತ್ತಾನೆ. ದುಷ್ಟಬುದ್ಧಿಯು ಮತ್ತೆ ಚಂದ್ರಹಾಸನನ್ನು ಕೊಲ್ಲಲು ಎಣಿಸಿ ಕಾಳಿಯ ಪೂಜೆಗೆಂದು ಕಳುಹಿಸಿಕೊಟ್ಟು, ಅವನನ್ನು ಕೊಲ್ಲಿಸಲು ಕಟುಕರನ್ನು ನೇಮಿಸಿರುತ್ತಾನೆ. ದೇವಸ್ಥಾನಕ್ಕೆ ಹೋಗುವ ದಾರಿಯಲ್ಲಿ ಚಂದ್ರಹಾಸನಿಗೆ ಮದನ ಎದುರಾಗುತ್ತಾನೆ. ಚಂದ್ರಹಾಸನು 'ನೈವೇದ್ಯವನು ಇಂದು ಕಾಳಿಗರ್ಪಿಸು ಎಂದು ಮಾವನವರು ಕಳುಹಿಸಿದರು ಎನಲು, ಮದನ 'ನಾ ಕೊಟ್ಟು ಬಹೆನು ನೈವೇದ್ಯವನು' ಎಂದನು. ಚಂದ್ರಹಾಸ ಅರಮನೆಗೆ ನಡೆಯುತ್ತಾನೆ. ಮದನನು ಅಂಬಿಕಾಲಯಕ್ಕೆ. ಮಂತ್ರಿಯಾಜ್ಞೆಯಂತೆ ಆಲಯಕ್ಕೆ ಬಂದವನನ್ನು ಕಟುಕರು ಕೊಲ್ಲುತ್ತಾರೆ. ತನ್ನ ಸಂಚಿಗೆ ಮಗನೇ ಬಲಿಯಾದದ್ದನ್ನು ಕಂಡು ದುಷ್ಟಬುದ್ಧಿ ತಲೆಯೊಡೆದುಕೊಳ್ಳುತ್ತಾನೆ. ಇತ್ತ ಪಟ್ಟಣಕ್ಕೆ ನಡೆದ ಚಂದ್ರಹಾಸನಿಗೆ ಕುಂತಲ ದೇಶದ ರಾಜಪುತ್ರಿ ಚಂಪಕಮಾಲೆಯೊಂದಿಗೆ ವಿವಾಹವಾಗುತ್ತದೆ. ಚಂದ್ರಹಾಸನ ಪ್ರಾರ್ಥನೆಯಿಂದ ಮಂತ್ರಿ ಮತ್ತು ಅವನ ಮಗ ಬದುಕಿಕೊಳ್ಳುತ್ತಾರೆ. 'ಕಾವ ಕೊಲ್ಲುವ ಶ್ರೀಹರಿಯಲ್ಲದೆ ಭೂವಲಯದೊಳು ಬೇರುಂಟೆ' ಎಂಬುದು ಕಾವ್ಯದ ತಿರುಳು. ಹರಿಭಕ್ತಿಯ

ಪ್ರಚಾರವೇ ಕೀರ್ತನೆಯ ಉದ್ದೇಶ. ಕಥೆಯ ಸಂದರ್ಭಗಳಲ್ಲಿ ವರ್ಣನೆಗಳು ಕಾವ್ಯಾತ್ಮಕವಾಗಿ ಮೂಡಿಬಂದಿವೆ.

**ನಳಚರಿತ್ರೆ**

ಇದು ಹರನಪನಹಳ್ಳಿ ಭೀಮವ್ವನವರ ರಚನೆ. ಮಹಾಭಾರತದ ಅರಣ್ಯಪರ್ವದ 'ನಳೋಪಾಖ್ಯಾನ' ಈ ಕಥೆಯ ವಸ್ತು. ನೂರ ಐದು ಧ್ವನಿಗಳಲ್ಲಿ ಮೂಡಿಬಂದಿದೆ. ಕನಕದಾಸರು – ರೋಮಶಮುನಿ ಧರ್ಮರಾಯನಿಗೆ ಹೇಳಿದ ಕಥೆ ಎಂದರೆ, ಭೀಮವ್ವ ಬೃಹದಶ್ವನು ಧರ್ಮರಾಯನಿಗೆ ಹೇಳಿದ ಎಂದಿದ್ದಾರೆ. ದಮಯಂತಿಯ ಸ್ವಯಂವರದ ಸಮಯದಲ್ಲಿ ದಮಯಂತಿ ಹೇಳುವ ಚ್ಯವನ ಋಷಿಗಳ ಕಥೆ ಉಳಿದ ಕಾವ್ಯಗಳಲ್ಲಿ ಇಲ್ಲ. ಅದು ಭೀಮವ್ವನದೇ ಸೃಷ್ಟಿ. ಕಾವ್ಯದ ಪ್ರಾರಂಭಕ್ಕೆ ಉಮೆಯ ಸುತೆಗೆ ವಂದಿಸುತ್ತಾರೆ. 'ಕಂತುಪಿತನ ಕರುಣದಲಿ ದಮಯಂತಿ ಬಂದಾಪತ್ತು ಕಳೆದು ಸಂತೋಷದಿ ಸಾಮ್ರಾಜ್ಯವಾಳಿದ ಕಥೆಯ ಪೇಳುವೆನು' ಎಂದು ಕಥಾವಸ್ತುವನ್ನು ಹೇಳುತ್ತಾರೆ.

ಪಾಂಡವರು ವನವಾಸದಲ್ಲಿದ್ದಾಗ ಬೃಹದಶ್ವನೆಂಬ ಮುನಿಯ ಭೇಟಿಯಾಗುತ್ತದೆ, ಕಷ್ಟ ಹೇಳಿಕೊಳ್ಳುತ್ತಾನೆ: 'ಸಣ್ಣಮಲ್ಲಿಗೆಯ ಪೋಲುವಂತಹ ದ್ರೌಪದಿಯ ಅರಣ್ಯವಾಸಗಳ ನೋಡಿ ನಿನ್ನೀ ಸಂತಾಪ ಸೈರಿಸಲಾರೆನೆಂದು' ಕಣ್ಣಲುದುಕ ತರುತ್ತಾನೆ. ಬೃಹದಶ್ವಮುನಿಯು ನಳಮಹಾರಾಜನ ಕಥೆ ಹೇಳುತ್ತಾನೆ. ವಿದರ್ಭ ದೇಶದ ರಾಜ ಭೀಮರಾಯನೆಂಬುವವನಿಗೆ ದಮನ ಎಂಬ ಋಷಿಯ ವರದಿಂದ ದಮಯಂತಿ ಎಂಬ ಮಗಳು ಹುಟ್ಟುತ್ತಾಳೆ. ದಮಯಂತಿಯ ಬಾಲ್ಯ ಯವ್ವನಗಳು ಕಾವ್ಯದಲ್ಲಿ ಸಡಗರದಿಂದ ವರ್ಣಿತವಾಗಿವೆ. ದಮಯಂತಿಯ ಶುಭಲಕ್ಷಣವನ್ನು ಕೇಳಿ ನಳರಾಯ ಮಡದ್ಯಾಗಲೆನುತ ಮನಸ್ಸಿಟ್ಟು ದಮಯಂತಿಯಲ್ಲಿ, ಬಿಡದೆ ಭೀಮೇಶ ಕೃಷ್ಣನ ಬೇಡಿಕೊಳ್ಳುತ್ತಿದ್ದ. ಒಂದು ದಿನ ಬೇಟೆಗೆಂದು ಬಂದ ನಳನಿಗೆ ರಾಜಹಂಸ ಸಿಗುತ್ತದೆ.

ಹವಳ ಮುತ್ತು ಕೂಡಿಸಿದಂತವಳಿಗೆ ನಿನಗೆ
ಬಿಳಿಯೆಲೆ ಅಡಕೆ ಸುಣ್ಣದಂತೆ ಸೊಗಸು ಕಾಂಬೋದು

'ದಮಯಂತಿಗೆ ನೀನು ಕಾಂತನಾಗುವಂತೆ ನಾ ಮಾಡುವೆನು' ಎಂದು ರಾಜಹಂಸ ಹೇಳಿದಾಗ ಆನಂದದಿಂದ ಹಾರಿಬಿಡುತ್ತಾನೆ. ಹಾರಿಹೋದ ಹಂಸೆ ದಮಯಂತಿಗೆ 'ನಳರಾಯನೆಂಬುವ ದೊರೆಯು ಪುರುಷನಾದರೆ ನಿನ್ನ ಪುಣ್ಯಕ್ಕೆ ಸರಿಯಿಲ್ಲ, ಅರಸನರಸಿಯು ಆಗಿ ಸರಸ ಸುಖಬಡುವಾಗ್ಗೆ ನೆನೆಸಿಕೊಂಬುವಿ ಎನ್ನ ಮಾತು ಮರೆಯದೆ ನೀನು' ಎನ್ನುತ್ತದೆ. ನಳನ ಸೌಂದರ್ಯವನ್ನೂ ವರ್ಣಿಸುತ್ತದೆ.

ಇಕ್ಷು ಚಾಪನ ಶರದಿಂದ ಮೋಹಿತಳಾಗಿ
ಸಾಕ್ಷಾತ್ ಪತಿಯು ನಳನೆಂದು ನೇಮಿಸಿಕೊಂಡೆ–ಎಂದು ದಮಯಂತಿ ಹೇಳಲು ಮತ್ತೆ ಹಂಸೆ ಹಾರಿ ನಳನಿಗೆ ವಿಷಯ ತಿಳಿಸುತ್ತದೆ. ನಳನ ವಿರಹದಲ್ಲಿ ದಮಯಂತಿ ಬಳಲುತ್ತಾಳೆ. ತಂದೆ ಭೀಮರಾಯನಿಗೆ ವಿಷಯ ತಿಳಿಯುತ್ತದೆ. ಸ್ವಯಂವರವನ್ನು ಏರ್ಪಡಿಸುತ್ತಾನೆ. ದಮಯಂತಿಯು ಇಂದ್ರ, ಯಮ, ಕುಬೇರ, ಅಗ್ನಿಯನ್ನು ಬಿಟ್ಟು ನಳನನ್ನು ವರಿಸುತ್ತಾಳೆ. ದಮಯಂತಿಯನ್ನು

ವರಿಸಲು ಆಸಕ್ತನಾದ ಕಲಿ ವಿಷಯ ತಿಳಿದು 'ಮಡದಿ ಮಕ್ಕಳನಗಲಿಸಿ ಅಡವಿಗಟ್ಟುವೆ ನಳನ ಬಿಡದೆ ಹನ್ನೆರಡ್ವರುಷ' ಎಂದು ಶಪಥ ಮಾಡುತ್ತಾನೆ. ಕಲಿಯ ಬಾದೆಗೊಳಗಾದ ನಳ ಪುಷ್ಕರನೊಂದಿಗೆ ಜೂಜಾಡಿ ಎಲ್ಲವನ್ನೂ ಸೋತು ಅಡವಿ ಪಾಲಾಗುತ್ತಾನೆ. ಅಡವಿಲಿ ಆಡೋ ಪಕ್ಷಿ ಹಿಡಿದು ತಿನ್ನಲು ಹೋಗಿ ಉಟ್ಟ ವಸ್ತ್ರವನ್ನೂ ಕಳೆದುಕೊಳ್ಳುತ್ತಾನೆ. ದಮಯಂತಿಯನ್ನು ತಂದೆಯ ಮನೆಗೆ ಹೋಗಿ ಸುಖವಾಗಿರು ಎಂದು ಹೇಳಿದರೂ ಪ್ರಯೋಜನವಾಗುವುದಿಲ್ಲ. ಆದ್ದರಿಂದ ರಾತ್ರಿ ಮಲಗಿರುವಾಗ ದಮಯಂತಿಯನ್ನು ಬಿಟ್ಟು ಹೊರಡುತ್ತಾನೆ. ದಮಯಂತಿ ನಳನಿಗಾಗಿ ಹಂಬಲಿಸಿ ಋಷ್ಯಾಶ್ರಮ ಸೇರುತ್ತಾಳೆ. ನಂತರ ಸುಬಾಹು ಎಂಬ ರಾಜ ಆಳುತ್ತಿದ್ದ ವೀರಬಾಹುಪುರಕ್ಕೆ ಹೋಗುತ್ತಾಳೆ. ದಂಪತಿಗಳಿಬ್ಬರೂ ಅನಂತ ಕಷ್ಟಗಳನ್ನು ಅನುಭವಿಸುತ್ತಾರೆ. ನಳ ಮತ್ತೆ ಪಗಡೆಯಾಡಿ ಪುಷ್ಕರನನ್ನು ಗೆಲ್ಲುತ್ತಾನೆ. 'ಪುಷ್ಕರ ನಿನ್ನ ರಾಜ್ಯವ ನೀ ಆಳಿಕೋ' ಎಂದು ಬಿಟ್ಟುಕೊಡುತ್ತಾನೆ. ನಳನು ದಮಯಂತಿಯೊಡನೆ ಸುಖದಿಂದ ರಾಜ್ಯಭಾರ ಮಾಡುತ್ತಾನೆ.

**ಮುಯ್ಯದ ಹಾಡು**

ಇದು ಹರಪನಹಳ್ಳಿ ಭೀಮವ್ವನವರ ರಚನೆ. ವರ್ಣನಾ ಪ್ರಧಾನವಾದ ಈ ಹಾಡು ಎಂಭತ್ತೊಂದು ಧ್ವನಿಗಳಲ್ಲಿದೆ. ಮಹಾಭಾರತದ್ದೇ ಕಥಾವಸ್ತು. ಪಾಂಡವರ ಮಡದಿಯರಿಗೆ ಕೃಷ್ಣನ ಮಡದಿಯರು ಮುಯ್ಯ ಕೊಟ್ಟು ಬರುವುದೇ ಇದರ ವಸ್ತು. ಹಾಡಿನ ಪ್ರಾರಂಭಕ್ಕೆ ಗಣಪತಿ, ವಾಯು, ಬ್ರಹ್ಮ, ಭಾರತಿ, ರುದ್ರ, ನಾರದ, ಗರುಡ, ರಾಘವೇಂದ್ರರ ಸ್ತುತಿಯಿದೆ. ಕೃಷ್ಣನ ಮಡದಿಯರು ಕೃಷ್ಣನ ಅಪ್ಪಣೆಯನ್ನು ಪಡೆದುಕೊಂಡು ದೇವಾನುದೇವತೆಗಳೊಂದಿಗೆ ಋಷಿ ಸಮೂಹವನ್ನು, ಪುರಜನರನ್ನೂ ಕರೆದುಕೊಂಡು ಹಸ್ತಿನಾವತಿಗೆ ಹೊರಡುತ್ತಾರೆ. ಇಂದುಮುಖಿಯರನ್ನು ಗೆದ್ದುಬರಲು ಬೃಹಸ್ಪತಿಯು ಶುಭ ನಕ್ಷತ್ರ, ವಾರ, ತಿಥಿಗಳನ್ನು ನಿರ್ಧರಿಸುತ್ತಾನೆ. ಚತುರಂಗ ಬಲಗಳು, ಅಷ್ಟದಿಕ್ಕಿನಿಂದ ಜನರು ಸಿಂಗರಿಸಿಕೊಂಡು ಬರುತ್ತಾರೆ. ರಂಭೆ, ಊರ್ವಶಿಯರೂ ಹೆಜ್ಜೆ ಹಾಕುತ್ತಾರೆ. ಗಂಧರ್ವರ ಗಾಯನ ನಡೆಯುತ್ತದೆ. ಗಜನ ಮೇಲೇರಿ ಬಂದ ಹಣ್ಣು ಹಂಪಲುಗಳು, ಭಕ್ಷ ಭೋಜ್ಯಗಳು, ಹಾಲು ಮೊಸರಿನ ಕುಂಭ, ಅರಿಶಿನ ಕುಂಕುಮ, ಗಂಧ ಪರಿಮಳ, ಪಂಚರತ್ನಾಭರಣಗಳ ವರ್ಣನೆಯು ಚಿತ್ರಗಳಂತೆ ಸಾಲು ಸಾಲಾಗಿ ಕಣ್ಣಿಗೆ ಕಟ್ಟುತ್ತವೆ. ದಿಬ್ಬಣಕ್ಕೆ ಎದುರಾಗುವ ವನಗಳ ಸೌಂದರ್ಯ, ಪ್ರಾಣಿ ಪಕ್ಷಿ ಸಮೂಹ, ಪುಷ್ಪ ಸಂಕುಲಗಳ ವರ್ಣನೆ ಸಾಗುತ್ತದೆ. ಕೃಷ್ಣನು ಭಾಮೆ ರುಕ್ಮಿಣಿಯರ ಸಹಿತ ಹಸ್ತಿನಾವತಿಗೆ ಬಂದಿರುವ ಸುದ್ದಿಯನ್ನು ರುಕ್ಮಿಣಿಯು ತನ್ನ ದೂತೆಯ ಮೂಲಕ ಹಸ್ತಿನಾವತಿಗೆ ಮುಟ್ಟಿಸುತ್ತಾಳೆ. ವಿಷಯ ಕೇಳಿ ಹಸ್ತಿನಾವತಿಯ ಬೀದಿ ಬೀದಿಗಳು ಶೃಂಗಾರವಾಗುತ್ತವೆ. ಕೃಷ್ಣನಿಗೆ ಶುಭ ಶಕುನಗಳಾಗುತ್ತವೆ. ಪಾಂಡವರು ಹರಿಯ ಪಾದಪೂಜೆ ಮಾಡಿ ಸ್ವಾಗತಿಸುತ್ತಾರೆ. ನಂತರ ಮಾತಿನ ಚಕಮಕಿ ಆರಂಭವಾಗುತ್ತದೆ. ಕೃಷ್ಣನ ಮಡದಿಯರು ಮತ್ತು ಸುಭದ್ರೆ ದ್ರೌಪದಿಯರು ಪರಸ್ಪರ ಮೂದಲಿಸುತ್ತಾರೆ. ಕೃಷ್ಣಾರ್ಜುನರೂ ಒಬ್ಬರನೊಬ್ಬರು ಮೂದಲಿಸುತ್ತಾರೆ, ಛೇಡಿಸುತ್ತಾರೆ. ಕೊನೆಗೆ ಎಲ್ಲರೂ ವಿನೋದಕ್ಕೆಂದು ಹೇಳಿಕೊಂಡು ಪರಸ್ಪರ ಕ್ಷಮೆ ಬೇಡುತ್ತಾರೆ. ನಂತರ ರುಕ್ಮಿಣಿಯು ಕೃಷ್ಣನ ತಂಗಿಯರಿಗೆ ಮುಯ್ಯ ಒಪ್ಪಿಸುತ್ತಾಳೆ. ಅದನ್ನು ಸ್ವೀಕರಿಸಿದ ದ್ರೌಪದಿ ಬಗೆಬಗೆಯ

ಆಭರಣಗಳನ್ನು, ವಸ್ತ್ರಗಳನ್ನೂ, ಉಡುಗೊರೆಗಳನ್ನು ಕೊಟ್ಟು ಸತ್ಕರಿಸುತ್ತಾಳೆ. ಬಗೆ ಬಗೆಯ ಭಕ್ಷ್ಯಗಳನ್ನು ಮಾಡಿ ಭೋಜನ ಏರ್ಪಡಿಸುತ್ತಾಳೆ.

ಮುಯ್ಯದ ಹಾಡುಗಳು ಉತ್ತರ ಕರ್ನಾಟಕದಲ್ಲಿ ಮದುವೆಯ ಸಂದರ್ಭದಲ್ಲಿ ಹಾಡುವ ಸಂಪ್ರದಾಯದ ಹಾಡುಗಳು. ಆ ಸಂಪ್ರದಾಯವನ್ನೇ ಇಲ್ಲಿ ವರ್ಣಿಸಲಾಗಿದೆ. ಹಾಡಿನ ಉದ್ದಕ್ಕೂ ಮದುವೆಯ ಉತ್ಸಾಹ, ಸಡಗರ, ಸಂಭ್ರಮಗಳು ತುಂಬಿ ನಿಂತಿವೆ.

**ಶಕುಂತಲೆ ದುಷ್ಯಂತ ಮಹಾರಾಜನ ಹಾಡು**

ಇದು ಹರಪನಹಳ್ಳಿ ಭೀಮವ್ವನ ಕೃತಿ.

ಭೂಮಿ ಒಡೆಯ ಭೀಮೇಶ ಕೃಷ್ಣನು
ಈ ಮಹಾಭಾರತ ಕಥೆಯನು
ನೇಮದಿಂದಲೆ ನಮಿಸುವೆನು ದ

ಯ ಮಾಡಲೆನಗಿಂದು – ಎನ್ನುವ ಅವ್ವನವರ ಹಾಡಿನಲ್ಲಿ ಇದು ಮಹಾಭಾರತದ ಕಥೆಯೆಂದು ಹೇಳಲಾಗಿದೆ. ಹಾಡಿನ ಪ್ರಾರಂಭಕ್ಕೆ ಗಣಪತಿ, ಬ್ರಹ್ಮನ ಸ್ತುತಿಯಾಗುತ್ತದೆ. ಈ ಕಥೆಯನ್ನು ವೈಶಂಪಾಯನರು ಜನಮೇಜನರಾಯನಿಗೆ ಹೇಳಿದರು.

ವಿಶ್ವಾಮಿತ್ರ ಋಷಿಯು ತಪಸ್ಸಿಗೆ ಕೂರುತ್ತಾನೆ. ತಪೋಭಂಗ ಪಡಿಸಲು ಇಂದ್ರನು ಮೇನಕೆಯನ್ನು ಕಳುಹಿಸುತ್ತಾನೆ. ಶೃಂಗಾರಗೊಂಡ ಮೇನಕೆ ಮುನಿಗೆ ಭ್ರಾಂತಿ ಹುಟ್ಟಿಸುತ್ತಾಳೆ. ಮುನಿ ಸ್ವೀಕಾರ ಮಾಡಲು, ಆಕೆ ಆ ಕ್ಷಣ ಗರ್ಭಧರಿಸಿ ನಕ್ಷತ್ರಮಾಲೆಯಂಥ, ಅಚ್ಚಮುತ್ತಿನ ಗೊಂಬೆಯಂತ ಕೂಸನ್ನು ಪಡೆಯುತ್ತಾಳೆ. 'ನಿನ್ನ ಕಂದನ ಹಿಡಿ' ಎಂದು ಮುನಿಗೆ ಮಗುವನ್ನು ಕೊಡಲು ಹೋದಾಗ 'ಕೆಟ್ಟೆನು ನಾನಿಂತ ದುಷ್ಟಕಾರ್ಯವನು ಮಾಡಿ ಭ್ರಷ್ಟನಾದೆನು ಲೋಕದಿ' ಎಂದು ಮೋರೆ ಮುಚ್ಚಿಕೊಂಡು ಅಳುತ್ತಾನೆ. ಕರುಣವಿಲ್ಲದೆ ಮುನಿ ಚರಣದಲ್ಲಿ ಮಗುವನ್ನು ಬಿಸುಟು ಕಣ್ಣೆತ್ತಿ ನೋಡದೆ ಹೊರಟುಹೋಗುತ್ತಾಳೆ. ಭೀಮೇಶ ಕೃಷ್ಣನು ಸಲಹುತ್ತಾನೆಂದು ಮುನಿಯೂ ಹೊರಟುಹೋಗುತ್ತಾನೆ. ಮಗುವು ಅಳುತ್ತಿರುತ್ತದೆ, ಪ್ರಾಣಿ ಪಕ್ಷಿಗಳು ಅದನ್ನು ಸಲಹುತ್ತಿರುತ್ತದೆ. ಬಣ್ಣಬಣ್ಣದ ಪಕ್ಷಿಗಳು ಮಗುವನ್ನು ಆಡಿಸುತ್ತವೆ. ಸಣ್ಣ ಕೂಸಿನ ದನಿ ಕೇಳಿ ಕಣ್ವ ಬರುತ್ತಾರೆ. ಜ್ಞಾನದೃಷ್ಟಿಯಲಿ ಎಲ್ಲವನೂ ಅರಿತು ನಾನೇ ರಕ್ಷಕನೆಂದು ಸಾಕುತ್ತಾರೆ. ಶಕುಂತಲೆ ಎಂದು ಹೆಸರಿಡುತ್ತಾರೆ. ಹೀಗೆ ಸಂತೋಷದಿಂದ ಮುನಿ ಕಾಲಕಳೆಯುತ್ತಿರಲು ಒಮ್ಮೆ ಕರಿಪುರದ ದೊರೆ ದುಷ್ಯಂತನು ಭೇಟೆಗಾಗಿ ಅದೇ ಅರಣ್ಯಕ್ಕೆ ಬರುತ್ತಾನೆ. ಆಶ್ರಮದ ಹತ್ತಿರ ಬಂದಾಗ ಬ್ರಾಹ್ಮಣಿಯರು ಇಬ್ಬರು 'ರಾಜ ನೀನು ಮಾಡುವ ಕಾರ್ಯ ಚಂದವಲ್ಲ' ಎಂದು ಹೇಳುತ್ತಾರೆ. 'ಇಷ್ಟವಾದ ಮಾತು ಕೇಳಿದರೀಗ ನಿನಗೊಂದೇಳ್ತುವೆ' ಎನುತ

ಚಿತ್ರದಾಗಿನ ಗೊಂಬೆ ಚಿನ್ನದ
ಪತ್ಥಳಿಯಂತ್ಹೊಳವಳು
ಪತ್ನಿಯಾದರೆ ನಿನ್ನ ಸರಿ

ಪುಣ್ಯಕ್ಕೆ ಜೋಡಿನ್ನಿಲ್ಲವೊ
ಜನಕನಾಜ್ಞೆಯಿಂದಾಕೆ ವನಕೆ
ಬರುವಳೀಕಾಲದಿ
ದಿನಕರನ ಪ್ರಕಾಶ ಹೊಳೆವಳು
ಮನಕೆ ಬಂದರೆ ಮಾಡಿಕೊ – ಎನ್ನುವರು.

ಆಶ್ರಮಕ್ಕೆ ಹೋದರೆ ನಿಮ್ಮ

ಗೀಶ್ರಮ ಪರಿಹಾರವು –ಎಂದು ಸಲಹೆ ನೀಡುತ್ತಾರೆ. ಅವರ ಸಲಹೆಯಂತೆ ದುಷ್ಯಂತನು ನಡೆದು ಬರುತ್ತಿರುವಾಗ ನದೀತೀರದಲ್ಲಿ ಗೆಳತಿಯರೊಂದಿಗೆ ಸಲ್ಲಾಪವಾಡುವ ಶಕುಂತಲೆಯನ್ನು ನೋಡುತ್ತಾನೆ. ನಂತರ ಅವಳು ಗಿಡಕೆ ನೀರೆರೆಯಲು ಮುಂದಾದಾಗ 'ಇಂಥ ಕುಂತಲೆಗೆ ನಾ ಕಾಂತನಾದರೆ ಲೋಕದಲಿ ಯನ್ನಂಥ ಪುಣ್ಯವಂತರಿಲ್ಲ' ಎಂದುಕೊಂಡ. ಅಷ್ಟರಲ್ಲೆ ನೀರು ಹಾಕುತ್ತಿರುವ ಶಕುಂತಲೆಯನ್ನು ಭ್ರಮರವೊಂದು ಮೈ ಸುತ್ತುತ್ತದೆ. ಹೊಡೆದರೂ ಹೋಗುವುದಿಲ್ಲ. ಮೋರೆ ಮೋರೆಗೆ ಪೀಡಿಸುತ್ತದೆ. ತುಟಿ ಬಾಯನ್ನು ಚುಂಬಿಸುತ್ತದೆ. ಅದನ್ನು ನೋಡಿದ ದೊರೆ ಭ್ರಮರವು ಶ್ರೀಹರಿಯಿಂದ ವರ ಪಡೆದಿರಬಹುದು, ಅದಕಿರುವ ಪಣ್ಯ ನನಗಿಲ್ಲ ಎಂದು ಕೊಳ್ಳುತ್ತಾನೆ. ಶಕುಂತಲೆಯ ಸಖಿಯರು 'ದುಷ್ಯಂತ ರಾಜನೆಂಬಂತ ಅರಸು ಬಂದು ನಿಂತೊಡೆದರೆ ಈ ಭ್ರಮರ ಹಾರುವುದು' ಎಂದಾಗ ಇದು ಶುಭವೇಳೆ ಎಂದು ಬಗೆದು ಬಂದು ಭ್ರಮರವನ್ನು ನಿವಾರಿಸುತ್ತಾನೆ. ಸಖಿಯರಿಂದ ಅವಳ ಜನ್ಮವೃತ್ತಾಂತವನ್ನು ತಿಳಿಯುತ್ತಾನೆ.

ಶಕುಂತಲೆಯಿಂದ ಒಪ್ಪಿಗೆ ಪಡೆಯುತ್ತಾನೆ. ತಂದೆ ಇಲ್ಲದೆ ವೇಳೆಯಲ್ಲಿ ಆತುರವಾಗಿ ಮದುವೆಯಾದರೆ ಏನೆಂದು ಕೊಂಡಾರು ಎಂದು ಶಕುಂತಲೆ ಸಂದೇಹ ವ್ಯಕ್ತಪಡಿಸಿದರೂ ನಿನ್ನ ಮಗನಿಗೆ ಪಟ್ಟ ಕಟ್ಟುತ್ತೇನೆಂಬ ಮಾತಿಂದ ಅವಳನ್ನು ಸಂತೈಸಿ ದುಷ್ಯಂತನು ವಜ್ರದುಂಗುರವಿಟ್ಟು ಗಾಂಧರ್ವ ವಿವಾಹ ಮಾಡಿಕೊಳ್ಳುತ್ತಾನೆ. ಸ್ವಲ್ಪ ದಿವಸದಲ್ಲೇ ಕರೆಸಿಕೊಳ್ಳುವೆನೆಂದು ಹೇಳಿ ಹೊರಡುತ್ತಾನೆ. ಇತ್ತ ಶಕುಂತಲೆ ಅವನ ಧ್ಯಾನದಲ್ಲೇ ಇರುವಾಗ ದೂರ್ವಾಸರ ಆಗಮನವಾಗುತ್ತದೆ. ಅವರು ಬಂದದ್ದನ್ನು ಶಕುಂತಲೆ ಗಮನಿಸದಿದ್ದಾಗ 'ದೊರೆ ತಾನು ನಿನ್ನೀಗ ಮರೆತುಬಿಡಲಿ' ಎಂದು ಶಾಪ ಕೊಡುತ್ತಾನೆ. ಸಖಿ ಪ್ರಿಯಂವಧೆಯು ಉಶ್ಶಾಪವನ್ನು ಬೇಡುತ್ತಾಳೆ. 'ಪಟ್ಟದರಸು ತಾನಿಟ್ಟುಂಗುರವು ದೃಷ್ಟಿಗೆ ಬೀಳಲಾಕ್ಷಣ ನೆನಪಾಗಲಿ' ಎಂದು ಮನ್ನಿಸುತ್ತಾನೆ. ಇತ್ತ ಕಣ್ವರಿಗೆ ಶುಭಶಕುನಗಳಾಗುತ್ತವೆ. ಆಶ್ರಮಕ್ಕೆ ಬಂದ ಅವರಿಗೆ ವಿಷಯ ತಿಳಿಯುತ್ತದೆ. ಶಕುಂತಲೆ ಗರ್ಭವತಿಯೆಂದು ತಿಳಿದು ಆರತಿಯ ಸಂಭ್ರಮ ನಡೆಯುತ್ತದೆ. ಕೂಸು ಹುಟ್ಟುತ್ತದೆ. ಕೂಸಿಗೆ ವಿದ್ಯಾಭ್ಯಾಸ ನಡೆಯುತ್ತದೆ. ಮಗು ಭರತನು ಸಿಂಹದೊಂದಿಗೆ ಆಡುವಂತ ವೀರನಾಗುತ್ತಾನೆ. ಭರತನು 'ಆಳಬೇಕರಸುತನ' ಎನಿಸುತ್ತದೆ ಋಷಿಗೆ. 'ನಿಮ್ಮಯ್ಯನ ಸಿಂಹಾಸವೇರೋ ನಮ್ಮೆಲ್ಲರಿಗ್ಗುರುಷವನು ತಾರೊ' ಎಂದೆನುತ ಶುಭ ಮುಹೂರ್ತ ನೋಡಿ ಶಕುಂತಲೆಯನ್ನೂ, ಭರತನನ್ನೂ ಕಳುಹಿಸಿಕೊಡುತ್ತಾರೆ. 'ಲಕ್ಷಾಧಿಕಾರಿ ನಾ ಭಿಕ್ಷುಕನ ಮಗಳೆಂದು ಅಲಕ್ಷಮಾಡದಲೆ

ಸಂರಕ್ಷಿಸು' ಎಂದು ದುಷ್ಯಂತನಿಗೆ ಹೇಳಬೇಕೆಂದು ಹೇಳಿ ಕಳುಹಿಸುತ್ತಾನೆ. ಶಕುಂತಲೆ ಹಸ್ತಿನಾವತಿಗೆ ಬರುತ್ತಾಳೆ. ಸಭೆಯಲ್ಲಿ ಪತಿ ಪಾದಕ್ಕೆರಗಿ ವಜ್ರದ ಕಂಬಕ್ಕೆ ಒರಗಿ ನಿಲ್ಲುತ್ತಾಳೆ. ಭರತನೂ ನಮಸ್ಕರಿಸುತ್ತಾನೆ. ಅವನನ್ನು ಕಂಡ ದುಷ್ಯಂತ 'ತರಳ ನೀದಾರೆಂದ್ಹೇಳು' ಎನಲು. 'ದೊರೆ ನಿಮ್ಮ ಉದುರದಿ ಜನಿಸಿದ ಕಂದ' ಎನಲು 'ಸುತನಲ್ಲ ಪಿತನಲ್ಲ ಅನೃತವದೆಲ್ಲ' ಎನ್ನುತ್ತಾನೆ. ಕೇಳಿ ಶಕುಂತಲೆ ಚಿತ್ರದ ಬೊಂಬೆಯಂತೆ ನಿಲ್ಲುತ್ತಾಳೆ. 'ಬಂದು ನಮ್ಮ ವನಕೆ ನೀವು ಗಾಂಧರ್ವಿವಾಹ ಮಾಡಿಕೊಂಡು ಕಂದಗರಸುತನವ ಕೊಡುವೆನೆಂದಾಗ್ವಚನ ನೀಡಲಿಲ್ಲವೇ' ಎಂದು ಕೇಳುತ್ತಾಳೆ. 'ನಿನ್ನ ಮುಖ ಎಂದೂ ಕಂಡರಿಯನೆ ನಾನು, ಗುರುತೇನಿದ್ದರೆ ತೋರು' ಎನಲು ಅವಳ ಬೆರಳುಂಗುರ ಕಾಣುವುದಿಲ್ಲ. ಮರುಳುಗೊಂಡಂತಾಗಿ ತರಳನನ್ನಾದರೂ ಕರೆದುಕೊಳ್ಳಿ ಎಂದು ಕೇಳಿಕೊಳ್ಳಲು 'ವೇಶ್ಯೆಯಂತೆ ನೀನು ಬಾಳ ದೇಶ ದೇಶ ತಿರುಗಿ ಬಂದು ಏಸು ಮಂದಿ ರಾಜರನ್ನು ಮೋಸಮಾಡಿ ಬಂದೆ ಹೀಗೆ' ಎನ್ನುತ್ತಾನೆ. ಹೀಗೆ ಶಕುಂತಲೆ ಸಭೆಯಲ್ಲಿ ಅವಮಾನಿತಳಾಗುತ್ತಿದ್ದಾಗ ಹೊರಗಿನಿಂದ ಬಂದ ಜಲಗಾರ 'ದೊರೆ ನಿಮ್ಮ ನಾಮದುಂಗುರವೆಂದು' ಕೊಡುತ್ತಾನೆ. ದುಷ್ಯಂತನಿಗೆ ಅಂತರಂಗ ಕಲಕುತ್ತದೆ. ಕೋಪಗೊಂಡ ಶಕುಂತಲೆ ಕಾನನಕ್ಕೆ ಹೊರಡಲು ಸಿದ್ಧಳಾದಾಗ ಆಕಾಶವಾಣಿ 'ನಿನ್ನ ಮಡದಿ ಹೌದೀಕೆ, ಪಡೆದ ಸುತ ಹೌದು' ಎಂದುಲಿಯಲು ಸಭೆಯ ಸಾಕ್ಷಿಯಾಗಿ ದುಷ್ಯಂತ ಶಕುಂತಲೆಯ ಕರ ಹಿಡಿದು ಸಿಂಹಾಸನದಿ ಕುಳಿತುಕೊಳ್ಳುತ್ತಾನೆ. ದುಷ್ಯಂತ ರಾಜ್ಯಭಾರ ಮಾಡುವ ದೃಶ್ಯದೊಂದಿಗೆ ಕಥೆ ಸುಖಾಂತ್ಯವಾಗುತ್ತದೆ.

**ಸುಭದ್ರಾ ಕಲ್ಯಾಣ**

ಇದು ಹರಪನಹಳ್ಳಿ ಭೀಮವ್ವನವರ ಕೃತಿ. ಮೂಲಕಥೆಯು ಭಾಗವತದ ದಶಮಸ್ಕಂದ ಹಾಗು ಮಹಾಭಾರತದಲ್ಲಿದೆ. ಆದರೆ ನಿರೂಪಣೆ, ನಿರ್ವಹಣೆ, ವರ್ಣನೆಗಳು ಭೀಮವ್ವನವರದೆ.

ಗಣಪತಿ, ಸರಸ್ವತಿಯ ಪ್ರಾರ್ಥನೆಯೊಂದಿಗೆ ಕಥೆ ಆರಂಭವಾಗುತ್ತದೆ. ಭಕ್ತಿಭಾವಗಳಿಂದೆರಗಿ ನಾ ಪೇಳುವೆ ಪಾರ್ಥರಾಯರ ಕಥೆಯ ಎನ್ನುತ್ತಾರೆ.

ಪಾಂಡವರು ದ್ರೌಪದಿಯೊಂದಿಗೆ ಇಂದ್ರಪ್ರಸ್ಥದಲ್ಲಿರುವಾಗ ನಾರದರು
ವರುಷವೊಂದಕ್ಕೊಬ್ಬ ಪುರುಷರಂತಾಳ್ವೊದು
ಅರಸಿ ದ್ರೌಪದಿಯ ನೀವು
ಹರುಷದಿಂದೆನ್ನ ಮಾತುಗಳ ಕೇಳಾನಂದ
ಭರಿತರಾಗುವಿರೆಂದನು

ಪತ್ನಿಸಹಿತವಾಗಿ ಪುರುಷರಿದ್ದಲ್ಲಿಗೆ
ಮತ್ತೊಬ್ಬ ಪತಿ ಪೋಗಲು ಸಂ
ವತ್ಸರದಲಿ ಬ್ರಹ್ಮಚಾರಿಯಂದದಿ ತೀರ್ಥ
ಯಾತ್ರೆಯ ಚರಿಸುವುದು – ಎಂದು ಒಪ್ಪಿಗೆಯಾಗುತ್ತದೆ.

ಒಂದು ದಿನ ಧರ್ಮರಾಯ–ದ್ರೌಪದಿ ಶಯ್ಯಾಗೃಹದಲ್ಲಿರುವಾಗ ನಡುರಾತ್ರಿ ಸರಿದಿರಲು ದ್ವಿಜರ ಗುಂಪೊಂದು ಅರ್ಜುನನ ಬಳಿ ಬಂದು ತಮ್ಮ ಗೋವುಗಳನ್ನು ಕಳ್ಳರು ಒಯ್ಯುತ್ತಿದ್ದಾರೆಂದು,

ತಮ್ಮನ್ನು ರಕ್ಷಿಸಬೇಕೆಂದು ಬೇಡಿದಾಗ ಅನಿವಾರ್ಯವಾಗಿ ಬಿಲ್ಲನ್ನು ತರಲು ಒಳಹೋಗಿ ಶಯ್ಯಾಗೃಹದಲ್ಲಿರುವ ಧರ್ಮರಾಯ-ದ್ರೌಪದಿಯನ್ನು ನೋಡಿದ್ದರಿಂದ ತೀರ್ಥಯಾತ್ರೆಗೆ ಹೊರಡುತ್ತಾನೆ. 'ನೀ ಎನ್ನ ಮಗುವೆಂದು ನಾ ತಿಳಿದೆನು ಅರ್ಜುನ' ಎಂದು ಧರ್ಮರಾಯ ಎಷ್ಟು ಹೇಳಿದರೂ ನಿಲ್ಲದೆ ಹೊರಟು ಬಿಡುತ್ತಾನೆ. ಮಾರ್ಗದಲ್ಲಿ ಉಲೂಪಿಯೊಡನೆ, ಮಣಿಪುರದ ಚಿತ್ರಾಂಗದೆಯೊಡನೆ ವಿವಾಹವಾಗುತ್ತದೆ. ಚಿತ್ರಾಂಗದೆಯಿಂದ ಬಬ್ರುವಾಹನನ್ನು ಪಡೆಯುತ್ತಾನೆ. ತಕ್ಷಣ ದ್ವಾರಕಾವತಿಗೆ ಬರುತ್ತಾನೆ. ಅಲ್ಲಿ ಬಲರಾಮನು ಸುಭದ್ರೆಯನ್ನು ದುರ್ಯೋಧನನಿಗೆ ಕೊಡುವ ವಿಷಯ ತಿಳಿದು ಯತಿಯ ವೇಷ ಧರಿಸಿ ಬಲರಾಮನ ಮನೆಯಲ್ಲಿಯೇ ತಂಗುತ್ತಾನೆ. ಯತಿಯ ಸೇವೆಗೆ ಬಲರಾಮನು ಸುಭದ್ರೆಯನ್ನು ನೇಮಿಸುತ್ತಾನೆ. ಅರ್ಜುನನು ಕೃಷ್ಣನ ನೆರವಿನಿಂದ ಸುಭದ್ರೆಯನ್ನು ಮದುವೆಯಾಗುತ್ತಾನೆ. ಸಿಟ್ಟಿಗೆದ್ದ ಬಲರಾಮನನ್ನು 'ಅತ್ತೆತನಯ ಪಾರ್ಥನಂತ ಶ್ರೇಷ್ಠರುಂಟೇನೊ' ಎಂದು ಕೃಷ್ಣನು ಸಮಾಧಾನಪಡಿಸುತ್ತಾನೆ. ಕೊನೆಗೆ ಎಲ್ಲರೂ ಹಸ್ತಿನಾವತಿಗೆ ಹೋಗಿ ಬೀಗರೊಡನೆ ಉಂಡು ಉಟ್ಟು ಓಕುಳಿಯಾಡಿ ಸಂಭ್ರಮಿಸುತ್ತಾರೆ. ದ್ವಾರಕೆಗೆ ಹಿಂದಿರುಗುತ್ತಾರೆ. ಫಲಸ್ತುತಿಯೊಂದಿಗೆ ಕಥೆ ಮುಗಿಯುತ್ತದೆ.

**ದ್ರೌಪದಿ ವಸ್ತ್ರಾಪರಣ**

ಇದು ಓರಾಬಾಯಿ ಲಕ್ಷ್ಮಿದೇವಮ್ಮನವರ ರಚನೆ. ಕೃತಿಯು ವಚನ, ಹಾಡು, ಆರ್ಯಗಳಿಂದ ನಿರ್ದೇಶಿಸಲ್ಪಟ್ಟಿದೆ. ಕೀರ್ತನೆಯ ಪ್ರಾರಂಭಕ್ಕೆ ಕರಿಮುಖ, ಶಾರದಿಯನ್ನು ವಂದಿಸುತ್ತಾರೆ. 'ಕರಿಪುರದ ದೊರಿಸತಿಯ ಚರಿತೆಯನು ಪೇಳುವೆನು ಎನ್ನುತ್ತಾ ದ್ರೌಪದಿ ವಸ್ತ್ರಾಪರಣಯ ಕಥೆ ಹೇಳುತ್ತಾರೆ.

ಧರ್ಮರಾಯನು ರಾಜಸೂಯಯಾಗವನ್ನು ಮಾಡುತ್ತಾನೆ. ಕೌರವರನ್ನು ಆಹ್ವಾನಿಸಿರುತ್ತಾನೆ. ಆಗಮಿಸಿದ ಕೌರವರು ಮಯನಿಂದ ನಿರ್ಮಿವಾದ ಸಭಾಭವನದಲ್ಲಿ ಅನೇಕ ಕೌತುಕಗಳಿರುವುದು ತಿಳಿಯದೆ ಅಪಹಾಸ್ಯಕ್ಕೆ ಗುರಿಯಾಗುತ್ತಾರೆ. ಕೃತಕಸರೋವರದಲ್ಲಿ ನೀರು ತುಂಬಿ ತುಳುಕುತ್ತಿರುವಂತೆ ಕಾಣುತ್ತದೆ. ದುರ್ಯೋಧನನು ಪೀತಾಂಬರದ ನೆರಿಗೆಗಳನ್ನು ಮೇಲೆತ್ತಿ ನಡೆಯುತ್ತಾನೆ. ಅದನ್ನು ನೋಡಿದ ದ್ರೌಪದಿ ಸಖಿಯರೊಂದಿಗೆ ನಗುತ್ತಾಳೆ. ದುರ್ಯೋಧನನಿಗೆ ಇನ್ನೊಂದು ನೈಜ ಸರೋವರ ಎದುರಾಗುತ್ತದೆ. ಅದನ್ನೂ ಕೃತಕವೆಂದು ತಿಳಿದು ಅಡಿಯಿಟ್ಟಾಗ ನಿಜವಾಗಿಯೂ ನೀರಿನಲ್ಲಿ ಬೀಳುತ್ತಾನೆ. ದ್ರೌಪದಿಯು ಮತ್ತೆ ಜೋರಾಗಿ ನಕ್ಕು 'ನೀವು ಕುರುಡರೆ?' ಅದು ನೀರೆಂದು ತಿಳಿಯಲಿಲ್ಲವೇ ಎಂದು ಮೂದಲಿಸುತ್ತಾಳೆ. ಎಲ್ಲರೂ ನಗುತ್ತಾರೆ. ದುರ್ಯೋಧನನಿಗೆ ಅವಮಾನವಾಗುತ್ತದೆ.

ವಚ್ಚಾ ನೀರುಗಳನ್ನು/ಸ್ವಸ್ಥಜಲಗಳೆಂದು
ಬಿಚ್ಚಾದ ನೆರಿಗೆಯು ಎತ್ತಿ ಹಿಡಿದೆನೀಗೆ

ಇಂಥಾವಮಾನಗಳ ಮಾಡಿದಳು/ಇನ್ನೆಂತು ಸೈರಿಸಲೊ – ಎಂದು ಕರ್ಣ ಶಕುನಿಯ ಹತ್ತಿರ ದುರ್ಯೋಧನನು ಹೇಳಿಕೊಳ್ಳುತ್ತಾನೆ. ಅವನನ್ನು ಸಮಾಧಾನಪಡಿಸಿದ ಶಕುನಿ:

ಚಿಂತಿ ಯಾಕೆಲೊ ರಾಜ/ಚಿಂತಿ ಯಾಕೆಲೋ

ಕೊಂತಿಯ ಸುಜಾತರನ ನಿಂತ ಗಾಲೆಲೆ ಕರಿಸೊ ಚಿಂತಿಪೆ ಉಪಾಯವನ್ನೆ – ಎನ್ನುತ್ತಾ 'ಬಣ್ಣಬಣ್ಣದಾಟವಾಡಿ/ಅರಣ್ಯಕವರ ಕಳಿಸೂವೆನು' ಎಂದು ಜೂಜಾಡಲು ಧರ್ಮರಾಯನನ್ನು ಆಹ್ವಾನಿಸುತ್ತಾನೆ. ದುರ್ಯೋಧನನು ವಿಷಯ ತಿಳಿಸಿದಾಗ ಧೃತರಾಷ್ಟ್ರ ಇದಕ್ಕೆ ಒಪ್ಪುವುದಿಲ್ಲ. 'ಪಾಂಡುನಂದನರೊಳು ಪಂಥಗಳ್ಯಾತಕೊ ಅನ್ಯಾಯವೆಂಬುದು ಧರ್ಮಜಗಿಲ್ಲವೊ' ಎಂದು ಧೃತರಾಷ್ಟ್ರ ಹೇಳಿದರೂ ಕೇಳದೆ ಪಾಂಡವರನ್ನು ಜೂಜಿಗೆ ಆಹ್ವಾನಿಸುತ್ತಾನೆ. ಜೂಜಾಡಲು ಬಂದ ಧರ್ಮಜ

ಅನುಜನನೆ ಸೋತ/ಧನ ಸೋತ/ತನು ಸೋತ/ವನಜಾಕ್ಷಿಯಳ
ಸೋತ/ಧರ್ಮಜನು/ಹರುಷದಲಿ ದುರ್ಯೋಧನನು

ದ್ರೌಪದಿಯನ್ನು ಸಭೆಗೆ ಎಳೆದು ತರುವಂತೆ ದುರ್ಯೋಧನನು ದುಶ್ಯಾಸನನಿಗೆ ಹೇಳುತ್ತಾನೆ.

ನಡಿನಡಿಯಲೆ ಹೆಣ್ಣೆ/ಬಿಡು ನಿನ್ನ ಬಿಂಕಗಳ/ತಡಮಾಡಿದರಣ್ಣ ಕೋಪಿಸುವನು ಎಂದೆನುತ/ಘುಡು ಘುಡಿಸಿದನು ಖಳ/ಮಡದಿಯೇಳ್ಮೇಲೆ/

ದ್ರೌಪದಿಯು ದುಶ್ಯಾಸನನ ಮಾತು ಕೇಳಿ ಗೋಳಿಡುತ್ತಾಳೆ.

ಬಾರೆ ಬಾರೆ ಸಖಿ ಸಾರೆ ಎನ್ನಯ ತೊಡೆಯ
ಯೇರೆ ನೀ ಬ್ಯಾಗೆ ನೀರೆ ಬಾರೆ ನಿನ್ನ
ಸರಸ ಸಲ್ಲಾಪವನು ತೋರೆ/ಸುರತ
ಸೂರೆಯನು ಮಾಡುವೆ ನಿನ್ನ
ತಿರುಕ ಪಾಂಡವರಿಂದ ತೀರದು ನಿನ್ನ ಸುಖವು

ಕರೆದೊಳೆರಿಸುವೆಯೆನ್ನ ಕಾಮ ಪೂರೇಸೆ ಎಂದು ಕರೆಯುತ್ತಾನೆ.

ದ್ರೌಪದಿ ಸಭೆಯಲ್ಲಿದ್ದವರನೆಲ್ಲಾ 'ಇದು ನ್ಯಾಯವೇ' ಎಂದು ಪ್ರಶ್ನಿಸುವ ಪರಿ ಕರುಣಾಜನಕವಾಗಿದೆ.

ದ್ರೋಣ ಭೀಷ್ಮ ಕೃಪಾಚಾರ್ಯರೆಲ್ಲ
ಜಾಣರು ನೋಡಿ ಚರ್ಯ

'ಮರೆವರೇ ಋಷಿವರ್ಯರೇ ನನ್ನ ನೀವೆಲ್ಲ'
'ಅತ್ತಿ ಗಾಂಧಾರಿಯೆ/ಅಕ್ಕ ಭಾನುಮತಿಯೆ ರಕ್ಕಸನ ಕಾರ್ಯ
ಅಕ್ಕರವೇ ನಿಮಗೆ'
'ಹೇ ಧರ್ಮ, ಹೇ ಭೀಮ, ಅರ್ಜುನಾ ನಕುಲ/ಸಾದೇವ ನಿಮ್ಮ
ಕಾರ್ಯ ಸಾಕಾಯಿತೆ ಈಗ/ಸಹಿಸಲಾರೆನೊ ಇಂತು ಸಭೆಯೊಳಗೆ' ಎಂದು
ಗೋಳಿಡುತ್ತಾಳೆ.

ಭೀಮನು ಪ್ರತೀಕಾರ ತೀರಿಸಿಕೊಳ್ಳುವ ಮಾತು ನೀಡಿ ಸಮಾಧಾನಗೊಳಿಸುತ್ತಾನೆ. ಆಗ ದ್ರೌಪದಿಯು ಕೃಷ್ಣನಲ್ಲಿ

ತಡಮಾಡದೆ ಬಾ/ವಡೆಯ ಎನ್ನಯ ತಡಿಯಲಾರೆನು
ವುಡುಗಿ ಬಿಚ್ಚುವ/ಇವನ ಗುಣ ಎಣಿಸೆ ನಾ ದಣಿವೆ ನಾ
ದಾನವಾಂತಕ ದೀನ ರಕ್ಷಕ– ಎಂದು ಮೊರೆಯಿಡುತ್ತಾಳೆ. ಆಗ ಕೃಷ್ಣನು ಅಕ್ಷಯವಸ್ತ್ರವನ್ನು ನೀಡುತ್ತಾನೆ. ಸಭೆಯು ದ್ರೌಪದಿಯ ಭಕ್ತಿ ನೋಡಿ ಬೆರಗಾಗುತ್ತದೆ.

ದ್ರೌಪದಿಯು ದುರ್ಯೋಧನನನ್ನು ಕುರಿತು ಅಂಧರ್ಕಸುತ ಕೇಳ್:
ಯನ್ನಿಂದ ಆಟವ ನೀ ಜಯಿಸೆಲೆ/
ಭೂಪಾಲರೈವರ ಗೆದ್ದು ಆಪತ್ತು ಬಿಡಿಸಿ
ಶ್ರೀಪತಿಪಾದಕ್ಕೆ ವಂದೀಸುವೆನು – ಎಂದು ಪಂಥಕ್ಕೆ ಆಹ್ವಾನಿಸುತ್ತಾಳೆ.

ಓರಾಬಾಯಿ ಲಕ್ಷ್ಮಿದೇವಮ್ಮನವರ ಮಹಾಭಾರತದ ದ್ರೌಪದಿಯ ಕಥೆ ಇಲ್ಲಿ ತಿರುವನ್ನು ಪಡೆದುಕೊಳ್ಳುತ್ತದೆ. ಇದು ಮೂಲದಲ್ಲಿಲ್ಲದ ಕವಯಿತ್ರಿಯದೇ ಕಲ್ಪನೆ.

ದ್ರೌಪದಿ ಜೂಜಾಡಿ ದುರ್ಯೋಧನನನ್ನು ಗೆಲ್ಲುತ್ತಾಳೆ. ಧೃತರಾಷ್ಟ್ರ ರಾಜ್ಯವನ್ನು ದ್ರೌಪದಿಗೆ ಹಿಂದಿರುಗಿಸುತ್ತಾನೆ. ದ್ರೌಪದಿ ಪಾಂಡವರೊಡನೆ ಹಸ್ತಿನಾವತಿಗೆ ಮರಳುತ್ತಾಳೆ.

**ಸೌಗಂಧಿಕಾ ಪುಷ್ಪ**

ಇದು ಓರಾಬಾಯಿ ಲಕ್ಷ್ಮಿದೇವಮ್ಮನ ರಚನೆ. ಇದು ಮಹಾಭಾರತದ್ದೇ ಕಥಾವಸ್ತು. ಪದ್ಯವು ವಚನ, ಧನಿ, ಆರ್ಯಗಳಿಂದ ನಿರ್ದೇಶಿಸಲ್ಪಟ್ಟಿದೆ. 'ಕುಂತಿ ಸುತನ ಮಹಿಮೆಯನು ಪೇಳುವೆನು' ಎನ್ನುತ್ತಾರೆ ಓರಾಬಾಯಿ.

ಒಂದು ದಿನ ದ್ರೌಪದಿ ಅಂಗಳದಲ್ಲಿ ನಿಂತಿರಲು ಅಂಬರದಿಂದ ಪುಷ್ಪ ಉದುರಿತು. ಬಾಡಿಲ್ಲ ಪುಷ್ಪವು ಷೋಡಶ ದಳವದಕೆ, ಇಂಥ ಪುಷ್ಪ ನನಗಿನ್ನೆಂತು ದೊರಕುವುದೆಂದು ಚಿಂತೆ ಮಾಡುತ್ತಾಳೆ. ಭೀಮನಲ್ಲಿಗೆ ಬರುತ್ತಾಳೆ. ಶೂರರೆ ನೀವು ಕುಬೇರನ ವನಕ್ಹೋಗಿ/ಚಾರುಪುಷ್ಪವ ತರೊ ಧೀರರೇ ನೀವೆಂದು ಹೇಳುತ್ತಾಳೆ.

ಭೀಮ ಛಂದಾದಿಂದಲಿ ಸುಗಂಧಾ ಪುಷ್ಪವನು/ತಂದು ಕೊಡುವೆನು ಎನ್ನುತ್ತಾನೆ. ಹೊರಡುವ ಭೀಮನ ನಡೆ ಹೀಗಿದೆ.

ಹೆಗಲ ಮೇಲೆ ಗದೆಯನಿರಿಸಿ/ಶೂರರೆದೆವಡೆವಂತೆ ಭುಜವ ಚಪ್ಪರಿಸಿ
ಎಗರಿ ಏರಿದನು ಆರ್ಭಟಿಸಿ/ಅಲ್ಲೆ ಭೂಮಿ ಸಿಡಿಯದ್ಹೋಗುವಂತೆ ಹೆಜ್ಜೆ
ಯಿರಿಸಿ ಘುಡುಘುಡಿಸಿ ಭೀಮ ಬರುತಿರಲು
ನಡುಮಾರ್ಗದಲಿ ಮಾರುತಿಯ ಕಾಣುತ್ತಾನೆ

'ದುಷ್ಟತನದಿ ದಾರಿ ಕಟ್ಟಿದರೆ ನೀನು ಮುಟ್ಟಿ ಯಮನಪುರಿಕಟ್ಟುವೆ ನಿನ್ನನು' ಎನ್ನುತ್ತಾನೆ. ಮಾರುತಿಯು 'ಹುಡುಗನೆ, ನಾನು ಮುದುಕನು ಎತ್ತೆನೀ ಭಾರವನು ಅತ್ತಿತ್ತ ಇಡು' ಎನಲು ಭೀಮ ಮೆತ್ತಗಾದನು. ಆಂಜನೇಯ ತನ್ನನ್ನು ಪರಿಚಯಿಸಿಕೊಳ್ಳುತ್ತಾನೆ. ಕಬ್ಬಿನಾ ಮೇಲೆ ಜೇನಿಟ್ಟಂತಾಗುತ್ತಾನೆ. ಆಂಜನೇಯನಿಗೆ ನಮಸ್ಕರಿಸಿ ಭೀಮ ಕುಬೇರನ ವನಕ್ಕೆ ಹೋಗುತ್ತಾನೆ.

ಗದೆಯಿಂದ ಮಹಾ ಸೈನ್ಯವನ್ನು ಕೊಲ್ಲುತ್ತಾನೆ. ಕಾವಲಿದ್ದವರನ್ನು ಕಡಿಯುತ್ತಾನೆ. ಓಡಾಡುವರನ್ನು ಬಡಿಯುತ್ತಾನೆ. ಬಂದವರನ್ನೆಲ್ಲಾ ಕೊಂದು ಅಲ್ಲಲ್ಲಿ ಚೆಲ್ಲಾಡುತ್ತಾನೆ. ಮಲ್ಲೀಗಿ ವನವೆಲ್ಲಾ ಚೆಲ್ಲಾಡುತ್ತದೆ. ಕ್ಯಾದಿಗೆ ಬಾಡುತ್ತದೆ. ಹಣ್ಣು ಮಣ್ಣಾಗುತ್ತದೆ. ಉದ್ಯಾನವನವೆಲ್ಲಾ ಕಾಡಾಗುತ್ತದೆ. ಜನರು ದಿಕ್ಕೆಟ್ಟು ಕುಬೇರನಿಗೆ ವಿಷಯ ತಿಳಿಸುತ್ತಾರೆ. 'ಕುಟ್ಟಿ ಕುಟ್ಟಿ ಜನ ಕೊಲ್ಲುವನೊ, ಬೆಟ್ಟದಂತಿಹ ಹೊಟ್ಟೆಬಾಕನು/ ಜಗಜಟ್ಟಿಯೆ' ಎಂದು ಭೀಮನನ್ನು ವರ್ಣಿಸುತ್ತಾರೆ. ಬಂದ ಕುಬೇರ ಭೀಮನನ್ನು ಸತ್ಕರಿಸುತ್ತಾನೆ. ಇಷ್ಟು ಕಷ್ಟಗಳ್ಯಾಕೆ, ಅಷ್ಟು ಭಾಗ್ಯವೂ ನಿಂದು ಎಂದು ತಟ್ಟೆ ತಟ್ಟೆಯಲಿ ಪುಷ್ಪ ತುಂಬಿಕೊಡುತ್ತಾನೆ.

ಭೀಮ ಹಿಂದಿರುಗಿದ್ದನ್ನು ಕಂಡ ಅವನ ತಮ್ಮಂದಿರು ದ್ರೌಪದಿಯು ಸಂಭ್ರಮಿಸುತ್ತಾರೆ. ಫಲಸ್ತುತಿಯೊಂದಿಗೆ ಪದ್ಯ ಮುಕ್ತಾಯವಾಗುತ್ತದೆ. ಭೀಮನ ಸಾಹಸವನ್ನು ವರ್ಣಿಸುವುದು ಪದ್ಯದ ಆಶಯವಾಗಿದೆ. ಆಂಜನೇಯನ ಸಹೋದರ ಪ್ರೀತಿ, ಸಾಹಸದಿಂದ ಕುಬೇರನನ್ನು ಭೀಮನು ಒಲಿಸಿದ ಸರಳ ಸಂಭಾಷಣೆ ಮನ ಸೆಳೆಯುತ್ತದೆ.

**ಪ್ರಮೀಳೆ ಕಾಳಗ**

ಇದು ಸರಸ್ವತಿ ಬಾಯಿಯವರ ರಚನೆ. ಪದ್ಯವು ರಾಗ-ವಚನಗಳಿಂದ ನಡುಗನ್ನಡ ಸಹಿತವಾಗಿದೆ. 'ಏಕೋ ವಿಷ್ಣು ತವ ಪ್ರಸಾದ ಕೃಪೆಯಿಂ ಈ ಕೀರ್ತನಂ ಬಣ್ಣಿಪೆಂ' ಎಂದು ಸರಸ್ವತೀ ಬಾಯಿ ಹೇಳುತ್ತಾರೆ.

ಜನಮೇಜಯನು ಧರ್ಮಜನಿಗೆ ಹೇಳಿದ ಕಥೆಯಿದು. ಅಶ್ವಮೇಧಯಾಗದ ಸಂದರ್ಭ. ಯಜ್ಞಕುದುರೆ ಪ್ರಮೀಳೆಯ ರಾಜ್ಯವನ್ನು ಪ್ರವೇಶಿಸುತ್ತದೆ. ಅದರ ಹಣೆಯಲ್ಲಿರುವ ಫಲಕದಲ್ಲಿದ್ದ:

ಧರೆಯೊಳು ಧರ್ಮರಾಯನ ಮಖಧ್ವಜವು
ಬಲವಂತ, ಪಾರ್ಥ, ಭಟರ ಬೆಂಬಲವು
ಭಲು ಭಲು ರಾಯರ ಗೆಲಿದ ಸಂಭ್ರಮವು
ನಳಿನಾಕ್ಷ ಕೃಷ್ಣನಿದಕೆ ಸಹಾಯವು

ಧರೆಯೊಳು ಧೀರರಾದರೆ ಕಟ್ಟಬೇಕಂತೆ
ಚಾಪನ್ನಿಡಿದು ಶೆಣಿಸಿ ಗೆಲ್ಲಬೇಕಂತೆ– ಎಂಬ ವಿಷಯವನ್ನು ರಾಣಿ ಪ್ರಮೀಳೆಯರ ಸಖಿಯರು ರಾಣಿಗೆ ತಿಳಿಸುತ್ತಾರೆ. ಕುದುರೆಯ ಹಿಂದೆ ಅರ್ಜುನ ಬಂದಿದ್ದಾನೆಂದು ತಿಳಿದು ಪ್ರಮೀಳೆ ಕುದುರೆ ಕಟ್ಟುತ್ತಾಳೆ. ಅರ್ಜುನನ್ನು ಯುದ್ಧಕ್ಕೆ ಆಹ್ವಾನಿಸುತ್ತಾಳೆ. ಅವಳ ಸೈನ್ಯದಲ್ಲಿದ್ದ ನೀರೆಯರು ನರನ ಸೇನೆಯನ್ನು ಮುತ್ತಿಕೊಳ್ಳುತ್ತಾರೆ. 'ನಾರಿಯೊಳು ಕದನ ತನಗಟಕಟಕ ಎಂದು ಧೀರ ಪಾರ್ಥನು ಚಿಂತಿಸುತ್ತಾನೆ'. ನೀರೆ ನಿನ್ನ ಕೊಂದಡೆನುತ ಕೀರ್ತಿ ಜಗದೊಳು' ಎಂದು ತಲ್ಲಣಿಸುತ್ತಾನೆ. ತರುಣಿ ಪ್ರಮೀಳೆಯು ಶರಣಾಗುತ್ತಾಳೆ. ಅರ್ಜುನನ್ನು ವಿವಾಹವಾಗಲು ಬಯಸುತ್ತಾಳೆ. ಅರ್ಜುನನು 'ಅಣ್ಣ ದೀಕ್ಷೆಯೊಳಗಿರುವ ಆದ್ದರಿಂದ ನಾನು ಸತಿಯ ಕೂಟವ ಬಿಟ್ಟು ವ್ರತವ ಕೈಗೊಂಡೆನು' 'ನಿನ್ನ ಇಷ್ಟವ ಸಲ್ಲಿಸುವೆನು ಆಮೇಲೆ ಇನ್ನು ಸಂಶಯಬೇಡ' ಎನ್ನುತ್ತಾನೆ.

**ದ್ರೌಪದಿಯ ವಸ್ತ್ರಾಪಹರಣ**

ಇದು ಹರಪನಹಳ್ಳಿ ಭೀಮವ್ವನವರ ರಚನೆ. ಮಹಾಭಾರತದ್ದೇ ಕಥೆಯಾದರೂ ಭೀಮವ್ವ ತಮ್ಮ ಸ್ವಂತಿಕೆಯನ್ನು ಮೆರೆದಿದ್ದಾರೆ. ೫೨ ನುಡಿಗಳ ಈ ಪದ್ಯ ದ್ವಿಪದಿಯಲ್ಲಿದೆ. ಪಾಂಡವರನ್ನು ರಾಜ್ಯದಿಂದ ಹೊರಹಾಕಲು ದುರ್ಯೋಧನ ಶಕುನಿಯೊಡನೆ ಸಂಚು ಮಾಡುತ್ತಾನೆ. ಪಾಂಡವರನ್ನು ಪ್ರೀತಿಯಿಂದಲೆ ಕರೆದು ಜೂಜಾಡುತ್ತಾನೆ. ಜೂಜಿನಲ್ಲಿ ಎಲ್ಲವನ್ನೂ ಪಣಕ್ಕಿಟ್ಟು ಪಾಂಡವರು ಸೋಲುತ್ತಾರೆ. ಕೊನೆಗೆ ದ್ರೌಪದಿಯನ್ನೂ. ದುರ್ಯೋಧನನು ಭಟನೊಬ್ಬನಿಂದ ದ್ರೌಪದಿಯನ್ನು ಸಭೆಗೆ ಕರೆಸಿ 'ದ್ರೌಪದಿ ನಿನ್ನ ಗಂಡರಡವಿಗೈದುವೊರು ಹೆಂಡತ್ಯಾಗಿರೆನ್ನ ಬಳಿಗೆ ಬಾರೆ' ಎನ್ನುತ್ತಾನೆ. ದ್ರೌಪದಿಯು 'ಧತರಾಷ್ಟ್ರ ಗಾಂಧಾರಿ ಸುತಹೀನರಾಗುವರು' ಎಂದು ಎಚ್ಚರಿಸುತ್ತಾಳೆ. ಹೀಗೆ ವಾಗ್ವಾದಗಳು ನಡೆದು ಕೊನೆಗೆ ದುಶ್ಯಾಸನನು ದ್ರೌಪದಿಯ ಸೀರೆ ಹಿಡಿದು ಸೆಳೆಯುತ್ತಾನೆ. ದ್ರೌಪದಿ ಕೃಷ್ಣನನ್ನು ನೆನೆಯುತ್ತಾಳೆ. ದಶಾವತಾರಗಳ ವರ್ಣನೆ ಬರುತ್ತದೆ. ಶ್ರೀಕೃಷ್ಣನ ದಯೆಯಿಂದ ವಸ್ತ್ರವು ಅಕ್ಷಯವಾಗುತ್ತದೆ. ಅನಂತ ಸೀರೆಗಳನ್ನು ಭೀಮವ್ವ ಸಡಗರಿಂದ ವರ್ಣಿಸುತ್ತಾರೆ. ಆ ಸೀರೆಗಳನ್ನು ಎಳೆಯಲಾರದೆ ದುಶ್ಶಾಸನ ಸೋತು ನೆಲದ ಮೇಲೆ ಬೀಳುತ್ತಾನೆ.

ಕಂಡು ದುರ್ಯೋಧನನು ಜವಳಿ ಪೆಂಡಿಗಳನೆ ಕಟ್ಟಿ
ತನ್ನ ಭಂಡಾರಕ್ಕೊಯ್ಯುವೊದೆಂದಾಗಪ್ಪಣೆಯ ಮಾಡಲು
ಭರದಿಂದ ದ್ರೌಪದಿ ತೆರೆದು ಕಂಗಳಿಂದ ನೋಡೆ
ಉರಿದು ಭಸ್ಮವಾಗಿ ಕುಪ್ಪೆ ಧರೆಗೆ ಬಿದ್ದವು

–ಇದನ್ನೆಲ್ಲಾ ಸಭೆಯಲ್ಲಿ ನೋಡುತ್ತಿದ್ದ ವಿದುರ ಭೀಷ್ಮರು ಸಂತೋಷಗೊಂಡು ಏನಾದರೂ ವರ ಕೇಳು ಎಂದಾಗ ಧರ್ಮಜನು ರಾಜ್ಯವಾಳಬೇಕೆಂದಳು.

ಇಂದ್ಯೋಗ್ವನವಾಸವ ಚರಿಸಿ ಬಂದು ಗಾಂಧಾರಿಯ ಸುತರ
ಕೊಂದು ಧರ್ಮರಾಜನಾಗುವನೆಂದು – ಭವಿಷ್ಯ ನುಡಿಯುತ್ತಾರೆ. ದ್ರೌಪದಿಯು ಪಾಂಡವರೊಡನೆ ವನವಾಸಕ್ಕೆ ಹೋಗುತ್ತಾಳೆ.

ಕಥನ ಪ್ರಧಾನವಾದ ಹಾಡುಗಳನ್ನು ನಿರ್ವಹಿಸುವಾಗ ನಮ್ಮ ಕೀರ್ತನಕಾರ್ತಿಯರು ಲೋಕಪ್ರಸಿದ್ಧವಾದ ಪ್ರಸಂಗಗಳನ್ನೇ ಆಯ್ದುಕೊಂಡಿದ್ದಾರೆ. ನಿರೂಪಣೆಯಲ್ಲಿ ಸರಳತೆಯನ್ನನುಸರಿಸಿ ಜನರ ಮನಸ್ಸಿಗೆ ಮತ್ತಷ್ಟು ಹತ್ತಿರಕ್ಕೆ ತರುತ್ತಾರೆ. ಕಥನ ಪರಂಪರೆಯನ್ನು ಮುಂದುವರೆಸುವುದಲ್ಲದೆ ಅದರ ಉಳಿವಿಗೆ ತಮ್ಮ ಕಾಣಿಕೆಯನ್ನು ನೀಡಿದ್ದಾರೆ.

**೫.೩ ಭಾಗವತದ ಕಥೆಗಳು**

**ಬ್ರಹ್ಮಕೊರವಂಜಿ**

ಇದು ಹೆಳವನಕಟ್ಟೆ ಗಿರಿಯಮ್ಮನವರ ರಚನೆ. ಕೃಷ್ಣನ ಹುಟ್ಟು, ವಸುದೇವ ಅವನನ್ನು ಗೋಕುಲಕ್ಕೆ ಒಯ್ಯುವುದು, ಗೋಕುಲದಲ್ಲಿ ಕೃಷ್ಣನು ಬೆಳೆಯುವುದು, ಕಂಸನ ವಧೆ ಇದು ಭಾಗವತದ ದಶಮಸ್ಕಂಧ ಪೂರ್ವಾರ್ಧ ಬ್ರಹ್ಮಕೊರವಂಜಿಯಲ್ಲಿ ಕಂಡು ಬರುತ್ತದೆ. ಆದರೆ ಕೊರವಂಜಿಯ

ಪಾತ್ರದ ಕಲ್ಪನೆ ಭಾಗವತ ಕಥೆಯಲ್ಲಿ ಕಂಡು ಬರುವುದಿಲ್ಲ. ಬ್ರಹ್ಮನು ಕೊರವಂಜಿಯ ವೇಷದಲ್ಲಿ ಬಂದು ಕಂಸನ ಸೆರೆಯಲ್ಲಿದ್ದ ವಸುದೇವ ದೇವಕಿಯರಿಗೆ ಅವರ ಗರ್ಭದಲ್ಲಿ ಶ್ರೀಕೃಷ್ಣನು ಜನಿಸುತ್ತಾನೆಂದು ಕಣಿ ಹೇಳುತ್ತಾನೆ. ಕಣಿ ಹೇಳುವ ತಂತ್ರವನ್ನು ಗಿರಿಯಮ್ಮ ಇಲ್ಲಿ ಬಳಸಿಕೊಂಡಿದ್ದಾಳೆ. ಬ್ರಹ್ಮಕೊರವಂಜಿಯ ಕಲ್ಪನೆ ಗಿರಿಯಮ್ಮನದೆ. ಕೃತಿಯು ವಚನ ಮತ್ತು ಪದ್ಯಗಳಿಂದ ಕೂಡಿದೆ.

ವೆಂಕಟೇಶನ ಪ್ರಾರ್ಥನೆಯೊಂದಿಗೆ ಪದ್ಯ ಆರಂಭವಾಗುತ್ತದೆ. ವಸುದೇವ ದೇವಕಿಯರ ಮದುವೆಯ ಮೆರವಣಿಗೆಯ ಸಂದರ್ಭದಲ್ಲಿ, ಆಕಾಶವಾಣಿಯು ಇವರ ಅಷ್ಟಮಗರ್ಭದ ಪುತ್ರನಿಂದ ಕಂಸನ ವಧೆಯಾಗುತ್ತದೆಂದು ನುಡಿದಾಗ ಕಂಸ ಅವರನ್ನು ಸೆರೆಯಲ್ಲಿಡುತ್ತಾನೆ. ಅವರಿಗೆ ಹುಟ್ಟಿದ ಮಕ್ಕಳನ್ನೆಲ್ಲಾ ಕೊಲ್ಲುತ್ತಾ ಬರುತ್ತಾನೆ. ಕೃಷ್ಣ ಮಗನಾಗಿ ಹುಟ್ಟುವುದನ್ನು ಹೇಳಬೇಕೆಂದು ಬ್ರಹ್ಮನು ಕೊರವಿಯ ವೇಷದಲ್ಲಿ ವಸುದೇವನಲ್ಲಿಗೆ ಬರುತ್ತಾನೆ.

ಮಿಂದು ಮಂಡೆಯ ಬಾಚಿ ತುರುಬಿಗೆ
ಮಲ್ಲಿಗೆಯ ವನಮಾಲೆಯ
ಚಂದ್ರಗಾವಿಯನುಟ್ಟು ಫಣೆಯೊಳು ತಿದ್ದಿತಿಲಕವನಿಟ್ಟನು
ಗಂಧ ಕಸ್ತೂರಿ ಪರಿಮಳವನು ಲೇಪಿಸಿ ಸರ್ವಾಂಗದಿ
ಇಂದ್ರಮಾಣಿಕದೋಲೆ ಹೊಳೆಯಲು ಇದಿರು
ಭಾಸ್ಕರನಂದದಿ ಆದನೆ ಕೊರವಿ

–ಎಂದು ಕೊರವಿಯ ಶೃಂಗಾರದ ಚಿತ್ರಣವನ್ನು ಜೀವಂತವಾಗಿ ನೀಡುತ್ತಾಳೆ. ಕೊರವಿ ಸತ್ಯಲೋಕದಿಂದ ಇಳಿದು ಮಧುರಾ ಪಟ್ಟಣಕ್ಕೆ ಬರುತ್ತಾಳೆ. ಬೀದಿಯಲ್ಲಿ ಕೂಗುತ್ತಾ ಸಾಗುವ ಕೊರವಿಯನ್ನು ದೇವಕಿ ಕೂಗಿ ಕರೆಯುತ್ತಾಳೆ.

ಎನ್ನ ಸುತನು ತನ್ನ ಕೊಲುವನೆಂಬ ಮಾತಿಗೆ
ಎನ್ನ ಅಗ್ರಜ ಎನ್ನ ಮೇಲೆ ಖಡ್ಗವೆತ್ತಲು
ಎನ್ನ ಪತಿಯು ಎನ್ನ ಮೇಲಣ ಮಮತೆಯಿಂದ
ತನ್ನ ಸುತರ ಕೊಡುವನೆಂದು ಕೊಲೆಯನುಳಿಸಿದ

–ಎಂದು ದೇವಕಿ ನುಡಿಯಲು, ಕೊರವಿ

ಎಂಟನೆ ಗರ್ಭವಿದಮ್ಮ ನಿಮ್ಮುದರದಿ ಅಂಟಿಹ ಮಗನು ಕಾಣಮ್ಮ
ಚಕ್ರಧರನ ಕೈಯೊಳಮ್ಮ ಈ ಕಂಸನು
ಸಿಕ್ಕುವುದು ತಡವಿಲ್ಲವಮ್ಮ ಎಂದು ಭವಿಷ್ಯ ನುಡಿಯುತ್ತಾಳೆ.

ಮಾಯಾ ಪೂತನಿಯ ಮೊಲೆಯನುಂಡು ಆಕೆಯ
ಕಾಯವ ಕೆಡಹವನು ನಿನ್ನ ಮಗನು ಉ
ಪಾಯದಿ ಶಟಕನೆಂಬಸುರನ ಬಂಡಿಯ
ನೋಯದೆ ಮುರಿಯಲೊದೆಯುವ ನಿನ್ನ ಮಗನು

–ಎನ್ನುತ್ತಾಳೆ. ಈ ಮಾತು ಹುಸಿಯಲ್ಲ, ಸೀತಾಪತಿಯ ಕರುಣವುಂಟು, ಆಡುವ ಕೂಸಿನಾಣೆ, ಬೇಡುವ ಜೀವನಾಣೆ ಎಂದು ಕೃಷ್ಣಾವತಾರದ ವೃತ್ತಾಂತವನ್ನೆಲ್ಲಾ ದೇವಕಿಗೆ ಹೇಳಿ, ಕೊಟ್ಟ ವೀಳ್ಯವನು ತೆಗೆದುಕೊಂಡು ಮತ್ತೆ ಸತ್ಯಲೋಕಕ್ಕೆ ಹೊರಡುತ್ತಾನೆ. ಇದು ಬ್ರಹ್ಮಕೊರವಂಜಿಯ ವಸ್ತು. ಫಲಸ್ತುತಿಯೊಂದಿಗೆ ಹಾಡು ಮುಕ್ತಾಯವಾಗುತ್ತದೆ.

**ಶ್ರೀಕೃಷ್ಣ ಲೀಲಾ**

ಇದು ನಿಡಗುರಕಿ ಜೀವೂಬಾಯಿಯವರ ರಚನೆ. ಹರಿದಾಸರನೇಕರು ಬರೆದಿರುವ ಕೀರ್ತನೆಗಳಲ್ಲಿ ವರ್ಣಿತವಾಗಿರುವ ಯಮಳಾರ್ಜುನರ ಪ್ರಸಂಗವನ್ನು ಜೀವೂಬಾಯಿಯವರು ರಚಿಸಿದ್ದಾರೆ. ಗಣಪತಿ ಪ್ರಾರ್ಥನೆಯೊಂದಿಗೆ ಪದ್ಯ ಆರಂಭವಾಗುತ್ತದೆ.

ಕೃಷ್ಣ ಗೋಕುಲದಲ್ಲಿ ಪರಿಪರಿ ಲೀಲೆ ತೋರುತ್ತ ಬೆಣ್ಣೆಯ ಕರದಲಿ ಪಿಡಿಯುತ ಬರಲು ಗೋಪಿ ನೀಡಿದವರ್ಯಾರು ಎನ್ನುತ್ತಾಳೆ. ಕೃಷ್ಣ ಏನೇನೊ ಸಬೂಬು ಹೇಳುತ್ತಾನೆ. ತಾಯಿ ಒಪ್ಪದಿರಲು

ನೆಲುವಿನ ಮೇಲಿರುತಿದ್ದ ಬೆಣ್ಣೆಯು
ನಿಲುಕದಿರಲು ಯೋಚಿಸಿ ಮನದಿ
ತರಳರೆಲ್ಲ ಒಂದಾಗುತ ವರಳನು
ತವಕದಿಂದ ಏರುತ ನವನೀತವ ಕದ್ದೆವು ತಾಯೆ – ಎಂದು ಹೇಳುತ್ತಾನೆ. ಅದನ್ನು ಕೇಳಿ ತಾಯಿ ನಿನ್ನ ಜತೆಯಲ್ಲಿ ಈ ಜಡವಾದ ಒರಳೂ ಸಹ ಕಳ್ಳತನಕ್ಕೆ ಪ್ರಾರಂಭಿಸಿತೆ ಎನ್ನುತ್ತಾ ಒರಳಿಗೆ ಅವನನ್ನು ಕಟ್ಟಿ ಮನೆಗೆಲಸಕ್ಕೆ ಹೋಗುತ್ತಾಳೆ. ಒರಳನ್ನೆ ಎಳೆದುಕೊಂಡು ಮೆಲ್ಲಮೆಲ್ಲನೆ ಬರುತ್ತ ಅಂಗಳದೊಳಗಾಡುತ ಕೃಷ್ಣನು ಮುಂದಿದ್ದ ಮರಗಳ ಮಧ್ಯಕೆ ಬರಲು ಅವು ಕದಲಲು ಜನರೆಲ್ಲಾ ಗಾಬರಿಗೊಳ್ಳುತ್ತಾರೆ, ಮರಗಳು ಬೀಳುತ್ತವೆ. ಆ ಶಬ್ದಕ್ಕೆ ಗೋಪ ಗೋಪಿಯರು ಬಂದು, ಗೋಪಿಯೊಡನೆ ಪೇಳಲು ಎಲ್ಲರೂ ಗಾಬರಿಯಿಂದ ಬಂದರು. ಬಲ್ಲಿದ ಗಂಧರ್ವರು ಈರ್ವರು ಹರಿ ಅಂದವ ನೋಡುತ ಕರವ ಜೋಡಿಸಿ ವಂದಿಸಿ ಸ್ತುತಿಸುತ್ತಾರೆ. ಅವರೇ ಯಮಳಾರ್ಜುನರು. ಗೋಪಿ ಕಂದನನ್ನು ಮುದ್ದಿಸುತ್ತಾಳೆ. ಮಂಗಳದೊಂದಿಗೆ ಕೃತಿಯು ಮುಕ್ತಾಯವಾಗುತ್ತದೆ.

**ಶ್ರೀಹರಿ ಲೀಲಾ**

ಇದು ನಿಡಗುರಕಿ ಜೀವೂಬಾಯಿಯವರ ರಚನೆ. ಕೃತಿಯ ಪ್ರಾರಂಭಕ್ಕೆ ಗಣಪತಿ, ಪಾರ್ವತಿ, ಭಾರತಿ, ವರಮಹಾಲಕ್ಷ್ಮಿಯನ್ನು ಸ್ತುತಿಸಿದ್ದಾರೆ. ಕೃತಿಯು ವಚನ ಹಾಗು ಪದ್ಯಗಳಿಂದ ಕೂಡಿದ್ದು ಪ್ರಾರ್ಥನೆಯು ವಚನಗಳಲ್ಲಿದೆ. 'ವರ ಪರೀಕ್ಷಿತನಿಗೆ ಪೇಳಿದ ಶುಕರ ವಾಕ್ಯವನು ಬರೆದು ಪೇಳ್ವುದಕಿನ್ನು ವರಮತಿಯ ಬೇಡುವೆನು' ಎನ್ನುತ್ತಾರೆ ಜೀವೂಬಾಯಿ. ನಾರದರು ಒಮ್ಮೆ ಶ್ರೀರಾಮೇಶನ ಹಾಡಿ ಹೊಗಳಲು ದ್ವಾರಕೆಗೆ ಬರುತ್ತಾರೆ. ದ್ವಾರಕೆಯ ವರ್ಣನೆಯಂತೂ ಕಣ್ಣಿಗೆ ಕಟ್ಟುವಂತಿದೆ. ರುಕ್ಮಿಣಿ ಸತ್ಯಭಾಮೆಯರ ಸಹಿತ ಕೃಷ್ಣ ಸಿಂಹಾಸನದಲಿ ಕಂಗೊಳಿಸುವ ಕೃಷ್ಣನ ಒಡ್ಡೋಲಗದ ವೈಭವದ ಚಿತ್ರಣವಿದೆ. ನಾರದನು 'ಅತಿ ಪುಣ್ಯವತಿಯರು ರುಕ್ಮಿಣಿ ಸತ್ಯಭಾಮೆಯರು ಗತಿಯೇನು ಇನ್ನುಳಿದ

ಸತಿಯರಿಗೆ' ಎಂದು ಜಾಂಬವತಿಯ ಮನೆಗೆ ಬರುತ್ತಾನೆ. ಅಲ್ಲಿ ರತ್ನಗದ್ದುಗೆಯಲ್ಲಿ ಜಾಂಬವತಿ ಕೃಷ್ಣರಿರುತ್ತಾರೆ. ನೀಲಾದೇವಿಯ ಮನೆಗೆ ಹೋದರೆ ಅಲ್ಲಿ ಕೃಷ್ಣನು ಅವಳೊಂದಿಗೆ ಪಗಡೆಯಾಡುತ್ತಿರುತ್ತಾನೆ. ಲಕ್ಷ್ಮೀದೇವಿಯ ಮನೆಗೆ ಹೋದರೆ ಸರ್ವಾಲಂಕಾರ ಭೂಷಿತನಾಗಿ ಅವಳೊಡನೆ ನಲಿಯುತ್ತಿರುತ್ತಾನೆ. ಕಾಳಿದೇವಿಯ ಮನೆಗೆ ಹೋಗಲು ಅವಳು ಕೃಷ್ಣನನ್ನು ತೂಗುತ್ತಿರುತ್ತಾಳೆ. ಹೀಗೆ ಹದಿನಾರು ಸಾವಿರ ಸತಿಯರ ಮನೆಗೆ ಹೋದರೂ ಒಬ್ಬಳ ಮನೆಯಲ್ಲಿ ಮದುವೆ ಕಾರ್ಯ, ಒಬ್ಬರ ಮನೆಯಲಿಯಾಗದ ಕಾರ್ಯ, ಒಬ್ಬರ ಮನೆಯಲ್ಲಿ ಬೀಗರದೌತಣ, ಒಬ್ಬರ ಮನೆಯಲ್ಲಿ ದೇವರ ಪೂಜೆ, ಒಬ್ಬರ ಮನೆಯಲಿ ಮಿತ್ರರೊಂದಿಗೆ, ಇನ್ನೊಬ್ಬರ ಮನೆಯಲ್ಲಿ ಬಾಲಕರೊಂದಿಗೆ ಗೋಲಿಯಾಡುವ ಕೃಷ್ಣ.... ಹೀಗೆ ಎಲ್ಲೆಲ್ಲೂ ಕೃಷ್ಣ

ಅಣುರೇಣು ತೃಣದಲ್ಲಿ ಹರಿಯು
ಇಹನೆಂದು ಶೃತಿ ಸಾರುತಿರಲು
ಎಣಿಸಬಹುದೆ ಅಣುಮಹದ್ರೂಪನ
ಗುಣಗಳೆಂದೆನುತ

ಜಗವೆಲ್ಲ ತುಂಬಿರುವ ದೇವನ
ಹುಡುಕುವುದುಂಟೆ ಲೋಕದ ಜನರು
ಅಗಣಿತ ಐಶ್ವರ್ಯನ ಮಹಾಮಹಿಮೆ
ಪೊಗಳಲು ಎನ್ನಳವೆ

ಶ್ರೀಶ ಎನ್ನ ಅಪರಾಧಗಳ
ನೀ ಕ್ಷಮಿಸುತ ರಕ್ಷಿಸುವುದು ದೇವ
ದಾಸನು ನಾನಲ್ಲವೆ ದೋಷಗಳ
ನೀನೆಣಿಸದೆ ಸಲಹೊ

–ಎನ್ನುತ್ತಾ ನಾರದರು ಶ್ರೀಹರಿಯಲ್ಲಿ ಶರಣಾಗುತ್ತಾರೆ. ಶ್ರೀಹರಿಯ ಸರ್ವವ್ಯಾಪಕ ತತ್ವವನ್ನು ಸರಸ ತುಂಬಿ ವರ್ಣಿಸಲಾಗಿದೆ.

**ಜಲಕ್ರೀಡೆ ಹಾಡು**

ಇದು ಓರಾಬಾಯಿ ಲಕ್ಷ್ಮೀದೇವಮ್ಮನವರ ರಚನೆ. ಭಾಗವತದ ದಶಮಸ್ಕಂದದಲ್ಲಿ ಬರುವ ರಸಮಯ ಸನ್ನಿವೇಶವಿದು. ನೂರೊಂದು ಸಾವಿರ ಜನ ಗೋಪಿಕೆಯರು ಕೂಡಿ ಗೋವಿಂದನನ್ನು ಒಲಿಸಲು ಯಮುನಾ ನದಿಯಲ್ಲಿ ಜಲಕ್ರೀಡೆಯಾಡಲು ಬಯಸುತ್ತಾರೆ. ಬಾಲೆಯರು ನಡೆದ ದಾರಿಯನ್ನು ಹೀಗೆ ವರ್ಣಿಸುತ್ತಾರೆ. ಸಾರಂಗ, ಮಾತಂಗ, ಕಸ್ತೂರಿ ಮೃಗಗಳು, ಗಿಳಿಗಳು, ಮಯೂರ, ಪಿಕ, ಕೋಕಿಲ ಪಕ್ಷಿಗಳು, ಘಮಘಮಿಸುವ ಕ್ಯಾದಿಗೆ, ಕಮಲ, ಪಾರಿಜಾತ, ಮರುಗ, ಮಲ್ಲಿಗೆ ಜಾಜಿ, ಇರುವಂತಿಗೆ, ದವನ, ಸಂಪಿಗೆ, ಸುರಗಿ ಮುಂತಾದ ಹೂವುಗಳು, ಕದಳಿ, ಕರ್ಜೂರ, ಮಾದಳ, ನಿಂಬೆ, ಕಿತ್ತಳೆ, ಪನಸು, ದ್ರಾಕ್ಷಿ, ಅಂಜೂರ ಮುಂತಾದ ಹಣ್ಣುಗಳನ್ನು

ಕಾಣುತ್ತಾ ನದಿಗೆ ನಡೆದರು. ವಿವಸ್ತ್ರರಾಗಿ ಸ್ನಾನ ಮಾಡುತ್ತಿರಲು ಮರದ ಮೇಲೆ ಕೃಷ್ಣನು ಕುಳಿತು ನೋಡುತ್ತಿದ್ದನು. ಅವರು ಜಲಕ್ರೀಡೆಯಲ್ಲಿ ಮುಳುಗಿರಲು, ಹರದೆಯರ ವಸ್ತ್ರವನ್ನೆಲ್ಲಾ ಕದ್ದು, ಹರ ತಾನು ಮರವೇರಿ ಕೂರುತ್ತಾನೆ. ನೀರಾಟ ಮುಗಿಸಿ ಬಂದ ಬಾಲೆಯರು ಆಶ್ಚರ್ಯಪಡುತ್ತಾರೆ. ಮಾನಹೀನವಾಯ್ತಲ್ಲ ಎಂದು ಆಲೋಚಿಸುತ್ತಾರೆ. ಜೀವ ಯಾತಕಿನ್ನು ಎಂದು ಪರಿತಪಿಸುತ್ತಾರೆ. ನಾರಸಿಂಹ ವಿಠಲ ಪಾರುಗಾಣಿಸೋ ಎಂದು ಬೇಡುತ್ತಾರೆ. ಕಳೆದು ಹೋದ ತಮ್ಮ ಸೀರೆಗಳ ಅಂದ ಚಂದವನ್ನು ನೆನಪಿಸಿಕೊಳ್ಳುತ್ತಾರೆ. ಕೃಷ್ಣನೊಬ್ಬನ ಹೊರತು ಬೇರೆ ಯಾರಿಲ್ಲ ಎನಿಸುತ್ತದೆ. ಕೃಷ್ಣ ಕಾಣಿಸಿಕೊಳ್ಳುತ್ತಾನೆ. ಕೆಲವರು ನಿಂದಿಸಿದರೆ ಕೆಲವರು ಬೇಡಿಕೊಳ್ಳುತ್ತಾರೆ. ಕೈಗಳನ್ನು ಮೇಲೆತ್ತಿ ನಮಸ್ಕರಿಸಿ ನಿಂತರೆ ಕೊಡುತ್ತೇನೆ ಎನ್ನುತ್ತಾನೆ ಕೃಷ್ಣ. ಚಂದದಿಂದ ಕರಗಳ ನಿಂತು ಮುಗಿಯುತ್ತಾರೆ. ಕೃಷ್ಣ ವಸ್ತ್ರ ನೀಡುತ್ತಾನೆ. ಎಲ್ಲರೊಂದಿಗೆ ರಾಸಕ್ರೀಡೆಯಾಡುತ್ತಾನೆ, ಆಲಂಗಿಸಿಕೊಳ್ಳುತ್ತಾನೆ. ಆಕಾಶದಲ್ಲಿ ದೇವತೆಗಳು 'ಗೋಪಿಯರು ಎಷ್ಟು ಪುಣ್ಯವಂತರು, ಹರಿಯ ಅಂಗಸಂಗ ಪಡೆದರು' ಎಂದು ಕೊಂಡಾಡುತ್ತಾರೆ. ಭಗವಂತ ಒಲಿಯಲು ಭಕ್ತನ ಸರ್ವಸಮರ್ಪಣೆಯಾಗಬೇಕೆಂಬುದು ಕಥೆಯ ನಿಲುವು.

**ಶ್ರೀಕೃಷ್ಣ ಬಾಲಲೀಲೆ**

ಇದು ಓರಾಬಾಯಿ ಲಕ್ಷ್ಮಿದೇವಮ್ಮನವರ ರಚನೆ. ಶ್ರೀಮದ್ಭಾಗವತದ ದಶಮಸ್ಕಂಧದಲ್ಲಿ ಈ ಪ್ರಸಂಗ ಬರುತ್ತದೆ. ವಸುದೇವ ದೇವಕಿಯರು ಸೆರೆಯಲ್ಲಿರುವಾಗ ಕೃಷ್ಣ ಜನಿಸುತ್ತಾನೆ. ಕಂಸನು ಕೊಲ್ಲುವನೆಂದು ವಸುದೇವನು ಶಿಶುವನ್ನು ತಂದು ನಂದಗೋಪನ ಮನೆಯಲ್ಲಿ ಬಿಡುತ್ತಾನೆ. ಅಲ್ಲಿ ಕೃಷ್ಣ ಬಾಲಲೀಲೆಗಳನ್ನು ತೋರುತ್ತಲೇ, ಆಟವಾಡಿಕೊಂಡು ಪೂತನಿ, ಶಕಟರನ್ನು ಕೊಲ್ಲುತ್ತಾನೆ, ಬಾಯಲ್ಲಿ ಜಗವ ತೋರುತ್ತಾನೆ, ಗೋಪಿಯರ ಮನೆಗೆ ಹೋಗಿ ಮೊಸರು ಬೇಡುತ್ತಾನೆ. ಗಡಿಗೆ ಒಡೆದು ದಧಿ ಕ್ಷೀರ ಚೆಲ್ಲುತ್ತಾನೆ. ಅವನ ತುಂಟಾಟವನ್ನು ನೋಡಿ ಗೋಪಿ ಅವನನ್ನು ಒರಳಿಗೆ ಕಟ್ಟಲು, ಒರಳನ್ನೇ ಎಳೆದುಕೊಂಡು ಎರಡು ವೃಕ್ಷಗಳ ಮಧ್ಯೆ ಸಿಲುಕಿಸುತ್ತಾನೆ. ಆ ವೃಕ್ಷಗಳಿಬ್ಬರೂ ಶಾಪಗ್ರಸ್ಥ ಗಂಧರ್ವರು. ಮರಗಳ ರೂಪದಲ್ಲಿದ ನಳ ಕೂಬರ, ಮಣಿಗ್ರೀವ ಮೋಕ್ಷ ಪಡೆಯುತ್ತಾರೆ. ಗೋಪಿಯರು ಬಂದು ಯಶೋಧೆಗೆ ಇವನ ತುಂಟಾಟಗಳ ದೂರು ನೀಡುತ್ತಾರೆ. ಅವನ ಚೋರತನದ ಬಗ್ಗೆ ದೂರುತ್ತಾರೆ.

ಗೊಲ್ಲಬಾಲಕರೊಡನೆ ಹಸು ಕಾಯಲು ಹೋಗುವುದು, ಕಾಳ್ಗಿಚ್ಚು ನೋಡುವುದು, ಕೊಳಲು ವಾದನ, ಕಾಳಿಯ ಮರ್ಧನ, ಗೋವರ್ಧನಗಿರಿ ಎತ್ತಿದ ಕಾರಣ ಪುರುಷನಾದರೂ ತಾನು ಕೇವಲ ಗೊಲ್ಲ ಬಾಲಕನೆಂದು ಭ್ರಮೆ ಹುಟ್ಟಿಸುತ್ತಾನೆ. ಬಾಲಕ ಕೃಷ್ಣನನ್ನು ಕೊಲ್ಲಲು ಕಂಸನು ಅಕ್ರೂರನನ್ನು ಕಳುಹಿಸುತ್ತಾನೆ. ಕೃಷ್ಣ ತನ್ನ ವಿರಾಟ್ ರೂಪವನ್ನು ಅಕ್ರೂರನಿಗೆ ದರ್ಶನ ಮಾಡಿಸುತ್ತಾನೆ. ಮಧುರೆಗೆ ಬಂದು ಕಂಸನನ್ನು ಸಂಹರಿಸುತ್ತಾನೆ. ಸೆರೆಯಿಂದ ತಂದೆ ತಾಯಿಯನ್ನು ಬಿಡಿಸುತ್ತಾನೆ.

**ಕೃಷ್ಣ ಲೀಲೆ**

ಇದು ಸರಸ್ವತಿ ಬಾಯಿಯವರ ರಚನೆ. ಲಾವಣಿಯ ಮಟ್ಟಿನಲ್ಲಿರುವ ಕೃತಿಯಿದು. ಪಲ್ಲವಿ

ಮಾತ್ರ ಇದೆ. ಅನುಪಲ್ಲವಿ ಇಲ್ಲ. ೨೯ ನುಡಿಗಳನ್ನು ಒಳಗೊಂಡಿದೆ. ಹೆಸರೇ ಸೂಚಿಸುವಂತೆ ಕೃಷ್ಣನ ಲೀಲೆಗಳನ್ನು ಸೂಚಿಸಿ ಹೇಳಿರುವ ಹಾಡು. ಕೃಷ್ಣನ ಜನನ, ವಸುದೇವನು ನಂದಗೋಪನಿಗೆ ಕೃಷ್ಣನನ್ನು ಒಪ್ಪಿಸುವುದು, ಗೋಕುಲದಲ್ಲಿ ಕಾಳಿಂಗ ಮರ್ಧನ, ಪೂತನಿಯ ವಧೆ, ಶಕಟಾಸುರನ ವಧೆ, ಗೋವರ್ಧನಗಿರಿ ಧಾರಣೆ, ಗೋಪಿಕಾಸ್ತ್ರೀಯರ ಒಡನಾಟ ಮುಂತಾದ ಬಾಲಲೀಲೆಗಳ ವರ್ಣನೆ, ಕಂಸವಧೆ, ವಸುದೇವ ದೇವಕಿಯರ ಸೆರೆ ಬಿಡಿಸುವುದು ಘಟನೆಗಳನ್ನು ಭಕ್ತಿಯಿಂದ ವರ್ಣಿಸಲಾಗಿದೆ.

**ಕೃಷ್ಣ ರುಕ್ಮಿಣಿಯರ ವಿವಾಹ**

ಇದು ಹರಪನಹಳ್ಳಿ ಭೀಮವ್ವನವರ ರಚನೆ. ಕೃತಿಯು ೪೭ ನುಡಿಗಳಿಂದ ಕೂಡಿ ದ್ವಿಪದಿಯಲ್ಲಿ ರಚಿತವಾಗಿದೆ. ರುಕ್ಮಿಣಿಯನ್ನು ಶಿಶುಪಾಲನಿಗೆ ಕೊಟ್ಟು ವಿವಾಹ ಮಾಡಬೇಕೆಂದು ಮನೆಯಲ್ಲಿ ತೀರ್ಮಾನಿಸಲು ರುಕ್ಮಿಣಿಯು ಒಬ್ಬ ವಿಪ್ರನ ಕೈಯಲ್ಲಿ ಕೃಷ್ಣನಿಗೆ ಪತ್ರ ಬರೆದು ಕಳುಹಿಸುತ್ತಾಳೆ. ಕೃಷ್ಣನಿಗಾಗಿ ಗೌರಿಯ ಮಂದಿರದಲ್ಲಿ ಕಾಯುತ್ತಿರಲು ಕೃಷ್ಣನು ಬಂದು ರುಕ್ಮಿಣಿಯನ್ನು ರಥದಲ್ಲಿ ಕೂರಿಸಿಕೊಂಡು ದ್ವಾರಕೆಗೆ ತೆರಳುತ್ತಾನೆ. ಅಲ್ಲಿ ಶಾಸ್ತ್ರೋಕ್ತವಾಗಿ ವಿವಾಹವಾಗುತ್ತದೆ. ಕೃಷ್ಣನ ಲೀಲಾವಿನೋದವನ್ನು ವರ್ಣಿಸುವುದಷ್ಟೇ ಕೃತಿಯ ಆಶಯ.

**ಪತಿದಾನಕೊಟ್ಟ ಹಾಡು**

ಇದು ಹರಪನಹಳ್ಳಿ ಭೀಮವ್ವನವರ ರಚನೆ. ಇದು ೫೭ ನುಡಿಗಳನ್ನೊಳಗೊಂಡ ಕಥನ ಕೀರ್ತನ. ಪ್ರತಿನುಡಿಯೂ ನಾಲ್ಕು ಸಾಲುಗಳನ್ನು ಒಳಗೊಂಡಿದೆ. ಒಂದು ದಿನ ನಾರದನು ಕೃಷ್ಣನ ಅರಮನೆಗೆ ಬರುತ್ತಾನೆ. ಕೃಷ್ಣನನ್ನು ಕಾಣಲು ಬಂದೆ ಎಂದು ಹೇಳಿದರೂ 'ಕೃಷ್ಣ ನಿನ್ನ ಕೊರಳಲ್ಲಿರುವ ತುಳಸಿಯ ಹಾರವನ್ನು ನನಗೆ ಕೊಡು' ಎನ್ನುತ್ತಾನೆ. ಕೃಷ್ಣನು 'ಏನು ಬೇಡಿದರೂ ನಾ ಕೊಡುವೆನು, ಪ್ರಾಣಪದಕ ತುಳಸಿಯನ್ನು ನೀಡಲಾರೆನು' ಎನ್ನಲು ನಾರದ 'ನೀಡದಿದ್ದರೆ ನಾನು ಬೇಡಿ ಬಿಡುವವನಲ್ಲ. ಆಡಿದ ಮಾತಿಗೆ ತಪ್ಪುವರುಂಟೆ ಕೃಷ್ಣಾ ನಾ ಹೋಗಿ ಬರುವೆ' ಎಂದು ಹೊರಟು ಹೋಗುತ್ತಾನೆ. ಅಲ್ಲಿಂದ ಸತ್ಯಭಾಮೆಯ ಮನೆಗೆ ಹೋಗುತ್ತಾನೆ. ಸತ್ಯಭಾಮೆಯನ್ನು ಕಂಡು 'ಇಂದ್ರಲೋಕದಲ್ಲಿ ದೇವೆಂದ್ರನು ಶಚಿಯೊಡನೆ, ಬ್ರಹ್ಮಲೋಕದಲ್ಲಿ ಬ್ರಹ್ಮ ಸರಸ್ವತಿಯೊಡನೆ, ಹಸ್ತಿನಾವತಿಯಲ್ಲಿ ಪಾಂಡವರು ದ್ರೌಪದಿಯೊಡನೆ ಇರುವುದನ್ನು ನೋಡಿ ಬಂದೆ. ದ್ವಾರಕೆಯಲ್ಲಿ ನಿನ್ನರಸ ರುಕ್ಮಿಣಿಯೊಡನೆ ಸಂಭ್ರದಲ್ಲಿದ್ದ'

ಕರೆದು ರುಕ್ಮಿಣಿ ಕರದಿಂದ ಆಲಂಗಿಸಿ
ತೊಡಯ ಮ್ಯಾಲಿಟ್ಟಿದ್ದನೆ
ಅರಳು ಮಲ್ಲಿಗೆ ತುರುಬಿನಲ್ಲಿಟ್ಟು

ನಿನಗಿನ್ನು ಸರಿಯಿಲ್ಲವೆಂಬಂತೆ – ನೋಡಿ ನಾ ಬೆರಗಾದೆ. ಅವನು ಕಪಟನಾಟಕಿ, ದಯಾಹೀನ ಎಂದೆಲ್ಲಾ ಬೈಯ್ಯುತ್ತಾನೆ. ಭಾಮೆಯು ನೀವೇ ದಾರಿ ತೊರಬೇಕೆಂದು ನಾರದನ ಕಾಲ ಮೇಲೆ ಬೀಳುತ್ತಾಳೆ. ನಾರದನು ದಾನವಾಂತಕನ ನೀ ದಾನ ಮಾಡು ಎನಲು, ದೂತೆಯರನ್ನು ಕಳುಹಿಸಿ

ಕೃಷ್ಣನನ್ನು ಕರೆಯಿಸಿಕೊಳ್ಳುತ್ತಾಳೆ. ಮನೆಗೆ ಬಂದ ಕೃಷ್ಣನಿಗೆ ವಿಷಯ ತಿಳಿಸಿ, ಅವನಿಗೆ ಎರೆದು ಅಲಂಕರಿಸುತ್ತಾಳೆ. ಆಚಾರ್ಯರನ್ನೂ, ವಿದ್ಯಾರ್ಥಿಗಳನ್ನೂ, ಭಟ್ಟರನ್ನೂ, ಯತಿಗಳನ್ನು, ಋಷಿಗಳನ್ನೂ, ಸುರಮುನಿಗಳನ್ನೂ ಕರೆದು ಕೃಷ್ಣನನ್ನು ದಾನ ತೆಗೆದುಕೊಳ್ಳಬೇಕೆಂದು ಕೇಳಿದಾಗ ಯಾರೂ ಒಪ್ಪುವುದಿಲ್ಲ. ಕೊನೆಗೆ ನಾರದ ಮುನಿಯನ್ನೇ ಬೇಡಿಕೊಳ್ಳುತ್ತಾಳೆ. ಮೂರ್ಜಗದೊಡಯನನ್ನು ಮುನಿಯ ಕೈಯಲ್ಲಿ ಇಡುತ್ತಾಳೆ. ದಾನ ಪಡೆದ ನಾರದ ಕೃಷ್ಣನನ್ನು ಕರೆದುಕೊಂಡು ಹೊರಡುತ್ತಾನೆ. ಭಾಮೆ ಅಳುತ್ತಾಳೆ. ತಾಯಂದಿರು, ಹೆಂಡತಿಯರು, ಚತುರಂಗ ಬಲಗಳು ಕೃಷ್ಣನನ್ನು ತಡೆದು ಕರೆದು ತರುತ್ತಾರೆ. 'ರಂಗನ ತೂಕದ ಬಂಗಾರ ಕೊಡುತ್ತೇವೆ ಬಿಡು' ಎಂದಾಗ ನಾರದ ಒಪ್ಪುತ್ತಾನೆ. ಅರಮನೆಯ ಸಕಲ ಆಭರಣವನ್ನು ತೂಕಕ್ಕೆ ಹಾಕುತ್ತಾರೆ. ಏನೂ ಪ್ರಯೋಜನವಾಗುವುದಿಲ್ಲ. ರುಕ್ಮಿಣಿಯು ನಕ್ಕು ಚಿನ್ನವ ತೆಗೆಸಿ ತುಳಸಿ ಹಾಕುತ್ತಾಳೆ. ತಕ್ಕಡಿಯು ಏರುತ್ತದೆ. ಎಲ್ಲರೂ ಸಂಭ್ರಮಿಸುತ್ತಾರೆ. ಭಾಮೆಗೆ ಕೃಷ್ಣನಲ್ಲಿರುವ ಅಧಿಕ ಪ್ರೀತಿ, ರುಕ್ಮಿಣಿಯ ಪಾತಿವ್ರತ್ಯ, ಕೃಷ್ಣನಿಗೆ ತುಳಸಿಯಲ್ಲಿರುವ ಅಪಾರ ಪ್ರೀತಿ ಇಲ್ಲಿ ಅನಾವರಣಗೊಂಡಿದೆ. ಹಾಡಿನ ತುಂಬೆಲ್ಲ ಹಾಸ್ಯ, ಚತುರತೆಯಿಂದ ಕೂಡಿದ ಸಂಭಾಷಣೆ ಇದೆ.

**ಶ್ರೀಕೃಷ್ಣ ಪಾರಿಜಾತ**

ಇದು ಹರಪನಹಳ್ಳಿ ಭೀಮವ್ವನವರ ರಚನೆ. ಇದು ಐವತ್ತು ನುಡಿಗಳ ಕಥನ ಕೀರ್ತನ. ಪ್ರತಿನುಡಿಯು ನಾಲ್ಕು ಸಾಲುಗಳನ್ನೊಳಗೊಂಡಿದೆ. ದ್ವಾರಕೆಯ ಅರಮನೆಯಲ್ಲಿ ರುಕ್ಮಿಣಿಯ ಸಹಿತ ಕೃಷ್ಣನು ಕುಳಿತಿರಲು ನಾರದನು ಬರುತ್ತಾನೆ. ತನ್ನ ಕೈಯಲ್ಲಿದ್ದ ಪಾರಿಜಾತವನ್ನು ಕೃಷ್ಣನಿಗೆ ಅರ್ಪಿಸಲು, ಕೃಷ್ಣನು ಪಕ್ಕದಲ್ಲೇ ಇದ್ದ ರುಕ್ಮಿಣಿಗೆ ಕೊಡುತ್ತಾನೆ. 'ಭಾಮೆ ಕೇಳಿ ಮುನಿದರಿನ್ನು ಅರಿಯೆನು ನಾ ಇದಕೆ ಉಪಾಯ' ಎನ್ನುತ್ತಾನೆ. ಅದಕ್ಕಾಗಿಯೇ ಕಾದಿದ್ದವನಂತೆ ನಾರದ ಅಲ್ಲಿಂದ ಹೊರಟು ಸತ್ಯಭಾಮೆಗೆ ವಿಷಯ ತಿಳಿಸುತ್ತಾನೆ. ಸವತಿ ಮತ್ಸರದಿಂದ ಭಾಮೆ ನೆಲದ ಮೇಲೆ ಬಿದ್ದು ಹೊರಳುತ್ತಾಳೆ. ಭಾಮೆಯ ಮನೆಯಲ್ಲಿ ನಡೆದ ವಿಷಯವನ್ನು ನಾತದ ಮತ್ತೆ ಕೃಷ್ಣನಿಗೆ ತಿಳಿಸುತ್ತಾನೆ. ತಕ್ಷಣವೆ ಕೃಷ್ಣ ಭಾಮೆಯ ಮನೆಗೆ ಬಂದು ಇದೆಲ್ಲಾ ನಾರದನು ಹಚ್ಚಿದ ಕದನವೆಂದು ಭಾಮೆಗೆ ಹೇಳಿದರೂ ನಾಳೆ ಬೆಳಗಾಗಿ ನನಗೆ ಪಾರಿಜಾತ ಪುಷ್ಪ ತಂದುಕೊಡಲೇ ಹಠ ಮಾಡಿ, ಕೃಷ್ಣನನ್ನು ನಿಂದಿಸುತ್ತಾಳೆ. ಭೀಮವ್ವ ಇಲ್ಲಿ ದಶಾವತಾರಗಳ ನಿಂದಾಸ್ತುತಿಯನ್ನು ಬಳಸಿದ್ದಾರೆ. ಬೆಳಗಾಗುತ್ತಲೇ ಕೃಷ್ಣ ಭಾಮೆಯನ್ನು ಕರೆದುಕೊಂಡು ಇಂದ್ರಲೋಕಕ್ಕೆ ಪ್ರಯಾಣ ಮಾಡುತ್ತಾನೆ. ಅಲ್ಲಿ ಇಂದ್ರನೊಡನೆ ಕದನವಾಗುತ್ತದೆ. ಕೃಷ್ಣ ಹೆದರಿದಂತೆ ನಟಿಸುತ್ತಾನೆ. ಭಾಮೆಯೇ ಇಂದ್ರನೊಡನೆ, ಅಷ್ಟದಿಕ್ಪಾಲಕರೊಡನೆ ಯುದ್ಧ ಮಾಡುತ್ತಾಳೆ. ರತ್ನದ ಕಟ್ಟೆಯ ಸಹಿತವಾಗಿ ಪಾರಿಜಾತ ವೃಕ್ಷವನ್ನೇ ಕೃಷ್ಣ ಭೂಮಿಗೆ ತರುತ್ತಾನೆ. ಸತ್ಯಭಾಮೆಗೆ ಹೂ ಮುಡಿಸುತ್ತಾನೆ.

ಇದು ಸರಳ ಮತ್ತು ನೇರ ನಿರೂಪಣೆಯ ಕೃತಿ.

**ಗೋಪಿ ಗೀತಾ**

ಇದು ಹರಪನಹಳ್ಳಿ ಭೀಮವ್ವನವರ ರಚನೆ. ಇದು ೬೭ ನುಡಿಗಳನ್ನೊಳಗೊಂಡು ದ್ವಿಪದಿಯಲ್ಲಿದೆ.

ಕೃಷ್ಣನು ಮಧುರೆಗೆ ಹೊರಟಿದ್ದನ್ನು ನೋಡಿ ಗೋಪಿಯರು ಅವನ ಹಿಂದೆಯೇ ಹೊರಟು ಅವನ ತುಂಟಾಟಗಳನ್ನು ನಿಂದಿಸುತ್ತಾರೆ. ತಮ್ಮ ಸ್ಥಿತಿಗಳನ್ನು ಅರುಹುತ್ತಾರೆ.

ಮಾರನಾಟಕೆ ಮನಸೋತು ನಿನ್ನನೇ ನಾವು
ಜಾರು ಪುರುಷನೆಂದು ತಿಳಿಯದೆ
ಇರುಳೆಯ ಮನೆಯಲ್ಲಿ ಕೊಳಲೂದೊ ಕಾಲಕ್ಕೆ

ನಳಿನಾಕ್ಷ ನಾವ್ಹ್ಯಾಗೆ ಬಂದೆವೊ ಎಂದು ಅವನ ಕೊಳಲ ನಾದಕ್ಕೆ ಮರುಳಾಗಿ ತಾವು ಮನೆ ಬಿಟ್ಟು ಬರುವುದನ್ನು ವರ್ಣಿಸುತ್ತಾರೆ. ಕಾಲಿಗಿಡುವ ವಸ್ತು ಕರದಲ್ಲಿಟ್ಟು ವಾಲೆ ಮೂಗುತಿ ಹೆರಳಿಗೆ ಹಚ್ಚಿ, ಮುಡಿವ ಮಲ್ಲಿಗೆ ಕಿವಿಗೆ ಸುತ್ತಿ, ಹಾರ ಪದಕ ಟೊಂಕಕೆ ಕಟ್ಟಿ, ಉಟ್ಟವಸ್ತ್ರಗಳ ಪರಿವಿಲ್ಲದೆ ಬರುತ್ತಾರೆ. ಎಲೆಯ ಮೇಲೆ ಹಾಕೊ ಪದಾರ್ಥವನ್ನು ಎಚ್ಚರವಿಲ್ಲದೆ ತಲೆಯ ಮೇಲೆ ಹಾಕುತ್ತಾರೆ. ಬೆಣ್ಣೆಯನ್ನು ಬೆಕ್ಕಿನ ಮುಂದೆ ಸರಿಸುತ್ತಾರೆ. ಸಣ್ಣ ಕೂಸನ್ನು ನೆಲವನಿಲ್ಲಿಡುತ್ತಾರೆ. ಅಳುವ ಮಕ್ಕಳನ್ನು ಗೂಟಕ್ಕೆ ಕಟ್ಟಿ ಕರುಗಳ ತೊಟ್ಟಿಲೊಳಗಿಟ್ಟು, ಮಂಗನ ಮರಿಗೆ ಅಂಗಿ ಟೊಪ್ಪಿಗೆ ಹಾಕಿ, ಬಂಗಾರದ ಹಾರ ಪದಕ ಹಾಕಿ ಮುದ್ದಾಡಲು ಅದು ಪರಚಿ ಗಲ್ಲ ಕಿತ್ತು ಹೋಯಿತು. ಬಂಗಾರವ ಕಳಕೊಂಡು ಮಂಗನಂತಾದೆವು. ಮಂಗಳಾಂಗನೆ ಇಷ್ಟು ಮರುಳಾದೆವು.

ಅತ್ತೆ ಮಾವದಿರೀ ವರ್ತಮಾನವ ಕೇಳಿ
ನೆತ್ತಿ ಮ್ಯಾಲ್ಹೊಡದ್ಹೊರಗ್ಹಾಕೋರೋ
ಪತಿಗಳು ನಮ್ಮನ್ನು ಬಿಟ್ಟರೂ ಬಿಡಲೊ

ಶ್ರೀಪತಿ ನಿನ್ನ ಬಿಟ್ಟು ಹೋಗುವರಲ್ಲ ಎಂದಾಗ ಕೃಷ್ಣನು ಅವರ ವಿರಹ ತಾಪವನ್ನು ಬಿಡಿಸುತ್ತಾನೆ.

**ಸುಧಾಮನ ಕಥೆ**

ಇದು ಹರಪನಹಳ್ಳಿ ಭೀಮವ್ವನವರ ರಚನೆ. ತನ್ನ ಬಡತನವನ್ನು ಗೆಳೆಯ ಕೃಷ್ಣನೊಡನೆ ಹೇಳಿಕೊಳ್ಳಲು ಸುಧಾಮನು ಕೃಷ್ಣನರಮನೆಗೆ ಬರುತ್ತಾನೆ. ಬರುವಾಗ ಸುಧಾಮನ ಹೆಂಡತಿ ಕೃಷ್ಣನಿಗೆಂದು ಅವಲಕ್ಕಿ ಕೊಟ್ಟಿರುತ್ತಾಳೆ. ಮನೆಗೆ ಬಂದ ಸುಧಾಮನನ್ನು ಕೃಷ್ಣ 'ಇಷ್ಟು ದಿವಸ ಬರದದ್ದಕ್ಕೆ ಕಾರಣವೇನು, ಸ್ನೇಹ ಮರೆತೆಯಾ?' ಎಂದು ಕೇಳುತ್ತಾನೆ. ಸುಧಾಮನು ಬಡತನದ ಕಾರಣ ಹೇಳುತ್ತಾನೆ. ಅತ್ತಿಗೆ ಕಳುಹಿಸಿದ ಅವಲಕ್ಕಿಯನ್ನು ಕೃಷ್ಣ ಕೇಳಿ ಪಡೆಯುತ್ತಾನೆ. ಒಂದು ಹಿಡಿಯಷ್ಟನ್ನು ಮುಕ್ಕುತ್ತಾನೆ. ಎರಡನೆಯ ಹಿಡಿಯನ್ನು ರುಕ್ಮಿಣಿ, ಮೂರನೆಯ ಹಿಡಿಯನ್ನು ಸತ್ಯಭಾಮೆಯೂ ಕೇಳಿ ಪಡೆಯುತ್ತಾರೆ. ಕೃಷ್ಣ ಸುಧಾಮರು ಬಾಲ್ಯದ ದಿನಗಳನ್ನು ನೆನಪಿಸಿಕೊಳ್ಳುತ್ತಾರೆ. ಗುರುದಕ್ಷಿಣೆಯಾಗಿ ಸತ್ತಮಗನನ್ನೇ ಮತ್ತೆ ಬದುಕಿಸಿಕೊಟ್ಟದ್ದನ್ನು ನೆನಪಿಸಿಕೊಳ್ಳುತ್ತಾರೆ.

ಸತಿಯೊಬ್ಬಳೇ ಇರುವ ಕಾರಣ ನೀಡಿ ಸುಧಾಮ ಹೊರಡುತ್ತಾನೆ. ಕೃಷ್ಣ ಒಂದಿಷ್ಟು ಆಭರಣಗಳನ್ನು ಉಡುಗೊರೆ ಕೊಡುತ್ತಾನೆ. ಅದನ್ನು ದ್ವಾರ ಪಾಲಕರೆ ಕಿತ್ತುಕೊಳ್ಳುತ್ತಾರೆ. ಸುಧಾಮನು 'ಮಕ್ಕಳೆಲ್ಲಾ ಅಪ್ಪಾ ಏನು ತಂದೆ' ಕೇಳಿದರೆ ಏನು ಹೇಳುವುದು ಎಂದು ಯೋಚಿಸುತ್ತಾ ಭಾಮೆ ಹೋಗಲಿ, ರುಕ್ಮಿಣಿಯಾದರೂ ಒಂದು ಹಳೆ ಸೀರೆ ಕೊಡಬಾರದೆ ಎಂದುಕೊಳ್ಳುತ್ತಾನೆ. ಮನೆಗೆ

ಬರಲು ಶ್ರೀಕೃಷ್ಣನು ಅವನಿಗಿಂತ ಮೊದಲೇ ಬಂದು ಸಕಲೈಶ್ವರ್ಯವನ್ನು ಕೊಟ್ಟಿರುತ್ತಾನೆ. ಸುಧಾಮನು ದಾನ ಧರ್ಮಗಳನ್ನು ಮಾಡುತ್ತಾ ಸುಖದಿಂದ ಇರುತ್ತಾನೆ.

**೫.೪ ವ್ರತಕಥೆಗಳು**

'ವ್ರತ' (ನೋಮಿ) ಎಂಬ ಪದಕ್ಕೆ 'ನಿಯಮ' ಎಂಬ ಅರ್ಥವಿದೆ. ತಪ, ಸಂತೋಷ, ಆಸ್ತಿಕತೆ, ದಾನ, ಭಗವದ್ದರ್ಶನ ವೇದಾಂತ ಶ್ರವಣ, ಲಜ್ಜಾ, ಮತಿ, ಜಪ ಎನ್ನುವ ದಶವಿಧ ನಿಯಮಗಳಲ್ಲಿ ವ್ರತವೂ ಒಂದು. ಪಕ್ಷ, ಕಾಲ, ಸಂವತ್ಸರ, ಋತು ಇವುಗಳ ಆಧಾರದ ಮೇಲೆ ವ್ರತಗಳು ನಿರ್ಣಾಯವಾಗುತ್ತವೆ. ವಾರ ವ್ರತಗಳು, ನಕ್ಷತ್ರ ವ್ರತಗಳು, ವಾರ್ಷಿಕ ವ್ರತಗಳು, ಬಹುವಾರ್ಷಿಕ ವ್ರತಗಳು ಇವೆ. ಬಹಳ ವ್ರತಗಳನ್ನು ನಕ್ಷತ್ರ, ತಿಥಿಗಳ ಆಧಾರದ ಮೇಲೆ ಆಚರಿಸುತ್ತಾರೆ. ಬಾಲ್ಯ, ಯೌವ್ವನ, ಕೌಮಾರ್ಯ, ವಾರ್ಧಕ್ಯಗಳಲ್ಲಿ ಆಚರಿಸುವ ವ್ರತಗಳಿವೆ. ವ್ರತಗಳಲ್ಲಿ ಸ್ತ್ರೀಯರು ಆಚರಿಸುವ ವ್ರತಗಳು, ಪುರುಷರು ಆಚರಿಸುವ ವ್ರತಗಳು, ದಂಪತಿಗಳು ಆಚರಿಸುವ ವ್ರತಗಳು ಇವೆ. ಮಹಿಳೆಯು ಕನ್ಯೆಯಾಗಿದ್ದಾಗ ಮತ್ತು ವಿವಾಹದ ನಂತರ ಆಚರಿಸುವ ವ್ರತಗಳು ಪ್ರಧಾನವಾಗಿರುತ್ತವೆ. ರಾಜರು, ಕ್ಷತ್ರಿಯರು, ವೈಶ್ಯ ಮುಂತಾದ ಬ್ರಾಹ್ಮಣೇತರರು ಆಚರಿಸುವ ವ್ರತಗಳು ಇವೆ. ವ್ರತ ಮಾಡುವವರು ಬ್ರಹ್ಮಚರ್ಯ ಆಚರಿಸಬೇಕು. ಹವಿಸ್ಸನ್ನವನ್ನು ತಿನ್ನಬೇಕು. ಯಾವ ಕಾರಣಕ್ಕೂ ವ್ರತ ಸಂಪೂರ್ಣವಾಗದೆ ಬಿಡಬಾರದು ಎಂಬ ನಿಯಮಗಳು ಇವೆ. ಇದ್ದುದ್ದರಲ್ಲಿ ದಾನ ಮಾಡಬೇಕು. ಅಭ್ಯಂಜನ ಸ್ನಾನ ಮಾಡಬೇಕು. ಆದಿನ ರಾತ್ರಿ ಉಪವಾಸ ಅಥವಾ ಫಲಾಹಾರ ಮಾಡಬೇಕು. ವ್ರತ ಮಾಡುವವರು ತಾಂಬೂಲ ಹಾಕಬಾರದು ಎನ್ನುವ ನಿಯಮಗಳೂ ಇವೆ. ಪುರುಷರ, ಮಂತ್ರಗಳ ಬೆಂಬಲವಿಲ್ಲದೆ ಸ್ತ್ರೀಯರು ವ್ರತ ಮಾಡುವಾಗ ಹೇಳಿಕೊಳ್ಳಲು ಸುಲಭವಾಗಬೇಕೆಂಬ ನಿಲುವಿನಲ್ಲಿ ಕೀರ್ತನೆಗಳನ್ನು ರಚಿಸಲಾಗಿದೆ.

**ವರಮಹಾಲಕ್ಷ್ಮಿಯ ಕಥೆ**

ಇದು ನಿಡಗುರಕಿ ಜೀವೂಬಾಯಿಯವರ ರಚನೆ. ಇದೊಂದು ಸಂಪ್ರದಾಯದ ಹಾಡು. 'ವರಮಹಾಲಕ್ಷ್ಮಿ ವ್ರತ' ಕಥೆ ಇದು. ಹಾಡಿನ ಪ್ರಾರಂಭಕ್ಕೆ ಗಣಪತಿ, ಸರಸ್ವತಿ, ವರಮಹಾಲಕ್ಷ್ಮಿಯ ಪ್ರಾರ್ಥನೆ ಇದೆ. ಈ ಕಥೆಯನ್ನು ಶಿವನು ಪಾರ್ವತಿಗೆ ಹೇಳುತ್ತಾನೆ.

ಚಾರುಮತಿ ಎನ್ನುವ ಮುತ್ತೈದೆ ರಾತ್ರಿ ಕನಸಿನಲ್ಲಿ ಮಹಾಲಕ್ಷ್ಮಿಯು ತಮ್ಮ ಮನೆಗೆ ಬಂದಂತೆ, ಆಕೆಯನ್ನು ಪೀಠದಲ್ಲಿ ಕೂರಿಸಿ ಪೂಜೆ ಮಾಡಿದಂತೆ ಕನಸು ಕಂಡು ಎಚ್ಚರಾಗುತ್ತಾಳೆ. ಬೆಳಗಾಗಿ ಈ ವಿಷಯವನ್ನು ಹಿರಿಯ ಮುತ್ತೈದೆಯರಿಗೆ ತಿಳಿಸಿದಾಗ ಅವರು ಅವಳ ಭಾಗ್ಯವನ್ನು ಕೊಂಡಾಡಿ

ಶ್ರಾವಣ ಮಾಸದಲಿ ಪೌರ್ಣಮಿ
ಭಾರ್ಗವ ವಾಸರದಲಿ
ಚಾರುಮತಿ ನೀ ಪೂಜಿಸೆನ್ನುತ
ನಾರೀರೆಲ್ಲರು ನುಡಿದರು.

ಅವರಿಗೆಲ್ಲಾ ಬಾಗಿನ ನೀಡಿ ಕಳುಹಿಸಿ ಶ್ರಾವಣ ಮಾಸ ಪೌರ್ಣಮಿಗಾಗಿ ದಾರಿ ನೋಡುತ್ತಾಳೆ. ಅಂದು ದೇವಿ ಪೂಜೆಗೆ ತಳಿರು-ತೋರಣಗಳಿಂದ ಅಲಂಕರಿಸುತ್ತಾಳೆ. ಪರಿ ಪರಿ ಪುಷ್ಪ, ಭಕ್ಷ್ಯಭೋಜ್ಯಗಳಿಂದ ಅಣಿಮಾಡಿ ವರವಿಪ್ರನನ್ನು ಕರೆಸಿ ಸಂಭ್ರಮದಿಂದ ವರಮಹಾಲಕ್ಷ್ಮಿಯನ್ನು ಕರೆಯುತ್ತಾಳೆ. ವರಮಹಾಲಕ್ಷ್ಮಿಯ ಒಡವೆಗಳು, ಅಲಂಕಾರ, ಪೂಜೆಗಳನ್ನು ಭಕ್ತಿ-ಉತ್ಸಾಹಗಳಿಂದ ವರ್ಣಿಸಲಾಗಿದೆ. ಲಕ್ಷ್ಮಿಯ ಮಹಿಮೆಗಳನ್ನು ವರ್ಣಿಸಲಾಗಿದೆ. ಶಿವನಿಂದ ವರಮಹಾಲಕ್ಷ್ಮಿಯ ವ್ರತದ ಕಥೆ ಕೇಳಿ ಪಾರ್ವತಿ ಸಂತಸಪಡುತ್ತಾಳೆ.

ಹೇಳಿ ಕೊಳುವರೀ ಚರಿತೆಯನು
ನಾಳೆ ಇಂದು ಎನ್ನದೆ ಪಠಿಸಿ
ಭಕ್ತಿಲಿ ಬರೆದೋದಲು ಪರಮಾತ್ಮನು

ಲಕ್ಕುಮಿ ಸಹಿತವರಿಗೆ ಒಲಿವ ಎಂದು ಶಿವನು ವ್ರತದ ಫಲಸ್ತುತಿ ಹೇಳುತ್ತಾನೆ. ಶ್ರೀಕೃಷ್ಣನ ದಶಾವತಾರದ ವರ್ಣನೆ ಮತ್ತು ಲಕ್ಷಿಯ ಮಂಗಳಪದದೊಂದಿಗೆ ಕೃತಿ ಮುಗಿಯುತ್ತದೆ.

**ಸತ್ಯನಾರಾಯಣ ವ್ರತ ಕಥೆ**

ಇದು ಓರಾಬಾಯಿ ಲಕ್ಷ್ಮಿದೇವಮ್ಮನವರ ರಚನೆ. ಐದು ಅಧ್ಯಾಯಗಳನ್ನೊಳಗೊಂಡ ಕಥೆ. ಪ್ರಾರಂಭಕ್ಕೆ ಗಣಪತಿಯ ಪ್ರಾರ್ಥನೆ ಇದೆ.

ನಾರದ ಮುನಿಯು ಗೋವಿಂದನ ಚರಣಕ್ಕೆ ವಂದಿಸಿ, ಮರ್ತ್ಯಲೋಕದ ಜನ ಏನೂ ಸಾರ್ಥಕವಿಲ್ಲದೆ ವ್ಯರ್ಥವಾಗಿ ಕಷ್ಟಪಡುತ್ತಿದ್ದಾರೆ, ಅವರ ಒಳಿತಿಗಾಗ ಏನಾದರು ಉಪಾಯ ಹೇಳಿರೆಂದು ಕೇಳಿದಾಗ ಗೋವಿಂದ ಈ ವ್ರತಕಥೆಯನ್ನು ಹೇಳುತ್ತಾನೆ.

ಗೋವಿಂದನು ನಾರದನಿಗೆ ಹೇಳಿದ್ದೆಂದು ಶೌನಕ ಮುನಿಗಳು ಸೂತ ಮುನಿಗಳಿಗೆ ಈ ಕಥೆಯನ್ನು ಹೇಳುವಲ್ಲಿಗೆ ಒಂದನೇ ಅಧ್ಯಾಯ ಮುಕ್ತಾಯವಾಗುತ್ತದೆ.

ಕಾಶಿಯಲ್ಲಿ ಒಬ್ಬ ಬಡ ಬ್ರಾಹ್ಮಣನು ದೊಡ್ಡ ಕುಟುಂಬವನ್ನು ಪೋಷಿಸಲಾರದೆ ವ್ಯಥೆ ಪಡುತ್ತಿದ್ದನು. ಅವನಲ್ಲಿಗೆ ಸತ್ಯನಾರಾಯಣನು ವೃದ್ಧ ಬ್ರಾಹ್ಮಣ ವೇಷದಲ್ಲಿ ಬರುತ್ತಾನೆ. 'ಸತ್ಯದೇವರ ಪೂಜೆ ಭಕ್ತಿಯಲಿ ಮಾಡಯ್ಯ, ಅತ್ಯಂತ ಐಶ್ವರ್ಯಬಹುದು' ಎನ್ನಲು, ಬ್ರಾಹ್ಮಣನು ಹಾಗೇ ಮಾಡುತ್ತಾನೆ. ಮನೆಯ ಜಗುಲಿಯ ಮೇಲೆ ಕುಳಿತ ಕಟ್ಟಿಗೆ ಮಾರುವವನೊಬ್ಬ ಪೂಜೆ ನೋಡಿ, ಪ್ರಸಾದ ಸ್ವೀಕರಿಸಿ, ತಾನೂ ವ್ರತ ಮಾಡಬೇಕೆಂದು ಸಂಕಲ್ಪಿಸುತ್ತಾನೆ. ಮರುದಿನ ಕಟ್ಟಿಗೆ ಮಾರಲು ಹೋದಾಗ ಸಾಕಷ್ಟು ದ್ರವ್ಯ ಸಿಗುತ್ತದೆ. ಬಂದ ದುಡ್ಡಿನಿಂದ ಗೋಧಿ ಚೂರ್ಣ, ಬಾಳೆಹಣ್ಣು, ಬೆಲ್ಲ, ತುಪ್ಪ ಕೊಂಡು ಭಕ್ಷ್ಯವನು ಮಾಡಿ ಪೂಜೆ ಮಾಡುತ್ತಾನೆ. ಅಷ್ಟಭಾಗ್ಯವನು ಅನುಭವಿಸಿ ಶ್ರೇಷ್ಠ ಪದವಿ ಪಡೆಯುತ್ತಾನೆ.

ಇಲ್ಲಿಗೆ ಎರಡನೆಯ ಅಧ್ಯಾಯ ಮುಕ್ತಾಯವಾಗುತ್ತದೆ.

ಉಲ್ಕಮುಖನೆಂಬ ಮಹಾರಾಜನು ತನ್ನ ಪತ್ನಿ ಸರೋಜಿನಿಯೊಡನೆ ಸತ್ಯನಾರಾಯಣನ ಪೂಜೆ ಮಾಡುತ್ತಿದ್ದಾಗ ಸಾಧು ಎಂಬ ವರ್ತಕನು ಇದೇನೆಂದು ಕೇಳಲು 'ಸತ್ಯದೇವನ ಪೂಜೆ

ಭಕ್ತೀಲಿ ಮಾಡಯ್ಯ, ಮಕ್ಕಳು ಮರಿಗಳಾಗುವರು' ಎನ್ನುತ್ತಾನೆ. ವರ್ತಕನು ಮತ್ತವನ ಪತ್ನಿ ಪ್ರಸಾದವನ್ನು ಸ್ವೀಕರಿಸಿ ಸತ್ಯದೇವನ ವ್ರತಕ್ಕೆ ಸಂಕಲ್ಪಮಾಡುತ್ತಾರೆ. ವರ್ತಕನ ಮಡದಿ ಗರ್ಭಿಣಿಯಾಗುತ್ತಾಳೆ. ಹುಟ್ಟಿದ ಮಗಳಿಗೆ ಕಲಾವತಿ ಎಂದು ಹೆಸರಿಡುತ್ತಾರೆ. ಸತ್ಯನಾರಾಯಣನ ಪೂಜೆ ಮಾಡೋಣವೆಂದು ಮಡದಿ ನೆನಪಿಸಿದಾಗ ಮಗಳ ಮದುವೆಯಲ್ಲಿ ಮಾಡೋಣ ಎನ್ನುತ್ತಾನೆ ವರ್ತಕ. ವರನು ಸಿಕ್ಕಿ ಮದುವೆ ಮಾಡುವ ಸಂಭ್ರಮದಲ್ಲಿ ವ್ರತ ಮರೆಯುತ್ತಾನೆ.

ಸುಂದರ ಅಳಿಯನನ್ನು ಕೂಡಿಕೊಂಡು ವ್ಯಾಪಾರಕ್ಕೆ ಹೊರಟ ವರ್ತಕ (ಸಾಧು) ಬಂಗಾರ, ಬೆಳ್ಳಿ ತುಂಬಿದ ಹಡಗುಗಳಲ್ಲಿ ಸಿಂಧೂ ನದಿಯ ತೀರಕ್ಕೆ ಬರುತ್ತಾನೆ. ಮಾವ, ಅಳಿಯ ಚಿತ್ರಶಾಲೆಯಲ್ಲಿ ಮಲಗಿದ್ದಾಗ ಸತ್ಯದೇವನು ಚಮತ್ಕಾರ ಮಾಡುತ್ತಾನೆ. ರಾಜನ ಅರಮನೆಯಲ್ಲಿ ಕಳ್ಳತನ ಮಾಡಿಸುತ್ತಾನೆ. ಕದ್ದ ಮಾಲನ್ನು ನಿದ್ರಿಸುತ್ತಿದ್ದ ಮಾವ ಅಳಿಯರಿದ್ದ ಕಡೆ ತಂದು ಹಾಕಿ ಮಾಯವಾಗುತ್ತಾನೆ. ಕಳ್ಳರನ್ನು ಹುಡುಕುತ್ತ ಬಂದ ಸೇವಕರು ನಿದ್ದೆ ಮಾಡುತ್ತಿದ್ದ ಅವರನ್ನು ಹೊಡೆದು ಎಬ್ಬಿಸಿ 'ಕದ್ದ ಕಳ್ಳರು' ನೀವೆಂದೆನುತ್ತ ಸೆರೆಮನೆಗೆ ತಳ್ಳುತ್ತಾರೆ.

ಇತ್ತ ಕಲಾವತಿಗೆ ದಾರಿದ್ರ್ಯ ಹತ್ತುತ್ತದೆ. ಪಕ್ಕದ ಮನೆಯಲ್ಲಿ ಮಾಡಿದ ಸತ್ಯನಾರಾಯಣನ ಪೂಜೆಯ ಪ್ರಸಾದವನ್ನು ತೆಗೆದುಕೊಳ್ಳುತ್ತಾಳೆ.

ರಾಜ ಚಂದ್ರಕೇತುವಿನ ಕನಸಿನಲ್ಲಿ ಸತ್ಯದೇವನು ಬಂದು ಸೆರೆಯಲ್ಲಿಟ್ಟವರನ್ನು ಶೀಘ್ರ ಬಿಡುವಂತೆ ಹೇಳುತ್ತಾನೆ. ರಾಜ ಹಾಗೇ ಮಾಡುತ್ತಾನೆ. ಇಲ್ಲಿಗೆ ಮೂರನೆಯ ಅಧ್ಯಾಯ ಮುಕ್ತಾಯವಾಗುತ್ತದೆ.

ಮಾವ ಅಳಿಯಂದಿರು ಮತ್ತೆ ಹಡಗಿನ ತುಂಬ ಹೊನ್ನು ತೆಗೆದುಕೊಂಡು ಹೊರಡುತ್ತಾರೆ. ಸತ್ಯದೇವ ಸನ್ಯಾಸಿ ವೇಷದಲಿ ಬಂದು ಹಡಗಿನಲ್ಲಿ ಏನಿದೆ ಎಂದಾಗ, ವರ್ತಕನು ಸೊಕ್ಕಿನಿಂದ ಪತ್ರಲತೆಗಳೆಂದು ಉತ್ತರಿಸುತ್ತಾನೆ. ಸನ್ಯಾಸಿಯು 'ಅಂತೇ ಆಗಲಿ' ಎಂದ. ಬಳಿಕ ವರ್ತಕನು ನೋಡಿದಾಗ ಬೆಳ್ಳಿ ಬಂಗಾರಗಳು ತರು ಲತೆಗಳಾಗಿದ್ದವು. ಬಂದವನು ಸನ್ಯಾಸಿಯಲ್ಲವು ಘನ್ನಮಹಿಮ/ ಆತ ಎನ್ನುತ್ತಾ ಕ್ಷಮಿಸೆಂದು ಬೇಡಲು/ಮುನ್ನಿನಂತಾಗಲಿ/ ಎನ್ನುತ್ತಾನೆ. ಬಂದು ನೋಡಲು ಮತ್ತೆ ಬೆಳ್ಳಿ ಬಂಗಾರವು ತುಂಬಿಕೊಂಡಿರುತ್ತದೆ. ಆನಂದದಿಂದ ಊರಿಗೆ ಬರುತ್ತಿರುತ್ತಾರೆ. ಅವರು ಬರುತ್ತಿರುವ ಸುದ್ದಿಯನ್ನು ಸೇವಕರು ಕಲಾವತಿಗೆ ತಿಳಿಸುತ್ತಾರೆ. ಸತ್ಯದೇವರ ಪೂಜೆ ಮಾಡುತ್ತಿದ್ದ ಕಲಾವತಿ ಪ್ರಸಾದವನ್ನು ತೆಗೆದುಕೊಳ್ಳದೆ ಪತಿಯನ್ನು ನೋಡಬೇಕೆಂದು ಬಂದುದರಿಂದ ನಡುನೀರಿನೊಳಗೆ ಹಡಗು ಮುಳುಗಿಹೋಯಿತು. ಕಲಾವತಿ ದುಃಖಿತಳಾದಳು. ಸತ್ಯದೇವರ ಪ್ರಸಾದವನ್ನು ಮರೆತಿದ್ದನ್ನು ಆಕಾಶವಾಣಿ ನೆನಪಿಸುತ್ತದೆ. ಬೇಗ ಹೋಗಿ ಪ್ರಸಾದವನ್ನು ತೆಗೆದುಕೊಳ್ಳುತ್ತಾಳೆ. ಸತ್ಯದೇವನ ದಯದಿಂದ ಪತಿಯು ಬದುಕಿ ಬರುತ್ತಾನೆ. ಬಂಧು ಬಳಗದವರೊಡನೆ ಸತ್ಯನಾರಾಯಣ ವ್ರತವನ್ನು ಮಾಡುತ್ತಾರೆ. ಇಲ್ಲಿಗೆ ನಾಲ್ಕನೆಯ ಅಧ್ಯಾಯ ಮುಕ್ತಾಯವಾಗುತ್ತದೆ.

ತುಂಗಧ್ವಜನೆಂಬ ರಾಜ ಬೇಟೆಗೆ ಹೋಗಿರುವಾಗ ಅಲ್ಲಿ ತುಂಬಾ ಜನರು ಸೇರಿ ಸತ್ಯನಾರಾಯಣ ವ್ರತ ಮಾಡುತ್ತಿರುತ್ತಾರೆ. ರಾಜನು ಬಂದನೆಂದು ಪ್ರಸಾದವ ಕೊಡಲು ಗತಿಹೀನರೊಡನೆ ಮತವು

ನಮಗೇಕೆಂದು ಮತಿಹೀನ ರಾಜನು ತಿಳಿದು ಸತ್ಯನ ಪ್ರಸಾದ ಬಿಟ್ಟು ಹೋಗಲು ಆತನ ಶತ ಮಕ್ಕಳು ಮಾಯವಾಗುತ್ತಾರೆ.

ಅವನ ಹೀನಸ್ಥಿತಿಗೆ ಪ್ರಸಾದ ಸ್ವೀಕರಿಸದಿರುವುದೇ ಕಾರಣವೆಂದು ತಿಳಿದು ಮತ್ತೆ ಗೋಪಾಲರಲ್ಲಿಗೆ ಬಂದು ಪ್ರಸಾದ ತೆಗೆದುಕೊಂಡಾಗ, ಅವನ ಮಕ್ಕಳೆಲ್ಲರೂ ಬದುಕುತ್ತಾರೆ. ನಂತರ ಸತ್ಯನಾರಾಯಣ ವ್ರತ ಮಾಡಿ ರಾಜ ಮುಕ್ತಿ ಪಡೆಯುತ್ತಾನೆ. ಫಲಸ್ತುತಿಯೊಂದಿಗೆ ಕಥೆ ಮುಕ್ತಾಯವಾಗುತ್ತದೆ.

**ಸ್ವರ್ಣಗೌರಿ ಕಥೆ**

ಇದು ಓರಾಬಾಯಿ ಲಕ್ಷ್ಮಿದೇವಮ್ಮನವರ ರಚನೆ. ಪಾರ್ವತಿಯು ತನ್ನ ಪತಿಯ ಪಾದಕ್ಕೆ ನಮಸ್ಕರಿಸಿ ತನಗೆ ಧರೆಯೊಳಗೆ ಉತ್ತಮವಾದ ಸ್ವರ್ಣಗೌರೀ ಕಥೆಯನ್ನು ಹೇಳಬೇಕೆಂದು ಕೇಳಿಕೊಳ್ಳುತ್ತಾಳೆ. ಸಂದನೂ ಕೇಳಿಕೊಳ್ಳುತ್ತಾನೆ. ಆಗ ಶಿವನು ಹೇಳುವ ಕಥೆಯಿದು.

ಸರಸ್ವತೀ ನದೀ ತೀರ. ವಿಮಾಖ್ಯಪಟ್ಟಣದ ದೊಡ್ಡ ದೊರಿ ಚಂದ್ರಪ್ರಭು ರಾಜ. ತನ್ನ ಹಿರಿಯ ಹೆಂಡತಿಯೊಡನೆ ಪ್ರೀತಿಯಿಂದ ಬಾಳುತ್ತಿದ್ದು ಕಿರಿಯ ಹೆಂಡತಿಯನ್ನು ಬಿಟ್ಟಿದ್ದನು. ಅವನು ಒಂದು ದಿನ ಬೇಟೆಗೆ ಬರಲು ನದಿಯ ತೀರದಲ್ಲಿ ಒಂದಿಷ್ಟು ಮಂದಿ ಚಂದದ ವ್ರತ ಮಾಡುತ್ತಿದ್ದರು. ರಾಜನು ಏನೆಂದು ವಿಚಾರಿಸಲಾಗಿ ವ್ರತದ ಬಗ್ಗೆ ತಿಳಿಸಿ 'ದಾರ'ವನ್ನು ಕೊಟ್ಟರು. ಅರಮನೆಗೆ ಬಂದ ದೊರೆಯ ಕೈಯಲ್ಲಿ ಕಟ್ಟಿದ್ದ ದಾರವನ್ನು ಹಿರಿಯ ಹೆಂಡತಿ ನೋಡಿದಳು. ಥಟ್ಟನೆ ಕಿತ್ತು ಗಿಡದ ಮೇಲೆ ಒಗೆದಳು. ಬಾಡಿದ ಗಿಡವು ಚಿಗುರಿತು, ಫಲವಾಯಿತು. ಚಿಕ್ಕ ಹೆಂಡತಿ ಅದನ್ನು ನೋಡಿ ದಾರವನ್ನು ತೆಗೆದುಕೊಂಡು ಸತ್ಯವಂತಳಾದ ಗೌರಿಗೆ ಸಮರಿಲ್ಲವೆಂದು ಪೂಜಿಸಿದಳು. ಇತ್ತ ರಾಜನಿಗೂ ಹಿರಿಯ ಹೆಂಡತಿಗೂ ಜಗಳವಾಗುತ್ತದೆ. ಮನನೊಂದ ರಾಜ ಅವಳನ್ನು ಬಿಟ್ಟು ಕಿರಿಯ ಸತಿಯೊಂದಿಗೆ ಹೋಗಿ ಹರುಷದಿಂದ ಇರುತ್ತಾನೆ. ಚಿತ್ತಭ್ರಮಣೆಯಾದಂತಾಗಿ ಹಿರಿಯ ಹೆಂಡತಿ ಅಡವಿ ಪಾಲಾಗುತ್ತಾಳೆ. ಸ್ವರ್ಣಗೌರಿಯ ಬಗ್ಗೆ ಗಿಡಮರಗಳನ್ನು ವಿಚಾರಿಸುತ್ತಾಳೆ. ಋಷಿಗಳಿದ್ದಲ್ಲಿಗೆ ಬಂದು ಕಡೆಹಾಯಿಸಿರೆಂದು ಅಡಿಗಡಿಗೆ ಎರಗುತ್ತಾಳೆ. ಅವರೆಲ್ಲ ತಿರಸ್ಕರಿಸುತ್ತಾರೆ. ತನ್ನ ಸ್ಥಿತಿಯನ್ನು ನಾಗಕನ್ನಿಕೆಯರ ಬಳಿ ಹೇಳಿ ಕೊಳ್ಳುತ್ತಾಳೆ. ಸ್ವರ್ಣಗೌರಿಯನ್ನು ಪರಿಪರಿಯಾಗಿ ಪ್ರಾರ್ಥಿಸುತ್ತಾಳೆ. ದಾರಕ್ಕೆ ಮಾಡಿದ ಅಪರಾಧಗಳ ಮನ್ನಿಸಬೇಕೆಂದು ಕೇಳಿಕೊಳ್ಳುತ್ತಾಳೆ. ಗೌರಿ ಪ್ರತ್ಯಕ್ಷಳಾಗಿ ಅವಳನ್ನು ಸಂತೈಸಿ ಕಷ್ಟ ಕಳೆದು ಅಷ್ಟಸೌಭಾಗ್ಯ ಕೊಡುತ್ತಾಳೆ. ರಾಣಿ ಅರಮನೆಗೆ ಹಿಂದಿರುಗಿ ಎಲ್ಲರೊಂದಿಗೆ ಸುಖದಿಂದಿರುತ್ತಾಳೆ.

**ಮಂಗಳಗೌರಿ ಹಾಡು**

ಇದು ಓರಾಬಾಯಿ ಲಕ್ಷ್ಮಿದೇವಮ್ಮನವರ ರಚನೆ. ಗಣಪತಿ ಪ್ರಾರ್ಥನೆಯೊಂದಿಗೆ ಹಾಡು ಆರಂಭವಾಗುತ್ತದೆ. ರಾಜಕುಮಾರಿಯೊಬ್ಬಳು ಮೋಸದಿಂದ ಕುಷ್ಠರೋಗಿಯೊಂದಿಗೆ ವಿವಾಹವಾಗುವುದರಲ್ಲಿದ್ದಾಗ ಮಂಗಳಗೌರಿಯ ಸ್ಮರಣೆಮಾತ್ರದಿಂದ ರಾಜಕುಮಾರನನ್ನು ಕೈಹಿಡಿಯುವಂತಾಗುತ್ತದೆ.

ದೈವಬಲವಿದ್ದರೆ ಕುತಂತ್ರಗಳು ಸಿದ್ಧಿಸುವುದಿಲ್ಲ. ದೇವರನಾಮ ಸ್ಮರಣೆ ಮಾತ್ರದಿಂದಲೇ ಕಷ್ಟಗಳು ಪರಿಹಾರವಾಗುತ್ತದೆಂದು ಈ ಹಾಡಿನ ಮೂಲಕ ಹೇಳಲಾಗಿದೆ. ಇಲ್ಲಿ ವ್ರತದ ನಿಯಮಗಳನ್ನು ತಿಳಿಸಿಲ್ಲ. ಈ ಕಥೆಯನ್ನಷ್ಟೇ ಹೇಳಲಾಗಿದೆ. ಮಂಗಳಗೌರಿಯ ನಾಮಸ್ಮರಣೆಯ ಮಹತ್ವ ತಿಳಿಸುವುದು ಹಾಡಿನ ಉದ್ದೇಶ.

**ಸಂಪತ್ತು ಶುಕ್ರವಾರದ ಹಾಡು**

ಇದು ಹರಪನಹಳ್ಳಿ ಭೀಮವ್ವನವರ ರಚನೆ. ನಾಲ್ಕು ಸಾಲುಗಳ ೧೨೧ ನುಡಿಗಳನ್ನು ಒಳಗೊಂಡ ಪದ್ಯ. ಪ್ರಾರಂಭಕ್ಕೆ ಗಣಪತಿ, ಶಾರದೆಗೆ ವಂದಿಸಿದ್ದಾರೆ. ಶ್ರಾವಣ ಮಾಸದ ಮೊದಲ ಶುಕ್ರವಾರ ಮಾಧವನರಸಿ ಮಾಲಕ್ಷುಮಿ ದೇವರ ಮಹಿಮೆ ಕೊಂಡಾಡುವೋದಿ ಕಥೆ–ಎಂದು ಕಥಾವಸ್ತುವನ್ನು ಹೇಳಿದ್ದಾರೆ.

ಬಡಬ್ರಾಹ್ಮಣನೊಬ್ಬ ಮಡದಿ ಮಕ್ಕಳ ಸಹಿತ ಪಟ್ಟಣವೊಂದರಲ್ಲಿ ವಾಸವಾಗಿದ್ದ. ಭಿಕ್ಷಾಟನೆ ಅವನ ವೃತ್ತಿ. ನಾಲ್ಕು ಗಂಡು ಮಕ್ಕಳು, ಸೊಸೆಯರು, ಹಸುಗೂಸುಗಳು ಮನೆತುಂಬಾ. ಅನ್ನ ಆಹಾರವಿಲ್ಲದೆ ಹಸಿದ ಮಕ್ಕಳು ಕಂಗಾಲಾಗಿದ್ದರು. ಆದರೆ ಗುಣವಂತರಾದ ಅವರು ವ್ರತನೇಮಗಳನ್ನು ನಿಷ್ಠೆಯಿಂದ ಮಾಡುತ್ತಿದ್ದರು. ಲಕ್ಷ್ಮಿ ದಯೆಯಿಂದ ನೋಡಿದರು.

ಒಂದು ದಿನ ಊರಜನರು ಮನೆಮುಂದೆ ಸಾರಣೆ ಮಾಡಿ ರಂಗವಲ್ಲಿ ಹಾಕಿ, ತೋರಣ ಕಟ್ಟಿ ಮಾಲಕ್ಷ್ಮಿ ದೇವಿಯ ಚಟ್ಟಿಗೆ ಬರೆವುದನ್ನು ಕಾಣುತ್ತಾನೆ. ಏನು ವ್ರತವೆಂದು ವಿಚಾರಿಸುತ್ತಾನೆ. ಶ್ರಾವಣ ಮಾಸದ ಸಂಪತ್ತು ಶುಕ್ರವಾರದ ವ್ರತವೆಂದು ಅವರು ಹೇಳಲು ತನಗೂ ಚಟ್ಟಿಗೆಯನ್ನು ಕೊಡಿ ಎಂದು  ಕೇಳಿ ಪಡೆದುಕೊಳ್ಳುತ್ತಾನೆ. ಚಟ್ಟಿಗೆಯನ್ನು ಹಿಡಿದು ಗೋಪಾಳಕ್ಕೆ ಹೋಗಲು 'ಗೂಡೆ ಅಕ್ಕಿ ಬ್ಯಾಳೆ ಬೆಲ್ಲ ತುಪ್ಪವ ತಂದು ಹಿಡಿ ಹಿಡಿ' ಎನ್ನುತ್ತಾರೆ ಜನ. ಪೂಜಾಪದಾರ್ಥಗಳನ್ನೂ ನೀಡುತ್ತಾರೆ. ಪತ್ನಿಗೆ ವಿಷಯ ತಿಳಿಸುತ್ತಾನೆ. ಒಬ್ಬ ಬ್ರಾಹ್ಮಣನಿಗೆ ಊಟಕ್ಕೆ ಹೇಳಿದ್ದೇನೆ. ಮುತ್ತೈದೆಯೊಬ್ಬರಿಗೆ ಹೇಳಿ ಬನ್ನಿ ಎಂದು ಮನೆಯಲ್ಲಿ ಹೆಂಗಸರಿಗೆ ಹೇಳುತ್ತಾನೆ. ಚಿಕ್ಕ ಸೊಸೆ ಎಣ್ಣೆ ಕುಂಕುಮವನ್ನು ಕೈಯಲ್ಲಿ ಹಿಡಿದು ಹೊರಟಾಗ ಚೊಕ್ಕ ಚಿನ್ನದಂತ ಮುತ್ತೈದೆ ಕೇಳುತ್ತಾಳೆ:

ಹುಡುಗಿ ನೀ ಎತ್ತ ಪೋಗುವೆಯೆ ನಿಮ್ಮನೆಯಲ್ಲಿ
ಅಡುಗೆ ಏನೇನು ಮಾಡುವರು
ಹಿಡಿದೆಣ್ಣೆ ಕುಂಕುಮ ಕೊಡುವೊದಿನ್ಯಾರಿಗೆ
ಕೊಡಬಾರದೇನೆ ನೀ ನನಗೆ – ಯಾರಾದರೇನೆಂದು ಚಿಕ್ಕ ಸೊಸೆ ಕರೆಯುತ್ತಾಳೆ.
ಮನೆಯನ್ನು ಶುದ್ಧಗೊಳಿಸಿ ಎಲ್ಲರೂ ಎರೆದುಕೊಂಡು
ಕಮಲ ಕ್ಯಾದಗೆ ಕಬ್ಬು ಕದಳಿ ಕಡುಬು
ಬಾಳೆ ಗೊನೆ ಕಟ್ಟಿ ಚಿತ್ರ ಮಂಟಪವ
ಎಡಬಲದಿ ನಾಲ್ಕು ನಂದಾದೀವಿಗೆ ಹಚ್ಚಿ
ನಡುವ್ಹಾಕಿ ಪದ್ಮಪೀಠಗಳ

ಚಟ್ಟಿಗೆಯೊಳಗಿಕ್ಕಿ ಐದು ಫಲವ ತುಂಬಿ
ಮುತ್ತೈದೆರೆಲ್ಲಾ ನೆರೆದು ಕಟ್ಟಿದರು
ಕೊರಳ ಮಾಂಗಲ್ಯ ಮಾಲಕ್ಷ್ಮಿ ಪ್ರತಿಷ್ಠೆ
ಮಾಡಿದರು ಸಂಭ್ರಮದಿ

ಮಾಲಕ್ಷ್ಮಿಯನ್ನು ಸುಗಂಧ ದ್ರವ್ಯಗಳಿಂದ ಪೂಜಿಸುತ್ತಾರೆ. ಜಿಲೇಬಿ, ಸುಕಿಯನುಂಡೆ, ಹೋಳಿಗೆ, ಕಡುಬು, ಪಡವಲಕಾಯಿ ಪಳದ್ಯ, ಕೀರು, ಪರಮಾನ್ನ, ಕಲಸುಮೇಲೋಗರ, ಬಜ್ಜಿ, ಕೇಸರಿಬಾತು ಮಾಡಿ ನೈವೇದ್ಯ ಮಾಡುತ್ತಾರೆ. ಆದರೆ ಮುತ್ತೈದೆ ಬರಲಿಲ್ಲ. ಎಲೆಯೊಂದಕ್ಕೆ ಬಡಿಸಿ ತಾಂಬೂಲವಿಟ್ಟು ಪುಟ್ಟಿಯನ್ನು ಮುಚ್ಚಿ ಎಲ್ಲರೂ ಊಟ ಮಾಡುತ್ತಾರೆ. ಮಾರನೆದಿನ ಸಂಪತ್ತು ಶನಿವಾರ– ಭಕ್ಷ್ಯ ಭೋಜ್ಯ ಮಾಡಿ ಉಣ್ಣುತ್ತಾರೆ.

ಎರಡನೆ ಶುಕ್ರವಾರ ದೃಢವಾಗಿ ಮುತ್ತೈದೆಗೆ ಹೇಳಿಬನ್ನಿ ಎನಲು ಇನ್ನೊಬ್ಬಳು ಸೊಸೆ ಹೊರಡುತ್ತಾಳೆ. ಅದೇ ಮುತ್ತೈದೆಯು ಇವಳ ದಾರಿ ಅಡ್ಡಗಟ್ಟಿ 'ಆದಿ ಶುಕ್ರವಾರ ಹೇಳಿ ಎನ್ನನು ಬಿಟ್ಟು ನೀದಾರಿಗೆ ಹೇಳುವೆ ಭೋಜನಕೆ' ಎಂದು ಕೇಳುತ್ತಾಳೆ. ನಮ್ಮೊಡವೆ ಬೇಡ ಹೋದ ಶುಕ್ರವಾರವೇ ನಿನಗೆ ಹಾಕಿದ್ದು ಹಾಗೇ ಇದೆ. 'ಉಣ್ಣು ಬೇಕಾದರ್ಹೋಗು' ಎನ್ನುತ್ತಾಳೆ ಸೊಸೆ. 'ತಡೆಯದೆ ಬರುವೆನು ತಾ ಎಣ್ಣೆ ಕುಂಕುಮ' ಎಂದು ತೆಗೆದುಕೊಳ್ಳುತ್ತಾಳೆ ಮುತ್ತೈದೆ. ಆದರೆ ಮೂರು ಗಂಟೆಯಾದರೂ ಬರುವುದಿಲ್ಲ, ಯಥಾಪ್ರಕಾರ ಎಲೆಗೆ ಬಡಿಸಿ ಮುಚ್ಚಿಟ್ಟು ಊಟ ಮಾಡುತ್ತಾರೆ. ಮೂರು ಮತ್ತು ನಾಲ್ಕನೆಯ ಶುಕ್ರವಾರವೂ ಒಬ್ಬೊಬ್ಬ ಸೊಸೆಯೂ ಹೋಗಿ ಕರೆದಾಗಲೂ ಅದೇ ರೀತಿ ನಡೆಯುತ್ತದೆ. ಐದನೆ ಶುಕ್ರವಾರ ಬ್ರಾಹ್ಮಣನ ಹೆಂಡತಿಯೇ ಹೊರಡುತ್ತಾಳೆ. ಅದೇ ಮುತ್ತೈದೆ ಸಿಗುತ್ತಾಳೆ, ಅದೇ ಮಾತುಗಳು ನಡೆಯುತ್ತಾವೆ. ಆದರೆ ಈ ಬಾರಿ 'ದಿವಾಕರ ಮುಣುಗೋ ಕಾಲದಲಿ ದನಕರು ಬರೋ ವೇಳ್ಯಾಗೆ ನಾನು ಬರುವೆನು ಸಂದೇಹ ಬೇಡ' ಎನ್ನುತ್ತಾಳೆ ಮುತ್ತೈದೆ. ಕೊಟ್ಟ ಮಾತಿನಂತೆ ಸಂಜೆಯ ವೇಳೆ ಬರುತ್ತಾಳೆ. ಅಲಂಕರಿಸಿಕೊಂಡು ದಾರಿಯಲ್ಲಿ ನಡೆದು ಬರುತ್ತಿರುವ ಅವಳನ್ನು ನೋಡಿ ರಾಜಾಧಿರಾಜ ಇವಳು ಎಲ್ಲಿಗೆ ಹೋಗುವಳೆಂದು ನೋಡಲು ಆ ಬಡ ಬ್ರಾಹ್ಮಣನ ಮನೆಗೆ ಬರುತ್ತಾಳೆ. ಸಿರಿ ಬರಲು ಮನೆ ಅರಮನೆಯಾಗುತ್ತದೆ. ಸುತ್ತ ವನವಾಗುತ್ತದೆ. ಸಿರಿಯು ಕುರ್ಚಿಯಲ್ಲಿ ಬಂದು ಕೂಡುತ್ತಾಳೆ. ಸುಗಂಧ ದ್ರವ್ಯಗಳಿಂದ ಅವಳನ್ನು ಪೂಜಿಸಲು ದೇವರ ಮನೆಯಲ್ಲಿ ತೂಗುವ ಮಾಣಿಕ್ಯಮಂಚದಲ್ಲಿ ಕೂರುತ್ತಾಳೆ. ಹಿಂದಿನ ನಾಲ್ಕು ಶುಕ್ರವಾರದ ಎಲೆಗಳನ್ನು ತೆಗೆದು ನೋಡಲು ಅನ್ನವು ಆಣಿಮುತ್ತಾಗಿ, ಪಲ್ಯ, ಪರಮಾನ್ನ, ಭಕ್ಷ್ಯ ಬಂಗಾರವಾಗಿ ಬಾಳೆಲೆಯು ರಜತದ್ದಾಗಿರುತ್ತದೆ. ನಾಲ್ಕು ಸೊಸೆಯರೂ ಬಂದು ಒಂದೊಂದು ಎಲೆ ಹಂಚಿಕೊಳ್ಳುತ್ತಾರೆ. 'ಬಡವರ ಮನೆಗೆ ಬಂದು ಭಾಗ್ಯದ ಕೊಡವಾಗಿ ಕೂತಂತ ಕಥೆ' ಇದು. ಫಲಸ್ತುತಿಯೊಂದಿಗೆ ಹಾಡು ಮುಕ್ತಾಯವಾಗುತ್ತದೆ.

**ಬುಧ ಬೃಹಸ್ಪತಿಯ ಕಥೆ**

ಇದು ಹರಪನಹಳ್ಳಿ ಭೀಮವ್ವನವರ ರಚನೆ. ಬಡ ಬ್ರಾಹ್ಮಣನೊಬ್ಬನು ಮಡದಿ, ನಾಲ್ಕು ಜನ

ಗಂಡು ಮಕ್ಕಳು, ಸೊಸೆಯರು, ಎಂಟು ಮೊಮ್ಮಕ್ಕಳೊಂದಿಗೆ ಇರುತ್ತಾನೆ. ಭಿಕ್ಷಾಟನೆಯಿಂದಲೆ ಬದುಕು. ಒಂದು ದಿನ ಅವರ ಮನೆಗೆ ಇಬ್ಬರು ಬ್ರಾಹ್ಮಣರು (ಬುಧ–ಬೃಹಸ್ಪತಿ) ಬರುತ್ತಾರೆ. ಮೂರುದಿನದಿಂದ ಉಪವಾಸ. ಆಹಾರ ನೀಡಿ ಎಂದು ಹಿರಿಯ ಸೊಸೆಯನ್ನು ಬೇಡುತ್ತಾರೆ. ಅವಳು ಮಕ್ಕಳಿಗಿಟ್ಟಿದ್ದ ಭಕರಿಯನ್ನೆ ಇವರಿಗೆ ಬಡಿಸುತ್ತಾಳೆ. ತೃಪ್ತರಾದ ಅವರು 'ಅನ್ನ ಬೇಕಾದರೆ ಅಡಿಗೆ ಒಲೆ ಗೋಡೆಯಲ್ಲಿ ನಮ್ಮನ್ನು ಬರೆದು ಪೂಜೆ ಮಾಡಿದರೀಗ ಅನ್ನವನು ನಾವು ಕೊಡುವೆವು', 'ಭಾಗ್ಯ ಬೇಕಾದರೆ ಬರೆದು ಪೆಟ್ಟಿಗೆ ಮಾಡಿ ಬಹಳ ಭಕ್ತಿಯಿಂದ ಪೂಜೆ ಮಾಡಿದರೆ ಭಾಗ್ಯ ಕೊಡುವೆವು' ಎಂದು ಹೇಳಿ ನಡೆದರು. ಅವರು ಹಾಗೇ ಮಾಡುತ್ತಾರೆ. ಭಿಕ್ಷೆಗೆ ಹೋದ ಗಂಡಸರಿಗೆ ಹೆಚ್ಚು ಭಿಕ್ಷೆ ಸಿಗುತ್ತದೆ. ಮನೆಗೆ ಬಂದವರಿಗೆ ವಿಷಯ ಹೇಳುತ್ತಾಳೆ. ಎಲ್ಲರೂ ಪೂಜಿಸುತ್ತಾರೆ. ಆ ಮನೆಯ ಹಿರಿಮಗ ಸಂಚಾರಕ್ಕೆ ಹೋಗಿದ್ದಾಗ ಆ ರಾಜ್ಯದ ರಾಜ ರಾಣಿಯರು ಸ್ವರ್ಗಸ್ಥರಾಗುತ್ತಾರೆ. ಆನೆಯು ಅವನಿಗೆ ಮಾಲೆ ಹಾಕುತ್ತದೆ. ಅವನು ರಾಜನಾಗುತ್ತಾನೆ. ಬುಧ ಬೃಹಸ್ಪತಿಯರು ಮತ್ತೆ ಅದೇ ಮನೆಗೆ ಹೋಗುತ್ತಾರೆ. ಭಕ್ರಿಯನ್ನು ಬೇಡಿ ಉಣ್ಣುತ್ತಾರೆ. ಒಂದು ದಿನ ಆ ಮನೆಯ ಮಕ್ಕಳು ಪೂಜೆಗೆ ಬರದ ಬುಧ ಬೃಹಸ್ಪತಿಯರ ಚಿತ್ರವನ್ನು ಅಳಿಸುತ್ತಾರೆ. ಅಂದಿನಿಂದ ದಾರಿದ್ರ್ಯ ಬರುತ್ತದೆ. ಊರೂರು ತಿರುಗಿ ಸೌದೆ ಮಾರಿ ಬದುಕುತ್ತಾರೆ. ರಾಜನಾದ ಹಿರಯ ಮಗನು ಒಂದು ದಿನ ಬಜಾರಿನಲ್ಲಿ ಅವರನ್ನು ನೋಡುತ್ತಾನೆ. ಎಲ್ಲರನ್ನೂ ತನ್ನರಮನೆಗೆ ಕರೆದುಕೊಂಡು ಹೋಗುತ್ತಾನೆ. ಜೋಳದ ಭಕ್ರಿ ಮಾಡಿ ಶ್ರಾವಣ ಬುಧವಾರ ಬುಧ ಬೃಹಸ್ಪತಿಯ ಪೂಜೆ ಮಾಡಬೇಕು.

**ಶ್ರಾವಣ ಸಂಪತ್ತು ಶನಿವಾರದ ಹಾಡು:**

ಇದು ಹರಪನಹಳ್ಳಿ ಭೀಮವ್ವನ ರಚನೆ. ಸೋಮೇಜಭಟ್ಟನು ತನ್ನ ಸತಿ ಸೋಮೇಜಮ್ಮನೊಡನೆ ಶುಕ್ರವಾರ ಲಕ್ಷ್ಮೀಪೂಜೆ, ಶನಿವಾರ ಹಿಟ್ಟಿನ ಕಡುಬು, ಹಿಂಡಿಯ ಪಲ್ಯವನು ಮಾಡಿ/ಅಚ್ಚೆಳ್ಳು ಗಾಣದೆಣ್ಣೆಯನು/ನುಚ್ಚು ಮಜ್ಜಿಗೆ ಹುಳಿ ತುಳಿಯ ಕಟ್ಟಂಬಲಿ/–ನೇವೇದ್ಯ ಮಾಡುತ್ತಾರೆ. ಭೋಜನಕ್ಕೆ ಕೂರುವಾಗ ಬಂದ ರಾಣಿ 'ಸೋಜಿಗವಲೆ ನಿಮ್ಮ ಗೌರಿಯ ಸಂಪತ್ತು ಈ ಜಗದೊಳಗೆ ಕಾಣೆ' ಎಂದು ಹಾಸ್ಯ ಮಾಡಿ ದರಿದ್ರ ಅಂಬಲಿ–ಕಡುಬು ತಿಂದರೆ ಗಂಟಲಿನಲ್ಲಿ ಸಿಕ್ಕೀತು ಎಂದು ಅಪಹಾಸ್ಯ ಮಾಡುತ್ತಾಳೆ. ಹಾಗೆ ಮಾಡುತ್ತಿದ್ದಂತೆ ಒಂದೊಂದು ಸಂಪತ್ತು ಕುಂದುತ್ತದೆ. ಕೊನೆಗೆ ಪರರಾಜ್ಯದವರು ಮುತ್ತಿಗೆ ಹಾಕಲು ರಾಜ ರಾಣಿಯರು ಕಾಡು ಪಾಲಾಗುತ್ತಾರೆ. ಗರ್ಭಿಣಿಯಾದ ರಾಣಿ ಹಡೆದ ಅವಳಿ ಮಕ್ಕಳನ್ನು ಎಲೆಯಲ್ಲಿ ಮುಚ್ಚಿಡುತ್ತಾಳೆ. ಸೋಮೇಶ ಭಟ್ಟನು ವನಕ್ಕೆ ಬಂದಾಗ ಮಕ್ಕಳು ಸಿಗುತ್ತವೆ. ದೇವರು ಕೊಟ್ಟದ್ದೆಂದು ಸಾಕಿ ಮದುವೆ ಮಾಡುತ್ತಾರೆ. ಇತ್ತ ರಾಣಿಯು ಮಕ್ಕಳ ಮನೆಯಲ್ಲೇ ಕೆಲಸ ಮಾಡಿಕೊಂಡಿದ್ದು ತಿಳಿಯುವುದಿಲ್ಲ. ಒಂದು ದಿನ ಅವರ ಮನೆಯಲ್ಲಿ ಸಂಪತ್ತು ಶನಿವಾರ ಮಾಡುವಾಗ ತಾನು ವ್ರತವನ್ನು ಹಳಿದಿದ್ದರಿಂದಲೇ ಹೀಗಾಯ್ತು. ಈಗ ನಿಮ್ಮ ಮನೆಯಲ್ಲಿ ವ್ರತ ಮಾಡುತ್ತೇನೆಂದು ಕೇಳಿಕೊಂಡು ಮಾಡುತ್ತಾಳೆ. ತನ್ನ ಬದುಕಿನ ಕಥೆಯನ್ನು ಹೇಳಿಕೊಂಡಾಗ ಆ ಮಕ್ಕಳಿಗೆ ಇವರೇ ತಮ್ಮ ತಾಯಿ ತಂದೆಯರೆಂದು ಗೊತ್ತಾಗುತ್ತದೆ.

ಮಕ್ಕಳು ನಮಸ್ಕರಿಸಿ ತಂದೆ ತಾಯಿಗಳಿಗೆ ರಾಜ್ಯ ಒಪ್ಪಿಸುತ್ತಾರೆ. ಲಕ್ಷ್ಮಿಯ ದಯದಿಂದ ಎಲ್ಲರೂ ಸುಖವಾಗಿರುತ್ತಾರೆ.

**ಶ್ರಾವಣ ಶುಕ್ರವಾರದ ಗೌರಿ ಹಾಡು**

ಇದು ಹರಪನಹಳ್ಳಿ ಭೀಮವ್ವನ ರಚನೆ. ರಾಜನು ಮಕ್ಕಳಿಲ್ಲದಿದ್ದರಿಂದ ಮರು ಮದುವೆಯಾಗಬೇಕು ಎಂದು ಹೊರಡುತ್ತಾನೆ. ಹೋಗುವಾಗ ಪಟ್ಟದ ಕತ್ತಿಯನ್ನು ಮರೆತೆನೆಂದು ತರಲು ದೂತರನ್ನು ಕಳಿಸುತ್ತಾನೆ. ದೂತನು ರಾಣಿಯ ಕಾಲನ್ನು ದಾಟಿಕೊಂಡು ಹೋಗುತ್ತಾನೆ. 'ಮೂರು ತಿಂಗಳು ಗರ್ಭವಾಗಿದೆ. ನೀನೀಗ ದಾಟಬಹುದೆ?' ಎಂದು ರಾಣಿ ಕೇಳಲು ದೂತನು ರಾಜನಿಗೆ ವಿಷಯ ತಿಳಿಸುತ್ತಾನೆ. ರಾಜನು ಸಂತೋಷದಿಂದ ಹಿಂದಿರುಗುತ್ತಾನೆ. ರಾಣಿಯು ಸೂಲಗಿತ್ತಿಯನ್ನು ಕರೆದು ಗುಟ್ಟಾಗಿ ಮಾತನಾಡಿ ಹೆರಿಗೆಯ ಸಮಯಕ್ಕೆ ಒಂದು ಮಗುವನ್ನು ತಂದು ಕೊಡುವಂತೆ ಹೇಳುತ್ತಾಳೆ. ಅದೇ ಸಮಯಕ್ಕೆ ಬಡ ವಿಪ್ರನ ಹೆಂಡತಿಗೆ ಹೆರಿಗೆಯಾಗುತ್ತದೆ. ಸೂಲಗಿತ್ತಿ 'ಕಲ್ಲು ಗುಂಡು ಹಡೆದಿ' ಎಂದು ಹೇಳಿ ಮಗುವನ್ನು ರಾಣಿಗೆ ತಂದು ಕೊಡುತ್ತಾಳೆ. ಹೆತ್ತ ತಾಯಿ 'ಎಲ್ಲಾದರೂ ನನ್ನ ಕುಮಾರ ಸುಖವಾಗಿ ಬದುಕಲಿ' ಎಂದು ಹರಸುತ್ತಾಳೆ. ಇತ್ತ ರಾಜನು ಮಗುವಿಗೆ ಕಾಲ ಕಾಲಕ್ಕೆ ನಾಮಕರಣ ಜಾವಳ ಉಪನಯನ ಮಾಡುತ್ತಾನೆ. ಒಮ್ಮೆ ಆ ಹುಡುಗನು ಕತ್ತಲಲ್ಲಿ ಬರುತಿರಲು ಬಾಗಿಲ ಮುಂದೆ ಕಟ್ಟಿದ ಹಸು ಕಾಣಿಸದೆ ಕಾಲು ತುಳಿಯುತ್ತಾನೆ. ಆಗ ಗೋವು 'ತಮ್ಮಮ್ಮನರಿಯದವ ನಮ್ಮನ್ನು ಬಲ್ಲನೆ' ಎಂದ ಮಾತನು ಎರಡು ಬಾರಿ ಆಲಿಸುತ್ತಾನೆ. ಹಿರಿಯರಿಗೆ ಹೇಳಿದಾಗ ಮಂದಾಕಿನಿಯಲಿ ಸ್ನಾನವ ಮಾಡಿ ಬಂದರೆ ಸಂದೇಹ ಪರಿಹಾರವಾಗುವುದು ಎನ್ನುತ್ತಾರೆ.

ಗಂಗಾ ಯಾತ್ರೆಗೆ ಹೊರಟು ದಾರಿಯಲ್ಲಿ ಒಂದು ಮನೆಯ ಬಾಗಿಲಲ್ಲಿ ಮಲಗುತ್ತಾನೆ. ಶೆಟ್ಟೆವ್ವ ಅವನನ್ನು ದಾಟಿ ಬಂದಾಗ ಎನ್ನ ವರಪುತ್ರ ಇವನ ಕಾಲು ದಾಟಲು ನಿನ್ನ ಶಿರವು ಸಿಡಿದು ಸಹಸ್ರ ಹೋಳಾಗುವುದು ಎನ್ನುತ್ತಾಳೆ. ಇವನು ಪ್ರಯಾಗದಲ್ಲಿ ದಾನ ಧರ್ಮ ಮಾಡುವಾಗ ನಾಲ್ಕು ಕೈಗಳು ಕಾಣುತ್ತವೆ. ಹಿರಿಯರನ್ನು ಕಾರಣ ಕೇಳಲು ನಿನ್ನನ್ನು ಹಡೆದವರು ಸಾಕಿದವರು ಇರುವರೆಂದು ಹೇಳುತ್ತಾರೆ. ಪಟ್ಟಣಕ್ಕೆ ಬಂದು ಬಹಳ ದಿವಸವಾಯಿತೆಂದು ಶ್ರಾವಣ ಮಾಸದಲ್ಲಿ ಬ್ರಾಹ್ಮಣರಿಗೆ ಅನ್ನ ಸಂತರ್ಪಣೆ ಏರ್ಪಡಿಸಿದ. ಆ ಬಡ ಬ್ರಾಹ್ಮಣನ ಹೆಂಡತಿಯನ್ನು ಕರೆದಾಗ ಅವಳು ಬರುವುದಿಲ್ಲವೆನ್ನುತ್ತಾಳೆ. ಭೀತಿ ತೋರಿಸಿದ ಮೇಲೆ ಬರುತ್ತಾಳೆ. ಲಕ್ಷ್ಮಿ ವ್ರತದಲ್ಲಿದ್ದ ಅವಳು ಊಟ ಮಾಡುತ್ತಿದ್ದಾಗ ಅವಳ ಕುಮಾರನೇ ಬಡಿಸಲು ಬಂದಾಗ ತಾಯಿ ಸ್ತನಗಳು ಭರದಿಂದ ಉಕ್ಕೇರಿ ಬಂದು ಹಾಲು ಅವನ ಮುಖಕ್ಕೆ ಚಿಮ್ಮುತ್ತದೆ. ಶಾಲಿನಿಂದ ಒರೆಸಿಕೊಳ್ಳುತ್ತಾ ಹೋಗುತ್ತಾನೆ. ಅದೇ ಯೋಚನೆಯಲ್ಲೇ ರಾತ್ರಿ ತಾಯಿಗೆ ವಿಷಯ ತಿಳಿಸುತ್ತಾನೆ. ಆಗ ತಾಯಿ ನಡೆದ ಕಥೆ ಹೇಳಿ ನಿನ್ನ ಹೆತ್ತವರು ತಿಳಿಯದು ಎನ್ನುತ್ತಾಳೆ. ಸೂಲಗಿತ್ತಿಯ ಕರೆಸಿ ಹೊನ್ನಿನಾಸೆ ತೋರಿಸಿದಾಗ ಸೂಲಗಿತ್ತಿ ನಿಜ ಒಪ್ಪಿಕೊಳ್ಳುತ್ತಾಳೆ. ತಂದೆ ತಾಯಿಗಳಿಗೆ ಹೇಳಿ ಕಳುಹಿಸುತ್ತಾಳೆ.

ರಾಜ ಕರೆದನೆಂದು ಅವರು ಹೆದರುತ್ತಾ ಬರುತ್ತಾರೆ. ಬಂದವರಿಗೆ ವಿಷಯ ಹೇಳಿ ನಮಸ್ಕರಿಸುತ್ತಾನೆ. ಎಲ್ಲರೂ ಸಂತೋಷದಿಂದ ಇರುತ್ತಾರೆ. ಅವನ ವಿವಾಹವನ್ನೂ ನೆರವೇರಿಸುತ್ತಾರೆ.

**ದಿವಸಿ ವ್ರತ (ಭೀಮನಮಾವಾಸ್ಯೆ ವ್ರತ)**

ಹರಪನಹಳ್ಳೀ ಭೀಮವ್ವ ಮತ್ತು ಓರಾಬಾಯಿ ಈ ವ್ರತಕಥೆಯನ್ನು ಹಾಡಾಗಿಸಿದ್ದಾರೆ. ಕತ್ತಲರಾಯ ಎಂಬ ಒಬ್ಬ ರಾಜನಿಗೆ ಮಗನಿರುತ್ತಾನೆ. ಅವನು ಮೃತನಾಗುತ್ತಾನೆ. ಪುತ್ರ ವ್ಯಾಮೋಹದಿಂದ ಕತ್ತಲೆರಾಯನು ತನ್ನ ಸತ್ತ ಮಗನಿಗೆ ಯಾರಾದರೂ ಹೆಣ್ಣು ಕೊಟ್ಟು ಮದುವೆ ಮಾಡಿದರೆ ಅರ್ಧರಾಜ್ಯ ಕೊಡುತ್ತೇನೆಂದು ಡಂಗುರ ಹೊಡೆಸುತ್ತಾನೆ. ಆ ಊರಿನಲ್ಲಿದ್ದ ಒಂದು ಬಡ ಕುಟುಂಬದಲ್ಲಿ ಅಣ್ಣ ಅತ್ತಿಗೆಯರ ಒತೆ ವಾಸಿಸುತ್ತಿದ್ದ ಕುಮಾರಿ ಇರುತ್ತಾಳೆ. ತಂದೆ ತಾಯಿಯಿಲ್ಲದ ಅವಳನ್ನು ಅಣ್ಣ ಅತ್ತಿಗೆಯರು ಆ ಹೆಣಕ್ಕೆ ಕೊಟ್ಟು ಮದುವೆ ಮಾಡಿಸಲು ನಿಶ್ಚಯಿಸುತ್ತಾರೆ. ರಾಜನಿಗೆ ತಿಳಿಸುತ್ತಾರೆ. ಸ್ಮಶಾನದಲ್ಲೇ ವಿವಾಹವಾಗುತ್ತದೆ. ವಿವಾಹದ ನಂತರ ಎಲ್ಲರೂ ಆ ಹುಡುಗಿಯನ್ನು ಅಲ್ಲೇ ಬಿಟ್ಟು ಹೊರಡುತ್ತಾರೆ. ರಾಜನು ಮಾತ್ರ ಅರಮನೆಗೆ ಕರೆದರೆ ಹುಡುಗಿ ತನ್ನ ಪತಿಯನ್ನು ಬದುಕಿಸಿಕೊಂಡೇ ಬರುತ್ತೇನೆಂದು ಹೇಳುತ್ತಾಳೆ. ಮಣ್ಣಲ್ಲೆ ಹಣತೆ ಮಾಡಿ ಬಾಳೆನಾರನ್ನೇ ಬತ್ತಿಯಾಗಿಸಿಕೊಂಡು ನೀರನ್ನು ಹಾಕಿ ದೀಪ ಉರಿಸುತ್ತಾಳೆ. ಪಾರ್ವತಿ ಪರಮೇಶ್ವರರನ್ನು ಪ್ರಾರ್ಥಿಸುತ್ತಾಳೆ. ಆಕಾಸದಲ್ಲೆ ಸಂಚಾರ ಮಾಡುತ್ತಿದ್ದ ಶಿವಪಾರ್ವತಿಯರು ಆಕೆಯ ಬಳಿ ಬಂದು ಕಾರಣ ಕೇಳಿ ಅಲ್ಲಿ ಭಂಡಾರ ಒಡೆಯಲಿಕ್ಕೆ ಅಣ್ಣ ತಮ್ಮಂದಿರು ಇಲ್ಲವೆಂದು ತಿಳಿದು ಶಿವನು ಅವಳು ಮಾಡಿಟ್ಟ ಮಣ್ಣಿನ ಕಡುಬನ್ನೇ ಮೊಣಕೈಯಿಂದ ಒಡೆಯುತ್ತಾನೆ. ಕತ್ತಲೆರಾಯನ ಮಗ ಎದ್ದು ಕೂರುತ್ತಾನೆ. ಶಿವಪಾರ್ವತಿಯರು ಇಬ್ಬರಿಗೂ ಆಶೀರ್ವಾದಮಾಡಿ ಹೊರಡುತ್ತಾರೆ. ದಂಪತಿಗಳು ಅರಮನೆಗೆ ಹೋಗುತ್ತಾರೆ. ಕನ್ಯೆಯರು ಈ ವ್ರತವನ್ನು ಮಾಡುತ್ತಾರೆ. ದೀಪದ ಕಂಬಗಳಿಗೆ ಪೂಜೆ ಮಾಡುತ್ತಾರೆ. ಇಲ್ಲವೆ ಮಣ್ಣಿನ ದಾಳಗಳಿಗೆ ಸುಣ್ಣದ ಚುಕ್ಕೆಗಳನ್ನಿಟ್ಟು ಪೂಜೆ ಮಾಡುತ್ತಾರೆ.

ಭಂಡಾರವೆಂದರೆ ಕರಿಗಡುಬು. ಸಕ್ಕರೆ ಮತ್ತು ಒಣಕೊಬ್ಬರಿ ಹಾಕಿ ಮಾಡಿದ ಕಡುಬಿನಲ್ಲಿ ದಕ್ಷಿಣೆಯಿಡುತ್ತಾರೆ. ಅದನ್ನು ಹೊಸಿಲ ಮೇಲಿಟ್ಟು ಅಣ್ಣ ತಮ್ಮಂದಿರಿಂದ ಮೊಣಕೈಯಲ್ಲಿ ಒಡೆಸುತ್ತಾರೆ. ಸಿಹಿಯನ್ನು, ದಕ್ಷಿಣೆಯನ್ನು ತೆಗೆದುಕೊಂಡ ಸೋದರರು ತಂಗಿಯನ್ನು ಹರಸುತ್ತಾರೆ.

**೫.೫ ಇತರ ಕಥೆಗಳು**

ಈ ಅಧ್ಯಾಯದಲ್ಲಿ ರಾಮಾಯಣ ಮತ್ತು ಮಹಾಭಾರತಕ್ಕೆ ಹೊರತಾದ, ಕೀರ್ತನಕಾರರ ಸ್ವಯಂ ಕಲ್ಪಿತ ಕಥೆಗಳನ್ನು ಪರಿಚಯಿಸುವುದಕ್ಕೆ ಅಧ್ಯಾಯವನ್ನು ಸೀಮಿತಗೊಳಿಸಲಾಗಿದೆ. ಬೇರೆ ಅಧ್ಯಾಯಗಳಲ್ಲಿ ಸಾಂದರ್ಭಿಕವಾಗಿ ಈ ಕೃತಿಗಳ ಚರ್ಚೆ ಬರುತ್ತದೆ.

**ಉದ್ಧಾಳಿಕನ ಕಥೆ**

ಇದು ಹೆಳವನಕಟ್ಟೆ ಗಿರಿಯಮ್ಮನವರ ರಚನೆ. ಈ ಕಥೆಯ ಮೂಲ ಸ್ಪಷ್ಟವಾಗಿ ತಿಳಿದುಬಂದಿಲ್ಲ. ಸಾಂಗತ್ಯದಲ್ಲಿದೆ. 'ಓಣ್ಯೋಳು ಚೆಲ್ಲಿದ ಆಣಿಮುತ್ತಾರಿಸಿ ನೂಲಿಗೆ ಪೋಣಿಸಿದಂತೆ

ಯೋಗಿಗಳರಸುದ್ಧಾಳಿಕನ ಕಥೆಯನು ಹೇಳುವೆ ಚರಿತೆಯ ಮಾಡಿ' ಎನ್ನುತ್ತಾಳೆ ಗಿರಿಯಮ್ಮ. ಕೀರ್ತನೆಯ ಪ್ರಾರಂಭಕ್ಕೆ ಸಂಪ್ರದಾಯದಂತೆ ವಿನಾಯಕ, ಶಾರಧೆ, ನೀಲಾಬ್ಧಿಯ ಲಿಂಗ, ಸಾಧು ಸಜ್ಜನರು, ಗುರುಹಿರಿಯರನ್ನು, ಭೂಮಿ, ಅಂಬರ, ರವಿ, ತಾರೆ, ಚಂದ್ರ, ಅಷ್ಟದಿಕ್ಪಾಲಕರನ್ನು ಸ್ಮರಿಸುತ್ತಾರೆ.

ವೇದಾಂತ ಪಾರಂಗತನಾದ ಉತ್ತುಮ ಮುನಿ ಹಾಗು ಸಾಧು ಸಜ್ಜನ ಸತಿ ಆತನ ಪತ್ನಿಗೆ ಉದ್ಧಾಳಿಕನು ಮಗನಾಗಿ ಜನಿಸುತ್ತಾನೆ. ಅವನ ಮುಂಜಿಯ ನಂತರ ತಂದೆ ತಾಯಿಗಳು ಗತಿಸುತ್ತಾರೆ. ಉದ್ಧಾಳಿಕನು ವೇದಗಳನ್ನು ಕಲಿಯುತ್ತಾನೆ. 'ಅಜ ಹರ ಹರಿಯ ಮೆಚ್ಚಿಸುವೆ' ಎಂದು ತಪಸ್ಸಿಗೆ ತೆರಳುತ್ತಾನೆ. ತಪಸ್ಸಿನಲ್ಲಿಯೇ ಅರವತ್ತು ಸಾವಿರ ವರ್ಷಗಳು ಕಳೆಯುತ್ತಾನೆ.

ಕೌಸಲ್ಯ ದೇಶದ ಅಯೋಧ್ಯೆ ಪಟ್ಟಣವನ್ನು ಆಳುತ್ತಿದ್ದ ರಘುರಾಯನಿಗೆ ಅಜಭೂಪ ಮತ್ತು ಚಂದ್ರಾವತಿಯೆಂಬ ಇಬ್ಬರು ಮಕ್ಕಳು ಜನಿಸುತ್ತಾರೆ. ಚಂದ್ರಾವತಿಯು

ಹೊಡೆ ಮಗ್ಗುಲಿಕ್ಕೋಳು ಇಡುವಳಂಬೆಗಾಲ
ನಡೆಯೋಳು ದಟ್ಟಡಿಯಿಡುತ
ನುಡಿವೋಳು ತೊದಲ್ನುಡಿಯಲಿ ಅರಗಿಣಿಯಂತೆ
ಕಡುಲಾಲಿಕೆ ಬಾಲಲೀಲೆ-ತೋರುತ್ತಾಳೆ

ಬೆಳೆಯುತ್ತಿರುವ ಚಂದ್ರಾವತಿಯನ್ನು
ನಡೆದರೆ ದಿಟ್ಟಿ ತಾಕೀತೆಂದು ಕುಮಾರಿಗೆ ನುಡಿದರೆ
ಬಡವಾದಾಳೆಂದು
ಮುಡಿಯ ಭಾರಕೆ ಸೆಳೆನಡುವು ನೊಂದೀತೆಂದು

ಕಡುಹರುಷದಲಿ ಹಿಗ್ಗಿ-ಮುದ್ದಿನಿಂದ ಬೆಳೆಸುತ್ತಾರೆ. ಅಕ್ಷರಾಭ್ಯಾಸ ಮಾಡಿಸಿ ಗೀತೆ, ನರ್ತನ, ನಾಟಕ, ಕವಿಶಾಸ್ತ್ರಗಳನ್ನು ಕಲಿಸಿದರು. 'ಬಾಲತ್ವದಿಂದ ಕಳೆದವು ಕುಮಾರಿಗೆ ಮೇಲೆ ಯವ್ವನವು ತೋರಿದವು'. ವಯಸ್ಸಿಗೆ ಬಂದ ಮಗಳ ಸೇವೆಗೆ ಹತ್ತು ಸಾವಿರ ದಾಸಿಯರನ್ನು ಸನಿಹವಿಟ್ಟನು. ರಕ್ಷಣೆಗೆ ದ್ವಾರಪಾಲಕರನ್ನೂ ಇಟ್ಟನು.

ಇತ್ತ ಒಮ್ಮೆ ಕೌಶಿಕ ಮುನಿಯು ಸತ್ಯಲೋಕ, ತಪೋಲೋಕ ಸುತ್ತುತ್ತಾ ಯಮಲೋಕಕ್ಕೆ ಬಂದನು. ಓತಿನ ಬಾಯ ಮೂಷಕದಂತೆ ನಡುಗುತ್ತಿದ್ದ ಉದ್ಧಾಳಿಕನ ಪಿತೃಗಳು ಕಾಣಿಸುತ್ತಾರೆ. 'ಸಂತತಿಯಿಲ್ಲ ಉತ್ತಮಗತಿಯ ಕಾಣಿಸುವರೆ ಪತನಕೆ ಬಿದ್ದೆವೆಂದೆನಲು' ಕೌಶಿಕ, ಪುತ್ರ ಪೌತ್ರರಿಲ್ಲವೆ ಎಂದು ಪ್ರಶ್ನಿಸುತ್ತವೆ. ತಮ್ಮ ವಂಶದ ಉದ್ಧಾಳಿಕನೊಬ್ಬನಿರುವನು ತಾವು 'ಉತ್ತಮಳಾಗಿರ್ಪ ಸತಿಯನೊಳಗೊಂಡು ಪತ್ರ ಸಂತಾನವ ಪಡೆದು ಹೆತ್ತವರಿಗೆ ಸದ್ಗತಿಯ ಕಾಣಿಸುವುದೆಂದು' ಅವನಿಗೆ ವಿಸ್ತಾರವಾಗಿ ಹೇಳಬೇಕೆಂದು ಕೇಳಿಕೊಳ್ಳುತ್ತಾರೆ. ಮುನಿಯು ಉದ್ಧಾಳಿಕನಿಗೆ ವಿಷಯ ತಿಳಿಸುತ್ತಾನೆ. ಉದ್ಧಾಳಿಕನು ನನಗೆ ಹೊನ್ನು, ಹೆಣ್ಣು, ಮಣ್ಣಾಸೆಯು ಇಲ್ಲ ಎನ್ನುತ್ತಾನೆ. 'ನಿಮ್ಹೆತ್ತ ತಾಯಿ ತಂದೆ ಪಿತೃ ಪಿತಾಮಹರು ಅತ್ಯಂತ ನರಕಕ್ಕೈದುವರು' ಎಂದಾಗ ಬ್ರಹ್ಮನನ್ನೇ ಕೇಳುತ್ತೇನೆ

ಎನ್ನುತ್ತಾನೆ ಉದ್ಧಾಳಿಕ. ಬ್ರಹ್ಮನು 'ಸತ್ಯವೀ ಮಾತು ತಪ್ಪದು ಎನ್ನ ಲಿಖಿತವು ಪುತ್ರನಹನು ನಿನಗೊಬ್ಬ, ಲಕ್ಷ್ಮೀಪತಿಯ ಸಾರೋಪ(ದ)ಲ್ಲಿ ನಿಮ್ಮವರು ಮೋಕ್ಷದ ಪದವಿ ಹೊಂದುವರು' ಎನ್ನುತ್ತಾನೆ. ಆಗ ಉದ್ಧಾಳಿಕನು 'ಜರೆ ಅಡ(ರಿ) ನೆರಪರಿಗಳು ಬಂದವು. ಸಡಿಲಿದವು ದಂತಪಂಕ್ತಿ ಕೊಡುವರಾರು ಕರ್ನಿಕೆ' ಎಂದು ಮುನಿ ಕಮಲಭವನ ಬೆಸಗೊಂಡ. ಅದಕ್ಕೆ ಬ್ರಹ್ಮನು ಉತ್ತಮ ರಘುಕುಲದ ರಘುರಾಯನ ಮಗಳು ನಿನಗೆ ಪತ್ನಿಯಾಗುತ್ತಾಳೆ ಆದರೆ ನಿನ್ನ ಮಗನು ಹುಟ್ಟಿದ ಏಳು ವರ್ಷದ ನಂತರ ಅವಳು ಕಾಣಿಸಿಕೊಳ್ಳುತ್ತಾಳೆ ಎಂದನು.

ಇತ್ತ ಚಂದ್ರಾವತಿಯು ನೀರಾಟವಾಡಲು ಬಯಸಿ ಸಖಿಯರೊಡನೆ ಹೊಳೆಗೆ ಹೋಗುತ್ತಾಳೆ. ಅಲ್ಲಿ ಜಲಕ್ರೀಡೆಯಾಡುತ್ತಿರುತ್ತಾಳೆ. ಅದನ್ನು ನೋಡಿದಾಗ:

ಮುಗು(ಳಂಬು) ಮುನಿಪನ ಹೃದಯದಿ ನೆಟ್ಟವು
ಸಡಿಲಿದವು ಬಿಂದು ಶೀಘ್ರ
ಕಮಲದ ಹೂವಿನೊಳಿಟ್ಟು ಬಂಧಿಸಿ ಬಾಳೆಸುಳಿಯಲ್ಲಿ
ತಂದಡಕಿದನು

ಹರಿಯಕುಮಾರನ ಲಿಖಿತವ ಮೀರದಂತೆ ಚಂದ್ರಾವತಿ ಅದನ್ನು ಆಘ್ರಾಣಿಸಿ ಗರ್ಭ ಧರಿಸುತ್ತಾಳೆ. ಗಂಡು ನೊಣವೂ ಇತ್ತ ಸುಳಿಯದಂತೆ ಇರುವಾಗ ಮಂದಿರದೊಳಕ್ಕೆ ಬಂದಿರುವವರಾರೆಂದು ತಂದೆ ತಾಯಿಯರಿಗೆ ಆತಂಕವಾಗುತ್ತದೆ. ಪೃಥುವೀಶರು ತಲೆತಗ್ಗಿಸುವಂತಾಯಿತು ಎಂದು ಪರಿತಪಿಸುತ್ತಾನೆ. ಆತ್ಮಹತ್ಯೆಗೆ ಪ್ರಯತ್ತಿಸುತ್ತಾನೆ. ವರನಾರೆಂದು ತಿಳಿದು ಮದುವೆ ಮಾಡಲು ಬಯಸಿದರೆ ಮತ್ತೊಬ್ಬ ಪುರುಷನ ಕೂಡಿಬಾಳುವಳಲ್ಲ ಎನ್ನುತ್ತಾಳೆ ಚಂದ್ರಾವತಿ. ಅವಳನ್ನು ಅನಿವಾರ್ಯವಾಗಿ ಕಾಡುಪಾಲು ಮಾಡುತ್ತಾರೆ. ಕಾಡಿನಲ್ಲಿ ಒಂಟಿಯಾಗಿದ್ದ ಅವಳನ್ನು ಮುನಿಯೊಬ್ಬನು ಆಶ್ರಮಕ್ಕೆ ಕರೆದೊಯ್ಯುತ್ತಾನೆ. ದಿನ ತುಂಬಿ ಮೂಗಿನಿಂದ ಗಂಡುಮಗು ಹುಟ್ಟುತ್ತಾನೆ. ತಂದೆಯಿಲ್ಲದ ಮಗು ಲೋಕಕ್ಕೆ ಪರಿಹಾಸ್ಯವಾಗುತ್ತಾನೆ ಎಂದು ಎತ್ತಿಕೊಂಡು ಹೋಗಿ ನದಿಯಲ್ಲಿ ತೇಲಿಬಿಡುತ್ತಾಳೆ ಕಂದನನ್ನು 'ರಕ್ಷಿಸು ತಾಯೆ' ಎಂದು ನದಿಯನ್ನು ಪ್ರಾರ್ಥಿಸುತ್ತಾಳೆ. ನಂತರ ಹುಚ್ಚಿಯಂತೆ ಅರಣ್ಯದಲ್ಲಿ ಅಲೆಯುತ್ತಿರುತ್ತಾಳೆ. ಬೆಳಗಾದೊಡನೆ ಮುನಿಗಳು ಚಂದ್ರಾವತಿಯನ್ನು, ಮಗುವನ್ನು ಆಶ್ರಮದಲ್ಲಿ ಕಾಣದೆ ಕಾಡುಪ್ರಾಣಿಗಳು ತಿಂದುಬಿಟ್ಟಿರಬಹುದೆಂದು ನೊಂದುಕೊಳ್ಳುತ್ತಾರೆ.

ಹಾಗೆ ತೇಲಿಬಿಟ್ಟ ಮಗು ಉದ್ಧಾಳಿಕನಿಗೆ ಸಿಗುತ್ತದೆ. ಸಣ್ಣ ಬೆರಳು ತನ್ನ ಬಾಯೊಳಗಿರಿಸಿದೆ ಕಣ್ಣ ಮುಚ್ಚುತ ತೆರೆಯುತಲಿ ಪೊನ್ನ ಪುತ್ಥಳಿಯಂತೆ ಥಳಥಳಿಸುವ ಪುಟ್ಟ ಚಿಣ್ಣನ ತೊಟ್ಟಿಲ ಕಾಣುತ್ತಾನೆ. ಉದ್ಧಾರವಾದರಿಂದಿಗೆ ಎನ್ನ ಪಿತೃಗಳು ಪದ್ಮನಾಭನ ಕೃಪೆಯಿಂದ ಎಂದುಕೊಳ್ಳುತ್ತಾನೆ. ಮಗುವನ್ನು ಎತ್ತಿಕೊಳ್ಳುತ್ತಾನೆ. ದಶರಾತ್ರಿಯ ನಂತರ ಆಕಾಶದಿಂದ ಕೇಳಿಬಂದ ಅಶರೀರವಾಣಿಯಿಂದ ಮಗುವಿಗೆ ನಾಶೀಕೇತನೆಂದು ಹೆಸರಿಡುತ್ತಾನೆ. ತಾನೇ ತಾಯಿಯೂ ಆಗಿ ಬೆಳೆಸುತ್ತಾನೆ. ಅಕ್ಷರಾಭ್ಯಾಸ ಮಾಡಿಸುತ್ತಾನೆ.

ಮಗುವಿಗೆ ಏಳು ವರ್ಷಗಳಾದಾಗ ಚಂದ್ರಾವತಿಯು ಉದ್ಧಾಳಿಕನ ಆಶ್ರಮದ ಹತ್ತಿರ ಬರುತ್ತಾಳೆ. ಮಗನನ್ನು ನೋಡಿ ಅವಳಿಗೆ ಮಾತೃವಾತ್ಸಲ್ಯ ಉಕ್ಕಿಹರಿಯುತ್ತದೆ. ಉದ್ಧಾಳಿಕನು ಸ್ನಾನಕ್ಕಾಗಿ ನದಿಗೆ ಹೋಗಿರುತ್ತಾನೆ. ಅವನ ಸಂಧ್ಯಾವಂದನೆಗೆಂದು ಮನೆಯನ್ನು ಓರಣಗೊಳಿಸುತ್ತಿದ್ದಾಗ ಮಗನು ತಂದೆ ಬಂದರೆ ಬಯ್ಯುವನೆಂದು ಹೊರಟು ಹೋಗಲು ಹೇಳುತ್ತಾನೆ. ಅವಳು ಹೋಗಿ ಮರದ ಹಿಂದೆ ನಿಲ್ಲುತ್ತಾಳೆ. ನದಿಯಿಂದ ಬಂದ ಮುನಿ ಮನೆಯ ಓರಣವನ್ನು ನೋಡಿ ಮಗನಿಂದ ವಿಷಯ ತಿಳಿಯುತ್ತಾನೆ. ಏಳು ವರ್ಷಗಳ ನಂತರ ಪತ್ನಿಯೇ ಬಂದಿರಬೇಕೆಂದು ಮಗನೊಡನೆ ಅವಳನ್ನು ಹುಡುಕುತ್ತ ಹೋಗುತ್ತಾನೆ. ಮಲಿನ ವಸ್ತ್ರ ಧರಿಸಿದ ಚಂದ್ರಾವತಿಯನ್ನು ನೋಡಿ ಇವಳೇ ತನ್ನ ಹೆಂಡತಿಯೆಂದು ನಡೆದ ವಿಷಯವನ್ನು ತಿಳಿಸುತ್ತಾನೆ. ಅವಳು ಒಪ್ಪುವುದಿಲ್ಲ. ಮುನಿಗಳನ್ನು ಕರೆದು ತಂದು ಅವರ ಸಾಕ್ಷಿಯಾಗಿ ನಡೆದ ವಿಷಯವನ್ನು ಮತ್ತೆ ಹೇಳಿದಾಗ ಗರ್ಭಿಣಿಯಾಗಿದ್ದಾಗ ಚಂದ್ರಾವತಿಗೆ ಆಶ್ರಯ ನೀಡಿದ್ದ ಮುನಿ ನಡೆದಿದ್ದೆಲ್ಲವನ್ನೂ ಅವಳಿಗೆ ಹೇಳುತ್ತಾನೆ.

ಮುನಿಗಳೆಲ್ಲರು ಚಂದ್ರಾವತಿಯ ತಂದೆ ರಘುರಾಯನನ್ನು ಭೇಟಿಮಾಡುತ್ತಾರೆ. ಉದ್ಧಾಳಿಕನಿಗೆ ನಿನ್ನ ಮಗಳನ್ನು ಕೊಡಬೇಕೆಂದು ಕೇಳಿದಾಗ, ರಾಜ ನಡೆದದ್ದನ್ನು ಹೇಳಿ ಮಗಳನ್ನು ವಧಿಸಿದ್ದಕ್ಕಾಗಿ ಗೋಳಿಡುತ್ತಾನೆ. ಕ್ಷತ್ರಿಯನಾದವನು ಸ್ತ್ರೀ ಹತ್ಯೆ ಮಾಡುವುದೇ ಎಂದು ಪ್ರಶ್ನಿಸುತ್ತಾರೆ. ಮಗಳು ಬದುಕಿದ್ದರೆ ಮುನಿಗೆ ಧಾರೆ ಎರೆದುಕೊಡುವೆಯಾ ಎಂದಾಗ ರಾಜ ಆಶ್ಚರ್ಯಚಕಿತನಾಗಿ ದೂತರನ್ನು ಕರೆದು ಕೇಳುತ್ತಾನೆ. ಅಂಜುತ್ತಲೇ ದೂತನು, ಗರ್ಭಿಣಿಯೆಂದು ತಾವು ಕೊಲ್ಲಲಿಲ್ಲವೆಂದು ತಿಳಿಸುತ್ತಾರೆ. ಮುಂದೆ ಚಂದ್ರಾವತಿಯ ಬದುಕಿನಲ್ಲಿ ನಡೆದ ವಿಷಯವನ್ನು ಋಷಿಗಳು ರಾಜನಿಗೆ ತಿಳಿಸುತ್ತಾರೆ. ಸಂತೋಷಗೊಂಡ ರಾಜ ರಾಣಿಯರು ವೈಭವದಿಂದ ಚಂದ್ರಾವತಿ ಮತ್ತು ಉದ್ಧಾಳಿಕನ ಮದುವೆ ಮಾಡುತ್ತಾರೆ. ಫಲಸ್ತುತಿಯೊಂದಿಗೆ ಹಾಡು ಮುಕ್ತಾಯವಾಗುತ್ತದೆ.

ಪುತ್ರಸಂತಾನವಿಲ್ಲದೆ ಸದ್ಗತಿಯಿಲ್ಲ ಹಾಗು ವಿಧಿಲಿಖಿತವನ್ನು ಯಾರೂ ಮೀರಲಾರರು ಎಂಬ ದೃಢವಾದ ನಂಬಿಕೆಯನ್ನು ಈ ಕಾವ್ಯವು ಸಾರುತ್ತದೆ. ಪದ್ಯದಲ್ಲಿ ಸಾಂಗತ್ಯದ ಸೊಗಸಿದೆ. ಸ್ತ್ರೀ ಬದುಕಿನ ಹೋರಾಟಗಳ ಚಿತ್ರಣವಿದೆ. ಮದುವೆಯ ಸಂಪ್ರದಾಯದ ವೈಭವವು ಸುಂದರವಾಗಿ ಮೂಡಿಬಂದಿದೆ.

**ಶಂಕರಗಂಡನ ಹಾಡು**

ಇದು ಹೆಳವನಕಟ್ಟೆ ಗಿರಿಯಮ್ಮನವರ ರಚನೆ. ಇದು ಸಾಂಗತ್ಯದಲ್ಲಿದೆ. ಕಥೆಯ ಮೂಲ ಎಲ್ಲಿಯದೆಂದು ತಿಳಿದುಬರುವುದಿಲ್ಲ. ಶಿವನಿಂದ ಮನ್ಮಥನ ಗರ್ವಭಂಗವಾಗುವುದೇ ಕೀರ್ತನೆಯ ವಸ್ತು.

ಸಂಪ್ರದಾಯದಂತೆ ಗಣಪತಿ, ಸರಸ್ವತಿಯರ ಪ್ರಾರ್ಥನೆಯೊಂದಿಗೆ ಕೀರ್ತನೆ ಆರಂಭವಾಗುತ್ತದೆ. ದ್ವಾರಾವತಿ ಎಂಬುದೊಂದು ಸೀಮೆ. ಅಲ್ಲಿ ವಿಲಾಸವೆಂಬುದೊಂದು ಪಟ್ಟಣ. ಅಲ್ಲಿ ನಾರಾಯಣನ ಮಗ ಮನ್ಮಥನು ವೈಭವದಿಂದ ಇರುತ್ತಾನೆ. ಪ್ರೀತಿಯಿಂದ ಬೆಳೆಸಿದ ತಂಗಿಗೆ ಪುಷ್ಪಬಾಣನು ತಕ್ಕ ವರನೆಂದು ಚಿಂತಿಸಿ ಶಿವನು ಬುದ್ಧಿವಂತರನ್ನು ಮನ್ಮಥನ ಬಳಿ ಕಳಿಸುತ್ತಾನೆ. 'ನಿಮ್ಮ ತಂಗಿಯ

ಎನಗೀಹುದೆಂದ' ಶಿವನು 'ಒಬ್ಬಳೇ ತಂಗಿ ನಮ್ಮ ರತಿ ಹಬ್ಬ ಹುಣ್ಣಿಮೆಗೆ ಕಳಿಸದೆ ನಮ್ಮ ಮನೆಗೆ ನಿರ್ಬಂಧವ ಮಾಡುವಿರಿ' ಎಂದ. ಮನ್ಮಥನು 'ಅವಳಿಗೆ ಸ್ವತಂತ್ರವಿಲ್ಲೇನು ನೆನದಾಗ ಕಳುಹುವೆ' ಎಂದ. ಶುಭಲಗ್ನವನ್ನು ನೋಡಿ ಬಂಧುಜನರು ನೆರೆದು ಮದನ-ರತಿದೇವಿಗೆ ವಿವಾಹ ಮಾಡಿದರು. ಶಿವನು ತಂಗಿಗೆ ಬಹಳ ಬಳುವಳಿ ನೀಡಿ ವಿಲಾಸಪಟ್ಟಣಕ್ಕೆ ಕಳುಹಿಸಿಕೊಡುತ್ತಾನೆ. ಶಿವನು ತಂಗಿಯನ್ನು ನೋಡಹೋಗಿ ತನ್ನೊಡನೆ ಕಳುಹಿಸಿಕೊಡು ಎಂದು ಮನ್ಮಥನನ್ನು ಕೇಳುತ್ತಾನೆ. ಮನ್ಮಥನು ತಲೆಯೆತ್ತಿ ನೋಡಲಿಲ್ಲ. ಗೆಲುವಿಂದ ಮಾತನಾಡಲಿಲ್ಲ.

ಹೂವಿನ ಮಂಚ ಪಂಚಭಕ್ಷ ಪರಮಾನ್ನವುದಾವಾಗ
ನಮ್ಮನೆಯಲಿ
ಉಣ್ಣಲಾರಳು ಜೋಳದನ್ನವ ನಮ್ಮಾಕೆ
ನಾವೀಗ ಕಳುಹಿಸೋವರಲ್ಲ

ಎಂದು ಖಡಾಖಂಡಿತವಾಗಿ ನುಡಿಯುತ್ತಾನೆ. ಶಿವ ಎಷ್ಟು ಬೇಡಿದರೂ ಮನ್ಮಥ ಧಿಕ್ಕರಿಸುತ್ತಾನೆ. ಕೋಪ ಬಂದ ಶಿವನು 'ನಿಮ್ಮ ಐಶ್ವರ್ಯವ ಹಾಳುಮಾಡುವೆನು ಒಂದು ನಿಮಿಷದಲಿ' ಎಂದು ಅಂತರ್ಧಾನನಾದನು. ಮನ್ಮಥನ ಐಶ್ವರ್ಯವೆಲ್ಲಾ ಮಣ್ಣುಗೂಡುತ್ತದೆ. ತನ್ನ ತಪ್ಪಿನ ಅರಿವಾಗಿ ಶಿವನ ಮೊರೆ ಹೋಗುತ್ತಾನೆ. ಮದನನನ್ನು ಶಿವ ತನ್ನ ಮನೆಯ ಆಳಾಗಿರಿಸಿಕೊಂಡು ದನ ಕಾಯುವ ಕೆಲಸಕ್ಕೆ ನೂಕಿ ಮೂರು ಬೊಗಸೆ ಅಂಬಲಿಯನ್ನು ಹುಯ್ಯುತ್ತಾನೆ. ರತಿದೇವಿ ಕಣ್ಣಲ್ಲಿ ಉದಕವ ತುಂಬಿ, ಇನ್ನಾದರೂ ಬಿಡಿಸು ಎಂದು ಅಣ್ಣನನ್ನು ಬೇಡುತ್ತಾಳೆ. ಮನ್ನಿಸಿದ ಶಿವ ಸಕಲ ಐಶ್ವರ್ಯವನ್ನು ಮತ್ತೆ ಕರುಣಿಸುತ್ತಾನೆ.

ಎಷ್ಟೇ ಉಳ್ಳವನಾದರೂ ಅಹಂಕಾರ ಒಳ್ಳೆಯದಲ್ಲ, ಐಶ್ವರ್ಯವು ನಶ್ವರವಾದದ್ದು, ದೈವಕೃಪೆಯೇ ಶಾಶ್ವತವಾದದ್ದು ಎನ್ನುವ ನೀತಿಯನ್ನು ಗಿರಿಯಮ್ಮ ಕಥೆಯ ಮೂಲಕ ಆಕರ್ಷಕವಾಗಿ ಹೇಳಿದ್ದಾಳೆ. ಇದು ಅರವತ್ತೆರಡು ನುಡಿಗಳ ದೀರ್ಘ ಕೀರ್ತನೆ.

**ಕೃಷ್ಣಕೊರವಂಜಿ**

ಇದು ಹೆಳವನಕಟ್ಟೆ ಗಿರಿಯಮ್ಮನವರ ರಚನೆ. ಇದು ದೊರೆತಿರುವ ಅಪೂರ್ಣ ಕೃತಿಯಾಗಿದೆ. ಕೃತಿಯ ಪ್ರಾರಂಭಕ್ಕೆ ವಿಷ್ಣು, ಗಣಪತಿ, ಭಾರತಿ, ಶಿವ ಸ್ತುತಿಯಿದೆ. ಬ್ರಹ್ಮಕೊರವಂಜಿಯಂತೆ ಕೃಷ್ಣಕೊರವಂಜಿಯೂ ಬೀದಿಯಲ್ಲಿ 'ಏಯವ್ವಾ ಏಯಕ್ಕಾ ಏಯಮ್ಮಾ ಬಾರೆಂದು' ಕಣಿ ಹೇಳಲು ಕರೆಯುತ್ತಾಳೆ. 'ಅಂಗವಂಗವು ಕಳಿಂಗ ಕಾಶ್ಮೀರ ದೇಶ ಹಿಂಗದೆ ತಿರುಗಿ ಬಂದೆನೆ' ಎಂದು ಪರಿಚಯಿಸಿಕೊಳ್ಳುತ್ತಾಳೆ- ದೊರೆತಿರುವ ಹಾಡು ಇಷ್ಟು. ಆದರೆ ಟಿ.ಕೆ.ಇಂದೂಬಾಯಿಯವರ 'ಹೆಳವನಕಟ್ಟೆ ಗಿರಿಯಮ್ಮನ ಹಾಡುಗಳು' ಎಂಬ ಪುಸ್ತಕದಲ್ಲಿ (ಪುಟ-೩೮-೩೯) 'ಈ ಹಾಡನ್ನು ಇಡಿಯಾಗಿ ನೋಡಿರುವ ಡಾ.ಸರೋಜಿನಿ ಮಹಿಷಿಯವರು ತಮ್ಮ ಮಹಾಪ್ರಬಂಧದಲ್ಲಿ ಈ ಪದ್ಯಭಾಗಗಳ ಜೊತೆಗೆ ಕೊಟ್ಟಿರುವ ವಿವರಣೆ (ಕರ್ನಾಟಕದ ಕವಯಿತ್ರಿಯರು - ಪುಟ

೨೮೪,೨೮೫,೨೮೮,೨೮೯) ಹಾಗು ಕಾವ್ಯ ಪ್ರೇಮಿ (ಮು-೮೩, ಪು-೫೧) ಯವರು ಕೊಟ್ಟಿರುವ ಕಥಾಭಾಗ-ಇವುಗಳ ಆಧಾರಗಳಿಂದ ಈ ಹಾಡಿನ ಕಥಾವಸ್ತುವನ್ನು ಹೀಗೆ ಸಂಗ್ರಹಿಸಬಹುದು:

ರುಕ್ಮಿಣಿಯ ಅಣ್ಣನಾದ ರುಕ್ಮಿ ತನ್ನ ತಂಗಿಯನ್ನು ದಮಘೋಷನ ಮಗ ಶಿಶುಪಾಲನಿಗೆ ಮದುವೆ ಮಾಡಿಕೊಡಲು ನಿಶ್ಚಯಿಸಿರುತ್ತಾನೆ. ಆದರೆ ಕೃಷ್ಣ-ರುಕ್ಮಿಣಿಯರು ಪರಸ್ಪರ ಮೆಚ್ಚಿಕೊಂಡಿರುತ್ತಾರೆ. ವಿವಾಹದ ದಿನ ಹತ್ತಿರ ಬರುತ್ತಿದ್ದಂತೆ ರುಕ್ಮಿಣಿಯು ಕಾತುರದಿಂದ ಏನಾಗುವುದೋ ಎಂದು ತಲ್ಲಣಿಸುತ್ತಿದ್ದಾಗ ಕೃಷ್ಣನೇ ಕೊರವಂಜಿಯ ರೂಪದಿಂದ ಬಂದು ರುಕ್ಮಿಣಿಗೆ ಕಣಿ ಹೇಳುವ ನೆಪದಲ್ಲಿ ಅವಳನ್ನು ವಿವಾಹವಾಗುವುದಾಗಿ ಹೇಳಿ ಧೈರ್ಯ ಕೊಡುತ್ತಾನೆ'. ಕೃಷ್ಣ ರುಕ್ಮಿಣಿಯ ಪರಿಣಯ ಭಾಗವತದಲ್ಲಿ ಬರುವಂತಾದರೂ ಕೊರವಂಜಿಯ ಕಲ್ಪನೆ ಹೊಸತಾದದ್ದು.

ಬ್ರಹ್ಮಕೊರವಂಜಿಯು ಮನೆ ಮನೆ ಬಾಗಿಲುಗಳ ಮುಂದೆ ನಿಂತು ವನದ ಕೋಗಿಲೆಯಂತೆ ಯವ್ವಾ ಯವ್ವಾ ಎನುತ ವಿನಯದಿ ಸ್ವರಗೈದ ಭಾಷೆಯು ಅಷ್ಟು ನಯವಾಗಿ ಕೃಷ್ಣಕೊರವಂಜಿಯಲ್ಲಿ ಕಾಣದೆ ಇರುವುದರಿಂದ ಮತ್ತು ಅಪೂರ್ಣ ಕೃತಿಯಾಗಿರುವುದರಿಂದ ಕೃಷ್ಣಕೊರವಂಜಿಯು ಬ್ರಹ್ಮಕೊರವಂಜಿಗಿಂತ ಮೊದಲೇ ರಚಿತವಾಗಿರಬೇಕು ಎಂಬ ಅಭಿಪ್ರಾಯಗಳಿವೆ ಎನ್ನುತ್ತಾರೆ ಇಂದಿರಾಬಾಯಿಯವರು. ಕೃಷ್ಣನೇ ಕೊರವಂಜಿಯಾಗಿರುವುದು ಕಾವ್ಯದ ವೈಶಿಷ್ಟ್ಯ.

**ರತಿ ಕಲ್ಯಾಣ**

ಇದು ಹರಪನಹಳ್ಳಿ ಭೀಮವ್ವನವರ ರಚನೆ. ಕಥೆಯು ಮನ್ಮಥನ ವಿವಾಹದ ವಸ್ತುವನ್ನೊಳಗೊಂಡಿದೆ. ಅರವತ್ತೊಂದು ಧ್ವನಿಗಳಲ್ಲಿದೆ. 'ಮಾರನ ಮದುವೆ ವಿಸ್ತಾರದಿಂ ಪೇಳುವೆನು' ಎನ್ನುತ್ತಾಳೆ ಭೀಮವ್ವ. ಮನ್ಮಥ ಶಂಭಾಸುರನನ್ನು ವಧಿಸುತ್ತಾನೆ. ನಾರದನು ರತಿಯನ್ನು ಕುರಿತು ಗಂಡ ಸಣ್ಣವನಾದರ್ಥೆಂಡಿರಿಗಿದು ಭಾಳ ಮಂಡಿಕುಗ್ಗಲ್ಲೆ ಭೂಮಂಡಲದೊಳಗೆ, ವರ ಹೀನ ಪತಿಯ ಕೂಡುವುದು ಉಚಿತವಲ್ಲ, ಉರಿಯ ಬೀಳುವುದೆ ಲೇಸು ಉತ್ತಮ ಜನರಿಗೆ ಎನಲು, ರತಿಯು ಅಗ್ನಿಪ್ರವೇಶ ಮಾಡಿ ಕಮಲಾವತಿಯ ರಾಜನಿಗೆ ಮಗಳಾಗಿ ಹುಟ್ಟು ಪತಿಯ ಧ್ಯಾನದಲ್ಲೇ ಇರುತ್ತಾಳೆ.

ರತಿಯ ಅಗಲಿಕೆಯಿಂದ ಮನ್ಮಥ ವೈರಾಗ್ಯ ತಾಳುತ್ತಾನೆ. ರುಕ್ಮಿಣಿಯು 'ಮನ್ಮಥನೇ ನಿನಗಿಷ್ಟು ಸಂತಾಪವ್ಯಾಕೆಂದೆನುತ, ರತಿಗೆ ಮಿಗಿಲಾದ ಸತಿಯಳ ತಾವೆನು' ಎನುತ್ತಾಳೆ. ಏಳು ದಿನದೊಳಗೆ ಕನ್ಯ ತರುವೆನೆಂದು ಕೃಷ್ಣ ರುಕ್ಮಿಣಿಯರು ಅಷ್ಟ ದಿಕ್ಕುಗಳನ್ನು ಅರಸುತ್ತಾರೆ. ಸಿಗದಿದ್ದಕ್ಕೆ ಬೇಸರಗೊಳ್ಳುತ್ತಾರೆ. ನಾರದನು ಬಂದು ಕಮಲಾವತಿಯ ರಾಜನ ಮಗಳನ್ನು ಸೂಚಿಸಿ ದ್ರೌಪದಿಯನ್ನು ದೂತೆಯನ್ನಾಗಿ ಕಳುಹಿಸುತ್ತಾರೆ. ಕೇಳಿದ ರಾಜನು

ವತ್ಸಕಾಯುವ ಕೃಷ್ಣನ ಹೆಚ್ಚು ನಮಗೇನು
ಹುಚ್ಚುಹಿಡಿದಿಲ್ಲೀಗೆನ ಪುತ್ರಿ ಕೊಡುವುದಕೆ

ಕರುವ ಕಾಯುವ ಗೊಲ್ಲನ ಸರಿಬೀಗತನವು
ದೊರೆಗಳಿಗೆದುರೆನೆ ತರವಲ್ಲಿದು ನಮಗೆ ಎಂದು ಮೂದಲಿಸಿ ಕಳುಹಿಸುತ್ತಾನೆ.

ಆದರೆ ರತಿ 'ರುಕ್ಮಿಣಿಯ ಸೊಸೆ ಆಗದೀಕ್ಷಣ ಎನ್ನು ಬಿಟ್ಟುಬಿಡುವೆ ಎನ್ನಯ ಪ್ರಾಣ' ಎಂದು ಹಠ ಹಿಡಿಯಲು ದಿಕ್ಕು ಕಾಣದೆ ದ್ರೌಪದಿಗೆ ಮತ್ತೆ ಹೇಳಿಕಳುಹಿಸಿ ನನ್ನ ಅಕ್ಕನ ಮಗ ಕೌಂಡ್ರಿಕನನ್ನು ಕೃಷ್ಣನು ನಿವಾರಿಸಬೇಕೆಂದು ಕೇಳಿಕೊಳ್ಳುತ್ತಾನೆ. ಕ್ರೌಂಡಿಕನು ರತಿಯ ಮದುವೆಯ ವಿಷಯ ತಿಳಿದು ಅವಳನ್ನು ಅಪಹರಿಸಿಕೊಂಡು ಹೋಗುತ್ತಾನೆ. ರತಿಯ ತಂದೆ ಕೌಂಡ್ರಿಕನೊಡನೆ ಸೋತಾಗ ರುಕ್ಮಿಣಿ ದ್ರೌಪದಿಯನ್ನೇ ಯುದ್ಧಕ್ಕೆ ಕಳುಹಿಸುತ್ತಾಳೆ. ದ್ರೌಪದಿ ಕೌಂಡ್ರಿಕನನ್ನು ಸಂಹರಿಸಿ ರತಿಯನ್ನು ಬಗಲಲ್ಲಿ ಎತ್ತಿಕೊಂಡು ಬಂದು ರಾಜನ ಮುಂದೆ ಇಳಿಸುತ್ತಾಳೆ. ಇದು ಸಂಪೂರ್ಣವಾಗಿ ಭೀಮವ್ವನದೇ ಕಲ್ಪನೆ.

**ಸಮುದ್ರಮಥನ**

ಇದು ನಿಡಗುರಕಿ ಜೀವೂಬಾಯಿಯವರ ರಚನೆ. ಗಣಪತಿಯ ಪ್ರಾರ್ಥನೆಯೊಂದಿಗೆ ಕಥೆ ಆರಂಭವಾಗುತ್ತದೆ. ಗುರುಹಿರಿಯರು ವರಮಹಾಲಕ್ಷ್ಮಿಯನ್ನು ವಂದಿಸುತ್ತಾರೆ. ಗಿರಿಯನು ಬೇಗದಲಿ ಸಿಂಧುವಿನೊಳಗಿಟ್ಟು ಚಂದದಿ ಮಥಿಸಿದ ಸುಂದರ ಚರಿತೆಯ ಪೇಳುವೆನು ಎನ್ನುತ್ತಾರೆ. ದೇವತೆಗಳು ರಾಕ್ಷಸರ ಉಪಟಳ ತಾಳಲಾರದೆ ಶ್ರೀಹರಿಯನ್ನು ಮೊರೆಯಿಡುತ್ತಾರೆ, ಸ್ತುತಿಸುತ್ತಾರೆ. ಶ್ರೀಕೃಷ್ಣನ ಅನಂತ ಬಿರುದಾವಳಿಗಳನ್ನು ಇಲ್ಲಿ ಹೇಳಿರುವುದು ಜೀವೂಬಾಯಿಯವರ ಕೃಷ್ಣಭಕ್ತಿಗೆ ಸಾಕ್ಷಿಯಾಗಿದೆ. ಅವರ ಮೊರೆ ಕೇಳಿ ಹರಿಯು

ಮಂದಿಗಳೆಲ್ಲರು ಇಂದು ಕೇಳಿರಿ
ಚಂದದ ಅಮೃತದ ಬಲದಿಂದ
ಪೊಂದಿದ ಕಷ್ಟವು ಪರಿಹಾರವಾಗಿ ಸುಖ
ದಿಂದ ಬಾಳುವಿರೆಂದೆನಲು
ದೇವತೆಗಳು ಹರುಷವ ಹೊಂದಿ
ಇಂದಿರರಮಣನೆ ಚಂದದಿ ಅಮೃತವು
ಮುಂದೆ ದೊರಕುವುದು ಹೇಗೆನಲು
ಮಂದರ ಪರ್ವತ ತಂದು ಸಾಗರದಲಿ
ಚಂದದಿ ಮಥಿಸಲು ದೊರಕುವುದು–ಎನ್ನುತ್ತಾನೆ. ಇಂದಿರೇಶನೆ ಮಂದರವನ್ನು

ನಮ್ಮಿಂದ ಎತ್ತಲು ಸಾಧ್ಯವಿಲ್ಲ ಎಂದಾಗ ಗೋವಿಂದನು –ಮಂದಮತಿಗಳು ದಾನವರು ಅವರಿಂದ ನಿಮ್ಮಯ ಕಾರ್ಯ ನಡೆಯುತ್ತದೆ. ಅವರಲ್ಲಿ ಸ್ನೇಹವನ್ನು ಬೆಳೆಸಿಕೊಳ್ಳಿ –ಎನ್ನುತ್ತಾನೆ. ದೇವತೆಗಳು ದೈತ್ಯರ ಬಳಿ ಬಂದು ಕೇಳಿದಾಗ ದೈತ್ಯರು ಒಪ್ಪುತ್ತಾರೆ.

ದೇವ ದೈತ್ಯರು ಒಂದಾಗುತ
ಆ ಪರ್ವತವ ಮೆಲ್ಲನೆ ತಂದು
ಕ್ಷೀರಸಾಗರದಲಿಡುತ ಮಥಿಸಲು
ನಾಗಸರ್ಪನನು ಸುತ್ತುತಲಿ

ಪರ್ವತವು ಮುಳುಗಲು ಪ್ರಾರಂಭಿಸುತ್ತದೆ. ದೇವ ದಾನವರು ನಾರಾಯಣನನ್ನು ಸ್ತುತಿಸುತ್ತಾರೆ.

ಹರಿಯು ಕೂರ್ಮಾವತಾರ ತಾಳಿ ಗಿರಿಯನು ಬೆನ್ನಲ್ಲಿ ಧರಿಸುತ್ತಾನೆ. ದೇವ ದಾನವರು ಸಮುದ್ರಮಥನ ಮಾಡುತ್ತಾರೆ. ಅಮೃತ ಹುಟ್ಟುತ್ತದೆ. ವಿಷ್ಣುವು ಮೋಹಿನಿಯ ರೂಪ ಧರಿಸಿ ದಾನವರನ್ನು ಕುರಿತು 'ನಯನಂಗಳ ಮುಚ್ಚಿ ನೀವೆಲ್ಲರೂ ವಿನಯದಿಂದ ಕುಳಿತಿರಿ' ಎಂದು ಹೇಳುತ್ತಾನೆ. ದೇವತೆಗಳಿಗೆಲ್ಲ ಅಮೃತ ಬಡಿಸುತ್ತಾನೆ. ದೇವತೆಗಳ ಬಲ ಹೆಚ್ಚಾಗಲು ದೈತ್ಯರೆಲ್ಲಾ ಓಡುತ್ತಾರೆ. ಸಮುದ್ರಮಥನ ಕಾಲದಲ್ಲಿ ಹುಟ್ಟಿದ ಲಕ್ಷ್ಮಿಯು ಮಾಲೆ ಹಾಕುತ್ತಾಳೆ. ಮಂಗಳಗೀತೆಯೊಂದಿಗೆ ಪದ್ಯವು ಮುಕ್ತಯಾವಾಗುತ್ತದೆ. ಮೋಹಿನಿಯ ವರ್ಣನೆ, ದಶಾವತಾರದ ವರ್ಣನೆ ಅದ್ಭುತವಾಗಿ ಮೂಡಿಬಂದಿದೆ. ಪದ್ಯವು ಆರ್ಯ, ಮಂಗಳ, ಕಂದ, ಭಾಮಿನಿ ಷಟ್ಪದಿ, ಮತ್ತು ವಚನಗಳಾಗಿ ನಿರ್ದೇಶಿಸಲ್ಪಟ್ಟಿದೆ.

**ಪುರಂದರವಿಠಲ ದಾಸರ ಚರಿತ್ರೆ**

ಇದು ನಿಡಗುರಕಿ ಜೀವೂಬಾಯಿಯವರು ರಚಿಸಿರುವ ಅತ್ಯಂತ ದೊಡ್ಡ ಕೀರ್ತನೆ. ದ್ವಿಪದಿ, ವಚನ, ಭಾಮಿನಿ, ಷಟ್ಪದಿ, ಆರ್ಯ, ಕಂದ, ಸೀಸ ಪದ್ಯ, ವಚನ ಎಂದು ನಿರ್ದೇಶಿಸಲ್ಪಟ್ಟರೂ ಹಾಡುವ ದಾಟಿಯನ್ನು ಮಾತ್ರ ಅವಲಂಬಿಸಿದೆ. ಗದ್ಯ ಪದ್ಯ ಮಿಶ್ರವಾಗಿದೆ.

ದಾಸ ಶ್ರೇಷ್ಠರಾದ ಪುರಂದರದಾಸರ ಜೀವನಚರಿತ್ರೆಯನ್ನು ಒಳಗೊಂಡ ಕೃತಿಯಿದು. ಬೇಲೂರು ಕೇಶವದಾಸರ ಶ್ರೀಕರ್ನಾಟಕ ಭಕ್ತ ವಿಜಯವನ್ನು ಜೀವೂಬಾಯಿ ಅನುಸರಿಸಿದ್ದಾರೆ.

ಪುರಂದರದಾಸರ ಮೊದಲ ಹೆಸರು ಶ್ರೀನಿವಾಸ ನಾಯಕ. ಶ್ರೀನಿವಾಸ ನಾಯಕನು ಪುರಂದರ ದಾಸನಾದದ್ದೇ ಕೀರ್ತನೆಯ ವಸ್ತು. ವಿಷ್ಣುವು ನಾರದನ ಭಕ್ತಿಗೆ ಮೆಚ್ಚಿ

ಭಕ್ತರನುದ್ಧರಿಸುವ ಕಾರ್ಯವು ಎನ
ಗತ್ಯವಸರವಾಗಿರುವ ಕಾರ್ಯ
ತಕ್ಕ ವರವ ನೀಡುವೆ ಯಾಚಿಸು ನಿನ
ಭಕ್ತಿಗೆ ಮೆಚ್ಚಿದೆ ಕೇಳೆನಲು–ನಾರದರು ಹೀಗೆ ಕೇಳುತ್ತಾರೆ.

ಹಗಲಿರುಳೆಡೆ ಬಿಡದಲೆ ಎನ್ನೊಡನಾಡುತಲಿರು ಕಮಲನಾಭ ವಿಠಲನೆ– ಎಂದು ಬೇಡುತ್ತಾನೆ.

ಕಳೆಯಲು ಕೆಲವು ಕಾಲದಿ ನಾರದ
ನಳಿನಾಕ್ಷನ ಅಪ್ಪಣೆಯಂತೆ
ಜನಿಸಿದರಾಗಲೆ ಭುವಿಯೊಳು

ಪುರಂಧರ ಗಡದೊಳು ಹಿರಿಯನೆಂದೆನಿಸಿದ
ಪರಮ ಸಾತ್ವಿಕನ ಗೃಹದಲಿ ನಾರದ

ಹದಿನೆಂಟನೆ ವಯಸ್ಸಿನಲ್ಲಿ ಒಬ್ಬ ಸಾಧ್ವಿಮಣಿಯೊಂದಿಗೆ ಶ್ರೀನಿವಾಸ ನಾಯಕರಿಗೆ ವಿವಾಹವಾಗುತ್ತದೆ.

ಲೋಭ ಇಮ್ಮಡಿಸಿ ಶ್ರೀಹರಿಯ ಮರೆದು
ದಾರಿದ್ರ್ಯಪೀಡಿತರ ನೋಡುತಲೆ ಕಂಗಳಲಿ
ನೀಡದೆ ಭಿಕ್ಷವನು ಲೋಭದಿಂದ
ಯಾಚಕರು ಬಂದರೆ ಬಡಿವೆನೆಂದು
ಶಾಸನವ ಮಾಡಿ ತನ್ನ ಸತಿಯ ಕರೆದು
ಆ ಸಮಯಕಾದಷ್ಟು ದವಸವಳೆದು
ಕಾಸು ಬಿಡದಲೆ – ಬದುಕುತ್ತಿರುತ್ತಾನೆ.

ಹರಿಯು 'ಜ್ಞಾಪಿಸುವೆನು ಹಿಂದಿನ ಚರಿತ' ಎನ್ನುತ್ತಾ ವೃದ್ಧ ಬ್ರಾಹ್ಮಣನಾಗಿ ಬಾಲಕನ ಜೊತೆ ಬರುತ್ತಾನೆ. ಉಪನಯನ ಕಾಲದಿ ಸಹಾಯ ಮಾಡಬೇಕು ಎಂದು ಬೇಡಿಕೊಳ್ಳುತ್ತಾನೆ. ನಾಯಕನು ಸುಮ್ಮನಿರುತ್ತಾನೆ. ಹರಿ ಮತ್ತೆ ಮತ್ತೆ ಕೇಳಲು ಸೇವಕರನ್ನು ಕರೆದು ತೋಳುಗಳನ್ನು ಹಿಡಿದು ಎಳೆಯರಿ ಎಂದು ಆಜ್ಞಾಪಿಸುತ್ತಾನೆ. ಕೊಡುವುದು ಯಾರ ಗಂಟು ? ಯೋಚನೆ ಮಾಡದೆ ನಡೆಯಿರಿ ಮುಂದಕೆ ಎಂದು ಗರ್ಜಿಸುತ್ತಾನೆ. ಆಗ ಒಂದು ಉಪಾಯ ಮಾಡುವ ಹರಿಯು ಶ್ರೀನಿವಾಸ ನಾಯಕನ ಪತ್ನಿ ಸರಸ್ವತಿಯ ಮಂದಿರಕೆ ಸರಸರನೆ ನಡೆದು ಬಂದು ಭಿಕ್ಷೆ ಬೇಡುತ್ತಾನೆ. ಆದುದ್ದಾಗಲೆಂದು ಸತಿ ಮೂಗುತಿಯನ್ನು ಸೃಷ್ಟಿಕರ್ತನಿಗೆ ನೀಡುತ್ತಾಳೆ. ಅದನ್ನು ತೆಗೆದುಕೊಂಡು ಹೋಗಿ ನಾಯಕನ ಅಂಗಡಿಗೆ ಕೊಡಲು 'ಆಭರಣ ನಮ್ಮದಾಗಿಹುದೆ' ಎಂದುಕೊಂಡು 'ಇದು ನಮ್ಮನೆಯೊಳಗಿರದಿರೆ ನೀಡದೆ ರೊಕ್ಕವ ಶಿಕ್ಷಿಪೆ' ಎಂದುಕೊಂಡು ಮನೆಗೆ ಬಂದು ಸರಸ್ವತಿಯ ಬರಿಯ ನಾಸಿಕವ ಕಾಣುತಾ 'ಎಲ್ಲೆ ಮೂಗುತಿ ಸುಳ್ಳು ಪೇಳೆ ನಿನ್ನ ಕೊಲ್ಲದಿಹನೆ? ಹಿರಿಯರಿಂದ ಬಂದ ಸರಕು ಕಳೆವರೇನೆ, ತರಿವೆ ನಿನ್ನ ಸಿರವ' ಎನ್ನುತ್ತಾನೆ. ಸರಸ್ವತಿ ಮಧುಸೂದನನ್ನು ಪ್ರಾರ್ಥಿಸುತ್ತ 'ಮೂಗುತಿ ಮುರಿದಿದೆ ಹಾಗಿಯೆ ಇರಿಸಿದೆ ಬೇಗದಿ ತಂದೀವೆ' ಎನ್ನುತ್ತಾಳೆ. ತುಳಸಿಯ ಪ್ರಾರ್ಥಿಸುತ್ತಾಳೆ. ಏನಾಗಲಿ ಕುಡಿವೆನು ವಿಷವನು ಎನ್ನುತ್ತಾ ವಿಷವ ಕುಡಿಯಲು ಹೋಗುತ್ತಾಳೆ. ಮೂಗುತಿ ವಿಷದ ಬಟ್ಟಲಲ್ಲಿ ಬೀಳುತ್ತದೆ. ಇದನ್ನು ಪತಿಗೆ ನೀಡುತ್ತಾಳೆ. ಆಶ್ಚರ್ಯಗೊಂಡ ಶ್ರೀನಿವಾಸ ನಾಯಕನು ಒಡವೆಗೋಸುಗ ನಿನ್ನ ಪಡಿಸಿದೆ ಬಾಧೆಯ ಎಂದು ಸರಸ್ವತಿಗೆ ಹೇಳುತ್ತಾ ಬಾಧೆ ಪಡುತ್ತಾನೆ. ಹರಿಯೆಂಬುದು ತಿಳಿಯದೆ ಪರಿಪರಿಯಲ್ಲಿ ವರವೃದ್ಧನ ದೂಷಿಸಿ ಬೈಯ್ದೆ ಎಂದು ಪರಿಪರಿಗಾಗಿ ಹರಿಯ ದರ್ಶನಕಾಗಿ ಹಂಬಲಿಸುವುದು ಹೃದಯಸ್ಪರ್ಶಿಯಾಗಿದೆ. 'ಅತಿಶಯವಾದ ಐಶ್ವರ್ಯವನ್ನೆಲ್ಲಾ ದಾನ ಮಾಡು' ಎಂದ ಹರಿಯ ಮಾತಿಗೆ ಒಪ್ಪಿ ಸತಿಪತಿಯರು ಎಲ್ಲವನ್ನೂ ದಾನಮಾಡಿ ಪುರದ ಬೀದಿಯಲ್ಲಿ ಹರಿನಾಮ ಸ್ಮರಣೆ ಮಾಡುತ್ತಾ ಪತ್ನಿಪುತ್ರರ ಜೊತೆ ಶ್ರೀನಿವಾಸ ನಾಯಕನು ಭಿಕ್ಷಾಟನೆ ಮಾಡಿ ಮಾರುತನ ಆಲಯವೊಂದರಲಿ ಬದುಕುತ್ತಾನೆ. ಒಂದು ದಿನ ಹರಿ ಸ್ವಪ್ನದಲಿ ಬಂದು 'ಪಂಪಾಕ್ಷೇತ್ರದಲಿ ಚಕ್ರತೀರ್ಥ ಬಳಿಯ ವ್ಯಾಸರಾಯರಲಿ ದಾಸನಾಗು' ಎನ್ನುತ್ತಾನೆ. ಹರಿಯಾಜ್ಞೆಯಂತೆ ವ್ಯಾಸರಾಯರ ಶಿಷ್ಯನಾಗಿ ಶ್ರೀನಿವಾಸ ನಾಯಕನು ಪುರಂಧರದಾಸನಾಗಿ 'ಪುರಂಧರ ವಿಠಲ' ಎನ್ನುವ ಅಂಕಿತ ಪಡೆಯುತ್ತಾನೆ.

ಪುರಂದರದಾಸರ ಬದುಕಲಿ ನಡೆದಿದೆ ಎನಲಾದ ಅನೇಕ ಪವಾಡಗಳ ಪ್ರಸ್ತಾಪವಿದೆ. ಮಂಗಳದ ಹಾಡಿನೊಂದಿಗೆ ಕೃತಿಯು ಮುಕ್ತಾಯವಾಗುತ್ತದೆ.

**ಹರಿಮಾನಸ ಪೂಜಾ**

ನಿಡಗುರಕಿ ಜೀವೂಬಾಯಿ ತಮ್ಮ ತಾಯಿ ಮತ್ತು ಅಜ್ಜಿ ಹಾಡುತ್ತಿದ್ದ ಒಂದು ದೊಡ್ಡ ಹಾಡನ್ನು ಕೇಳಿಕೇಳಿ ರೂಢಿಯಾಗಿದ್ದ ಅದನ್ನೇ ಹೋಲುವ ಈ ಕೃತಿ ರಚಿಸಿರುವುದಾಗಿ ಹೇಳಿಕೊಂಡಿದ್ದಾರೆ. ಉದಯಕಾಲದೊಳೆದ್ದು ನದಿ ಸ್ನಾನಕ್ಕೆ ಹೋಗಿ ವಿಧಿ ಪೂರ್ವಕ ಕರ್ಮ ಮುಗಿಸಿ, ಹರಿಯನ್ನು ಭಜಿಸುತ್ತಾ, ಪೂಜೆ ಮಾಡುವ ಕ್ರಮವನ್ನಿಲ್ಲಿ ಹೇಳಲಾಗಿದೆ. 'ಉತ್ತಮ ಮಂದಿರ ಮಧ್ಯ ಮಂಟಪವನಿರಿಸಿ ಸುತ್ತ ಸಾರಿಸಿ ರಂಗವಲ್ಲಿಗಳನ್ಹಾಕಿ' ಎನ್ನುತ್ತಾ ಪೂಜೆಗೆ ಅಣಿ ಮಾಡುವ ಕ್ರಮಗಳನ್ನು ಹೇಳಲಾಗಿದೆ. ಹಣ್ಣು-ಹಂಪಲು, ವಿವಿಧ ನದಿಗಳ ನೀರಿನ ಮಂಗಳದ ಅಭಿಷೇಕ, ಹರಿಗೆ ಧರಿಸುವ ವಿವಿಧ ಒಡವೆಗಳು, ವಿವಿಧ ರೀತಿಯ ಪುಷ್ಪಮಾಲೆಗಳು, ವಾದ್ಯಗಳು, ನೈವೇದ್ಯಕ್ಕೆ ಭಕ್ಷ್ಯ ಭೋಜ್ಯಗಳು, ಅರ್ಪಿಸಿ ಮಂಗಳಾರತಿ ಮಾಡಿ, ಹರಿಗೆ ಇಂದುಮುಖಿ ಭೂದೇವೀರೊಡಗೂಡಿ ಸೇವೆ ಮಾಡಲು ಶಯ್ಯಾಗಾರ ಶೃಂಗರಿಸಿ' ಹರಿಯೇ ರಕ್ಷಿಸು ಎಂದು ಬೇಡುತ್ತಾರೆ. ಇದು ಮಾನಸ ಪೂಜೆ.

**ಗಾಲವ ಚರಿತ್ರೆ (ಕೃಷ್ಣಾರ್ಜುನರ ಕಾಳಗ)**

ಇದು ನಿಡಗುರಕಿ ಜೀವೂಬಾಯಿಯವರ ರಚನೆ. ಗಾಲವ ಎಂಬ ಮಹರ್ಷಿಯು ಕೃಷ್ಣಾರ್ಜುನರ ಕಾಳಗಕ್ಕೆ ಮೂಲವಾಗುವುದರಿಂದ ಇದಕ್ಕೆ 'ಗಾಲವ ಚರಿತ್ರೆ' ಎಂದು ಹೆಸರಿಟ್ಟಿರಬಹುದು. ಪುರಾಣದಲ್ಲಿ ಬರುವ ವಿಶ್ವಾಮಿತ್ರನ ಶಿಷ್ಯ ಗಾಲವನಿಗೂ ಇಲ್ಲಿಯ ಗಾಲವನಿಗೂ ಯಾವುದೇ ಸಂಬಂಧವಿಲ್ಲ.

'ಗಯ' ಎಂಬ ಗಂಧರ್ವನ ಕಥೆಯನ್ನು ಇದು ಹೋಲುತ್ತದೆ. ಕೃಷ್ಣನು ಅರ್ಘ್ಯ ಕೊಡುತ್ತಿದ್ದಾಗ ಅವನು ಹಿಡಿದಿದ್ದ ಬೊಗಸೆ ನೀರಿಗೆ ಗಯನೆಂಬ ಗಂಧರ್ವನು ಉಗುಳಿದ ತಾಂಬೂಲ ಬೀಳುತ್ತದೆ. ಇದರಿಂದ ಕೋಪಗೊಂಡ ಕೃಷ್ಣ ಅವನನ್ನು ಕೊಲ್ಲುವ ಪ್ರತಿಜ್ಞೆ ಮಾಡುತ್ತಾನೆ. ಗಯನು ನಾರದರ ಸೂಚನೆ ಮೇರೆಗೆ ಅರ್ಜುನನ ಮೊರೆಹೋಗುತ್ತಾನೆ. ಅರ್ಜುನ ಹಿಂದೆ ಮುಂದೆ ಆಲೋಚಿಸದೆ ಗಯನಿಗೆ 'ರಕ್ಷಿಸುವೆ' ಎಂಬ ಅಭಯ ನೀಡುತ್ತಾನೆ. ಕೊನೆಗೆ ಕೃಷ್ಣನಿಗೂ ಅರ್ಜುನನಿಗೂ ಯುದ್ಧ ನಡೆಯುತ್ತದೆ. ದೇವತೆಗಳೆಲ್ಲಾ ಗಯನನ್ನು ಕೃಷ್ಣನ ಕಾಲಮೇಲೆ ಬಿದ್ದು ಕ್ಷಮೆಯಾಚಿಸುವಂತೆ ಹೇಳುತ್ತಾರೆ. ಇದು ಮಹಾಭಾರತದಲ್ಲಾಗಲೀ, ಭಾಗವತದಲ್ಲಾಗಲಿ ಬರುವುದಿಲ್ಲ. ಆದರೆ ಯಕ್ಷಗಾನದಲಿ 'ಕೃಷ್ಣಾರ್ಜುನರ ಕಾಳಗ' ಅಥವಾ 'ಗಯೋಪಾಖ್ಯಾನ' ಎಂದು ಜನಪ್ರಿಯವಾಗಿದೆ. ಯಕ್ಷಗಾನದ ಈ ಕಥೆಯನ್ನು ಆಧಾರವಾಗಿಟ್ಟುಕೊಂಡು ಅಥವಾ ಹರಿಕಥೆಯಲ್ಲಿ ಕೇಳಿದನ್ನು ವಿಸ್ತರಿಸಿ ಈ ಗಾಲವನ ಚರಿತ್ರೆಯನ್ನು ಬರೆದಿರುವಂತೆ ಕಾಣುತ್ತದೆ.

ಒಮ್ಮೆ ಗಾಲವ ಮಹಿರ್ಷಿ ನದಿ ಸ್ನಾನಕ್ಕಾಗಿ ಬರುತ್ತಾನೆ. ಸ್ನಾನದ ನಂತರ ಸೂರ್ಯನಿಗೆ ಅರ್ಘ್ಯ ಕೊಡಲು ಕೈಯಲ್ಲಿ ನೀರನ್ನು ಹಿಡಿದಾಗ ಅದು ಮಲಿನವಾಗಿರುತ್ತದೆ. ಕೋಪಗೊಂಡ ಗಾಲವ 'ಅಸ್ತಮಾನದೊಳಗವನ ಶಿರವ ಕತ್ತರಿಸುವೆ' ಎಂದು ಪ್ರತಿಜ್ಞೆ ಮಾಡುತ್ತಾನೆ. ದಾರಿಯಲ್ಲಿ ನಾರದರು ಎದುರಾಗಿ ವಿಷಯ ತಿಳಿದು ಈ ಕಾರ್ಯಸಾಧನೆಗೆ 'ದ್ವಾರಕಾವಾಸ ಶ್ರೀಕೃಷ್ಣನಲ್ಲದೆ

ಬೇರೆ ಯಾರಿಂದಲಾಗದು' ಎನಲು ನಾರದರೊಂದಿಗೆ ಕೃಷ್ಣನರಮನೆಗೆ ಹೋಗುತ್ತಾರೆ. ಆದರೆ ನಾರದು 'ನಾನಿಲ್ಲಿಯೇ ಕುಳಿತಿರುವೆ ನೀವು ಹೋಗಿ ಬನ್ನಿ' ಎಂದು ಗಾಲವರನ್ನು ಒಳಗೆ ಕಳುಹಿಸುತ್ತಾರೆ. ಗಾಲವರು ಒಳ ಹೋಗಿ 'ಭೋಗಶಯನ ಮಲಗಿರಲಾನಂದದಿ ನಾಗವೇಣಿಯರು ಸೇವಿಸುತಿರಲು' ಬಾಗಿ ವಂದಿಸುತ್ತಾರೆ. ಕೃಷ್ಣಲೀಲೆಗಳನು ಕೊಂಡಾಡುತ್ತಾ

ಭಾನು ಅಸ್ತಕೆ ಎನ್ನ ವೈರಿಯ ಸಿರ ತರಿವೆ
ಎಂದೆನ್ನ ನಾಲಗೆಯಿಂದ ನೀನು ನುಡಿಸಿರುವೆ
ಮುಂದಿನ ಕಾರ್ಯ ನಿನಗೊಪ್ಪಿಸಿರುವೆನೊ ದೇವ'

ಎನ್ನಲು 'ಆಗಲಿ ನೋಡೋಣ ಹೋಗಿ ಬನ್ನಿರಿ' ಎನ್ನುತ್ತಾನೆ ಕೃಷ್ಣ. ವಿಷಯವನ್ನು ಗಾಲವ ನಾರದರಿಗೆ ಹೇಳಲು, ನಾರದ 'ಇಂದು ನಿಮ್ಮ ಕಾರ್ಯವು ಆಗದು' ಎನ್ನುತ್ತಾನೆ. 'ಆಗಲಿ ನೋಡೋಣವೆಂದು ಆಗದ ಹೋಗದ ಮಾತು' ನಂಬಬೇಡಿ ಎಂದಾಗ ಮಹರ್ಷಿ ಪುನಃ ಬರುತ್ತಾನೆ. ಕೃಷ್ಣ: 'ಪುನಹ ಬಂದಿರಿ, ಯಾಕೆ ಮುನಿಗಳೆ' ಎನ್ನಲು..

'ಭಾಷೆ ಕೊಡಬೇಕೆನ್ನುತ ಕೇಳಲು'
ತಂದೆ ತಾಯಿಗಳಾಣೆ ಕೊಡುವೆ
ಬಂಧುಬಳಗಗಳಾಣೆ ಕೊಡುವೆ
ಮುಂದೆ ಅಗ್ರಜ ಬಲರಾಮನಾಣೆ
ಚಂದದಿ ನಂಬುವುದು' ಎಂದು ಹೇಳಲು
ಗಾಲವ ನಾರದನಿಗೆ ಹೇಳುತ್ತಾನೆ.
'ತಂದೆತಾಯಿಗಳಿಲ್ಲದವನ
ಬಂಧುಬಳಗಗಳಿಲ್ಲದವನ
ಮುಂದೆ ಅಗ್ರಜನೆಂಬುವನರಿಯದ
ನಂದಜ ಹರಿ ತಾನು

'ಕೊಟ್ಟ ಬಾಷೆ ಸಾಲದು, ಗಟ್ಟಿವಚನ ಕೊಡು' ಎಂದು ಹರಿಯ ಚರಣವ ಹಿಡಿಯಬೇಕೆಂದು ಹೇಳಿಕೊಡುತ್ತಾನೆ. ಮತ್ತೆ ಬಂದ ಗಾಲವನಿಗೆ 'ಹರಿಭಕ್ತರಾಣೆ ಇಡುತ್ತಾನೆ' ಕೃಷ್ಣ. ಅದೂ ಸಾಲದು ಎಂದ ನಾರದರು 'ಕೃಷ್ಣ ವಚನವೊ ರಾಮನ ವಚನವೊ' ಕೇಳೆಂದು ಹೇಳಿಕಳುಹಿಸಿದಾಗ ಹರಿ 'ರಾಮನ ವಚನ' ಎನ್ನುತ್ತಾನೆ. ಈಗ ನಿಮ್ಮ ಕಾರ್ಯ ಆಗುವುದುದೆಂದು ನಾರದ ಹೇಳುತ್ತಾನೆ. ಅಲ್ಲದೆ ಹರಿಯ ಬಳಿ ಬಂದು ದೃಢಪಡಿಸಿಕೊಂಡು, ಗಾಲವ ಮಹರ್ಷಿಯ ಕೋಪಕ್ಕೆ ಕಾರಣನಾದ ಚಿತ್ರರಥನಿಗೆ ನಡೆದ ವಿಷಯ ತಿಳಿಸುತ್ತಾನೆ. ಚಿತ್ರರಥ ದಡದಡನೆ ಕಣ್ಣೀರು ಸುರಿಸಿ, ಗಡ ಗಡ ನಡುಗಿ 'ದಾರಿ ತೋರಿ' ಎಂದು ಬೇಡುತ್ತಾನೆ. ಚಿತ್ರರಥ ಈ ಮರವೇರಿ ಕುಳಿತಿರು, ಕರಚಪ್ಪಾಳೆ ನಿಡುತ್ತೇನೆ. ಇಲ್ಲಿ ನದಿಯ ಸ್ನಾನಕ್ಕಾಗಿ ಬರುವ ಸ್ತ್ರೀಯೊಬ್ಬಳ ಕಾಲು ಹಿಡಿದು ಬೇಡು 'ಕರಣದಿ ನಿನಗೆ ಅಭಯ ಕೊಡುವಳು' ಎನ್ನುತ್ತಾನೆ. ಚಿತ್ರರಥ ಹಾಗೆ ಮಾಡುತ್ತಾನೆ. 'ಸುಭದ್ರೆಯ ಪಾದ ಹಿಡಿದು ಕಣ್ಣೀರಿನಿಂದ ತೊಳೆಯುತ್ತಾನೆ. 'ರಕ್ಷಣೆ ಮಾಳ್ಪೆನೆಂದಭಯವ ಕೊಟ್ಟು ರಕ್ಷಿಸಬೇಕು

ಅನಾಥನ್ನ' ಎಂದು ಕೇಳಲು ವಚನ ನೀಡುತ್ತಾಳೆ. 'ವೈರಿ ಬೆನ್ನಟ್ಟಿ ಬರುತಿಹನು ಭಾನು ಅಸ್ತಕೆ ಎನ್ನ ಸಿರವ ತರಿವನು' ಎಂದು ಕೇಳಿ ಗಾಬರಿಗೊಂಡು ನಿನ್ನ ಮೊರೆ ಹೋಗಿದ್ದೇನೆ' ಎನಲು, ಸುಭದ್ರೆ 'ಫಲ್ಗುಣನ ಪಾದದಾಣೆಗು ನಿನ್ನನು ರಕ್ಷಿಸುವ ಭಾರ ನನಗಿರಲಿ' ಎಂದು ನುಡಿಯುತ್ತಾಳೆ. ಆದರೆ ಚಕ್ರಧರನೆ ಶ್ರೀಕೃಷ್ಣನೆನ್ನುತ ತಿಳಿದು ಎಚ್ಚರವಿಲ್ಲದೆ ನೆಲಕ್ಕೆ ಬೀಳುತ್ತಾಳೆ. ಸುಭದ್ರೆಯೂ ಅರ್ಜುನನಿಂದ ಮೊದಲು ಭಾಷೆ ತೆಗೆದುಕೊಳ್ಳುತ್ತಾಳೆ. ಭಾಷೆ ನೆರವೇರದಿದ್ದರೆ ಅಗ್ನಿಪ್ರವೇಶ ಮಾಡುವೆನು ಎಂದು ಶಪಥಮಾಡುತ್ತಾನೆ ಅರ್ಜುನ. ಕೃಷ್ಣಾರ್ಜುನರ ಕಾಳಗವಾಗುತ್ತದೆ. ಯುದ್ಧದ ವರ್ಣನೆ ಬರುತ್ತದೆ. ಕೃಷ್ಣ ಚಿತ್ರರಥನನ್ನು ಸಂಹರಿಸಿ ದ್ವಾರಕೆಗೆ ನಡೆಯುತ್ತಾನೆ. ಅರ್ಜುನ ಅಗ್ನಿಪ್ರವೇಶಕ್ಕೆ ಮುಂದಾಗುತ್ತಾನೆ. ಗರುಡ ಗಮನನಾಗಿ ಬಂದ ಕೃಷ್ಣನನ್ನು 'ಕಮಲಾಕ್ಷನೆ ರಕ್ಷಿಸು ಗಂಧರ್ವನ' ಎಂದು ಬೇಡಲು ಹರಿನಗುತ 'ಹೊಂದಿಸಿಡು ರುಂಡ ಮುಂಡಗಳ ಪಾರ್ಥನೆ' ಎನಲು ಅರ್ಜುನ ಹಾಗೆ ಮಾಡುತ್ತಾನೆ. ಚಿತ್ರರಥ ಮೈಮುರಿದು ಎದ್ದು ಕುಳಿತುಕೊಳ್ಳುತ್ತಾನೆ. ಮಂಗಳದೊಂದಿಗೆ ಕೃತಿ ಮುಕ್ತಾಯವಾಗುತ್ತದೆ.

**ಶ್ರೀಪಾಂಡುರಂಗ ಚರಿತ್ರೆ**

ಇದು ನಿಡಗುರಕಿ ಜೀವೂಬಾಯಿಯವರ ರಚನೆ. ಪುಂಡರೀಕನ ಕಥೆ ಇದರಲ್ಲಿಲ್ಲ ಬದಲಾಗಿ ಅವನ ಮಹಿಮೆಯನ್ನು ಸಾರುವ ಕಥೆಯ ಆಧಾರದಿಂದ ಹೆಣೆದಿರಬೇಕು. ಆ ಬಗ್ಗೆ ಜೀವೂಬಾಯಿ ಏನನ್ನು ಹೇಳಿಲ್ಲ.

ಪದ್ಯವು ಆರ್ಯ, ಕಂದ, ಭಾಮಿನಿ, ಷಟ್ಪದಿ ಎಂದು ನಿರ್ದೇಶಿಲ್ಪಟ್ಟಿದೆ. ವಾಯುಸುತ, ಮುದ್ದುಮೋಹನ ವಿಠಲ, ವೆಂಕಟೇಶನ ಪ್ರಾರ್ಥನೆಯೊಂದಿಗೆ ಆರಂಭವಾಗುತ್ತದೆ.

ಪಂಢರೀಪುರದಲ್ಲಿ ಇಂದುಮುಖಿಯೊಬ್ಬಳು ಮಕ್ಕಳಿಲ್ಲದೆ
'ಕಂದರಿಲ್ಲದ ಬಹುನಿಂದ್ಯದ ಜನುಮನ
ಪೊಂದಿದೆ ವ್ಯರ್ಥ ಇಂದಿರೆ ರಮಣ'

'ಅಂಬೆಗಾಲಿಕ್ಕುತ ಕಂದರಾಡುತ ಬಡಿ
ಚಂದದಿಂದೆತ್ತುವಾನಂದವಿಲ್ಲವೋ ದೇವಾ'
'ನಿಂದೆಯ ಕಳಿ' ಎನ್ನುತ್ತಾ ಪಾಂಡುರಂಗನನ್ನು ಪ್ರಾರ್ಥಿಸುತ್ತಾಳೆ.

'ಬಾಲಕನಾದರೆ ಆಳನು ಮಾಡುವೆ
ಬಾಲಕಿಯಾದರೆ ಧಾರೆಯನೆರೆಯುವೆ' ಎಂದು ಹರಕೆ ಹೊರುತ್ತಾಳೆ. ಶ್ರೀಹರಿ ವರ ಕೊಡುತ್ತಾನೆ. ಪುತ್ರಿ ಜನನದ ನಂತರ ಒಂದು ತಿಂಗಳಲಿ ಮುಕುಂದ ಬಂದು 'ಸುಂದರಿ ಕೊಡು ನಿನ್ನ ಛಂದದ ಶಿಶುವ' ಎನಲು, ನಿಂದರೆ ಕೊರಳು ಚಂದದಲಿ ಕೊಡುವೆ' ಎನ್ನುತ್ತಾಳೆ. ಸ್ವಲ್ಪ ದಿನಗಳ ನಂತರ ಕೇಳಲು 'ಕುಳಿತಾಡುವ ಹರುಷವ ನೋಡುವೆ' ಎನ್ನುತ್ತಾಳೆ. 'ಬಗೆ ಬಗೆ ಆಟವ ನೋಡುವೆ' ಹೀಗೆ ಕಾಲ ಹಾಕುತ್ತಾಳೆ. ಇವಳ ಗರ್ವವ ಮುರಿಯಬೇಕೆಂದು ಹರಿ ಎಣಿಸುತ್ತಾನೆ. ವರುಷಗಳು ಕಳೆಯಲು ಅವರು ಮಗಳಿಗೆ ವರ ನೋಡುತ್ತಾರೆ. ಮದುವೆಗೆ ಬೀಗರು ಬರುತ್ತಾರೆ.

ಏನಿದು ಮಾಮಿಯೆ ಈ ವಿಧ ಸೌರಣೆ
ಯಾರಿಗೆ ನೀಡುವೆ ಕನ್ಯೆಯನು
ಆಡಿದ ಮಾತನು ನಡೆಸದಿರುವುದು
ನಾರಿ ನಿನ್ನಪರಾಧವಿದು – ಎಂದಂತಾಗಿ ಭಕ್ತೆಗೆ ಎಚ್ಚರವಾಗಿ 'ನಿಮ್ಮ ಮಾವನು ತಾಳದೆ ನೀಡುವ ಕನ್ಯೆ' ಇಂದಿನಿರುಳೆ ಲಗ್ನವು ನಡೆಯುವುದೆಂದು ಸಂಭ್ರಮದಿಂದ ಇರಲು ರಾತ್ರಿ ಲಗ್ನದ ಸಮಯಕ್ಕೆ ಮಳೆ ಬರುತ್ತದೆ. ಹರಿಯು ವರನ ರೂಪದಿ ಬಂದು

ಮೀರುವುದು ಶುಭ ಮುಹೂರ್ತವು
ಮೂರುಜನವು ಬಂದಿಹೆವು
ಧಾರೆಯೆರೆದು ಧನ್ಯರಾಗಿ
ರೆಂದು ನುಡಿದನು

–ಅವರು ಕನ್ಯಾದಾನ ಮಾಡಿಕೊಡುತ್ತಾರೆ. ಮಳೆ ನಿಂತು ಹೋದ ಮೇಲೆ ಬೀಗರು ಬರುತ್ತಾರೆ. ಮದುವೆ ಆಗಿಹೋಗಿರುತ್ತದೆ. ಬೀಗರು ಕೋಪಗೊಳ್ಳುತ್ತಾರೆ. ವಧುವರರು ಕಾಣುವುದಿಲ್ಲ. ಅಷ್ಟರಲ್ಲಿ ವಿಠಲನ ಗುಡಿ ಅರ್ಚಕನು ಪೂಜೆಗಾಗಿ ಬಾಗಿಲು ತೆಗೆಯಲು ಗುಡಜೀರಿಗೆ ಸೆರಗಿಗೆ ಗಂಟುಹಾಕಿರುವ ವಧುವು ಕಾಣುತ್ತಾಳೆ. ಜನ ಸೇರುತ್ತಾರೆ. ಆಶ್ಚರ್ಯಪಡುತ್ತಾರೆ. ತಂದೆ ತಾಯಿಯು 'ಯಾರು ಕರೆತಂದರು ನಿನ್ನ?' ಎನಲು 'ನೀವೇ ಧಾರೆ ಎರೆದು ಕೊಟ್ಟಿರಿ' ಎನ್ನುತ್ತಾಳೆ ವಧು. ತಾಯಿಗೆ ತನ್ನ ತಪ್ಪಿನ ಅರಿವಾಗುತ್ತದೆ. ಬಾಲಕಿಯನ್ನು ಮಾಧವನಿಗೆ ಅರ್ಪಿಸಿ ಸಾನುರಾಗದಿಂದ ಕಾಲಕಳೆಯುತ್ತಾಳೆ. ಮಂಗಳದೊಂದಿಗೆ ಪದ್ಯ ಮುಕ್ತಾಯವಾಗುತ್ತದೆ.

**ರಾಧಾ ಮಾಧವ ವಿಲಾಸ**

ಇದು ನಿಡಗುರಕಿ ಜೀವೂಬಾಯಿಯವರ ರಚನೆ. ಈ ಕೃತಿಯು ವಚನ, ಆರ್ಯ, ಭಾಮಿನಿ ಷಟ್ಪದಿ ಎಂದು ನಿರ್ದೇಶಿಲ್ಪಟ್ಟಿದೆ. ಪದ್ಯದ ಅರ್ಧಭಾಗ ಕೃಷ್ಣನ ಬಾಲಲೀಲೆಗಳನ್ನೊಳಗೊಂಡಿದೆ.

ಕೃಷ್ಣನು ಯಶೋಧೆಯ ತೊಡೆಯ ಮೇಲೆ ಮಲಗಿರುವಾಗ ನಂದಗೋಪನು ಬಂದು ಕೃಷ್ಣನ ಬಾಲಲೀಲೆಗಳನ್ನು ನೆನಪಿಸಿಕೊಳ್ಳುತ್ತಾನೆ: ಒಂದು ದಿನ ಕೃಷ್ಣ ಇದ್ದಕ್ಕಿದ್ದಂತೆ ಭಾರವಾಗಲು ಗೋಪಿ ಕೃಷ್ಣನನ್ನು ತೊಡೆಯಿಂದ ಇಳಿಸುತ್ತಾಳೆ. ಕೂಡಲೆ ಕೃಷ್ಣ ಅಳುತ್ತಾನೆ. ಬಾರೋ ಎನ್ನ ಮೋಹದ ಅರಗಿಣಿ ನಿನಗೆ ನೀಡುವೆನು ಪಾಲ್ಬೆಣ್ಣೆ ಮೊಸರು, ಕಜ್ಜಾಯಗಳ, ಹೋಳಿಗೆ, ಕಡುಬು, ದೋಸೆಗಳನು –ಎಂದು ಆಸೆ ತೋರಿಸುತ್ತಾಳೆ, ಸಮಾಧಾನ ಮಾಡುತ್ತಾಳೆ. ಇನ್ನೊಮ್ಮೆ 'ಅಂಗೈಯಲ್ಲಿ ಚಂದ್ರನ ತಂದು ಕೊಡಮ್ಮಾ' ಎಂದು ಕೃಷ್ಣ ಹಠ ಹಿಡಿಯಲು, ಯಶೋಧೆ ಚಿಂತೆಗೊಳಗಾಗುತ್ತಾಳೆ. 'ಕರದಿ ಚಂದ್ರನ ಪಿಡಿದು ಮಾತೆಗೆ ತೋರಿಸುತ್ತಾನೆ'. ಅವನ ತುಂಟಾಟಗಳನ್ನು ನೋಡಿ ಗೋಪಿ

ಮಕ್ಕಳ ಪಡೆದವರೆಲ್ಲರು ತಮ್ಮಯ
ಮಕ್ಕಳ ಲಾಲಿಸದೆಯೆ ಇಹರೆ
ಅಕ್ಕರೆಯಿಂದಲಿ ಸಾಕಿದ ದೇವನ

ಅಚ್ಚ ಹೆಚ್ಚಿತು – ಎಂದು ಗುನುಗುತ್ತಿದ್ದಾಗ ರಾಧೆ ಬರುತ್ತಾಳೆ. 'ಬಾರೋ ಚಿನ್ನಿಕೋಲು ಬುಗುರಿ ಕೊಡುವೆ, ಶೃಂಗರಿಸಿ ಪಾಲ್ಬೆಣ್ಣೆ ಕೊಡುವೆ' ಎಂದು ಕರೆಯುತ್ತಾಳೆ. ತಂದೆ ತಾಯಿಗಳ ಬಿಟ್ಟು ಬರಲಾರೆ ಎನಬೇಡ. ತಂದೆತಾಯಿಗಳು ಯಾರೋ ಹರಿಯೆ ನಿನಗೆ, ಏನ ಹೇಳಲೂ ನಾ ಬಿಡುವುದಿಲ್ಲ ನಿನಗೆ –ಎಂದು ಹಠ ಮಾಡಿ ಎತ್ತಿಕೊಂಡು ಹೋಗುತ್ತಾಳೆ. ಅವಳು ಹಾಡುವ ಜೋಗುಳದ ಹಾಡಿನಲ್ಲಿ ದಶಾವತಾರದ ವರ್ಣನೆ ಇದೆ.

ಬಗೆಬಗೆ ಪೂದೋಟಗಳಲಿ ಶ್ರೀಹರಿ
ಸೊಗಸಿನಿಂದ ರಾಧೆಯ ಕೂಡಿ
ನಗಧರನಾಡಿದ ಲೀಲೆಗಳೆಲ್ಲವು
ಗಗನದಿ ಸುರರೆಲ್ಲರು ನೋಡಿ

ಮಧುಸೂದನನಿಗೂ ಸುರತಿ ರಾಧೆಗು
ಮದುವೆಯ ಮಾಡಬೇಕೆಂದೆನುತ
ಒದಗಿಸಿ ಸೌರಣೆ ನಡೆಸಿದರಾಗಲೆ
ವಧುವರರಿವರೆನ್ನುತ ಬೇಗ

ದೇವತೆಗಳೂ ಬರುತ್ತಾರೆ. ಗೋಪಿ ಪುರವ ಶೃಂಗರಿಸುತ್ತಾನೆ. ಜೀವೂಬಾಯಿ ಮದುವೆಯ ಸೊಗಸನ್ನು ಉತ್ಸಾಹದಿಂದ ವರ್ಣಿಸುತ್ತಾರೆ. ನಾಂದಿ, ಮದುವೆ, ಲಾಜಾಹೋಮ, ಉರುಟಣೆ, ನಾಗೋಲಿಗಳ ಪ್ರಸ್ತಾಪವಿದೆ. ಮಂಗಳದ ಮತ್ತು ಫಲಸ್ತುತಿಯ ಹಾಡಿನೊಂದಿಗೆ ಕಥೆ ಮುಕ್ತಾಯವಾಗುತ್ತದೆ.

**ಶ್ರೀಕೃಷ್ಣ ಬಾಲಲೀಲೆ ಜೋಗುಳ**

ಇದು ಅಂಬಾಬಾಯಿಯವರ ರಚನೆ. ಇದರಲ್ಲಿ ಶ್ರೀಕೃಷ್ಣ ಜನನ, ಕಂಸವಧೆ, ಯಶೋದೆಯ ಮಾತೃವಾತ್ಸಲ್ಯದ ಚಿತ್ರಣ, ಕೃಷ್ಣನ ಬಾಲಲೀಲೆಗಳು, ಲೀಲಾ ವಿನೋದಗಳನ್ನು ಕಣ್ಣಿಗೆ ಕಟ್ಟುವಂತೆ ಚಿತ್ರಿಸಿದ್ದಾರೆ.

ದಶಾವತಾರಗಳ ವರ್ಣನೆ ಇದೆ. ಗೋಪಿ–ಕೃಷ್ಣನ ಸಂವಾದ ಅದ್ಭುತವಾಗಿ ಮೂಡಿಬಂದಿದೆ. ಕೃಷ್ಣನ ಚೋರತನ, ತುಂಟಾಟ, ಬಾಲೆಯರೊಂದಿಗೆ ಆಡಿದ ಜಲಕ್ರೀಡೆ, ಕಂಸನ ವಧೆ ಇವುಗಳು ವಿಶೇಷವಾಗಿ ವರ್ಣಿತವಾಗಿವೆ. ಹರಿ–ಗುರು ಸ್ತುತಿಯೊಂದಿಗೆ ಪದ್ಯ ಮುಕ್ತಾಯವಾಗುತ್ತದೆ. ಮುನ್ನೂರ ಎಂಬತ್ತೊಂಬತ್ತು ನುಡಿಗಳನ್ನು ಒಳಗೊಂಡಿದೆ. ಅಂಬಾಬಾಯಿಯವರು ತಮ್ಮ ಕೃಷ್ಣ ಭಕ್ತಿಯನ್ನಿಲ್ಲಿ ಮೆರೆದಿದ್ದಾರೆ.

**ಸೀತಾಪತಿ ವಿಠಲದಾಸಳ ನಿರ್ಯಾಣ ಪದ**

ಇದು ಅಂಬಾಬಾಯಿಯವರ ರಚನೆ. ರುಕ್ಮಿಣಿಬಾಯಿ ಎನ್ನುವ ಹರಿದಾಸಿಯೊಬ್ಬಳ ಬದುಕನ್ನು ವಸ್ತುವಾಗುಳ್ಳ ಪದ ಇದು. ಅವಳ ಕಥೆಯನ್ನು ಹೇಳುವುದಷ್ಟೇ ಇಲ್ಲಿನ ಗುರಿಯಾಗಿರುತ್ತದೆ.

ಹಿರಿಯೂರಿನ ಸಾತ್ವಿಕ ದಂಪತಿಗಳಲ್ಲಿ ಜನಿಸಿದ ರುಕ್ಮಿಣಿಬಾಯಿ ಸಂಪ್ರದಾಯದ ಚೌಕಟ್ಟಿನಲ್ಲಿ ಬೆಳೆಯುತ್ತಾಳೆ. ಪತಿ ಕೃಷ್ಣರಾಯ. ಒಬ್ಬ ಮಗನೂ ಇರುತ್ತಾನೆ. ಬಹಳ ಬೇಗನೆ ವೈಧವ್ಯ ಸಂಭವಿಸುತ್ತದೆ. ಮಗನನ್ನು ಇವರೇ ಬೆಳೆಸುತ್ತಾರೆ. ಮದುವೆ ಮಾಡುತ್ತಾರೆ. ನಾಲ್ಕು ಜನ ಮೊಮ್ಮಕ್ಕಳನ್ನು ಪಡೆಯುತ್ತಾರೆ. ಒಮ್ಮೆ ಘಟಿಕಾಚಲವಾಸನು 'ಸೇವೆಗೈ' ಎಂದು ಸ್ವಪ್ನದಲ್ಲಿ ಹೇಳಲು ದೇವರ ಸೇವೆಯಲ್ಲಿ ಕಾಲಕಳೆಯುತ್ತಾರೆ. ವೃದ್ಧಾಪ್ಯದಲ್ಲಿ ಇದ್ದೊಬ್ಬ ಮಗನನ್ನೂ ಕಳೆದುಕೊಳ್ಳುತ್ತಾರೆ. ಮೊಮ್ಮಗನ ಬಳಿಯಿರುವಾಗ ಕಲ್ಯಾಣನಗರದಲ್ಲಿ ಮುದ್ದು ಮೋಹನ ವಿಠಲರು ಬರುತ್ತಾರೆ. ಅವರನ್ನು ಭೇಟಿ ಮಾಡಿದಾಗ 'ಸೀತಾಪತಿ ವಿಠಲ' ಎಂಬ ಅಂಕಿತ ನೀಡುತ್ತಾರೆ. ನಂತರ ರುಕ್ಮಿಣಿಬಾಯಿಯವರು ತೀರ್ಥಯಾತ್ರೆಗಳನ್ನು ಮಾಡಿ. ಕಿರಿಯ ಮೊಮ್ಮಗನ ಮನೆಯಲ್ಲಿ ಶಿವಮೊಗ್ಗದಲ್ಲಿದ್ದಾಗ ಸ್ವಭಾನು ಸಂವತ್ಸರದ ಭಾದ್ರಪದ ಬಹುಳ ಶುದ್ದ ದಶಮಿ ಗುರುವಾರ ಮಧ್ಯರಾತ್ರಿಯಲ್ಲಿ ಇಹಲೋಕ ತ್ಯಜಿಸುತ್ತಾರೆ.

ಹೆತ್ತಮ್ಮಗಿಂತಲೂ ಹೆಚ್ಚಾಗಿ ನಮ್ಮನ್ನು
ಅರ್ತಿಯಿಂ ಬೆಳೆಸಿದೆ ಅಭಿಮಾನದಿಂದ
ಅನುರಾಗದಿಂದ ಬಹುಮಾನದಿಂದ

ಮೊಮ್ಮಕ್ಕಳೆಂದರೆ ಬಹುಪ್ರೀತಿ ನಿನಗಲ್ಲೆ

ಒಮ್ಮೆ ನಾಲ್ವರು ಬಂದು ಇರುವೆವು ನಾವು–ಎಂದಿರುವುದರಿಂದ ರುಕ್ಮಿಣಿಬಾಯಿಯವರು ಅಂಬಾಬಾಯಿಯವರ ಅಜ್ಜಿ ಎಂದು ತಿಳಿದುಬರುತ್ತದೆ.

ನಿನ್ನ ಚರಿತೆ ಪೇಳೆ ತಿಳಿದನಿತು
ತಪ್ಪನು ಮರೆತು ಲಾಲಿಸು – ಎನ್ನುತ್ತಾರೆ.

ಹರಿದಾಸಿಯಾಗಿದ್ದ ಅಜ್ಜಿಯೇ ಇವರಿಗೆ ಸ್ಫೂರ್ತಿಯಾಗುತ್ತಾರೆ.

**ಸಕ್ಕೂಬಾಯಿ**

ಇದು ಓರಾಬಾಯಿ ಲಕ್ಷ್ಮಿದೇವಮ್ಮನವರ ರಚನೆ. ಇದು ಪಾಂಡುರಂಗನ ಭಕ್ತೆ ಸಕ್ಕೂಬಾಯಿಯ ಕಥೆ. ಕೃತಿಯು ಪಲ್ಲವಿ, ಅನುಪಲ್ಲವಿ, ಧ್ವನಿ ವಚನಗಳಿಂದ ನಿರ್ದೇಶಿಲ್ಪಟ್ಟಿದೆ. ಗಣಪತಿಯ ಪ್ರಾರ್ಥನೆಯೊಂದಿಗೆ ಆರಂಭಗೊಳುತ್ತದೆ. 'ಇಟ್ಟಿಕಲ್ಲಿನ ಮೇಲೆ ದಿಟ್ಟಾಗಿ ನಿಂತನು' ಎನ್ನುತ್ತಾ ಪಾಂಡುರಂಗನನ್ನು ವರ್ಣಿಸುತ್ತಾಳೆ. ಒಂದು ದೇಶದಿ ಕಂದನ ಸತಿ ಒಂದು ಅತ್ತೆಯ ನಿಂದಿಸುತ ಬಹುಮಂದಿಯೊಳಗೆ ನಿಂದ್ಯಳಾಗಿ ಇದ್ದಳಾಕಿ ಎನ್ನುತ್ತ ಸಕ್ಕೂಬಾಯಿಯ ಕೌಟುಂಬಿಕ ಚಿತ್ರಣ ನೀಡುತ್ತಾಳೆ.

ಕುಟ್ಟಿ ಬೀಸುತ ಕಟ್ಟಿಗೊಯ್ಯುತ್ತ
ಮುಟ್ಟಿಯಂಜಲು ತೆಗೆಯುತ
ಕಷ್ಟಪಡುತ್ತಿರುತ್ತಾಳೆ

ಹೊತ್ತುಹೊತ್ತಿಗೆ ಸೊಸಿಗೆ ಒಂದು ತುತ್ತೂ ನೀಡದೆ

ಅತ್ತಿಯಲ್ಲದೆ/ಮೃತ್ಯುವಾಗಿ – ಅತ್ತೆ
ಇರುತ್ತಾಳೆ ಸಕ್ಕೂಬಾಯಿಗೆ

ಒಮ್ಮೆ ಸಕ್ಕೂಬಾಯಿ ನೀರು ಸೇದುವಾಗ ಹಗ್ಗ ಕಡಿದು ಬಿಂದಿಗೆಯು ಬಾವಿಯಲ್ಲಿ ಬೀಳುತ್ತದೆ. ಅತ್ತೆ ನಾದಿನಿಯರು ಕಂಬಕ್ಕೆ ಕಟ್ಟಿಹಾಕುತ್ತಾರೆ. ವಿಠಲನು ಪತಿಯ ವೇಷದಲಿ ಬಂದು 'ಪಂಢರಿಗೆ ಪೋಗೆನೆ' ಹೋದಳು. ರಕ್ಕಸಾಂತಕನು ಸಕ್ಕುನ ವೇಷದಿ ಪಕ್ಕನೆ ಕಂಬದಲಿ ನಿಲ್ಲುತ್ತಾನೆ. ನಿಜವಾದ ಪತಿ ಬಂದು ಹಗ್ಗ ಬಿಚ್ಚುತ್ತಾನೆ. ಇತ್ತ ಪಂಢರಾಪುರಕ್ಕೆ ಬಂದ ಸಕ್ಕೂಬಾಯಿ ಅಲ್ಲಿದ್ದ ಭಕ್ತರೊಂದಿಗೆ ಗುಡಿಗೆ ಹೋಗಿ ಪಂಢರಿನಾಥನನ್ನು ನೋಡಿ ಮೋಕ್ಷ ಬೇಡಿ ಪಡೆಯುತ್ತಾಳೆ. ಜನ ಅವಳ ಅಂತಿಮ ಸಂಸ್ಕಾರ ಮಾಡುತ್ತಾರೆ.

ಇತ್ತ ಲಕ್ಷ್ಮಿ ಗಂಡನನ್ನು ಹುಡುಕುತ್ತ ಬರುತ್ತಾಳೆ. ಚಿತೆಯನ್ನು ಕಂಡು ನೀರನ್ನು ಸುರಿಯುತ್ತಾಳೆ. ಗಕ್ಕನೆ ಸಕ್ಕೂಬಾಯಿ ಏಳುತ್ತಾಳೆ. ಇಬ್ಬರೂ ಕೂಡಿ ಸಕ್ಕೂಬಾಯಿಯ ಮನೆಗೆ ಬರುತ್ತಾರೆ. ಅಲ್ಲಿ ಮಾಯದ ಸಕ್ಕೂಬಾಯಿ ತನ್ನ ಗಂಡನೊಡನೆ ಮಂಚದಲ್ಲಿ ಕುಳಿತುಕೊಂಡಿರುವುದನ್ನು ನೋಡಿ ಅತ್ತೆ ಬಯ್ಯುತ್ತಿರುತ್ತಾಳೆ. ಮಾಯದ ಸಕ್ಕು ಹೆದರಿ ನಟಿಸಿದಂತೆ ಮಾಯವಾಗುತ್ತಾಳೆ. ಆ ಸಮಯಕ್ಕೆ ನಿಜವಾದ ಸಕ್ಕು ಬರುತ್ತಾಳೆ. ಅತ್ತೆ ಇಲ್ಲಿಯೇ ಇದ್ದಾಳೆಂದರೆ ಜನ ಪಂಢರಾಪುರಕ್ಕೆ ಬಂದಿದ್ದಳು ಎನ್ನುತ್ತಾರೆ. ಏನೂ ತೋಚದೆ ಗಂಡನು ಮೈಮೇಲಿನ ಒಡವೆಗಳು ಎಲ್ಲಿ ಎಂದು ಕೇಳಿ ಹೊಡೆಯುತ್ತಿರಲು ಸಕ್ಕು ಪಾಂಡುರಂಗನ ಮೊರೆ ಹೋಗುತ್ತಾಳೆ. ಎಲ್ಲರಿಗೂ ಪಾಂಡುರಂಗ ದರ್ಶನ ನೀಡುತ್ತಾನೆ.

ಸಕ್ಕುವಿನ ಭಕ್ತಿ ಭಗವಂತನು ಭಕ್ತರಿಗಾಗಿ ಎಂತಹ ಕಷ್ಟವನ್ನಾದರೂ ಅನುಭವಿಸುತ್ತಾನೆ ಎನ್ನುವ ಅವನ ಕಾರುಣ್ಯ, ಅತ್ತೆ ನಾದಿನಿಯರ ಕಾಟವನ್ನು ಮನಮುಟ್ಟುವಂತೆ ಚಿತ್ರಿಸಿದ್ದಾರೆ.

**ರಾಮದೇವರ ಹಾಡು**

ಇದು ಓರಾಬಾಯಿ ಲಕ್ಷ್ಮಿದೇವಮ್ಮನವರ ರಚನೆ. ರಾಮನ ಮಹಿಮೆಯನು ಕೊಂಡಾಡುವ ಹಾಡಿದು. ಕೇಶವಭಟ್ಟನೆಂಬೊಬ್ಬ ಬಡ ಬ್ರಾಹ್ಮಣನಿದ್ದ. ಅವನು ಸತ್ಯವಂತ, ರಾಮನ ಪರಮಭಕ್ತ. ಕಷ್ಟದಿ ಕಾಲವ ಕಳೆಯಲಾರದೆ ಅಡವಿಗೆ ಬಂದು ಶ್ರೇಷ್ಠ ಮುನಿಗಳಲ್ಲಿ ತನ್ನ ಚಿಂತೆ ಹೇಳಿಕೊಳ್ಳುತ್ತಾನೆ.

ಯಾಕಯ್ಯ ಬಡತನ ಸಾಕು ನಿನಗೆ ಶ್ರೀ
ಲೋಕೇಶರಾಮನ ಕಥೆ ಪೇಳುವೆ

ಬೇಕಾದಷ್ಟು ಐಶ್ವರ್ಯ ಕೊಡುವನೆಂದು–ಮುನಿಗಳು ಬುದ್ದಿ ಹೇಳುತ್ತಾರೆ. ಶ್ರೀರಾಮನ ಕಥೆಯನ್ನೂ ಹೇಳುತ್ತಾರೆ. ಈ ನೆವದಲ್ಲೇ ರಾಮಾಯಣದ ಕಥೆಯನೆಲ್ಲಾ ಒಂಭತ್ತು ನುಡಿಗಳಲ್ಲಿ ಹೇಳಿ ಮುಗಿಸಿದ್ದಾರೆ ಓರಾಬಾಯಿ. ನಂತರ ರಾಮಪೂಜೆ ಮಾಡುವ ವಿಧಾನ ಹೇಳುತ್ತಾ:

ಸೇರುವರಿ ಹಿಟ್ಟು ಸೇರುವರಿ ತುಪ್ಪ
ಸೇರುವರಿ ಬೆಲ್ಲವನ್ನು ಹಾಕಿ

ಐದು ಉಂಡಿಯ ಮಾಡಿ ರಾಮರಿಗರ್ಪಿಸಿ
ಚಾರುಪ್ರಸಾದವ ಸ್ವೀಕಾರ ಮಾಡು – ಎನಲಾಗಿ ವಿಪ್ರನು ಹಾಗೆ ಮಾಡಲಾಗಿ
ಜೋಳಿಗಿ ಬಿಟ್ಟು ಮಾಳಿಗೆ ಮನಿ ಕಟ್ಟಿ
ಮೇಲು ಉಪ್ಪರಿಗೆ ಉದ್ಯಾನವನಗಳು
ಆಲಯದೊಳು ತಾನು ಬಹಳ ಭಾಗ್ಯಗಳಿಂದ
ಲೋಲಾಡುತ್ತಿದ್ದನು ವಿಪ್ರನು

ಒಂದು ದಿನ ಕೇಶವ ಭಟ್ಟನು, ಮಗ ನಾರಾಯಣಭಟ್ಟನನ್ನು ಕರೆದು ತಾನು ಕಾಶಿ ಯಾತ್ರೆಗೆ ಹೋಗುವುದಾಗಿ ಹೇಳಿ ತಪ್ಪದೆ ತಪ್ಪದೆ ಶ್ರೀರಾಮರ ಪೂಜೆ ಮಾಡಬೇಕೆಂದು ಹೇಳುತ್ತಾನೆ. ಹಾಗೆಯೇ ಮಗನು ಪೂಜೆಗೆ ಸಿದ್ಧತೆ ಮಾಡಿಕೊಂಡು ತಾಯಿಯನ್ನು ಕರೆದರೆ ಆಕೆ ಬರಲಿಲ್ಲ. ಒಂದು ವಾರ ಹೀಗೆ ಮಾಡಲು ಭಾಗ್ಯ ಕುಂದಿಹೋಗುತ್ತದೆ.

ಉಪ್ಪರಿಗ್ಹೋಯಿತು ತಿಪ್ಪಿ ಕುಣಿಯಾಯಿತು
ಕಪ್ಪ ಕಾಸುಗಳೆಲ್ಲ ಕಳೆದು ಹೋಯಿತು
ಕಪ್ಪಾಯಿತು ದೇಹ ಕಂದಿ ಕುಂದ್ಹೋಯಿತು
ಒಪ್ಪಿತು ಗಾಜಿನ ಬಳೆಯು ಕೈಯ

ಕಾಶಿಯಾತ್ರೆಯಿಂದ ಹಿಂದಿರುಗಿದ ಕೇಶವಭಟ್ಟ ಮನೆಯನ್ನು ಹುಡುಕುವಂತಾಗುತ್ತದೆ. ನಾರಾಯಣಭಟ್ಟನನ್ನು ಕಂಡು ವಿಷಯ ತಿಳಿದಾಗ ಖಿನ್ನನಾದ ಕೇಶವಭಟ್ಟ 'ಸೀಮೆಯ ಬಿಟ್ಟು ಹೊರಗೆ ಹೊರಡು' ಎಂದು ಗರ್ಜಿಸುತ್ತಾನೆ.

ನಾರಾಯಣಭಟ್ಟ ಹೊರಗೆ ಹೊರಡಲು ಆತನ ಪತ್ನಿಯು ಮಗಳನ್ನು ಗಂಡನ ಜೊತೆಯಲ್ಲಿ ಕಳುಹಿಸಿಕೊಡುತ್ತಾಳೆ. ಆ ಸಮಯಕ್ಕೆ ಬಂದ ಋಷಿಗಳನ್ನು ಕುರಿತು ನಾರಾಯಣಭಟ್ಟನು ನನ್ನ ಮಗಳನ್ನು ಮದುವೆಯಾಗಿ ಎಂದು ಕೇಳಿಕೊಂಡಾಗ ಋಷಿಯು 'ಒಬ್ಬನೇ ಅನ್ನವ ಕಾಣೆ ನಾನು ಮತ್ತೊಬ್ಬಳ ಕೊಂಡೇನು ಮಾಡಲಿ' ಎನ್ನುತ್ತಾನೆ. ಆದರೂ ವಿವಾಹಕ್ಕೆ ಅವನನ್ನು ಒಪ್ಪಿಸಿ ಮದುವೆ ಮಾಡಿ ರಾಮಕಥೆಯನ್ನು–ಪೂಜಾ ವಿಧಾನವನ್ನು ಹೇಳಿ ಮುಂದೆ ಹೊರಡುತ್ತಾನೆ.

ಮುಂದೆ ಬಂದಾಗ ಅಲ್ಲಿ ಕುಳಿತಿದ್ದ ಕುಂಟರು, ಕುರುಡರಿಗೆ ರಾಮಪೂಜಾ ವಿಧಾನ ಹೇಳಿ ಮುಂದೆ ಬರುವಾಗ್ಗೆ ಒಂದು ಮನೆಯಲ್ಲಿ ಒಬ್ಬಳು ಮುತ್ತೈದೆ ಸಿಗುತ್ತಾಳೆ. ಅವಳು ಇವನಲ್ಲಿ ಬಡತನವನ್ನು ಹೇಳಿಕೊಳ್ಳಲು ನಾರಾಯಣಭಟ್ಟನು ಅವಳಿಗೂ ರಾಮನ ಕಥೆ/ಪೂಜಾ ವಿಧಾನವನ್ನು ಹೇಳಿಕೊಡುತ್ತಾನೆ. ಆಕೆ ಹಾಗೇ ಮಾಡಲು ಆನೆ ಕೈಯಲ್ಲಿ ದಿವ್ಯ ಹಾರವ ಕೊಟ್ಟು–ಪನ್ನೀರು ಗಿಂಡಿಯ ಕೊಟ್ಟಿದ್ದರು ಭಾರಿ ರಾಜರನ್ನೆಲ್ಲಾ ಬಿಟ್ಟು ಬಡಕುಮಾರನಿಗೆ ಹಾರ ಹಾಕಿ ಆನೆಯು ಕರೆದೊಯ್ಯುತ್ತದೆ. ಆ ಬಡಕುಮಾರನೇ ಮುತ್ತೈದೆಯ ಮಗ. ಅವರೆಲ್ಲರೂ ಕೂಡಿ ನಾರಾಯಣಭಟ್ಟರ ಊರಿಗೆ ಬಂದಾಗ ಶ್ರೀರಾಮನ ಕರುಣೆಯಿಂದ ಅಲ್ಲೂ ಅಷ್ಟೈಶ್ವರ್ಯ ತುಂಬಿರುತ್ತದೆ. ಮಗ ಬಂದ ವಿಷಯ ಕೇಳಿ ಕೇಶವಭಟ್ಟ ಜನರೊಂದಿಗೆ ಬಂದು ಮಗನನ್ನು ಪಲ್ಲಕ್ಕಿಯಲ್ಲಿ ಮನೆಗೆ

ಕರೆದುಕೊಂಡು ಹೋಗುತ್ತಾನೆ. ಎಲ್ಲರೂ ರಾಮಪೂಜೆಯನ್ನು ವೈಭವದಿಂದ ಮಾಡುತ್ತಾರೆ. ರಾಮನ ದರ್ಶನಕ್ಕಾಗಿ ಬೇಡುತ್ತಾರೆ. ರಾಮನು ದರ್ಶನ ನೀಡಿ ಮುದ್ರಿಕೆಯನ್ನೂ ನೀಡುತ್ತಾನೆ. ಫಲಸ್ತುತಿಯೊಂದಿಗೆ ಹಾಡು ಮುಕ್ತಾಯವಾಗುತ್ತದೆ.

ರಾಮಕಥೆಗಳೆಂಬ ದೊರೆಯಾ ಮುತ್ತುಗಳನು
ಹಾರವ ಕಟ್ಟಿ ನಾ ಹರುಷದಿಂದ
ಚಾರುಮಹಿಮ ಸೀತಾರಾಮನ ಕೊರಳೊಳು ಹಾರವ
ಕಟ್ಟಿ ನಾ ಹಾಕಿದೆನು – ಎನ್ನುತ್ತಾ ರಾಮನಿಗೆ ಕೃತಿಯನು ಅರ್ಪಿಸಿರುವ ರೀತಿ ಅವರ ಪ್ರತಿಭೆಗೆ ಸಾಕ್ಷಿಯಾಗುತ್ತದೆ.

**ಗೊಲ್ಲತಿ ಹಾಡು**

ಇದು ಓರಾಬಾಯಿ ಲಕ್ಷ್ಮಿದೇವಮ್ಮನವರ ರಚನೆ. ಹಾಡು ಆರ್ಯ ಮತ್ತು ವಚನಗಳಿಂದ ನಿರ್ದೇಶಿಸಲ್ಪಟ್ಟಿದೆ. ವಚನದಲ್ಲಿ ಪಲ್ಲವಿಯಿದೆ, ಅನುಪಲ್ಲವಿಯಿದೆ, ನುಡಿಗಳಿವೆ.

ಗೋಕುಲದಲ್ಲಿರುವ ಗೊಲ್ಲತಿಯರೆಲ್ಲ ಶ್ರೀಕೃಷ್ಣನ ಜೊತೆಗೂಡಿ ಆಡುತ್ತಾ ಪಾಡುತ್ತಾ ಆನಂದದಿಂದ ಇರುತ್ತಾರೆ. ಆದರೆ ಒಬ್ಬಳು ಅತ್ತೆ ಮಾತ್ರ ಹೊಸದಾಗಿ ಮದುವೆಯಾಗಿ ಬಂದ ತನ್ನ ಸೊಸೆಯನ್ನು ಮಾತ್ರ ಹೊರಗೆ ಬಿಟ್ಟಿರುವುದಿಲ್ಲ. ಬಿಟ್ಟರೆ ಕೃಷ್ಣನು ಅವಳನ್ನು ಕೂಡುವನೆಂದು ಭಯ ಅವಳಿಗೆ. ಆದರೆ ಸೊಸೆಗೆ ಕೃಷ್ಣನನ್ನು ನೋಡಬೇಕು, ಕೂಡಬೇಕೆಂಬ ಕುತೂಹಲ, ಆಸೆ ಎಲ್ಲ ಗೊಲ್ಲತಿಯರಂತೆ. ಒಂದು ದಿನ ಸೊಸೆ ಆಲಯಕ್ಕೆ ಹೋಗಿ ಶೀಲದಿ ಬರುವೆ ಎಂದು ಹೇಳಿ ಬೆಣ್ಣೆ ಮಾರಲು ಬಾಲೆಯರೊಂದಿಗೆ ಹೋಗುತ್ತಾಳೆ. ಗೋವಿಂದನು ಗಂಡನ ರೂಪದಲ್ಲಿಯೇ ಬರುತ್ತಾನೆ. ಏಕಾಂತಕ್ಕೆ ಕರೆಯುತ್ತಾನೆ. ಗಂಡ ಬಂದನೆಂದು ಸಖಿಯರೆಲ್ಲಾ ಮನೆಗೆ ಹೋಗುತ್ತಾರೆ. ಗೋವಿಂದನು ಅವಳಿಗಾಗಿ ಹಂಬಲಿಸಲು 'ರವಿದಿನ ಕಾಲದಿ ರತಿಯು ಸಲ್ಲದು' ಎನ್ನುತ್ತಾಳೆ. ಕೊನೆಗೆ ಇನಿಯನೆಂದು ವನಜಮುಖಿ ಮನಗೈಯುತ್ತಾಳೆ. ನಂತರ ಕೃಷ್ಣ ನಿಜರೂಪ ತೋರುತ್ತಾನೆ. ಬಾಲೆಯು 'ಅಗಲಿರಲಾರೆ ನಿನ್ನ ಅರಗಳಿಗಿನ್ನ' ಎನ್ನುತ್ತಾಳೆ. ಕೃಷ್ಣನು ಮಧುರೆಯ ಚದುರೆಯರು ಬರುವ ಮುಂಚೆ ಮನೆ ಸೇರಿಕೊಳ್ಳಲು ಹೇಳುತ್ತಾನೆ. ಗೋಪಿಯರು ಬಂದು ಎಲೆ ಹೆಣ್ಣೆ, ಬೆಣ್ಣೆ ಹಾಲು ಮಾರಲಿಲ್ಲವೇ ಎಂದು ಕೇಳಿದಾಗ ಬುಟ್ಟಿ ತೋರಿಸುತ್ತಾಳೆ. ಬೀದಿಯಲ್ಲಿ ಮಾರಿದ್ದಕ್ಕಿಂತ ಅಧಿಕ ರೊಕ್ಕ ತುಂಬಿರುತ್ತದೆ.

ಮನೆಗೆ ಬಂದ ಸೊಸೆಯನ್ನು ಅತ್ತೆ ನೋಡುತ್ತಾಳೆ. ಗಲ್ಲದ ಮೇಲಿನ ಗುಳಿ, ಪಲ್ಲಿನ ಗಾಯ, ಸಡಿಲಿದ ನೆರಿಗೆ, ಬಳಲಿದ್ದ ಕುಚ, ಕೆದರಿದ ಕುಂಕುಮ ಸಾಕ್ಷಿ ಹೇಳುತ್ತವೆ. ಬಾಲೆ ನಿಜ ನುಡಿಯುತ್ತಾಳೆ. ಅವನೇ ನನ್ನ ಸ್ವಾಮಿ ಎನ್ನುತ್ತಾಳೆ. ಅತ್ತೆಗೂ ಕೃಷ್ಣನು ದರ್ಶನವೀಯುತ್ತಾನೆ.

**ಚೇಳಿನ ಹಾಡು**

ಇದು ಓರಾಬಾಯಿ ಲಕ್ಷ್ಮಿದೇವಮ್ಮನವರ ರಚನೆ. ಹಾಡು ವಚನ, ಆರ್ಯಗಳಿಂದ ಕೃತಿ ನಿರ್ದೇಶಿಲ್ಪಟ್ಟಿದೆ. ಕೃಷ್ಣ ರುಕ್ಮಿಣಿಯರ ಶಯ್ಯಾಗೃಹದ ಸನ್ನಿವೇಶವೊಂದನ್ನು ಓರಾಬಾಯಿ ವಸ್ತುವನ್ನಾಗಿಸಿಕೊಂಡಿದ್ದಾರೆ. ರುಕ್ಮಿಣಿ ಭೀಷ್ಮಕರಾಜನ ಮಗಳು. ಅವಳನ್ನು ಶಿಶುಪಾಲನಿಗೆ ಕೊಟ್ಟು

ವಿವಾಹ ಮಾಡಬೇಕೆಂದು ರುಕ್ಮಿಣಿಯ ಅಣ್ಣ ರುಕ್ಮಿಯ ಅಪೇಕ್ಷೆ. ಅವಳು ಕೃಷ್ಣನನ್ನು ಪ್ರೀತಿಸುತ್ತಿದ್ದಾಳೆಂದು ಅವನಿಗೆ ತಿಳಿದ ವಿಷಯ. ಆದರೂ ಶಿಶುಪಾಲನೊಂದಿಗೆ ವಿವಾಹ ನಿಶ್ಚಯ ಮಾಡುತ್ತಾನೆ. ರುಕ್ಮಿಣಿಯು ವಿಪ್ರನ ಮೂಲಕ ಓಲೆಯೊಂದನ್ನು ಕೃಷ್ಣನಿಗೆ ಕಳುಹಿಸುತ್ತಾಳೆ. ನಂತರ ಅಂಬಿಕೆಯ ಗುಡಿಗೆ ಬರುತ್ತಾಳೆ. ಅಲ್ಲಿಗೆ ಬಂದ ಕೃಷ್ಣ ರಥದಲ್ಲಿ ಅವಳನ್ನು ಕೂರಿಸಿಕೊಂಡು ಹೊರಟುಹೋಗುತ್ತಾನೆ. ರುಕ್ಮಿಗೆ ವಿಷಯ ತಿಳಿಯುತ್ತದೆ. ಇಬ್ಬರಿಗೂ ಯುದ್ಧ ನಡೆಯುತ್ತದೆ. ರುಕ್ಮಿ ಸೋಲುತ್ತಾನೆ. ದ್ವಾರಕೆಗೆ ಬಂದು ವಿವಾಹ ನೆರವೇರಿಸಿ ಕೊಡುತ್ತಾನೆ. ಕೃಷ್ಣನು ಸಖಿಯರಿಗೆ ರುಕ್ಮಿಣಿಯನ್ನು ಶೃಂಗರಿಸಲು ಹೇಳುತ್ತಾನೆ. ಅವಳ ಶೃಂಗಾರ ಮತ್ತು ಶಯ್ಯಾಗೃಹದ ಅಲಂಕಾರದ ವರ್ಣನೆಯಾಗಿದೆ. ಕೃಷ್ಣನು ರುಕ್ಮಿಣಿಯನ್ನು ಕರೆತರಲು ಹೇಳುತ್ತಾನೆ. ಕಾಂತೆಯರು ಕರೆತರುತ್ತಾರೆ. ಕೃಷ್ಣನು ಅವಳ ಸೆರಗನ್ನು ಹಿಡಿದು ಎಳೆಯಲು ಭೂಮಿಯ ಮೇಲೆ ಬೀಳುತ್ತದೆ. ರುಕ್ಮಿಣಿಯು ಬೆವತು ಹಾರಪದಕವು ಸಡಿಲಿ ದೂರ ನಿಲ್ಲುತ್ತಾಳೆ. ಅವನು ಅಪ್ಪಲು ಸಿರಿಯ ಮೈ ಥಟ್ಟನೆ ಬೆವರೇರಿ ನಡುಕ ಹುಟ್ಟುತ್ತದೆ. ಕೃಷ್ಣನಿಗೆ ಈಗ ಸಿಟ್ಟು ಬರುತ್ತದೆ. ನಡುಗಲಿಕ್ಕೆ ನಿನಗ್ಹಿಡಿಯಿತೆ ದೆವ್ವ ಎನ್ನುತ್ತಾನೆ. 'ಘೋರ ಯುದ್ಧವ ಮಾಡಿ ರಾಯರಾಯರ ಗೆದ್ದು ಮಾರಿ ತಂದಂತಾಯ್ತು. ಅಂದ ಚಂದದ ಸುಖವೊಂದೂ ಕಾಣಿಸಲಿಲ್ಲ. ಯೆಂದೆಂದಿಗೂ ನಿನ್ನ ಮಂದಿರಕೆ ಬಾರೆ' ಎಂದು ಹೊರನಡೆಯುತ್ತಾ, ಅಷ್ಟ ಗಂಧವನ್ನು ಈಡಾಡುತ್ತಾನೆ. ಬುಕ್ಕಿಟ್ಟು ಕಸ್ತೂರಿ ಒಗೆದಾಡುತ್ತಾನೆ. ದರ್ಪಣಗಳನ್ನು ಅಪ್ಪಳಿಸುತ್ತಾನೆ. ಪನ್ನೀರು ಚೆಲ್ಲುತ್ತಾನೆ. ಮಂಚದ ಈಡಾಡುತ್ತಾನೆ. ಇಟ್ಟ ಪಾಲು ಸಕ್ಕರೆ ಚೆಲ್ಲುತ್ತಾನೆ. ಕೃಷ್ಣ ಹೋದದ್ದು ಕಂಡು ರುಕ್ಮಿಣಿ ಕಂಬವೊರಗಿ ನಿಲ್ಲುತ್ತಾಳೆ. ಆಗ ಕೃಷ್ಣ ಚೇಳೊಂದನ್ನು ಕಂಬದ ಮೇಲೆ ಬಿಡುತ್ತಾನೆ. ಅದು ರುಕ್ಮಿಣಿಯನ್ನು ಕಡಿಯುತ್ತದೆ. ವಿಷ ಏರುತ್ತದೆ. ನಾರದರು ಬರುತ್ತಾರೆ. ನಡೆದದ್ದನ್ನು ರುಕ್ಮಿಣಿ ಹೇಳುತ್ತಾಳೆ. ನಾರದರು ನಿನಗಿದು ಸರಿಯಲ್ಲ ಎನ್ನುತ್ತಾರೆ. 'ಸಣ್ಣ ಕೂಸೇನೆ/ದಿಟ್ಟ ನಾರಸಿಂಹ ವಿಠಲನಿಗೆ ಎಷ್ಟು ಸತಿಯರೆ ಬಿಟ್ಟರೆ ರುಕ್ಮಿಣಿ ನಿನ್ನ ಕೇಳುವೋರ್‍ಯಾರೆ' ಎನ್ನುತ್ತಾರೆ. ಇದನ್ನು ಕೇಳಿಯೇ ರುಕ್ಮಿಣಿ ಮೂರ್ಛಿತಳಾಗುತ್ತಾಳೆ. ನಾರದರು ಕೃಷ್ಣನಿಗೆ ವಿಷಯ ತಿಳಿಸುತ್ತಾರೆ. ಅಷ್ಟರೊಳಗೆ ರುಕ್ಮಿಣಿ ಶ್ರೇಷ್ಠಳಿಹಳು ಹೆತ್ತವರ ಬಿಟ್ಟುಯನ್ನ ಮಾಡಿಕೊಂಡಾಳೊ ಎಂದು ಪ್ರಲಾಪಿಸುತ್ತಾನೆ. ನಾರದನು ಹೆಣ್ಣು ಇದ್ದಲ್ಲಿ ಹೋಗುವುದು ಬಣ್ಣಗೇಡಿತನ ಎಂದು ಕೃಷ್ಣನನ್ನು ತಡೆಯುತ್ತಾನೆ. ನಾರದ ರುಕ್ಮಿಣಿಯ ಮಂದಿರಕೆ ಬರುತ್ತಾನೆ. ಹರಿ ಏನಂದ ಎಂದು ರುಕ್ಮಿಣಿ ಕೇಳಲು ಸತಿಯರೊಡನೆ ಚಕ್ಕಂದವಾಡುತ್ತಿದ್ದಾನೆ ಎಂದು ಸುಳ್ಳು ಹೇಳುತ್ತಾನೆ. ನಾನೇ ಹೋಗಿ ಬರುತ್ತೇನೆ ಎಂದು ರುಕ್ಮಿಣಿ ಹೊರಡಲು, ನೀನಾಗಿ ಪೋಗುವರೇನೆ ಸವತಿಯ ಮನೆಗೆ ಎಂದು ನಾರದರು ಹೇಳಿದುದನ್ನು ಕೇಳಿದ ರುಕ್ಮಿಣಿ ಜಗಳ ಹಚ್ಚಲೆಂದೇ ಬಂದೆಯಾ ಎಂದು ಕೋಪಿಸಿಕೊಂಡು ಸಖಿಯರೊಡನೆ ಕೃಷ್ಣನಿದ್ದಲ್ಲಿಗೇ ಹೋಗುತ್ತಾಳೆ. ಕೃಷ್ಣನು ಶಾಲು ಎಳೆದುಕೊಂಡು, ಶಯನ ಗೃಹದಲ್ಲಿ ಮಲಗಿರುತ್ತಾನೆ. ರುಕ್ಮಿಣಿಯು ಕ್ಷಮೆ ಬೇಡುತ್ತಾಳೆ. ಚರಣಕ್ಕೆರಗುತ್ತಾಳೆ. ಕೃಷ್ಣನು ಅವಳನ್ನು ಮನ್ನಿಸುತ್ತಾನೆ.

ಶೃಂಗಾರಮಯ ಸನ್ನಿವೇಶವಿದು. ನಾರದನ ಕಲಹ ಸ್ವಭಾವವು ಚೆನ್ನಾಗಿ ಮೂಡಿಬಂದಿದೆ. ತನ್ನ ಸರ್ವಸ್ವವನ್ನೂ ಭಗವಂತನಿಗೆ ಅರ್ಪಿಸಿದರೇನೇ ಕರುಣಾಮಯಿಯಾದ ಆತ ಒಲಿಯುವುದು ಎಂದು ಕೃತಿ ಸಾರುತ್ತದೆ.

**ಪ್ರಹ್ಲಾದ ಚರಿತ್ರೆ (ಭಕ್ತನ ಕಥೆ) ಸರಸ್ವತಿಬಾಯಿ**

ಇದು ಸರಸ್ವತಿಬಾಯಿಯವರ ರಚನೆ. ೨೩ ನುಡಿಗಳಿರುವ ಪದ್ಯ. ನುಡಿಗಳು ೪, ೫, ೬ ಸಾಲುಗಳಿಂದ ಕೂಡಿದೆ.

ಸನಕಾದಿ ಮುನಿಗಳು ವಿಷ್ಣುವಿನ ದರ್ಶನಕ್ಕೆಂದು ವೈಕುಂಠಕ್ಕೆ ಬಂದಾಗ ಅಡ್ಡಗಟ್ಟಿದ ಜಯವಿಜಯರನ್ನು ಶಪಿಸುತ್ತಾರೆ. ಜಯವಿಜಯರು ಮುನಿಗಳ ಶಾಪದಂತೆ ಹಿರಣ್ಯಕಶಿಪು, ಹಿರಣ್ಯಾಕ್ಷರಾಗಿ ಜನ್ಮತಾಳುತ್ತಾರೆ. ಹರಿಯು ಧರಣಿಯಲ್ಲಿ ಅವತರಿಸಿ ಅವರ ಸಂಹಾರ ಮಾಡುತ್ತಾನೆ.

ಮೊದಲು ಹಿರಣ್ಯಾಕ್ಷನನ್ನು ಹರಿಯು ಸಂಹರಿಸಲು ಹಿರಣ್ಯಕಶಿಪು ತಪಸ್ಸು ಮಾಡಿ ಬ್ರಹ್ಮನಿಂದ ವರ ಪಡೆದು ಬರುತ್ತಾನೆ. ಅಷ್ಟರಲ್ಲಿ ದೇವೇಂದ್ರನು ಹಿರಣ್ಯಕಶಿಪುವಿನ ಹೆಂಡತಿ ಕಯಾದುವನ್ನು ಎಳೆದೊಯ್ಯುತ್ತಿರುವಾಗ ಮುನಿಯು ರಕ್ಷಿಸುತ್ತಾನೆ. ಋಷಿಯ ಆಶೀರ್ವಾದ ಬೇಡಿದ ಋಷಿಯು ಬಯಸಿದಾಗ ಪುತ್ರನು ಲಭಿಸುವಂತೆ ಬೇಡುತ್ತಾಳೆ. ಜನಿಸಿದ ಸುತನಿಗೆ ಪ್ರಹ್ಲಾದ ಎಂದು ಹೆಸರಿಡುತ್ತಾರೆ. ವಿದ್ಯೆ ಕಲಿಸುತ್ತಾರೆ. ಹಿರಣ್ಯಕಶಿಪು ಶಿವಭಕ್ತ. ಇವನು ವಿಷ್ಣುಭಕ್ತ. ಹಿರಣ್ಯಕಶಿಪು ಎಷ್ಟೇ ಬುದ್ಧಿ ಹೇಳಿದರೂ ಪ್ರಹ್ಲಾದ ಹರಿಭಕ್ತಿ ಬಿಡಲಿಲ್ಲ. ಆಶ್ರಮದ ಮಕ್ಕಳಿಗೆಲ್ಲ ಹರಿಸ್ಮರಣೆ ಹೇಳಿಕೊಡುತ್ತಾನೆ. ಹಿರಣ್ಯಕಶಿಪು ಪ್ರಹ್ಲಾದನನ್ನು ಗುರುಕುಲದಿಂದ ಕರೆತಂದು ನೀರನಲ್ಲಿ ಮುಳುಗಿಸಿ, ಬೆಟ್ಟದ ಮೇಲಿಂದ ತಳ್ಳಿ, ಸರ್ಪ ಕಡಿಸಿ, ಆನೆ ಕಾಲಿಂದ ತುಳಿಸಿ, ತಾಯಿಯಿಂದಲೇ ವಿಷವುಣಿಸಿ ಕೊಲ್ಲಲು ಪ್ರಯತ್ನಿಸುತ್ತಾನೆ. ಕೊನೆಗೆ ನಿನ್ನ ಹರಿ ಎಲ್ಲಿದ್ದಾನೆ ಎಂದು ಕೇಳಲು ಪ್ರಹ್ಲಾದ ಕಂಬ ತೋರಿಸುತ್ತಾನೆ.

ಕಟಕಟ ಹಲ್ ಕಡಿದ್ವಧೆ ಸ್ಥಂಬಕೆ
ಚಟಚಟ ಶಬ್ಧವುದಿಸಿ
ಆರ್ಭಟದಿ ಖಳನು ಬಗಲಲಿ ಧರಿಸುತ ಹರಿ
ಹಠದಿ ಹೊಸ್ತಿಲ ಬಳಿಗೊಯ್ದು ಹರಿತ
ಕಟು ಉಗ್ರರೂಪದಿ ಕುಳಿತು

ಹೀಗೆ ಹರಿಯು ಹಿರಣ್ಯಕಶಿಪುವಿನ ಉದರ ಬಗೆದು ಕರುಳ್ಹಾರ ಧರಿಸಲು ಹರಿಗೆ ಸುರರು ಪೂಮಳೆಗರೆದರು.

ತಂದೆಗೆ ಮುಕುತಿಯ ಕೊಟ್ಟು ಸಲಹೆಂದು ಪ್ರಹ್ಲಾದ ಬೇಡಿದಾಗ ನಕ್ಕ ಹರಿ 'ನಾನವನ ಬಂಧು' ಎನ್ನುತ್ತಾನೆ. ರಾಜ್ಯವನಾಳು ಸಹಜದಿ ಸಲಹುವೆ ಎಂದು ಹರಿ ಪ್ರಹ್ಲಾದನಿಗೆ ಹೇಳುತ್ತಾನೆ. ಮಂಗಳದ ಹಾಡಿನೊಂದಿಗೆ ಕಥೆ ಮುಕ್ತಾಯವಾಗುತ್ತದೆ.

**ಶ್ರೀಕೃಷ್ಣನ ಕಥೆ: ಸರಸ್ವತಿಬಾಯಿ**

ಮಾತು, ವಚನ, ಪದ್ಯ ಮಿಶ್ರಿತ ಕೃತಿಯಿದು. ಪದ್ಯವು ಪಲ್ಲವಿ ಅನುಪಲ್ಲವಿಗಳನ್ನೊಳಗೊಂಡಿದೆ. ಮಕ್ಕಳಿರಾ ಇವತ್ತು ನಿಮಗೆ ಶ್ರೀಕೃಷ್ಣ ಯಾವ ರೀತಿ ಬಾಲಲೀಲೆಯಾಡಿದನೆಂಬ ವಿಷಯ ಹೇಳುತ್ತೇನೆ, ಕೇಳಿ' ಎಂಬ ವಚನದೊಂದಿಗೆ ಆರಂಭವಾಗುತ್ತದೆ. ಸರಸ್ವತಿಬಾಯಿಯವರ ಮೊಮ್ಮಕ್ಕಳು 'ಕಥೆ

ಹೇಳಿ' ಎಂದು ಅಜ್ಜಿಯನ್ನು ಕೇಳಿದಾಗ ದಿನವೂ ಮಕ್ಕಳಿಗಾಗಿ ಕಥೆಯನ್ನು ಹಾಡು ಮಾಡಿ ಹೇಳುತ್ತಿದ್ದಾಗ ಬರೆದುಕೊಂಡ ಹಾಡಿದು.

ಹಾಡಿನ ಪ್ರಾರಂಭಕ್ಕೆ ಕೃಷ್ಣ ಕೊಳಲನೂದುವ ಪರಿಯನು ವರ್ಣಿಸಲಾಗಿದೆ. ಅದನ್ನು ಆಲಿಸಿ ಗೋಕುಲದ ಸ್ತ್ರೀಯರಲ್ಲಿ ಕೆಲವರು ಸೀರೆಬಿಟ್ಟು, ಕೆಲವರು ಕುಪ್ಪಸ ಮರೆತು, ಕೆಲವರು ಮಗುವನ್ನು ಬಿಟ್ಟು, ಒಬ್ಬಳು ಓಲೆಯ ಕಳಚಿಟ್ಟು, ಒಬ್ಬಳು ಮಕುರವ ಕಿವಿಗಿಟ್ಟು, ಒಬ್ಬಳು ಲಂಗ ಉಟ್ಟು ಸೀರೆ ಬಿಟ್ಟು, ಒಬ್ಬಳು ಪಂಜರದ ಗಿಳಿಬಿಟ್ಟು ಓಡಿದರು. ಮಕ್ಕಳಿರಾ ಒಬ್ಬೊಬ್ಬರಿಗೆ ಒಬ್ಬೊಬ್ಬ ಕೃಷ್ಣನಂತೆ ಕಾಣಿಸಿದ ಹರಿ. ಅವರ ಜೊತೆ ಕುಣಿದ. ಅವರಲ್ಲಿ ಒಬ್ಬಳನ್ನು ಎತ್ತಿಕೊಂಡು ಕೃಷ್ಣ ಮರೆಯಾಗುತ್ತಾನೆ. ಉಳಿದವರು ಹುಡುಕುತ್ತಾರೆ. ಕೃಷ್ಣನ ಜೊತೆ ಹೋದವಳು ಸಂಪಿಗೆಯ ಮರದಲ್ಲಿ ನೇತಾಡುತ್ತಿರುತ್ತಾಳೆ. ಅವಳನ್ನು ಇಳಿಸಿ ಕೃಷ್ಣನನ್ನು ಮತ್ತೆ ಹುಡುಕುತ್ತಾರೆ. ಗುಡ್ಡದ ಮೇಲೆ ಕೊಳಲೂದುತ್ತಾ ಕೃಷ್ಣ ಇರುವುದನ್ನು ನೋಡಿ ಓಡಿ, ಅವನನ್ನು ಹೊಂದುತ್ತಾರೆ.

ಮಕ್ಕಳಿರಾ, ನೀವು ಕೃಷ್ಣನಂತೆ ನಿಮ್ಮ ತಾಯಿ ಮತ್ತು ಅಕ್ಕತಂಗಿಯರಿಗೆ ಸಂತಸ ಪಡಿಸಿ. ನಲಿದು ಇದ್ದರೆ ನಿಮಗೆ ಒಳ್ಳೆಯದಲ್ಲವೇ, ನಿಮಗೂ ನೆಮ್ಮದಿ ಸಿಗುತ್ತದೆ. ನಿತ್ಯವೂ ನೀವು ಗೋಪಿಯಂತೆ ಕೃಷ್ಣನನ್ನು ಧ್ಯಾನಿಸಿ ಬೇಕಾದ ಬುದ್ಧಿ ಪಡೆಯಿರಿ ಎಂದು ಹೇಳುತ್ತಾರೆ.

**ಶ್ರೀನಿವಾಸ ಕಲ್ಯಾಣ; ಸರಸ್ವತಿಬಾಯಿ**

ಪದ್ಯವು ಪಲ್ಲವಿ, ಅನುಪಲ್ಲವಿಯನ್ನು ಒಳಗೊಂಡಿದ್ದು, ೫, ೬, ೭, ೮ ಸಾಲಿನ ಹದಿನಾಲ್ಕು ನುಡಿಗಳಿಂದ ಕೂಡಿದೆ. ಸಪ್ತಋಷಿಗಳು ನಿತ್ಯತೃಪ್ತನಾದ ಸರ್ವೇಶನು ಯಾರೆಂದು ನೋಡಿ ಬಾ ಎನ್ನುತ್ತಾ ಭೃಗು ಮಹರ್ಷಿಯನ್ನು ಕಳುಹಿಸುತ್ತಾರೆ. ಅವನು ಸತ್ಯಲೋಕಕ್ಕೆ ಬಂದಾಗ ಬ್ರಹ್ಮ ಮಾತನಾಡಲಿಲ್ಲ. ಅವನಿಗೆ ಶಪಥ ನೀಡಿ ರಜತಗಿರಿಗೆ ಹೋದರೆ ಮೃತ್ಯುಂಜಯನು ಮುನಿಯನ್ನು ಕೊಲ್ಲಲು ಬರುತ್ತಾನೆ. ಮುನಿಯು ನಿತ್ಯವೂ ನಿನಗೆ ಲಿಂಗಪೂಜೆಯಾಗಲಿ ಎಂದು ಶಪಿಸಿ ವೈಕುಂಟಕ್ಕೆ ಬರುತ್ತಾನೆ. ಅಲ್ಲಿ ಲಕ್ಷ್ಮಿ ನಾರಾಯಣರು ಏಕಾಂತದಲ್ಲಿರಲು ಭೃಗುವು ವಿಷ್ಣುವಿನ ಎದೆಗೆ ಒದೆಯುತ್ತಾನೆ. ವಿಷ್ಣುವು ಭೃಗುವಿನ ಪಾದ ತೊಳೆದು ಸತ್ಕರಿಸುತ್ತಾನೆ. ವಿಷ್ಣುವಿನ ಎದೆಯಲ್ಲಿದ್ದ ಲಕ್ಷ್ಮಿಯು ಕೋಪಿಸಿಕೊಂಡು ಕೊಲ್ಹಾಪುರದಲ್ಲಿ ನೆಲೆಸುತ್ತಾಳೆ. ಲಕ್ಷ್ಮಿಯನ್ನು ಹುಡುಕುತ್ತಾ ಭೂಲೋಕಕ್ಕೆ ಬಂದ ವಿಷ್ಣು ಹುತ್ತದಲ್ಲಿ ನೆಲೆಸಿರುತ್ತಾನೆ. ಬ್ರಹ್ಮನು ಹಸುವಿನ ವೇಷದಲ್ಲಿ ಬಂದು ಹುತ್ತಕ್ಕೆ ಹಾಲೆರೆಯುತ್ತಾನೆ. ಇದನ್ನು ನೋಡಿದ ಗೋಪಾಲರು ಹಸುವಿಗೆ ಹಾಕಿದ ಕೊಡಲಿ ಏಟು ಶ್ರೀನಿವಾಸನಿಗೆ ಬಿದ್ದು ತಲೆ ಒಡೆಯುತ್ತದೆ. ಅವನ ನರಳಿಕೆ ಕೇಳಿ ಬಂದ ಬಕುಳೆ ಸೇವೆ ಮಾಡುತ್ತಾಳೆ. ಹೀಗೆ ಬಕುಳೆಯ ಮಮತೆಯಲ್ಲಿ ಬೆಳೆಯುತ್ತಿದ್ದಾಗ ಬೇಟೆಗೆ ಹೋದ ಶ್ರೀನಿವಾಸ ಪದ್ಮಾವತಿಯನ್ನು ನೋಡಿ ಮನಸೋಲುತ್ತಾನೆ. ಬಕುಳೆಯನ್ನು ಹೆಣ್ಣು ಕೇಳಲು ಕಳುಹಿಸಿ ತಾನೂ ಕೊರವಿಯ ವೇಷ ಧರಿಸಿ ಪದ್ಮಾವತಿಗೆ ಕಣಿ ಹೇಳಿ ಒಪ್ಪಿಸುತ್ತಾನೆ. ಬ್ರಹ್ಮಾದಿಗಳ ಕರೆಸಿ ಲಗ್ನಪತ್ರಿಕೆ ಬರೆಸುತ್ತಾನೆ. ಅಕಾಶರಾಯನು ಮಗಳು ಪದ್ಮಾವತಿಯನ್ನು ಶ್ರೀನಿವಾಸನಿಗೆ ಧಾರೆಯೆರೆದು ಕೊಡುತ್ತಾನೆ. ಫಲಸ್ತುತಿಯೊಂದಿಗೆ ಹಾಡು ಮುಕ್ತಾಯವಾಗುತ್ತದೆ.

**ಗುರುಗಳ ಸುಳಾದಿ**

ಈ ಸುಳಾದಿಯ ಮೊದಲ ನಾಲ್ಕು ನುಡಿಗಳು ಸಿಕ್ಕಿಲ್ಲ. ಹನ್ನೆರಡು ನುಡಿಗಳ ಸುಳಾದಿಯಿದು. ಗುರು ರಾಘವೇಂದ್ರರ ಮಹಿಮೆಯನ್ನು ಅವನಲ್ಲಿ ಶರಣಾಗುವ ಮಹತ್ವವನ್ನು ತಿಳಿಸುತ್ತದೆ.

**ಅಮೃತಮಥನ: ಭೀಮವ್ವ**

೫೨ ನುಡಿಗಳಿರುವ, ದ್ವಿಪದಿಯಲ್ಲಿರುವ ಹಾಡು. ದೇವತೆಗಳು, ದಾನವರು ಅಮೃತಕ್ಕಾಗಿ ಸಮುದ್ರಮಥನ ಮಾಡುತ್ತಾರೆ. ವಿಷ, ಕೌಸ್ತುಭ, ಕಾಮಧೇನು, ಕಲ್ಪವೃಕ್ಷಗಳು ಜನಿಸುತ್ತವೆ. ಮಹಾಲಕ್ಷ್ಮಿಯು ಮಂದಾರಮಾಲೆಯನ್ನು ಕೈಯಲ್ಲಿ ಹಿಡಿದು ಉತ್ತಮಪತಿಯನ್ನು ಅರಸುತ್ತಾಳೆ. ಶಕ್ರನಿಗೆ ಮೈಯಲ್ಲಾ ಕಣ್ಣು, ಸೋಮನು ಕಳೆಗುಂದುತ್ತಾನೆ. ಪವನನದು ಗಾಳಿ ರೂಪ, ರುದ್ರ ರುಂಡಮಾಲೆ ಹಾಕುತ್ತಾನೆ. ಶೇಷನು ವಿಷದೇಹಿ, ಗಣೇಶ ಡೊಳ್ಳುಹೊಟ್ಟೆಯವ, ಬ್ರಹ್ಮ ನಾಲ್ಕು ಮೋರೆಯ ಗುಮ್ಮ, ಯಮಧರ್ಮ ನಿಷ್ಕರುಣಿ, ನಾರದ ಚಾಡಿಕೋರ ಎಂದೆಲ್ಲಾ ಹೀಗಳೆಯುತ್ತಾ ರಂಗನಿಗೆ ಮನಸೋತು ಕೊರಳಿಗೆ ಮಂದಾರಮಾಲೆಯನ್ನು ಹಾಕುತ್ತಾಳೆ. ದೇವತೆಗಳು ಮಂಗಳ ಸೂತ್ರ ಧಾರಣೆ ಮಾಡಿಸುತ್ತಾರೆ. ಸಂಪ್ರದಾಯದಂತೆ ಲಾಜಾಹೋಮ, ನಾಗೋಲಿ, ಹೆಣ್ಣೊಪ್ಪಿಸುವುದು, ಪ್ರಸ್ತ ಮುಂತಾದ ಮದುವೆಯ ಸಂಪ್ರದಾಯವನ್ನು ನೆರವೇರಿಸುತ್ತಾರೆ. ಮದುವೆಯಲ್ಲಿ ಅನುಸರಿಸುವ ಸಂಪ್ರದಾಯವನ್ನು ಹೇಳುವುದೇ ಹಾಡಿನ ಪ್ರಧಾನ ಆಶಯ.

**ಗೋಪಿಕೆಯರ ವಸ್ತ್ರಾಪರಣ**

೧೦೩ ನುಡಿಗಳ ಪದ್ಯವಿದು. ಪ್ರತಿ ನುಡಿ ನಾಲ್ಕು ಸಾಲುಗಳನ್ನೊಳಗೊಂಡಿದೆ. ಗೋಕುಲದ ಗೋಪಿಕೆಯರೆಲ್ಲಾ ಜಲಕ್ರೀಡೆಯಾಡುತ್ತಾರೆ. ಕೃಷ್ಣನು ಅವರ ಸೀರೆಗಳನ್ನು ಕದಿಯುತ್ತಾನೆ. ಸೀರೆಗಳ ವರ್ಣನೆ ಅದ್ಭುತವಾಗಿದೆ. ಕಳೆದುಕೊಂಡ ಸೀರೆಗಳನ್ನು ನಗ್ನರಾದ ಗೋಪಿಕೆಯರು ನೀರಿನಲ್ಲೇ ನಿಂತು ನೆನಪಿಸಿಕೊಳ್ಳುತ್ತಾ ಆ ಸೀರೆಗಳನ್ನು ಯಾರು ಕೊಟ್ಟಿದ್ದರು, ಹೇಗಿತ್ತು ಎನ್ನುವ ಚಿತ್ರಣವನ್ನು ಭೀಮವ್ವ ನೀಡುತ್ತಾರೆ. ಈ ಸಂದರ್ಭವನ್ನು ಸೀರೆಯ ವರ್ಣನೆಗೆ ಬಳಸಿಕೊಂಡಿದ್ದಾರೆ. ಸೀರೆಗಳನ್ನು ವರ್ಣಿಸುವುದೆಂದರೆ ಅವರಿಗೆ ಸಂಭ್ರಮ. ಗೋಪಿಯರು ತಾವು ಕಾತ್ಯಾಯಿನಿ ಪೂಜೆಗೆ ಹೋಗಬೇಕೆಂದು ಕೇಳಿಕೊಳ್ಳಲು ಕೃಷ್ಣ ಸರಿಯಾಗಿ ಕೈಯೆತ್ತಿ ನಿಂದು ನಮಿಸಲು ಹೇಳುತ್ತಾನೆ. ಸತಿಯರು ಹಾಗೆ ಮಾಡಲು ಕೃಷ್ಣ ಅವರವರ ವಸ್ತ್ರಗಳನ್ನು ಅವರವರಿಗೆ ನೀಡುತ್ತಾನೆ. ಮುಂಜಿಗೆ ಮುನ್ನ ರಂಗರಾಯನ ದಿವ್ಯ ಸಂಗವನ್ನು ಗೋಪಿಯರು ಬಯಸಿದ್ದರು. ಕೃಷ್ಣ ಆಲಿಂಗನ ಕೊಟ್ಟು ಸುಖಪಡಿಸುತ್ತಾನೆ. ಕೃಷ್ಣನೊಡನೆ ಎಲ್ಲರು ತಮ್ಮರಮನೆಗೆ ಬರುತ್ತಾರೆ. ಫಲಸ್ತುತಿಯೊಂದಿಗೆ ಕಥೆ ಮುಕ್ತಾಯವಾಗುತ್ತದೆ.

## ಅಧ್ಯಾಯ– ಆರು

# ಕೀರ್ತನೆಗಳಲ್ಲಿ ಪ್ರಸ್ತಾಪಿತವಾಗಿರುವ ಪ್ರಸಂಗಗಳು

ಗಲಗಲಿ ಅವ್ವನವರ ಕೀರ್ತನೆಗಳು
ಹೆಳವನಕಟ್ಟೆ ಗಿರಿಯಮ್ಮನವರ ಕೀರ್ತನೆಗಳು
ಹರಪನಹಳ್ಳಿ ಭೀಮವ್ವನವರ ಕೀರ್ತನೆಗಳು
ಜೀವೂಬಾಯಿಯವರ ಕೀರ್ತನೆಗಳು
ಅಂಬಾಬಾಯಿಯವರ ಕೀರ್ತನೆಗಳು
ಶಾಂತಿಬಾಯಿಯವರ ಕೀರ್ತನೆಗಳು
ರಾಧಾಬಾಯಿಯವರ ಕೀರ್ತನೆಗಳು

# ಅಧ್ಯಾಯ-ಆರು

## ಕೀರ್ತನೆಗಳಲ್ಲಿ ಪ್ರಸ್ತಾಪಿತವಾಗಿರುವ ಪ್ರಸಂಗಗಳು

ಮಹಿಳಾಕೀರ್ತನಕಾರರ ಕೀರ್ತನೆಗಳಲ್ಲಿ ಅನೇಕ ಪುರಾಣ ಪ್ರಸಂಗಗಳು ಪ್ರಸ್ತಾಪಿತವಾಗಿವೆ. ಈ ಸಂಗತಿಗಳು ಇವರ ಪುರಾಣ ಪ್ರಜ್ಞೆಯನ್ನು, ಪ್ರತಿಭೆಯನ್ನು, ಸಹಜ ಕಾವ್ಯ ಕೌಶಲ್ಯವನ್ನು ಹೇಳುತ್ತದೆ. ಓದುಗರನ್ನು ಪುರಾಣಗಳ ಓದಿಗೆ ಹಚ್ಚುತ್ತದೆ. ಪುರಾಣದ ಪಾತ್ರಗಳನ್ನು ಪರಿಚಯಿಸುತ್ತವೆ. ಪುರಾಣದ ಹಿನ್ನೆಲೆ ಗೊತ್ತಿರದೆ ಕೀರ್ತನೆಗಳನ್ನು ಅರ್ಥೈಸಿಕೊಳ್ಳುವುದು ಕಷ್ಟವಾಗುತ್ತದೆ. ಕೆಲವು ಕಡೆ ಹೆಸರನ್ನು ಪ್ರಸ್ತಾಪಿಸುವುದೇ ಇಲ್ಲ ಉದಾ. ಮಾತೆಯ ಬಂಧನ ಕಡೆದ ಬಲುಧೀರ (ಕೃಷ್ಣ). ಕೆಲವು ಒಗಟು ಮತ್ತು ಮುಂಡಿಗೆಯ ರೂಪದಲ್ಲಿರುತ್ತವೆ. ಈ ಪ್ರಸಂಗಗಳನ್ನು ಪದೆ ಪದೇ ಸಾಂದರ್ಭಿಕವಾಗಿ ಎಲ್ಲ ಕೀರ್ತನಕಾರರು ಬಳಸಿದ್ದಾರೆ.

**ಗಲಗಲಿ ಅವ್ವನವರ ಕೀರ್ತನೆಗಳು**

**ಮಾತೆಯ ಬಂಧನ ಕಡೆದ ಬಲು ಧೀರ:** ಕೃಷ್ಣಾವತಾರದಲ್ಲಿ ಬರುವ ಕಥೆಯಿದು. ಕಂಸನು ತನ್ನ ಸೋದರಿ ದೇವಕಿಯ ಅಷ್ಟಮ ಗರ್ಭದಲ್ಲಿ ಜನಿಸಿದ ಶಿಶುವಿನಿಂದ ಮರಣವಿದೆಯೆಂದು ತಿಳಿದು ವಸುದೇವ-ದೇವಕಿಯರನ್ನು ಸೆರೆಯಲ್ಲಿಡುತ್ತಾನೆ. ಆದರೆ ಹೀಗೆ ಜನಿಸಿದ ಕೃಷ್ಣನು ಕಂಸನನ್ನು ಕೊಂದು ತಾಯಿಯ ಬಂಧನ ಬಿಡಿಸುತ್ತಾನೆ. (ಕೀ. ೧೦, ಎಲ್ಲರಿಗೊಂದಿಸಿ...)

**ತ್ರಿಪುರ ಸಂಹಾರ:** ಶಿವನು ತಾರಕಾಸುರನೆಂಬ ರಾಕ್ಷಸನ ಮಕ್ಕಳಾದ ತಾರಾಕ್ಷ, ಕಮಲಾಕ್ಷ, ವಿದ್ಯುನ್ಮಾಲಿ ಇವರುಗಳಿದ್ದ ತ್ರಿಪುರವನ್ನು ಸಂಹಾರ ಮಾಡುತ್ತಾನೆ. (ಕೀ.೧೦)

**ಕರವೀರಪುರವ ಸೇರಿದಳು ಲಕ್ಷ್ಮಿ:** ಒಮ್ಮೆ ಭೃಗು ಮಹರ್ಷಿಯು ವೈಕುಂಠಕ್ಕೆ ಬಂದಾಗ ಲಕ್ಷ್ಮೀನಾರಾಯಣರು ಗಮನಿಸುವುದಿಲ್ಲ. ಕೋಪಗೊಂಡ ಭೃಗುವು ಕಾಲಿನಿಂದ ನಾರಾಯಣನ ಎದೆಗೆ ಒದೆಯುತ್ತಾನೆ. ಅಲ್ಲಿ ನೆಲೆಸಿದ್ದ ಲಕ್ಷ್ಮಿ ಬೇಸರಗೊಂಡು ವೈಕುಂಠವನ್ನು ಬಿಟ್ಟು ಕರವೀರ ಪುರ ಸೇರುತ್ತಾಳೆ. (ಕೀ.೪೦. ಕರವೀರಪುರವ ಸೇರಿದಳು...)

**ಶಂಭ: (ಶಂಭರಾರಿ ಪಿತನ)** ಶಂಭನು ದಕ್ಷಬ್ರಹ್ಮನ ಮಗ. ಪಾತಾಳವಾಸಿ, ಮಹಾಮಾಯಾವಿ. ಕೃಷ್ಣನ ಮಗ ಪ್ರದ್ಯುಮ್ನನಿಂದ ತನಗೆ ಸಾವು ಬರುವುದೆಂದು ಗೊತ್ತಾದ ಮೇಲೆ, ಅವನನ್ನು ಕೊಲ್ಲಲು ಹೋಗಿ ತಾನೇ ಹತನಾಗುತ್ತಾನೆ. (ಕೀ.೬೨, ಬಿಟ್ಟುಬರಲಾರಳಮ್ಮಯ್ಯ...)

**ಅಕ್ಷಯಪಾತ್ರೆ: (ಪಲ್ಯಾದ ತುದಿಯಿಂದ)** ಪಾಂಡವರು ವನವಾಸದಲ್ಲಿರುವಾಗ ದೂರ್ವಾಸ ಮುನಿಯು ಅವರ ನೆಲವನೆಗೆ ಬರುತ್ತಾನೆ. ಅಷ್ಟುಹೊತ್ತಿಗೆ ಎಲ್ಲರ ಭೋಜನ ಮುಗಿದು ಹೋಗಿರುತ್ತದೆ.

ದ್ರೌಪದಿಯು ಕೃಷ್ಣ ಕೊಟ್ಟಿದ್ದ ಅಕ್ಷಯಪಾತ್ರೆಯಲ್ಲಿದ್ದ ಒಂದು ಅಗುಳಿನಿಂದಲೇ ಅವರಿಗೆ ಭೋಜನ ಮಾಡಿಸಿ ತೃಪ್ತಿಪಡಿಸುತ್ತಾಳೆ. (ಕೀ. ೬ಲ, ಅಂಜಬ್ಯಾಡ....)

**ಪಾಂಡವರ ಅಜ್ಞಾತವಾಸ (ಅರಸನ ಮಡದಿ ಒಬ್ಬ ಅರಸನ ಮನೆಯಲ್ಲಿ):** ಪಾಂಡವರು ಅಜ್ಞಾತವಾಸದಲ್ಲಿದ್ದಾಗ ವಿರಾಟರಾಯನ ಅರಮನೆಯಲ್ಲಿ ದ್ರೌಪದಿ ಸೈರಂಧ್ರಿಯಾಗಿ ಧರ್ಮರಾಯನು ಕಂಕನಾಗಿ, ಭೀಮ ಅಡುಗೆಯವನಾಗಿ, ಅರ್ಜುನ ಬೃಹನ್ನಳೆಯಾಗಿ, ನಕುಲ ಸಹದೇವರು ದನಗಾಹಿಗಳಾಗಿರುತ್ತಾರೆ. (ಕೀ. ೬ಲ, ಅಂಜಬ್ಯಾಡ....)

**ಭಾರತಿ (ವಾತನೊಡಗೂಡಿ ಜನಿಸಿ):** ದೇವೀ ಅವತಾರಗಳಲ್ಲಿ ಭಾರತಿಯ ಅವತಾರವೂ ಒಂದು. ದ್ವಾಪರಯುಗದಲ್ಲಿ ಯಜ್ಞಕುಂಡದಿಂದ ಹೊರಬಂದ ದ್ರೌಪತಿ ಈ ಜನ್ಮದಲ್ಲಿ ವಾಯುದೇವರ ಅವತಾರವಾದ ಭೀಮಸೇನನಿಗೆ ಹೆಂಡತಿಯಾಗುವಳು. ಜಗತ್ತು ನಾಮ, ರೂಪ, ಕ್ರಿಯಾತ್ಮಕವಾಗಿದ್ದು ನಾಮಕ್ಕೆ ಭಾರತಿ, ರೂಪಕ್ಕೆ ರುದ್ರ, ಕರ್ಮಕ್ಕೆ ವಾಯು ದೇವರುಗಳು ಅಭಿಮಾನಿಗಳು ದೇವತೆಗಳು. ನಾಮರೂಪಗಳಿಗೆ ಆತನೇ ಮುಖ್ಯನಾದುದರಿಂದ ವಾಯುದೇವರೇ ಉಳಿದ ಇಬ್ಬರಿಗೂ ನಿಯಾಮಕ. ಹೀಗಾಗಿ ಭಾರತಿ ವಾಯುಪತ್ನಿ ಎನಿಸುತ್ತಾಳೆ. (ಕೀ.೭೪, ಬಿಂಕವ್ಯಾತಕ್ಕೆ...)

**ಗಿರಿ ನಿಂದಲ್ಲೆ ಹಿಂದಕ್ಕೆ ಒಗೆದ ಹನುಮ: (ಗಂಧಮಾದನ ಸಿರಿ ತಂದು ನೋಡಿ):** ರಾಮ ರಾವಣರ ಯುದ್ಧ ಕಾಲದಲ್ಲಿ ಇಂದ್ರಜಿತು ಬಿಟ್ಟ ಬಾಣದಿಂದ ಲಕ್ಷ್ಮಣ ಪ್ರಜ್ಞೆ ತಪ್ಪುತ್ತಾನೆ. ಹಿರಿಯರ ಸಲಹೆಯಂತೆ ಹನುಮ ಸಂಜೀವಿನಿ ಹುಡುಕಲು ಹೋಗಿದ್ದವನು ಪರ್ವತವನ್ನೇ ಹೊತ್ತು ತರುತ್ತಾನೆ. ಪುನಃ ನಿಂತಲ್ಲಿಂದಲೇ ಹಿಂದಕ್ಕೆ ಒಗೆಯುತ್ತಾನೆ. ಅದು ಸ್ವಸ್ಥಾನ ಸೇರುತ್ತದೆ. (ಕೀ.೯೦, ಎಂತ ಸೂಕ್ಷ್ಮವ ನೋಡಿರಿವನ)

**ಶಕಟಾಸುರ:(ಬಂಡಿಲಿದ್ದ ಅಸುರನ ಶಿರವ):** ಕಂಸನ ಕೃಷ್ಣನ ಸಂಹಾರಕ್ಕೆಂದು ಶಕಟಾಸುರನೆಂಬ ರಾಕ್ಷಸನನ್ನು ಕಳುಹಿಸುತ್ತಾನೆ. ಆತ ಬಂಡಿಯ ರೂಪದಲ್ಲಿ ಕೃಷ್ಣನನ್ನು ಕೊಲ್ಲಬಂದಾಗ ಕೃಷ್ಣನೇ ಅವನನ್ನು ಸಂಹರಿಸುತ್ತಾನೆ. (ಕೀ.೧೨೪, ಗಿಲಕು ಅಂದಾವಮ್ಮ....)

**ಪಾರ್ಥನಿಗೆ ಮರಣ ತಪ್ಪಿಸಿದ ಕೃಷ್ಣ:** ಮಹಾಭಾರತ ಯುದ್ಧದ ಸಂದರ್ಭದಲ್ಲಿ ಕರ್ಣನು ಅರ್ಜುನನ್ನು ಕೊಲ್ಲಲು ಇಂದ್ರನಿಂದ ಶಕ್ತ್ಯಾಯುಧವನ್ನು ಪಡೆದುಕೊಂಡಿರುತ್ತಾನೆ. ಕೃಷ್ಣನು ಉಪಾಯಮಾಡಿ ಘಟೋತ್ಕಚನ ಮೇಲೆ ಆ ಬಾಣ ಪ್ರಯೋಗವಾಗುವಂತೆ ಮಾಡಿ ಅರ್ಜುನನ ಮರಣ ತಪ್ಪಿಸುತ್ತಾನೆ. (ಕೀ.೧೨೪, ಗಿಲಕು ಅಂದಾವಮ್ಮ....)

**ದ್ರೌಪದಿಯ ಅಪಹರಣ ಪ್ರಯತ್ನ:(ಐವರನು ಠಕ್ಕಿಸಿ)** ಸ್ವಯಂವರದಲ್ಲಿ ದ್ರೌಪದಿಯನ್ನು ಗೆಲ್ಲಲು ವಿಫಲನಾದ ಜಯದ್ರಥ ಅವಮಾನಗೊಂಡು, ಸೇಡುತೀರಿಸಿಕೊಳ್ಳಲು ಕಾಯುತ್ತಿರುತ್ತಾನೆ. ಪಾಂಡವರು ಭೇಟೆಗೆ ಹೋಗಿದ್ದಾಗ ದ್ರೌಪದಿಯನ್ನು ರಥದಲ್ಲಿ ಅಪಹರಿಸಲು ಯತ್ನಿಸಿದಾಗ ಕಾವಲಿಗಿದ್ದ ಧೌಮ್ಯನು ರಕ್ಷಿಸಲು ಪ್ರಯತ್ನಿಸಿ ವಿಫಲನಾಗುತ್ತಾನೆ. ದ್ರೌಪದಿ ಭೀಮನನ್ನು ಕೂಗಿ ಕರೆಯುತ್ತಾಳೆ. ಭೀಮನು ರಕ್ಷಿಸುತ್ತಾನೆ. (ಕೀ.೨೨೪, ಯಾತರ ಗರವು..)

**ಪ್ರಳಯಕಾಲದ ವಿಷ್ಣು: (ಕತ್ತಲೆ ಕಡುಜಲ):** ವಿಷ್ಣುವು ಪ್ರಳಯಕಾಲದಲ್ಲಿ ತನ್ನ ಸೃಷ್ಟಿಯನ್ನೆಲ್ಲಾ ತಾನೇ ನುಂಗಿ ಮುಂದಿನ ಸೃಷ್ಟಿ ಕಾಲದವರೆಗೆ ತನ್ನ ಹೊಟ್ಟೆಯಲ್ಲಿ ಅಡಗಿಸಿಕೊಳ್ಳುವನು. ಲಕ್ಷ್ಮಿಯು ಕತ್ತಲಾಗಿ ಶ್ರೀಯು ನೀರಾಗಿ, ಭೂಮಿಯು ವಟಪತ್ರರೂಪಿಯಾಗಿ, ವಿಷ್ಣುವಿನ ಸೇವೆ ಮಾಡುತ್ತಾರೆ. ವಟಪತ್ರದಲ್ಲಿ ವಿಷ್ಣು ಬಾಲರೂಪಿಯಾಗಿ ತನ್ನ ಕಾಲ ಹೆಬ್ಬೆರಳನನ್ನು ಚೀಪುತ್ತಾ ಮಲಗುತ್ತಾನೆ. (ಜೋಗುಳದ ಕೀರ್ತನೆ ನುಡಿ ೪೨)

**ಹೆಳವನಕಟ್ಟೆ ಗಿರಿಯಮ್ಮನವರ ಕೀರ್ತನೆಗಳು**

**ಶುಕ್ರಾಚಾರ್ಯ: (ಶುಕ್ರನ ಕಣ್ಣೆರಿದು):** ವಾಮನಾವತಾರಿ ಹರಿಗೆ ಬಲಿಯು ದಾನವ ಕೊಡಲು ಸಂಕಲ್ಪ ಮಾಡಿದಾಗ ಶುಕ್ರಾಚಾರ್ಯರು ಅರ್ಘ್ಯಕಲಶದಲ್ಲಿ ಅಡ್ಡಿಯಾಗಿ ಕುಳಿತರು. ಹರಿಯು ದರ್ಭೆಯನ್ನು ಹಾಕಿ ಧಾರೆಯನ್ನು ಸರಿಪಡಿಸಲು ಚುಚ್ಚಿದಾಗ ಶುಕ್ರಾಚಾರ್ಯರ ಒಂದು ಕಣ್ಣು ಹೋಗುತ್ತದೆ. (ಕೀ.೩, ಏನ ಹೇಳಲಿ...ನುಡಿ ೧)

**ಅಹಲ್ಯೆ:(ಶಿಲೆಯನೊದ್ದು ನಿಜಸತಿಯಳ ಮಾಡಿ):** ರಾಮಾಯಣದ ಬಾಲಕಾಂಡದಲ್ಲಿ ಶ್ರೀರಾಮನು ವಿಶ್ವಾಮಿತ್ರರೊಡನೆ ಯಜ್ಞಸಂರಕ್ಷಣೆಗೆ ಹೋಗುತ್ತಿರುವಾಗ ಗೌತಮ ಮಹರ್ಷಿಯ ಸತಿ ಅಹಲ್ಯೆಯು ಪತಿಯ ಶಾಪದಿಂದ ಕಲ್ಲಾಗಿದ್ದವಳು ಬಾಲರಾಮನ ಪಾದಸ್ಪರ್ಶದಿಂದ ನಿಜರೂಪ ಧರಿಸುತ್ತಾಳೆ. ಗೌತಮನನ್ನು ಸೇರುತ್ತಾಳೆ. (ಕೀ.೩, ಏನ ಹೇಳಲಿ...ನುಡಿ ೧)

**ಕುಬುಜೆ: (ಕುಬುಜೆಯಳ ಯುವತಿಯನ್ನಾಗಿ ಮಾಡಿದ):** ಕಂಸನ ಕರೆಯ ಮೇರೆಗೆ ಕೃಷ್ಣ ಬಲರಾಮರು ಮಧುರೆಗೆ ಬಂದಾಗ ಕುಬ್ಜೆಯು ಚಂದನವನ್ನು ತೇಯ್ದು ಕಂಸನಿಗೆ ಒಯ್ಯುತ್ತಿರುತ್ತಾಳೆ. ಕೃಷ್ಣ ಚಂದನವನ್ನೆಲ್ಲಾ ತನ್ನ ಮೈಗೆ ಬಳೆದುಕೊಳ್ಳುತ್ತಾನೆ. ಕುಬುಜೆಯ ಗೂನು ಬೆನ್ನು ಸರಿಹೋಗಿ, ಸುಂದರ ಯುವತಿಯಾಗುತ್ತಾಳೆ. (ಕೀ.೯, ತೋರಬಾರದೆ.. ನುಡಿ–೩)

**ಚಾಣೂರ–ಮುಷ್ಟಿಕ:(ಚಾಣೂರ ಮರ್ಧನ):** ಇವರು ಕಂಸನ ಆಸ್ಥಾನದ ಜಟ್ಟಿಗಳು. ಬಲರಾಮ ಕೃಷ್ಣರು ಕಂಸನ ಕರೆಗೆ ಓಗೊಟ್ಟು ಮಧುರೆಗೆ ಹೋಗಿದ್ದಾಗ, ಕಂಸನ ಪ್ರೇರಣೆಯಂತೆ ಚಾಣೂರ ಮುಷ್ಟಿಕರು ಕೃಷ್ಣನನ್ನು ಕೊಲ್ಲಲು ಬಂದು ತಾವೇ ಹತರಾಗುತ್ತಾರೆ. (ಕೀ.೨೨, ಶ್ರೀರಂಗ ಶ್ಯಾಮಲ... ನುಡಿ–೧)

**ಅಕ್ರೂರ:(ಅಕ್ರೂರ–ಅಂಬರೀಷ ವರದ):** ಅಕ್ರೂರನು ಕೃಷ್ಣನ ಅಷ್ಟಮಂತ್ರಿಗಳಲ್ಲಿ ಒಬ್ಬ. ಕಂಸನ ಅಪ್ಪಣೆಯಂತೆ ಬಲರಾಮ ಕೃಷ್ಣರು ಮಧುರೆಗೆ ಬರುವಾಗ ಯಮುನೆಯಲ್ಲಿ ಸ್ನಾನ ಮಾಡುತ್ತಿದ್ದ ಅಕ್ರೂರನಿಗೆ ಕೃಷ್ಣ ದಿವ್ಯರೂಪ ತೋರಿಸಿದ. (ಕೀ.೨೨, ಶ್ರೀರಂಗ ಶ್ಯಾಮಲ... ನುಡಿ–೩)

**ಅಂಬರೀಷ: (ಅಕ್ರೂರ–ಅಂಬರೀಷ ವರದ):** ಅಂಬರೀಷನು ಒಬ್ಬ ವಿಷ್ಣು ಭಕ್ತ. ಇವನು ಏಕಾದಶಿ ವ್ರತ ಮಾಡುತ್ತಿರುತ್ತಾನೆ. ಅದನ್ನು ಭಂಗ ಪಡಿಸಲು ದೂರ್ವಾಸ ಮುನಿ ಬರುತ್ತಾನೆ. ಅಂಬರೀಷನ ರಕ್ಷಣೆಗೆ ವಿಷ್ಣು ಚಕ್ರ ನಿಲ್ಲುತ್ತದೆ. ಕೊನೆಗೆ ದೂರ್ವಾಸ ಮುನಿ ಅಂಬರೀಷನನ್ನೇ ಮೊರೆ ಹೋಗಬೇಕಾಗುತ್ತದೆ. (ಕೀ.೨೨, ಶ್ರೀರಂಗ ಶ್ಯಾಮಲ... ನುಡಿ–೩)

**ನಾಗಸ್ತ್ರೀ ರಕ್ಷಕ:** ಕಾಲಿಯ ಎಂಬುದೊಂದು ಸರ್ಪ. ಅದು ಕಾಳಿಂದಿ ಮಡುವನ್ನು ಹೊಕ್ಕು ನೀರೆಲ್ಲವೂ ವಿಷಮಯವಾಗಿ ನೀರು ಕುಡಿದ ಪ್ರಾಣಿಗಳೆಲ್ಲವೂ ಸಾಯುತ್ತಿದ್ದವು. ಈ ವಿಷಯ ತಿಳಿದ ಕೃಷ್ಣ ಮಡುವಿಗಿಳೀದು ಕಾಲಿಯನ ಹೆಡೆಯನ್ನು ಮೆಟ್ಟಿ ತುಳಿಯತೊಡಗಿದ. ಆಗ ಕಾಲಿಯ ಪತ್ನಿಯರಾದ ನಾಗಕನ್ಯೆಯರು ಬಂದು ಕೃಷ್ಣನ ಮೊರೆಹೊಕ್ಕು ಪತಿಭಿಕ್ಷೆ ಬೇಡಿದರು. ಕೃಷ್ಣ ಅವರಿಗೆ ಅಭಯವಿತ್ತು, ಕಾಲಿಯನು ಆ ಮಡುವನ್ನು ಬಿಟ್ಟು ಹೋಗುವಂತೆ ಅಪ್ಪಣೆ ಮಾಡಿದ. (ಕೀ.೨೨, ಶ್ರೀರಂಗ ಶ್ಯಾಮಲ... ನುಡಿ–೨)

**ಕೋಟಿಲಿಂಗವನ್ನು ರೋಮ ರೋಮದಿ ಧರಿಸಿದ್ದು:** ಪಾಂಡವರ ರಾಜಸೂಯ ಯಾಗ ಸಂದರ್ಭದಲ್ಲಿ ಕೃಷ್ಣನು ಉಚ್ಛಿಷ್ಟ ಶುದ್ಧಿಗಾಗಿ ಪುರುಷಮೃಗವನ್ನು ತರಲು ಹೇಳುತ್ತಾನೆ. ಧರ್ಮರಾಯನ ಅಪ್ಪಣೆಯಂತೆ ಭೀಮ ಹೋಗುತ್ತಾನೆ. ದಾರಿಯಲ್ಲಿ ಭೇಟಿಯಾದ ಹನುಮಂತನು ಪುರುಷಾಮೃಗದ ಉಗ್ರಶೈವ ಭಕ್ತಿಯನ್ನು ಭೀಮಸೇನನಿಗೆ ವಿವರಿಸಿ ಅದನ್ನು ಹಸ್ತಿನಾವತಿಗೆ ಕರೆತರಲು ಉಪಾಯವೆಂದು ತನ್ನ ರೋಮಗಳನ್ನು ಕೊಡುವನು. ಆ ರೋಮಗಳನ್ನು ನೆಲಕ್ಕೆ ಹಾಕಿದಾಗ ಕೋಟಿ ಲಿಂಗಗಳು ಉದ್ಭವಿಸುತ್ತಿದ್ದವು. ಪುರುಷಾಮೃಗದಿಂದ ಈ ಲಿಂಗಗಳ ಪೂಜೆ ಮಾಡಿಸುತ್ತಾ ಭೀಮ ಅದನ್ನು ಹಸ್ತಿನಾವತಿಗೆ ಕರೆತರುತ್ತಾನೆ. (ಕೀ.೨೬, ಈತ ಅಂಜನಿಸುತನು ಭೀಮರಾಯ...)

**ನೀಲಕಂಠ:** ದೇವಾಸುರರು ಅಮೃತಕ್ಕಾಗಿ ಸಮುದ್ರಮಥನ ಮಾಡಿದಾಗ ಮೊದಲು ವಿಷವು ಹುಟ್ಟುತ್ತದೆ. ಶಿವನು ಆ ವಿಷವನ್ನು ನುಂಗಿದ್ದರಿಂದ ಅವನ ಕಂಠ ಕಪ್ಪಾಗುತ್ತದೆ. ಆದ್ದರಿಂದ ಶಿವನನ್ನು ನೀಲಕಂಠ ಎನ್ನುವರು. (ಕೀ.೨೯, ಬಾರನ್ಯಾತಕೆ ನೀರೆ...ನುಡಿ–೨)

**ತಾಮ್ರಗೌರಿ: (ಶಿವನ ವಲ್ಲಭೆ ತ್ರಾಸಿನಲ್ಲಿ ತೂಗುವಳು):** ಗೋಕರ್ಣ ಮಹಾಬಲೇಶ್ವರ ದೇವಸ್ಥಾನದ ಹತ್ತಿರದಲ್ಲಿ ತಾಮ್ರಗೌರಿ ಗುಡಿಯಿದೆ. ತಾಮ್ರಗೌರಿಯ ಕೈಯಲ್ಲಿ ತಕ್ಕಡಿಯಿದ್ದು ಗೋಕರ್ಣ ಹೆಚ್ಚೋ, ಕಾಶಿ ಹೆಚ್ಚೋ ಎಂದು ಆಕೆ ತೂಗುತ್ತಿದ್ದಾಳಂತೆ. ಗೋಕರ್ಣವೇ ಒಂದು ತೂಕ ಮೇಲು ಎಂಬ ನಂಬಿಕೆಯಿದೆ. (ಕೀ.೩೦, ವಿಶ್ವಪತಿ ಇಂದು ಶೇಖರ... ನುಡಿ–೧)

**ಮಹಿಷಾಸುರ ಮರ್ಧನ: (ಮಲೆತ ಮಹಿಷಾಸುರನ ಕೊಂದೆ):** ಬ್ರಹ್ಮನ ವರದಿಂದ ದಿತಿಯ ಮಗನಾಗಿ ಜನಿಸಿದ ಮಹಿಷಾಸುರ ತಪಸ್ಸು ಮಾಡಿ ಶಿವನನ್ನು ಮೆಚ್ಚಿಸಿ ತನಗೆ ಮರಣ ಬಾರದಂತೆ ವರ ನೀಡಲು ಕೇಳಿಕೊಳ್ಳುತ್ತಾನೆ. ಶಿವನು ಅದು ಸಾಧ್ಯವಾಗುವುದಿಲ್ಲ ಎಂದಾಗ, ಹೆಣ್ಣಿಂದ ಮರಣವಾಗಲಿ ಎಂದು ಕೇಳಿಕೊಳ್ಳುತ್ತಾನೆ. ಮಹಿಷನ ಉಪಟಳ ಮೀರಿದಾಗ ದೇವತೆಗಳೆಲ್ಲ ತಮ್ಮ ತೇಜಸ್ಸಿನ ಒಂದೊಂದು ಭಾಗವನ್ನು ಒಟ್ಟುಗೂಡಿಸಿ ಸೃಷ್ಟಿಸಿದ ತ್ರಿಪುರಸುಂದರಿ, ಮಹಿಷಾಸುರನನ್ನು ಕೊಲ್ಲುತ್ತಾಳೆ. (ಕೀ.೩೧, ಗಂಗಾಜನಕನ....ನು–೫)

**ಗಂಗೆಯ ಜನನ:** ವಿಷ್ಣು ವಾಮನಾವತಾರವನ್ನು ತಾಳಿ ಭೂಮಿ ಆಕಾಶಗಳನ್ನು ಅಳೆಯುತ್ತಾನೆ. ಅವನ ಪಾದ ಆಕಾಶವನ್ನು ಸ್ಪರ್ಶಿಸಿ ಬ್ರಹ್ಮಾಂಡ ಕಟಹವನ್ನು ಸೀಳಿ, ಸತ್ಯಲೋಕದಲ್ಲಿ ಅದರ

ಉಗುರಿನ ಕಾಂತಿ ತೋರಿಬರಲು ಬ್ರಹ್ಮನು ಅದಕ್ಕೆ ನೀರಿನಿಂದ ಅಭಿಷೇಕ ಮಾಡಿದನು ಆ ನೀರೇ ಗಂಗೆಯಾಗಿ ಹರಿಯಿತು. (ಕೀ.೩೩, ಎಂದು ಕಾಹು(ಣು)ವೆ...ನು-೧)

**ಸಾಂದೀಪಿನಿ:(ಸಾಂದೀಪನಿಗೊಲಿದೆ ಸಂದೇಹವಿಲ್ಲ):** ಸಾಂದೀಪನೆಂಬುವನು ಕೃಷ್ಣ ಬಲರಾಮರ ಗುರು. ವಿದ್ಯಾಭ್ಯಾಸದ ನಂತರ ಗುರುದಕ್ಷಿಣೆ ಕೊಡಲು ಕೃಷ್ಣ ಬಯಸಿದಾಗ ಸಾಂದೀಪನಿ ಸತ್ತು ಹೋಗಿರುವ ತನ್ನ ಮಗನನ್ನು ಬದುಕಿಸಿಕೊಡಿ ಎಂದು ಕೇಳಿದಾಗ ಕೃಷ್ಣ ಬಲರಾಮರು ಪಂಚಜನೆಂಬ ರಾಕ್ಷಸನನ್ನು ಕೊಂದು ಪಾಂಚಜನ್ಯವೆಂಬ ಶಂಖವನ್ನು ತೆಗೆದುಕೊಂಡು ಯಮಲೋಕಕ್ಕೆ ಹೋಗಿ ಗುರುಪುತ್ರನನ್ನು ಕರೆತಂದು ಸಾಂದೀಪನಿಗೆ ಒಪ್ಪಿಸುತ್ತಾರೆ. (ಕೀ.೪೦ ಪದುಮನಾಭನೆ ನಿನ್ನ.... ನು-೩)

**ಉತ್ತಾನಪಾದ:(ದ್ರುವಂಗೆ ಪದವಿಯನಿತ್ತೆ):** ಉತ್ತಾನಪಾದನೆಂಬ ರಾಜನ ಮಗ ದ್ರುವ. ಒಮ್ಮೆ ಉತ್ತಾನಪಾದನ ಕಿರಿಯ ಹೆಂಡತಿ ಸುರುಚಿಯ ಮಗ ಉತ್ತಮನನ್ನು ತೊಡೆಯ ಮೇಲೆ ಕೂರಿಸಿಕೊಂಡಾಗ ದ್ರುವನು ತಂದೆಯ ತೊಡೆಯ ಮೇಲೆ ಕುಳಿತುಕೊಳ್ಳಲು ಆಸೆಪಟ್ಟ, ಆಗ ಸುರುಚಿ ರಾಜಸಿಂಹಾಸನವನ್ನು ಏರುವ ಭಾಗ್ಯ ಬೇಕಿದ್ದರೆ ಕಾಡಿನಲ್ಲಿ ತಪಸ್ಸು ಮಾಡಿ ತನ್ನ ಹೊಟ್ಟೆಯಲ್ಲಿ ಹುಟ್ಟಬೇಕು ಎಂದು ಗದರಿಸಿದಳು. ದ್ರುವ ತಾಯಿಯ ಒಪ್ಪಿಗೆ ಪಡೆದು ಕಾಡಿನಲ್ಲಿ ಘೋರ ತಪಸ್ಸನ್ನಾಚರಿಸಿ ಹರಿಯನ್ನು ಪ್ರತ್ಯಕ್ಷ ಮಾಡಿಕೊಂಡು ಅವನಿಂದ ವರ ಪಡೆದು ದ್ರುವ ಮಂಡಲವೆಂಬ ಶಾಶ್ವತ ಸ್ಥಾನ ಗಳಿಸಿದ. (ಕೀ.೪೪, ಮನದ ಚಿಂತೆಯ ಬಿಡಿಸು...ನು-೩)

**ಪೊಡವಿ ಭಾರವ ಪೊತ್ತು...ಫಣಿಪ:** ಕಶ್ಯಪನಿಂದ ಕದ್ರುವಿನಲ್ಲಿ ಜನಿಸಿದವನು ಆದಿಶೇಷ. ಈತ ಬ್ರಹ್ಮನನ್ನು ಮೆಚ್ಚಿಸಿ ವರವನ್ನು ಪಡೆದು ಭೂಮಿಯನ್ನು ಹೊತ್ತಿರುವನು. ಹೆಡೆಯಲ್ಲಿ ಮಾಣಿಕ್ಯವಿದೆ. ಶಿವನು ಇವನನ್ನು ಆಭರಣವಾಗಿಸಿಕೊಂಡಿದ್ದಾನೆ. ಶೇಷನು ಒಂದು ಅಂಶದಿಂದ ಪಾತಾಳದಲ್ಲಿದ್ದು ಇನ್ನೊಂದು ಅಂಶದಿಂದ ವಿಷ್ಣುವಿನ ಹಾಸಿಗೆಯಾಗಿದ್ದಾನೆ. (ಕೀ.೪೭, ನು-೧)

**ಮನ್ಮಥ ದಹನ:(ಸ್ಮರನ ಮಡುಹಿದಾತನ)** ಸತಿಯ ಮರಣಾನಂತರ ಶಿವ ಸಮಾಧಿಸ್ತನಾಗಿದ್ದಾಗ ದೇವತೆಗಳೆಲ್ಲರೂ ಶಿವ ಪಾರ್ವತಿಯರ ವಿವಾಹ ಮಾಡಿಸಬೇಕೆಂದು ಮನ್ಮಥನನ್ನು ಕರೆದು ಶಿವನ ತಪಸ್ಸನ್ನು ಭಂಗಪಡಿಸಬೇಕೆಂದು ಕಳುಹಿಸುತ್ತಾರೆ. ಶಿವನು ಕೋಪದಿಂದ ಹಣೆಗಣ್ಣನ್ನು ತೆರೆದು ಮನ್ಮಥನನ್ನು ಸುಟ್ಟು ಬೂದಿ ಮಾಡುತ್ತಾನೆ. (ಕೀ.೫೧, ನು.೧)

**ಪಾಶುಪತಾಸ್ತ್ರ:(ವ್ಯಾದನಾಗಿ ಒಲಿದನೀತ):** ಪಾಶುಪತಾಸ್ತ್ರವನ್ನು ಪಡೆಯಬೇಕೆಂದು ತಪಸ್ವಿಯಾದ ಅರ್ಜುನನಿಗೆ ಶಿವನು ಕಿರಾತರೂಪದಿಂದ ಪ್ರತ್ಯಕ್ಷನಾಗಿ, ಪರೀಕ್ಷಿಸಿ, ಅವನ ಪರಾಕ್ರಮವನ್ನು ಮೆಚ್ಚಿ ಅಸ್ತ್ರ ನೀಡುತ್ತಾನೆ. (ಕೀ.೫೭,ಈತ ಲಿಂಗದೇವ ಶಿವನು... ನು-೩)

**ಮಧುಕೈಟಭ(ಮಧುಸೂದನನಾತ)** ಯುಗದ ಆರಂಭದಲ್ಲಿ ವಿಷ್ಣುವಿನ್ನೂ ವಟಪತ್ರಶಾಯಿಯಾಗಿದ್ದಾಗ ಅವನ ಕಿವಿಯ ಮಲದಿಂದ ಮಧು ಮತ್ತು ಕೈಟಭ ಎಂಬ ರಾಕ್ಷಸರು

ಜನಿಸಿ ನಾಭಿ ಕಮಲದಲ್ಲಿದ್ದ ಬ್ರಹ್ಮನನ್ನು ಪೀಡಿಸತೊಡಗುತ್ತಾರೆ. ಆಗ ಬ್ರಹ್ಮ ವಿಷ್ಣುವಿಗೆ ಹೇಳಲು ವಿಷ್ಣು ಅವರನ್ನು ಸಂಹರಿಸುತ್ತಾನೆ. (ಕೀ.೫೨, ಈತ ಲಿಂಗದೇವ...ನುಡಿ-೨)

**ಭೂಮಿಗೆ ಬಂದ ಗಂಗೆ:(ಗಂಗೆಯ ಪೊತ್ತವ):** ಸಗರನ ಅರವತ್ತಸಾವಿರ ಮಂದಿ ಮಕ್ಕಳು ಕಪಿಲಮುನಿಗೆ ತೊಂದರೆ ಕೊಡುತ್ತಾರೆ. ಕೋಪಗೊಂಡ ಮುನಿ ಅವರನ್ನು ಸುಟ್ಟು ಬೂದಿ ಮಾಡುತ್ತಾನೆ. ಅವರ ಮರಿಮೊಮ್ಮಗನಾದ ಭಗೀರಥನು ತನ್ನ ಮುತ್ತಜ್ಜರಿಗೆ ಸದ್ಗತಿಯನ್ನುಂಟು ಮಾಡುವುದಕ್ಕಾಗಿ ಗಂಗೆಯನ್ನು ಭೂಲೋಕಕ್ಕೆ ತರುವ ಉದ್ದೇಶದಿಂದ ಗಂಗೆಯನ್ನು ಕುರಿತು ತಪಸ್ಸು ಮಾಡುತ್ತಾನೆ. ಒಲಿದ ಗಂಗೆ ತನ್ನ ವೇಗವನ್ನು ತಡೆಯುವವರಾರು ಎಂದಾಗ ಭಗೀರಥ ಶಿವನನ್ನು ಮೆಚ್ಚಿಸಿ ಒಪ್ಪಿಸುತ್ತಾನೆ. ಗಂಗೆಯು ಶಿವನ ತಲೆಯ ಮೇಲೆ ಬಿದ್ದು ಕೆಳಕ್ಕೆ ಹರಿಯುತ್ತಾಳೆ. (ಕೀ.೫೨, ಈತ ಲಿಂಗದೇವ...ನುಡಿ-೩)

**ಭಸ್ಮಾಸುರ:(ಮುಕ್ಕಣ್ಣನ ರಿಪುಬಲವ ಸಂಹರಿಸಿದ):** ಭಸ್ಮಾಸುರನೆಂಬ ರಾಕ್ಷಸ ತಾನು ಯಾರ ತಲೆಯ ಮೇಲೆ ಕೈಯಿಟ್ಟರೂ ಅವರು ಭಸ್ಮವಾಗಬೇಕೆಂದು ಶಿವನಿಂದ ವರ ಪಡೆದ. ವರ ಪರೀಕ್ಷಿಸಲು ಶಿವನ ತಲೆಯ ಮೇಲೇ ಕೈಯಿಡಲು ಬಂದಾಗ ಶಿವನು ವಿಷ್ಣುವನ್ನು ಪ್ರಾರ್ಥಿಸುತ್ತಾನೆ. ವಿಷ್ಣು ಮೋಹಿನಿ ರೂಪ ತಾಳಿ ಭಸ್ಮಾಸುರನನ್ನು ನೃತ್ಯ ಮಾಡಲು ಹೇಳಿ ಅವನ ಕೈ ಅವನ ತಲೇಮೇಲೆ ಬರುವ ಭಂಗಿಯಲ್ಲಿ ನಿಲ್ಲಿಸಿದಾಗ ಅಸುರನು ಭಸ್ಮವಾಗುತ್ತಾನೆ. (ಸೀತಾಕಲ್ಯಾಣ, ನು-೧೫)

**ಪುರಂಧರ:(ಪರಂದರ ವರದ):** ಹದಿನಾಲ್ಕು ಮಂದಿ ಇಂದ್ರರಲ್ಲಿ ಏಳನೆಯವನು ಪುರಂಧರ. ವಿಶ್ವಜಿತ್ ಎಂಬ ಯಾಗವನ್ನು ಮಾಡಿ, ಅಗ್ನಿ ದೇವನ ಮೂಲಕ ರಥಾಶ್ವಗಳನ್ನು, ತನ್ನ ಪಿತಾಮಹನಾದ ಪ್ರಹ್ಲಾದನಿಂದ ದಿವ್ಯ ಧನುಸ್ಸನ್ನು ಪಡೆದು ಇಂದ್ರನನ್ನು ಸೋಲಿಸಿ ಸ್ವರ್ಗರಾಜ್ಯವನ್ನು ಪಡೆದುಕೊಂಡು ನಂತರ ನರ್ಮದಾ ನದೀತೀರದಲ್ಲಿ ಅಶ್ವಮೇಧಯಾಗ ಮಾಡತೊಡಗಿದ. ಆಗ ವಿಷ್ಣುವು ಬ್ರಹ್ಮಾದಿಗಳ ಮೊರೆ ಕೇಳಿ ವಾಮನನಾಗಿ ಅವತರಿಸಿ, ಬಲಿಯಿಂದ ದಾನವ ಬೇಡಿ ಅವನನ್ನು ಪಾತಾಳಕ್ಕೆ ಮೆಟ್ಟಿ ಪುರಂಧರನ ಇಂದ್ರತ್ವವನ್ನು ಉಳಿಸುತ್ತಾನೆ. (ಸೀತಾಕಲ್ಯಾಣ, ನು-೨೫)

**ದೂಷಕ:(ದೂಷಕ ಹರಣ):** ಖರ ದೂಷಣ ಶೂರ್ಪನಖಿಯರು ರಾವಣನ ಬಲತಾಯಿಯ ಮಕ್ಕಳು. ರಾಮನು ಪಂಚವಟಿಯಲ್ಲಿ ಸೀತೆ ಲಕ್ಷ್ಮಣರೊಂದಿಗೆ ವಾಸಿಸುತ್ತಿದ್ದಾಗ ಶೂರ್ಪನಖಿ ರಾಮನನ್ನು ಮೋಹಿಸಿ ಲಕ್ಷ್ಮಣನಿಂದ ಕಿವಿ ಮೂಗುಗಳನ್ನು ಕೋಯಿಸಿಕೊಂಡು ಖರನಲ್ಲಿಗೆ ಹೋಗಿ ಮೊರೆಯಿಡುತ್ತಾಳೆ. ಆಗ ಖರ ದೂಷಣರು ರಾಮನೊಂದಿಗೆ ಯುದ್ಧ ಮಾಡಿ ಸೇನಾಸಮೇತರಾಗಿ ಹತರಾಗುತ್ತಾರೆ. (ಸೀತಾಕಲ್ಯಾಣ, ನು-೨೮)

**ತಾಟಕಿ:(ತಾಟಕಾ ಪ್ರಾಣಾಪಹಾರ);** ಸುಕೇತು ಎಂಬ ಯಕ್ಷನ ಮಗಳು ತಾಟಕಿ. ಅಗಸ್ತ್ಯಮುನಿಯ ಶಾಪದಿಂದ ರಾಕ್ಷಸಿಯಾಗಿ ತನ್ನ ಮಕ್ಕಳೊಂದಿಗೆ ಋಷಿಗಳನ್ನು ಪೀಡಿಸುತ್ತಿರುತ್ತಾಳೆ. ವಿಶ್ವಾಮಿತ್ರ

ಅಯೋಧ್ಯೆಯಿಂದ ರಾಮ ಲಕ್ಷ್ಮಣರನ್ನು ಕರೆದುಕೊಂಡು ಸಿದ್ಧಾಶ್ರಮಕ್ಕೆ ಬರುವಾಗ ದಾರಿಯಲ್ಲಿ ತಾಟಕಿಯ ವೃತ್ತಾಂತ ಕೇಳಿ ಶ್ರೀರಾಮನ ಮೂಲಕ ಅವಳನ್ನು ಕೊಲ್ಲಿಸುತ್ತಾನೆ (ಸೀತಾಕಲ್ಯಾಣ, ನು–೨೯).

**ಜಟಾಯು:ಜಟಾಯು ಮುಕ್ತಿ ಕಾರಣ:** ಜಟಾಯು ಪಕ್ಷಿರಾಜ. ದಶರಥನ ಬಾಲ್ಯ ಸ್ನೇಹಿತ. ರಾವಣನು ಸೀತೆಯನ್ನು ಅಪಹರಿಸಿದಾಗ ಸೀತೆಯ ಆಕ್ರಂಧನವನ್ನು ಕೇಳಿದ ಜಟಾಯು ರಾವಣನನ್ನು ಎದುರಿಸಿ ಹೋರಾಡುತ್ತಾನೆ. ರಾವಣ ಅವನ ರೆಕ್ಕೆಗಳನ್ನು ಕತ್ತರಿಸುತ್ತಾನೆ. ಜಟಾಯು ಕೆಳಗೆ ಬೀಳುತ್ತಾನೆ. ಸೀತೆಯನ್ನು ಹುಡುಕುತ್ತಾ ಬಂದ ರಾಮನಿಗೆ ವಿಷಯ ತಿಳಿಸಿ ಪ್ರಾಣ ಬಿಡುತ್ತಾನೆ. ರಾಮನು ಜಟಾಯುವಿನ ಸಂಸ್ಕಾರ ಮಾಡುತ್ತಾನೆ. (ಸೀತಾಕಲ್ಯಾಣ, ನು–೨೯).

**ಮಾರೀಚ:( ಮಾರೀಚ ಮರ್ಧನ):** ತಾಟಕಿಯ ಮಗ ಮಾರೀಚ. ರಾವಣ ಈತನಲ್ಲಿಗೆ ಹೋಗಿ ಸೀತೆಯನ್ನು ಅಪಹರಿಸಲು ತನಗೆ ಸಹಾಯ ಮಾಡಬೇಕೆಂದು ಕೇಳಿಕೊಂಡಾಗ, ಈತ ಮಾಯಾಮೃಗದ ರೂಪಧರಿಸಿ ಸೀತೆಯನ್ನು ಮರುಳು ಮಾಡುತ್ತಾನೆ. ಬಳಿಕ ರಾಮನಿಂದ ಹತನಾಗುತ್ತಾನೆ. (ಸೀತಾಕಲ್ಯಾಣ, ನು–೩೦).

**ಹರಪನಹಳ್ಳಿ ಭೀಮವ್ವನವರ ಕೀರ್ತನೆಗಳು**

**ಅಷ್ಟಭಾರ್ಯೇರು(ದ್ವಾರಾವತಿಯಲ್ಲಿದ್ದ ಅಷ್ಟಭಾರ್ಯೇರಿಂ...):** ಭೀಷ್ಮಕನ ಮಗಳು ರುಕ್ಮಿಣಿ, ಸತ್ರಾಜಿತನ ಮಗಳು ಸತ್ಯಭಾಮೆ, ನಗ್ನಜಿತನ ಮಗಳು ನೀಲಾ, ಶ್ರುತಕೀರ್ತಿ ಮಗಳು ಭದ್ರೆ, ರಾಜಾದಿದೇವಿಯ ಮಗಳು ಮಿತ್ರವಿಂದೆ, ಸೂರ್ಯನ ಮಗಳು ಕಾಳಿಂದಿ, ಮದ್ರಾಧಿಪತಿಯ ಮಗಳು ಲಕ್ಷ್ಮಣ, ಜಾಂಬವಂತನ ಮಗಳು ಜಾಂಬವತಿ ಇವರು ಕೃಷ್ಣನ ಅಷ್ಟಭಾರ್ಯೇರು. (ಕೀ.೧೦, ಬಂದೆನಿಲ್ಲಿಗೆ....)

**ಕೇಶಿ(ಕೇಶಿಧೇನು ತೃಣಾವರ್ತ ಶಗಟಾಸುರ):** ಕಂಸನ ಪರಿವಾರಕೆ ಸೇರಿದ ಒಬ್ಬ ರಾಕ್ಷಸ. ಇವನು ಕುದುರೆ ರೂಪವನ್ನು ತಾಳಿ ಬಲರಾಮ ಕೃಷ್ಣರನ್ನು, ಗೊಲ್ಲ ಹುಡುಗರನ್ನು ಪೀಡಿಸಿ ಕೃಷ್ಣನಿಂದ ಹತನಾದ. (ಕೀ.೨೨, ನೀಲವರ್ಣ ಗೋಪಾಲ... ನು–೭)

**ಧೇನು:** ಒಬ್ಬ ರಾಕ್ಷಸ ಕತ್ತೆಯ ರೂಪ ಧರಿಸಿ, ಬೃಂದಾವನದ ಸಮೀಪ ತಾಳೆಯ ವನದಲ್ಲಿ ತನ್ನ ಪರಿವಾರದೊಂದಿಗೆ ನೆಲೆಸಿ ಅಲ್ಲಿಗೆ ಬಂದವರನ್ನೆಲ್ಲಾ ಕೊಂದು ತಿನ್ನುತ್ತಿದ್ದ. ಒಮ್ಮೆ ಗೊಲ್ಲ ಹುಡುಗರು ತಾಳೆಯ ಹಣ್ಣುಗಳನ್ನು ತಿನ್ನು ಆಸೆಯಿಂದ ಆ ವನಕ್ಕೆ ಹೋದಾಗ ಧೇನುಕ ಬಲರಾಮನ ಮೇಲೆ ಬಿದ್ದು ಅವನಿಂದ ಹತನಾದ. (ಕೀ.೨೨, ನೀಲವರ್ಣ ಗೋಪಾಲ... ನು–೭)

**ತೃಣಾವರ್ತ:** ಒಬ್ಬ ರಾಕ್ಷಸ. ಕಂಸನ ಪ್ರೇರಣೆಯಂತೆ ಬಲರಾಮ ಕೃಷ್ಣರನ್ನು ಕೊಲ್ಲುವುದಕ್ಕಾಗಿ ಬಿರುಗಾಳಿಯ ರೂಪದಿಂದ ಬಂದು ಅವರಿಬ್ಬರನ್ನು ಎತ್ತಿಕೊಂಡು ಹೋಗುತ್ತಿದ್ದಾಗ ಗರಿಮ ಸಿದ್ಧಿಯಿಂದ ದೇಹವನ್ನು ಭಾರ ಮಾಡಿ ತೃಣಾವರ್ತನ ಕುತ್ತಿಗೆಯನ್ನು ಗುದ್ದಿ ಅವನನ್ನು ಕೊಂದ. (ಕೀ.೨೨, ನೀಲವರ್ಣ ಗೋಪಾಲ... ನು–೭)

**ಕಾಲನೇಮಿ: (ದುಷ್ಟ ಕಾಲನೇಮಿ)** ನೂರು ತಲೆಗಳಿದ್ದ ಒಬ್ಬ ರಾಕ್ಷಸ. ಇಂದ್ರ ಪದವಿಯನ್ನೇರಿ ಮೆರೆಯುತ್ತಿದ್ದ. ಅವನನ್ನು ವಿಷ್ಣು ಚಕ್ರಾಯುಧದಿಂದ ಸಂಹರಿಸಿದ. (ಕೀ.೨೨, ನೀಲವರ್ಣ ಗೋಪಾಲ... ನು–೨೪)

**ಅಕ್ಷಯಕುಮಾರ:(ಅಕ್ಷಯಕುಮಾರನ್ನ ಮುರಿದು):** ಇವನು ರಾವಣ ಮಂಡೋದರಿಯ ಮಗ. ಹನುಮಂತನು ಸೀತೆಯನ್ನು ಹುಡುಕಲು ಲಂಕೆಗೆ ಹೋಗಿದ್ದಾಗ ಇವನನ್ನು ಕೊಂದ. (ಕೀ.೩೦, ನು–೧೨)

**ಹನುಮ ವಾಹನನಾದ: (ವಾಹನನಾದ ತ್ರಿಧಾಮದೊಡೆಯಗೆ):** ರಾಮ ರಾವಣರ ಯುದ್ಧದ ಸಂದರ್ಭದಲ್ಲಿ ರಾವಣ ರಥದ ಮೇಲೂ ರಾಮ ನೆಲದ ಮೇಲೆ ನಿಂತಿರಲಾಗಿ ಹನುಮಂತ ರಾಮನನ್ನು ಹೊತ್ತು ಆ ಮೂಲಕ ವಾಹನನಾಗಿ ಭಕ್ತಿಯನ್ನು ಮೆರೆದ. (ಕೀ.೩೭, ನು–೨)

**ಬಕ:** ಒಬ್ಬ ರಾಕ್ಷಸ. ಏಕಚಕ್ರನಗರದಲ್ಲಿ ವಾಸವಾಗಿದ್ದ. ಒಮ್ಮೆ ಆ ಊರಿನ ಪದ್ಧತಿಯ ಸರತಿಯಂತೆ ಭೀಮನು ಒಂದು ಬಂಡಿ ಅನ್ನವನ್ನು ತೆಗೆದುಕೊಂಡು ಹೋದ. ಅವನಿಗೆ ನೀಡದೆ ತಾನೇ ಉಂಡು ಅವನನ್ನು ಸಂಹರಿಸಿದ. (ಕೀ.೩೮, ನು–೮)

**ಹಿಡಿಂಬಕ:** ಒಬ್ಬ ರಾಕ್ಷಸ. ಪಾಂಡವರು ಅರಗಿನ ಮನೆಯಿಂದ ಹೊರಬಿದ್ದು ಅರಣ್ಯವನ್ನು ಸೇರಿದಾಗ ಭೀಮನನ್ನು ಕೆಣಕಿ ಅವನಿಂದ ಹತನಾದ. (ಕೀ.೩೮, ನು–೨)

**ಕಿಮ್ಮೀರ:** ಒಬ್ಬ ರಾಕ್ಷಸ. ಬಕಾಸುರನ ತಮ್ಮ. ಪಾಂಡವರು ಬಕಾಸುರನನ್ನು ಕೊಂದರೆಂದು ಅವರ ಮೇಲೆ ಯುದ್ಧಕ್ಕೆ ಹೋಗಿ ಭೀಮನಿಂದ ಹತನಾದ. (ಕೀ.೩೮, ನು–೨)

**ಪರೀಕ್ಷಿತ:(ಪರೀಕ್ಷನುಳುಹಿದಂತೆ):** ಅಭಿಮನ್ಯು ಮತ್ತು ಉತ್ತರೆಯ ಮಗ ಇವನು. ತಾಯಿಯ ಗರ್ಭದಲ್ಲಿರುವಾಗಲೇ ಅಶ್ವತ್ಥಾಮ ಪ್ರಯೋಗಿಸಿದ ಬಾಣದಿಂದ ಹತನಾಗಿ ಕೃಷ್ಣನ ಮಹಿಮೆಯಿಂದ ಬದುಕಿಕೊಂಡ. (ಕೀ.೫೮–ನು–೧).

**ಕುವಲಯ: (ಕುವಲಯಾಪೀಡ):** ಇದು ಕಂಸನ ಆನೆ. ಕೃಷ್ಣನನ್ನು ಕೊಲ್ಲುವುದಕ್ಕಾಗಿ ಒಮ್ಮೆ ಕಂಸನು ಕೃಷ್ಣ ಬಲರಾಮರನ್ನು ಕರೆಸಿಕೊಂಡ. ಪುರದ ಬಾಗಿಲಲ್ಲೇ ಕುವಲಯ ಪೀಡನನ್ನು ಅವನ ಮೇಲೆ ಓಡಿಸಿದ. ಕೃಷ್ಣ ಅದನ್ನು ಕೊಂದ. (ಕೀ.೫೯, ನು–೫೯)

**ವಿದುರ:** ವೇದ ವ್ಯಾಸ ಮುನಿಯಿಂದ ದಾಸಿಯೊಬ್ಬಳಲ್ಲಿ ಜನಿಸಿದವನು. ಕೃಷ್ಣನ ಪರಮ ಭಕ್ತ. ಅಣಿಮಾಂಡವ್ಯನ ಶಾಪದಿಂದ ಯಮನೇ ವಿದುರನಾಗಿ ಜನಿಸಿದ. ಮಹಾಭಾರತ ಯುದ್ಧ ಸಂದರ್ಭದಲ್ಲಿ ಕೌರವನ ಆಸ್ಥಾನಕ್ಕೆ ಸಂಧಾನಕ್ಕೆ ಬಂದ ಕೃಷ್ಣ ವಿದುರನಲ್ಲಿಯೇ ಉಳಿದುಕೊಂಡಿರುತ್ತಾನೆ. (ಕೀ–೬೪, ನು–೨).

**ಕಾರ್ತವೀರ್ಯಾರ್ಜುನ:** ಚಂದ್ರವಂಶದ ಕೃತವೀರ್ಯ ರಾಜನ ಮಗ ಕಾರ್ತವೀರ್ಯಾರ್ಜುನ. ಒಮ್ಮೆ ಇವನು ಭೇಟೆಗೆ ಹೋದಾಗ ಜಮದಗ್ನಿ ಆಶ್ರಮವನ್ನು ಹೊಕ್ಕ. ಕಪಿಲೆಯನ್ನು ನೋಡಿ

ಅದನ್ನು ತನಗೆ ಕೊಡುವಂತೆ ಕೇಳಿದ. ಮುನಿ ಒಪ್ಪಲಿಲ್ಲ. ಮುನಿಯನ್ನು ಕೊಂದ. ಕಪಿಲೆ ಮಾತ್ರ ಸಿಗಲಿಲ್ಲ. ಮುನಿಯ ಸಾವಿನ ಸುದ್ದಿ ಪರಶುರಾಮನಿಗೆ ತಿಳಿಯಿತು. ಕೂಡಲೇ ಅವನು ಮಾಹಿಷ್ಮತಿಗೆ ಹೋಗಿ ಕಾರ್ತವೀರ್ಯಾರ್ಜುನನ ಸಾವಿರ ತೋಳುಗಳನ್ನು ಇರಿದು ಕೊಂದ. (ಕೀ.೭೩, ನು-೨).

**ನರಕಾಸುರ:** ಇವನು ರಾಕ್ಷಸ. ವರಹಾವತಾರಿ. ವಿಷ್ಣುವಿನ ಬೆವರು ಭೂಮಿಗೆ ಬಿದ್ದಾಗ ಭೂದೇವಿಯಲ್ಲಿ ಜನಿಸಿದ. ಭೂದೇವಿ ವಿಷ್ಣುವನ್ನು ಪ್ರಾರ್ಥಿಸಿ ಇವನಿಗೆ ವೈಷ್ಣವಾಸ್ತ್ರವನ್ನು ಕೊಡಿಸಿದಳು. ಇದರಿಂದ ಬಲಗೊಂಡ ನರಕಾಸುರ ಲೋಕಕಂಟಕನಾದ. ಶ್ರೀಕೃಷ್ಣ ಅವನನ್ನು ಕೊಂದು ಹದಿನಾರು ಸಾವಿರ ಸ್ತ್ರೀಯರನ್ನು ವಿವಾಹವಾದ. (ಕೀ.೭೬, ನು-೩೬).

**ಮುಚುಕುಂದ ವರದ:** ಸೂರ್ಯವಂಶದ ಮಾಂಧಾತನ ಮಗ. ಅಂಬರೀಷನ ಸಹೋದರ. ಕೃಷ್ಣನನ್ನು ಕೊಲ್ಲಲು ಬೆನ್ನಟ್ಟಿ ಬಂದ ಕಾಲಯವನನ್ನು ಮುಚುಕುಂದ ಭಸ್ಮ ಮಾಡಿದ. ಕೃಷ್ಣನ ಅನುಗ್ರಹಕ್ಕೆ ಪಾತ್ರನಾದ. (ಕೀ.೧೨೦, ನು-೨೦).

**ಉದ್ಧವ:** ಇವನು ಕೃಷ್ಣನ ಮಂತ್ರಿ, ಸ್ನೇಹಿತ. ಕಂಸನನ್ನು ಕೊಂದ ವಿಷಯವನ್ನು ಗೋಕುಲದ ಗೋಪಿಯರಿಗೆ ತಿಳಿಸಿದ ದೂತ. (ಕೀ.೮೨, ನು-೧).

**ಜಲಂಧರ:** ಇವನೊಬ್ಬ ರಾಕ್ಷಸ. ಹೆಂಡತಿಯಾದ ವೃಂದೆಯ ಪಾತಿವ್ರತ್ಯ ಬಲದಿಂದ ಅವನು ಅಬೇಧ್ಯನಾಗಿದ್ದ. ವಿಷ್ಣುವು ವೃಂದೆಯ ಪಾತಿವ್ರತ್ಯ ಹಾಳುಮಾಡಿದಾಗ ಶಿವ ಜಲಂಧರನನ್ನು ಕೊಂದ. (ಕೀ.೮೨, ನು-೧೯),

**ಐರಾವತ: (ಸುರಪತಿಗೆ ಪತ್ರವನೆ...):** ಇದು ದೇವಲೋಕದ ಇಂದ್ರನ ಆನೆ. ವೇದವ್ಯಾಸರ ಹೇಳಿಕೆಯಂತೆ ಒಮ್ಮೆ ಗಾಂಧಾರಿ ಮಣ್ಣಿನ ಆನೆಯ ಮೇಲೆ ಗೌರಿಯನ್ನು ಕೂರಿಸಿ ವಿಜೃಂಭಣೆಯಿಂದ ಪೂಜೆ ಮಾಡಿದಳು. ಕುಂತಿಯನ್ನು ಆಹ್ವಾನಿಸಲಿಲ್ಲ. ದುಃಖಿತಳಾದ ಕುಂತಿ ಮಕ್ಕಳೆದುರು ಹೇಳಿಕೊಂಡಳು. ಅರ್ಜುನನು ಐರಾವತವನ್ನೇ ತಂದು ವ್ರತ ನಡೆಸಿಕೊಡುವುದಾಗಿ ಹೇಳಿ ಇಂದ್ರನಿಗೆ ಪತ್ರ ಬರೆದನು. ಸ್ವರ್ಗ ಭೂಮಿಗಳ ನಡುವೆ ಬಾಣಗಳಿಂದ ಮಾರ್ಗ ರಚಿಸಿ ಐರಾವತವನ್ನು ಭೂಮಿಗೆ ತಂದ. (ಕೀ.೧೦೩, ನು-೮).

**ಮಗನ ಕೈಯಿಂದ ವಧೆ:** ಅಶ್ವಮೇಧಯಾಗದ ಕುದುರೆಯ ಬೆಂಗಾವಲಿಗೆ ಹೋಗುತ್ತಿದ್ದ ಅರ್ಜುನ ತನ್ನ ಮಗನಾದ ಬಬ್ರುವಾಹನನಿಂದ ಹತನಾದಾಗ ಉಲೂಪಿ ಸಂಜೀವ ರತ್ನದಿಂದ ಅವನನ್ನು ಬದುಕಿಸಿದಳು. (ಕೀ.೧೦೩, ನು-೧೬).

**ಕಾಲಯಮ:** ಇವನು ಗರ್ಗ ಮಹರ್ಷಿಯ ಮಗ. ಒಮ್ಮೆ ಯಾದವರು ತನ್ನ ತಂದೆಯನ್ನು ಪರಿಹಾಸ್ಯ ಮಾಡಿದ್ದರಿಂದ ಅವರ ಮೇಲೆ ಇವನಿಗೆ ದ್ವೇಷ. ಶಿವನ ಅನುಗ್ರಹವನ್ನು ಪಡೆದ ಇವನ ಗೆಲ್ಲುವುದು ಕೃಷ್ಣನಿಗೂ ಕಷ್ಟವಾಗಿತ್ತು. ಒಮ್ಮೆ ಕಾಲಯಮ ಕೃಷ್ಣನನ್ನು ಬೆನ್ನಟ್ಟಿ ಬಂದಾಗ ಮುಕುಂದನನ್ನೇ ಕೃಷ್ಣನೆಂದು ಬಗೆದು ಅವನನ್ನು ಕಾಲಿಂದ ಒದ್ದ. ಮುಕುಂದನು ದೃಷ್ಟಿಸಿ ನೋಡಲು ಕಾಲಯಮ ಭಸ್ಮನಾದ. (ಕೀ.೧೨೦, ನು-೨೦).

**ಸಾಂಬ:** ಇವನು ಕೃಷ್ಣ ಜಾಂಬವತಿಯ ಮಗ. ದುರ್ಯೋಧನನ ಮಗಳು ಲಕ್ಷ್ಮಣೆ ಈತನ ಪತ್ನಿ. ದ್ವಾರಕೆಗೆ ಬಂದ ಕಣ್ವ ಮುನಿಗಳ ಪರಿಕ್ಷಾರ್ಥವಾಗಿ ಯಾದವರು ಈತನಿಗೆ ಗರ್ಭಿಣಿ ಸ್ತ್ರೀಯ ವೇಷ ಹಾಕಿ ಕಣ್ವ ಮುನಿಗೆ ತೋರಿಸಿ ಈಕೆ ಎಂತಹ ಮಗುವನ್ನು ಹಡೆಯುವಳು ಎಂದು ಕೇಳಲು ನಿಮ್ಮ ವಂಶ ನಾಶಕವಾದ ಮುಸಲವನ್ನು ಹಡೆಯುವಳು ಎಂದು ಹೇಳುತ್ತಾರೆ. ಮುಂದೆ ಕಣ್ವರ ವಾಕ್ಯದಂತೆ ಸಾಂಬ ಹೆತ್ತ ಮುಸಲದಿಂದ ಯದುವಂಶ ನಾಶವಾಗುತ್ತದೆ. (ಕೀ.೧೪, ನು-೬).

**ಸುಂದ ಉಪಸಂದರ:** ಸುಂದ ಉಪಸುಂದರರು ಹಿರಣ್ಯಕಶಿಪುವಿನ ವಂಶದ ನಿಕುಂಬನೆಂಬ ಅರಸನ ಮಕ್ಕಳು. ಇಬ್ಬರೂ ಬ್ರಹ್ಮನನ್ನು ಕುರಿತು ತಪಸ್ಸು ಮಾಡಿ ಪರಸ್ಪರ ನಮ್ಮಿಂದ ನಮಗೆ ಮರಣವಾಗಬೇಕಲ್ಲದೆ ಅನ್ಯರಿಂದ ಅಸಾಧ್ಯವಾಗಲಿ ಎಂದು ವರ ಪಡೆದು ಲೋಕಕಂಟಕರಾದರು. ಒಮ್ಮೆ ವಿಶ್ವಕರ್ಮನು ಸೃಷ್ಟಿಸಿದ ತಿಲೋತ್ತಮೆಯ ಸಲುವಾಗಿ ಪರಸ್ಪರ ಹೋರಾಡಿ ಮೃತರಾದರು. (ಕೀ.೧೪೧, ನು-೧೪).

ಅರ್ಜುನನಿಂದ ಅಪ್ಸರೆಯರ ಶಾಪ ವಿಮೋಚನೆ: ಅರ್ಜುನ ತನ್ನ ತೀರ್ಥಯಾತ್ರೆಯ ಸಂದರ್ಭದಲ್ಲಿ ನಾರೀತೀರ್ಥದಲ್ಲಿ ಸ್ನಾನ ಮಾಡುತ್ತಿದ್ದಾಗ ಮೊಸಳೆಯೊಂದು ಅವನನ್ನು ಹಿಡಿಯುತ್ತದೆ. ಅವನು ಅದನ್ನು ಹೊರಗೆ ಹಾಕಿದ. ಅದು ವರ್ಗೆ ಎಂಬ ಅಪ್ಸರೆಯಾಗಿ ತನ್ನ ಶಾಪ ಕಾರಣವನ್ನು ತಿಳಿಸಲು ಅರ್ಜುನ ಅಲ್ಲಿ ಸುತ್ತಮುತ್ತ ಇರುವ ತೀರ್ಥಗಳಲ್ಲಿ ಶಾಪದಿಂದ ಮೊಸಳೆಯ ರೂಪದಲ್ಲಿದ್ದ ಅಪ್ಸರೆಯರನ್ನೆಲ್ಲಾ ವಿಶಾಪಗೊಳಿಸಿದೆ. (ಕೀ.೧೪೧, ನು-೧೫).

**ಜೀವೂಬಾಯಿಯವರ ಕೀರ್ತನೆಗಳು**

**ಗುಹ:** ಬೇಡರ ಅರಸು, ದಶರಥನ ಮಿತ್ರ. ರಾಮನು ಕಾಡಿಗೆ ಹೋಗುವಾಗ ಗುಹನಿಂದ ಆತಿಥ್ಯ ಸ್ವೀಕರಿಸಿ, ರಾತ್ರಿ ಅಲ್ಲಿಯೇ ತಂಗಿದ್ದನು. ಮರುದಿನ ಗುಹನೇ ರಮಲಕ್ಷ್ಮಣರನ್ನು ದೋಣಿಯಲ್ಲಿ ನದಿ ದಾಟಿಸಿದ. (ಕೀ.೪೦, ನು-೨).

**ಜರಾಸಂಧ:** ಮಗಧ ದೇಶಾಧಿಪತಿಯಾದ ಬೃಹದ್ರಥನ ಮಗ. ಬೃಹದ್ರಥನ ಇಬ್ಬರು ಹೆಂಡತಿಯರಿಗೆ ಅರ್ಧ ಅರ್ಧವಾಗಿ ಜನಿಸಿದ ಮಗುವನ್ನು ಬಿಸಾಡಲು ಜರೆಯೆಂಬ ರಾಕ್ಷಸಿ ಎರಡನ್ನೂ ಒಟ್ಟುಗೂಡಿಸಿದ್ದರಿಂದ ಜರಾಸಂಧನೆಂದು ಹೆಸರಾದ. ಮುಂದೆ ಭೀಮನಿಂದ ಕೊಲ್ಲಲ್ಪಟ್ಟ. (ಕೀ.೬೨, ನು-೨).

**ಅಂಬಾಬಾಯಿಯವರ ಕೀರ್ತನೆಗಳು**

**ಸತಿಪ್ರಾಯ ಕೆಡಿಸದೆ ಸುತರ ಪಡೆದ:** ಶ್ರೀಹರಿ ತನ್ನ ದೇಹದಿಂದಲೇ ಪುತ್ರರನ್ನು ಸೃಷ್ಟಿಸಿದ. ನಾಭಿಯಿಂದ ಬ್ರಹ್ಮನು, ಮನಸ್ಸಿನಿಂದ ಚಂದ್ರ, ಕಣ್ಣಿನಿಂದ ಸೂರ್ಯ, ಮುಖದಿಂದ ಇಂದ್ರ, ಅಗ್ನಿಯಿಂದ ಪ್ರಾಣವಾಯು. (ಕೀ.೫೪, ನು-೫).

**ಕುಹಯೋಗ:** ಅಷ್ಟಗ್ರಹಯೋಗ ಅಥವಾ ಕಾಲಸರ್ಪ ಯೋಗ ಎಂಬುದು ಕ್ರೂರ ಗ್ರಹ ಕೂಟ. ಶನಿ, ಸೂರ್ಯ, ಅಂಗಾರ ಮತ್ತು ಗುರು ಗ್ರಹಗಳು ಯಾರ ಜನ್ಮರಾಶಿಗೆ ಬರುತ್ತದೋ ಅದು ಅವರಿಗೆ ಕುಹಯೋಗ. ಕೃಷ್ಣದೇವರಾಯನ ಜಾತಕದಂತೆ ವಿಕ್ರಮ ಸಂವತ್ಸರದ ಪುಷ್ಯ ಬಹುಳ ಅಮಾವಾಸ್ಯೆ (೩೦-೦೧-೧೫೨೧) ಕುಹಯೋಗ ಪ್ರಾಪ್ತವಾಗುವುದೆಂದು ಜೋಯಿಸಲು ತಿಳಿಸಿದ್ದರು. ಅದರಿಂದ ದೊರೆಗೆ ಪ್ರಾಣಾಪಾಯ ಅಥವಾ ದೇಹತ್ಯಾಗ ಉಂಟಾಗಬಹುದೆಂದು ಊಹಿಸಿದ್ದರು. ಮಂತ್ರಿಗಳ ಸಲಹೆಯಂತೆ ಕೃಷ್ಣದೇವರಾಯ ಆ ಸಂದರ್ಭದಲ್ಲಿ ಸಿಂಹಾಸನ ತ್ಯಾಗ ಮಾಡಿ ವ್ಯಾಸರಾಯರಿಗೆ ಸಿಂಹಾಸನವನ್ನು ಒಪ್ಪಿಸಿದ. ವ್ಯಾಸರು ಮೂರುಮುಕ್ಕಾಲು ಘಳಿಗೆ ಸಿಂಹಾಸನದ ಮೇಲೆ ಕುಳಿತು ರಾಜ್ಯಭಾರ ಮಾಡಿದರು. ಕುಹಯೋಗದ ಸಂದರ್ಭದಲ್ಲಿ ತಮ್ಮ ಕಾವಿ ವಸ್ತ್ರವನ್ನು ಸಿಂಹಾಸನದ ಮೇಲೆ ಎಸೆದರು ಅದು ಸುಟ್ಟುಹೋಯಿತು. ರಾಜರಿಗೆ ಬರಬೇಕಾದ ವಿಪತ್ತನ್ನು ಕಾವಿ ವಸ್ತ್ರ ಅನುಭವಿಸಿತು. (ಕೀ.೧೫೩, ನು-೪).

**ಶಾಂತಿಬಾಯಿಯವರ ಕೀರ್ತನೆಗಳು**

**ಶಬರಿ:** ರಾಮನ ಬರುವಿಕೆಗಾಗಿಯೇ ಹಗಲಿರುಳು ಕಾದಿದ್ದ ಭಕ್ತೆ. ರಾಮ ಬಂದಾಗ ರುಚಿಯಾದ ಹಣ್ಣುಗಳನ್ನು ಕೊಡಬೇಕೆಂದು ತಾನು ರುಚಿ ನೋಡಿದ ಹಣ್ಣನ್ನೇ ನೀಡಿದಳು. ರಾಮ ಪ್ರೀತಿಯಿಂದ ಅವಳಿಗೆ ಸದ್ಗತಿ ನೀಡಿದ. (ಕೀ.೧೯, ನು-೩).

**ರಾಧಾಬಾಯಿಯವರ ಕೀರ್ತನೆಗಳು**

**ಮಾವಿನರಸದೊಳು ಮುಳುಗಿ ಮೃತನಾದ:** ಕಿರೀಟಗಿರಿಯ ದೇಸಾಯಿಯವರು ರಾಘವೇಂದ್ರಸ್ವಾಮಿಗಳ ಭಕ್ತರು. ಒಮ್ಮೆ ಅವರು ರಾಘವೇಂದ್ರಸ್ವಾಮಿಗಳನ್ನು ಮನೆಗೆ ಆಹ್ವಾನಿಸಿರುತ್ತಾರೆ. ಆದಿನ ಸಾವಿರಾರು ಜನಕ್ಕೆ ಭೋಜನ ಏರ್ಪಡಿಸಿರುತ್ತಾರೆ. ಮಾವಿನ ಹಣ್ಣಿನ ಕಾಲವಾದ್ದರಿಂದ ಸೀಕರಣೆ ಮಾಡಿಸಿರುತ್ತಾರೆ. ಮಾವಿನ ಸೀಕರಣೆಯ ಕೊಳಗವನ್ನು ಬಗ್ಗಿ ನೋಡಿದ ಅವರ ಪುಟ್ಟ ಮಗ ಅದರೊಳಗೆ ಬಿದ್ದು ಮೃತನಾಗುತ್ತಾನೆ. ಮಗ ಸತ್ತ ವಿಷಯವನ್ನು ಮುಚ್ಚಿಡುತ್ತಾರೆ. ಕೊನೆಗೆ ತೀರ್ಥ ಕೊಡುವ ಸಂದರ್ಭದಲ್ಲಿ ಗುರು ರಾಘವೇಂದ್ರರು ದೇಸಾಯಿ ಕುಟುಂಬವನ್ನು ಕರೆಯುತ್ತಾರೆ. ದುಃಖದಿಂದ ನಡೆದ ವಿಷಯವನ್ನು ದೇಸಾಯಿ ತಿಳಿಸಿದಾಗ. ಶವವನ್ನು ತರಿಸಿ ಗುರುಗಳು ಮಂತ್ರೋದಕವನ್ನು ಪ್ರೋಕ್ಷಿಸಿದಾಗ ಎದ್ದು ಕೂರುತ್ತಾನೆ. (ಕೀ.೬).

# ಅಧ್ಯಾಯ–ಏಳು

## ನಿಸರ್ಗ ವರ್ಣನೆ

ನಿಸರ್ಗ ಸಕಲ ಜೀವಿಗಳನ್ನೂ ಪೋಷಿಸುವ ತಾಯಿ. ಆದಿಮಾನವನಿಂದ ಮೊದಲುಗೊಂಡು ಆಧುನಿಕನವರೆಗೆ ನಿಸರ್ಗ (ಪ್ರಕೃತಿ) ಕಾಪಾಡಿಕೊಂಡು ಬಂದಿದೆ. ಋಷಿ ಉಕ್ತ ಮಂತ್ರಗಳು, ಕಂಡ ದರ್ಶನಗಳು ನಿಸರ್ಗದ ಮಡಿಲಿನಲ್ಲಿನ ತಪಸ್ಸಿನ ಫಲ. 'ಪ್ರಣವ'ವು ಕೇಳಿಸಿದ್ದೇ ನಿಸರ್ಗದ ಒಡಲಿನಿಂದ ಎಂದು ಹೇಳಲಾಗುತ್ತಿದೆ. ಇದನ್ನು ಆರಾಧಿಸುವುದು, ಕೀರ್ತಿಸುವುದು, ವರ್ಣಿಸುವುದು ಅತ್ಯಂತ ಪ್ರಿಯವಾದ ವಿಷಯ. ಅಂತೆಯೇ ಮಹಿಳಾಕೀರ್ತನಕಾರರು ತಮ್ಮ ಕೃತಿಗಳಲ್ಲಿ ವನ ವರ್ಣನೆ, ಪುಷ್ಪ ಸಂಕುಲ, ಜೀವಜಗತ್ತು ಹಾಗು ನದಿಯನ್ನು ಮನೋಹರವಾಗಿ ಚಿತ್ರಿಸಿದ್ದಾರೆ. ಕಥೆಯಲ್ಲಿನ ಇತರ ಪಾತ್ರಗಳ ಜೊತೆಗೆ ನಿಸರ್ಗವೂ ಒಂದು ಪಾತ್ರವಾಗಿ ಕಾಣಿಸಿಕೊಂಡಿದೆ. ಓದುತ್ತಿದ್ದರೆ ಮಲೆನಾಡಿನ ಚಿತ್ರಣದ ಅನುಭವವನ್ನು ತಂದುಕೊಡುತ್ತದೆ. ಈಗ ವಿನಾಶದ ಅಂಚಿನಲ್ಲಿರುವ ವೃಕ್ಷಗಳು, ಪುಷ್ಪಸಂಕುಲಗಳು, ಪ್ರಾಣಿ ಸಂಕುಲಗಳ ದಾಖಲೆಗಳನ್ನು ತಮ್ಮ ಕೃತಿಗಳಲ್ಲಿ ಉಳಿಸಿದ್ದಾರೆ. ಕಥೆಯ ಪಾತ್ರಗಳ ಸಂದರ್ಭಕ್ಕೆ ಒತ್ತಾಸೆ ನೀಡುತ್ತದೆ. ಶಕುನಗಳ ಸೂಚಕವಾಗಿಯೂ ಬರುತ್ತವೆ. ಕೆಲವು ಕಡೆಯಂತೂ ಕಥೆಗೆ ಹೊಸ ತಿರುವನ್ನು ತಂದು ಕೊಡುತ್ತದೆ. ನಿಸರ್ಗ ಪ್ರಿಯತೆಯು ಅವರ ಹೃದಯ ವೈಶಾಲ್ಯದ ಸಂಕೇತವಾಗಿದೆ.

**ವನ ವರ್ಣನೆ**

ಗಲಗಲಿ ಅವ್ವನವರು ತಮ್ಮ ಕೀರ್ತನೆಯೊಂದರಲ್ಲಿ (ಕೀ.೨೨) ದ್ವಾರಕೆಯ ವನವು
ಏಳು ಸುತ್ತಿನ ಕೋಟೆ ಬಾಳೆ ನಿಂಬೆ ದಾಳಿಂಬ ವನ ಎಲೆತೋಟ
ನೆಲ್ಲಿ ನೀರಲ ನಿಂಬೆ ಮಲ್ಲೀಗೆ ವನ ಆಲ ಅಶ್ವತ್ಥ ಪಲಾಶ ಭಾರಿ ವೃಕ್ಷದಿಂದ –
ಕಂಗೊಳಿಸುತ್ತಿರುತ್ತದೆ ಎಂದಿದ್ದಾರೆ.

ಶ್ರೀನಿವಾಸನನ್ನು ಹೊಗಳುವ ಪದ್ಯವೊಂದರಲ್ಲಿ (ಕೀ.೧೧೧) 'ಲಕ್ಷ್ಮೀರಮಣ ಕಲ್ಪವೃಕ್ಷ ತಾನಂತೆ ಅಕ್ಷಯ ಸುಖವಿತ್ತು ಭಕ್ತರ ಸಂತೈಸುವನಂತೆ' ಎನ್ನುತ್ತಾರೆ.

ಮುಯ್ಯ ಹಿಂದಿರುಗಿಸುವ ಹಾಡೊಂದರಲ್ಲಿ (ಕೀ.೧೫೪) ಕೃಷ್ಣನೊಂದಿಗೆ ಎಲ್ಲರೂ ಹಸ್ತಿನಾವತಿಗೆ ಬಂದಾಗ:

ನದಿ ನದಿಗಳ ದಾಟಿ ಮುದದಿಂದ ಮುಯ್ಯಕ್ಕೆ ಬರಲು
ಸಾಲುವನಗಳ ನೋಡ ಸರಳ ಕಾವಲಿ ನೋಡ
ತರುಣಿ ಸರೋವರ ಇವ ನೋಡ ಗಗನಕ್ಕೆ ಸರಳಾಗಿ ಬೆಳೆದ ಮರ ನೋಡ

ಆಲ ಅಶ್ವತ್ಥ ಶಾಲ ಶಾಬರ ವೃಕ್ಷ ಸಾಲುಮಂಟಪ ನೋಡ–ಎಂದು ನೋಡುತ್ತಾ ಸಾಗುತ್ತಾರೆ.

ಮುಯ್ಯ ಹಿಂದಿರುಗಿಸುವ ಸಂದರ್ಭದಲ್ಲಿ ರುಕ್ಮಿಣಿಯ ದೂತೆ ಕೃಷ್ಣನ ಬಗೆಗೆ ಹೇಳುವ ಅಂಜಿಕೆಯ ಮಾತುಗಳು ಹೀಗಿವೆ: (ಕೀ.೧೬೬)

ಇಂದಿರೇಶಗೆ ಅಂಜಿಕೊಂಡು ಚಂದ್ರ ಸೂರ್ಯರು ತಿರುಗೋರಮ್ಮ
ಚಂದಾದ ನಕ್ಷತ್ರ ಬಂದು ಅಂಜಿ ಹೋಗಿವೆ ಎನುತ

ಹರಿಗೆ ಅಂಜಿಕೊಂಡು ಶರಧಿ ಮರ್ಯಾದಿಲೆ ಇರುವೊನಮ್ಮ
ದೊರೆಗೆ ಅಂಜಿಕೊಂಡು ವಾಯು ತಿರುಗಾಡುವನಮ್ಮ

ಅಗ್ನಿ ಅಂಜಿ ತನ್ನ ದರ್ಪ ತಗ್ಗಿಸಿಕೊಂಡಿಹನಮ್ಮ
ಭಾಗ್ಯದರಸು ಅಂಜಿ ಮಳೆಯು ಶೀಘ್ರದಿಗರೆಯುವನು
ನದಿನದಿಗಳಂಜಿಕೊಂಡು ಒದಗಿ ಮುಂದಕ್ಕೆ ಹರಿವೋವಮ್ಮ

ಸುದತೆ ವೃಕ್ಷ ಅಂಜಿ ಪುಷ್ಪ ಫಲವ ಕೊಡುವೋವೆ– ನಿಸರ್ಗವೇ ಕೃಷ್ಣನಿಗೆ ಅಂಜಿ ನಡೆಯುತ್ತದೆ ಎನ್ನುವಾಗ ಕೃಷ್ಣಭಕ್ತಿಯನ್ನು ಮೆರೆದಿರುವುದು ಕಾಣುತ್ತದೆ.

ಉದ್ಧಾಳಿಕನ ಕಥೆಯಲ್ಲಿ ಗಿರಿಯಮ್ಮ, ಉದ್ಧಾಳಿಕನು ವನಕೆ ಬಂದಾಗ ಕಾಲವು ಪಕ್ವವಾಯಿತೆಂಬುದನ್ನು ಹೀಗೆ ಹೇಳಿದೆ:

ಮಾವು ಪಲ್ಲವಿಸಿ ಕೋಗಿಲೆ ಧ್ವನಿಗೊಂಡವು ಕೇಳಿ ತಮ್ಮಯ್ಯನಪ್ಪಣೆಯ

ನಾಳೆ ಉದಯಕ್ಕೆ ಶರಧಿಯಲಿ ನೀರಾಟ ಆಡಬೇಕೆಂದು – ಚಂದ್ರಾವತಿಗೆ ಮನಸ್ಸಾಗುತ್ತದೆ. ಕಡಲುಬ್ಬಿದಂತೆ ಉಲ್ಲಾಸದಿ ರಾತ್ರಿ ಕಳೆಯುತ್ತಾಳೆ. ಅಂದು ಸೂರ್ಯಾಸ್ತವಾಗಿ ಚಂದ್ರೋದಯವಾಗುವುದನ್ನು ಗಿರಿಯಮ್ಮ 'ವಾರಿಜ ಮಿತ್ರ ಪಶ್ಚಿಮ ದಿಕ್ಕಿಗಿಳಿಯಲು ತಾರಾಪತಿ ಉದಿಸಿದನು' ಎನ್ನುತ್ತಾಳೆ. ಚಂದ್ರಾವತಿ ಗರ್ಭವತಿಯಾದಾಗ, ಅವಳನ್ನು ಕೊಲ್ಲಲು ತಂದೆಯು ಆಜ್ಞಾಪಿಸಿದಾಗ ಗರ್ಭಿಣಿಯನ್ನು ಕೊಲ್ಲಬಾರದೆಂದು ದೂತರು ಕಾಡಿನಲ್ಲಿ 'ಭಾರವನ್ನೊತ್ತು ಬಳಲಿ ಬಾಯಾರುತ್ತ ಏರುತ್ತ ಘಟ್ಟ ಬೆಟ್ಟಗಳ ಹಾದಿ ತಪ್ಪಿ ಹಳ್ಳ ಕೊಳ್ಳ ಕಾನನದೊಳು ಬಾಲೆಯ' ಬಿಟ್ಟು ಬರುತ್ತಾರೆ.

'ಚಂದ್ರಹಾಸನ ಕಥೆ'ಯಲ್ಲಿ ಮದನನ ಮಧ್ಯಪ್ರವೇಶದಿಂದಾಗಿ ಮಂತ್ರಿ ದುಷ್ಟಬುದ್ಧಿಯ ಕೊಲೆಯ ಸಂಚಿನಿಂದ ಚಂದ್ರಹಾಸನು ತಪ್ಪಿಸಿಕೊಳ್ಳುತ್ತಾನೆ. ಕುಂತಲದೇಶಕ್ಕೆ ಹೋಗುವಾಗ ನಾರಂಗ, ಕಿತ್ತಳೆ, ಮಾವು, ಕದಳಿ, ದಾಳಿಂಬ, ದ್ರಾಕ್ಷಿಗಳು ಹದನಾದ ಫಲ ಪಕ್ವಭರಿತ ವನಗಳು ಎದುರಾಗುತ್ತವೆ. ಇಲ್ಲಿ ವನವು ಶುಭಶಕುನವಾಗಿ ಕಾಣಿಸಿಕೊಳ್ಳುತ್ತದೆ. ಇತ್ತ ಸಂಚು ವಿಫಲವಾಗಿ ಮಂತ್ರಿಯೇ ಕಂಬಕ್ಕೆ ತಲೆ ಹಾಯ್ದುಕೊಳ್ಳುತ್ತಾನೆ. ಮಸ್ತಕ ಕುಂಬಳಕಾಯಿಯಂತೆ ಬಿರಿಯುತ್ತದೆ. ಕತ್ತಲು ಹರಿದು ಬೆಳಗಾಗುವುದನ್ನು ಗಿರಿಯಮ್ಮ ವರ್ಣಿಸುವ ಪರಿ ಹೀಗಿದೆ: 'ಕತ್ತಲು ಪರಿದವು ಕಮಲ ಬಾಯ್ದೆರದವು ಆದಿತ್ಯನ ಕಿರಣ ಹಾರೈಸಿ ಚಿತ್ತೈಸಿದವು ತಾರೆಗಳು ಭಾಸ್ಕರ ತಲೆಯೆತ್ತಿದವರಿಗೆ ರಂಜಿಸುತ'.

ಲವಕುಶರ ಹಾಡಿನಲ್ಲಿ ರಾಮಲಕ್ಷ್ಮಣರು 'ಜಾಣನೆಂಬೋ ಸೂರ್ಯ ತಾನೆ ರಥವ ನಡೆಸಿದಂತೆ' ಬೇಟೆಗೆ ತೆರಳುತ್ತಾರೆ. ದಾರಿಯಲ್ಲಿ ಅತ್ತಿ ಆಲದ ಮರ ಸುತ್ತ ಹೆದ್ದುಮ್ಮರಿ ಉತ್ತತ್ತಿ ಬಿಳಲು ದಾಳಿಂಬ ಉತ್ತಮ ಅಶ್ವತ್ಥ ಇಪ್ಪಿಯ ವನಗಳು ವಿಸ್ತಾರವನ್ನು ಒಪ್ಪುತ್ತವೆ. ಹಲಸು ನಾರಂಗ ಬೆರೆಸಿದ ಕತ್ತಳಿ ಹರಿಶಿನದ ತೋಪು ಎಲಿ ತ್ವಾಟ ರಾಮಲಕ್ಷ್ಮಣರು ಬೆರಸಿ ಬೇಟೆಯನಾಡುತ್ತಾರೆ. ಯಾರಾಡಿ ಗಿಡಗಳು ಕ್ಯಾದಗಿ ವನಗಳು ನಾಗಸಂಪಿಗೆಯ ತೋಪುಗಳಲ್ಲಿ ಗಂಡಭೇರುಂಡ ಉದ್ದಂಡ ಕೇಕ ಪಕ್ಷಿ ಚೆಂದದ ಬಕಪಕ್ಷಿ ಅಂದದ ಆಲಿವಾಣ ಆಲಹಕ್ಕಿ –ಯನ್ನು ಬೇಟೆಯಾಡುತ್ತಾರೆ. ಗಿರಿಯಮ್ಮನವರ ಕೃತಿಗಳಲ್ಲಿ ಪಾತ್ರಗಳ ಜೊತೆಗೆ ನಿಸರ್ಗವೂ ಜೊತೆಯಾಗಿ ಹೆಜ್ಜೆ ಹಾಕುತ್ತದೆ.

ಹರಪನಹಳ್ಳಿ ಭೀಮವ್ವನವರ 'ಜಲಕ್ರೀಡೆಯ ಹಾಡಿ'ನಲ್ಲಿ ಹರದಿಯರೆಲ್ಲ ಮಲ್ಲೆ ಮಲ್ಲಿಗೆ ಪುನ್ನಾಗ ಸಂಪಿಗೆ ತೋಟವನ್ನು ಅಲ್ಲಲ್ಲೆ ನಿಂತು ನೋಡುತ್ತ ನದಿಗೆ ಸಾಗುತ್ತಾರೆ. ಕುಂದ, ಮಂದಾರ, ಸುಗಂಧಿಕಾ, ದವನ, ಬಂಗಾರದಂಥ ಕ್ಯಾದಿಗೆ, ದುಂಡು ಮಲ್ಲಿಗೆ, ಪಾರಿಜಾತ, ತಾವರೆ, ಶಾವಂತಿಗೆ ವನವು ಎದುರಾಗುತ್ತದೆ ಎನ್ನುವಾಗ ಪುಷ್ಪವನದಿಂದ ಸುತ್ತುವರೆದಂತೆ ಭಾಸವಾಗುತ್ತದೆ. ಅತ್ತಿ, ಆಲದ ಮರ, ಅಡಕೆ, ತೆಂಗಿನ ಮರ, ಅಶ್ವತ್ಥ, ಕಪಿತ್ಥ, ಕಿತ್ತಳೆ, ಹಲಸು, ಉತ್ತತ್ತ, ದ್ರಾಕ್ಷಿ, ನೇರಲ, ನಿಂಬೆ, ದಾಳಿಂಬೆ, ಜಂಬು, ಸೀತಾಫಲವು – ಎದುರಾಗುತ್ತವೆ. ಎಲೆತೋಟದೊಳಗೆ ಯಾಲಕ್ಕಿ ಗೊನೆ, ಕಳಿತ ಮಾವಿನ ಹಣ್ಣು, ಕದಲೀಫಲ, ಬೋರೆ, ಶ್ರೀತುಳಸೀವನ, ಔದುಂಬ್ರ ಫಲ ನೋಡಿ ಸಾಗುತ್ತಾರೆ. ವೃಕ್ಷಗಳು ಹಣ್ಣುಹಂಪಲಗಳ ವರ್ಣನೆ ಮನಸ್ಸಿಗೆ ಮುದ ನೀಡುತ್ತದೆ.

ಮುಯ್ಯದ ಹಾಡಿನಲ್ಲಿ ಶ್ರೀಕೃಷ್ಣನು ಸುಭದ್ರೆ ರುಕ್ಮಿಣಿಯರಿಗೆ ಮುಯ್ಯ ಕೊಡಲು ಬರುವಾಗ
ಅತ್ತಿಯಶ್ವತ್ಥವನ ಸುತ್ತ ಸಾಲುಗಳು ಜತ್ತಿ ಸರೋವರ ಚಿತ್ರಮಂಟಪವು
ನಿಂಬೆ ದಾಳಿಂಬ್ರ ದೊಡ್ಡ ಜಂಬು ಫಲಗಳು ಜಂಬುನೀರಲ ಔದುಂಬ್ರ ವೃಕ್ಷಗಳು
ಹಲಸು ಮಾವಿನ ವೃಕ್ಷ ತುಲಸೀವನ ಮೆಣಸು ಯಾಲಕ್ಕಿ ಕಳಿತ ಕದಳಿಯು
ಮುಗಿಲು ಮುಟ್ಟುವೊ ನಾರಿಕೇಳ ವನಗಳು ಗಗನ ತುಳುಕೋ ಪೂಗೀಫಲ ವೃಕ್ಷ
ನೆಲ್ಲಿ ಹೇರಳೆ ಕಂಚಿ ವೀಳ್ಯದೆಲೆ ಬದರಿ ಫಲಗಳು ಕಬ್ಬು ಕಡಲೆ ದ್ರಾಕ್ಷಿಗಳಿಂದ ಕೂಡಿದ ವನಗಳ ಮಧ್ಯದಲ್ಲಿ ಸಂಚಾರ ಮಾಡುತ್ತಾನೆ ಎನ್ನುವಲ್ಲಿ ಕೃಷ್ಣನ ನಾಡಿನ ಸಸ್ಯ ಸಮೃದ್ಧಿ ಕಣ್ಣಿಗೆ ಕಟ್ಟುತ್ತದೆ.

**ನದಿಗಳು**

ಮಹಿಳಾ ಕೀರ್ತನಕಾರರ ಕೃತಿಗಳಲ್ಲಿ ಯಮುನೆ, ಗೋದಾವರಿ, ಗಂಗಾ ನದಿಗಳು ಪ್ರಸ್ತಾಪವಾಗಿವೆ.

**ಗಂಗಾನದಿ:** ಉತ್ತರಭಾರತದಲ್ಲಿ ಹರಿಯುವ ಒಂದು ಪುಣ್ಯನದಿ. ಇದು ದೇವ ಲೋಕದ ನದಿ. ಗಂಗೆ ಭಗೀರಥನ ದೆಸೆಯಿಂದಾಗಿ ಭೂಲೋಕಕ್ಕೆ ಇಳಿಯುತ್ತಾಳೆ ಎನ್ನುವ ಕಥೆಯಿದೆ. ಮಹಾಭಾರತದ ಕಥೆಯಲ್ಲಿ ಬರುವ ಶಂತನು ಗಂಗಾತೀರದಲ್ಲಿ ಸಂಚರಿಸುತ್ತಿರುವಾಗ ಗಂಗೆಯನ್ನು

ಕಂಡು ಮೋಹಗೊಳ್ಳುತ್ತಾನೆ. ಮದುವೆಯಾಗಲು ಬಯಸಿದಾಗ ಶರತ್ತಿನೊಂದಿಗೆ ಮದುವೆಯಾಗುತ್ತಾಳೆ. ಹಾಗೆ ಹುಟ್ಟಿದವನೇ ಭೀಷ್ಮ.

**ಯಮುನೆ:** ಭರತ ಖಂಡದ ಸಪ್ತ ಮಹಾತೀರ್ಥಗಳಲ್ಲಿ ಯಮುನೆಯು ಒಂದು. ಯಮುನೆ ಸೂರ್ಯನ ಮಗಳು. ಹಿಮಾಲಯದ ಕಾಳಿಂದಿನಿ ಪರ್ವತದಲ್ಲಿ ಹುಟ್ಟುವ ಕಾರಣ ಈಕೆಯನ್ನು ಕಾಳಿಂದಿ, ಕಲಿಂದಗಿರಿನಂದಿನಿ, ಕೃಷ್ಣಪ್ರಿಯೆ ಎಂದು ಕರೆಯುತ್ತಾರೆ. ಸೂರ್ಯನ ಹೆಂಡತಿಯಾದ ಸಂಜ್ಞಾದೇವಿಗೆ ಯಮಧರ್ಮ ಮತ್ತು ಯಮುನೆ ಅವಳಿ ಮಕ್ಕಳು. ಹೀಗಾಗಿ ಈಕೆ ಯಮನ ಸೋದರಿ.[೧]

**ಗೋದಾವರಿ:** ಗೌತಮ ಮಹರ್ಷಿಗಳಿಗೆ ಬಂದ ಗೋಹತ್ಯಾ ಶಾಪ ಪರಿಹಾರಕ್ಕೆ ಈಶ್ವರನನ್ನು ಬೇಡಿದರೆ ಈಶ್ವರನ ತಲೆಯಿಂದ ಹರಿದು ಬಂದ ಗಂಗೆಯು ಗೋವನ್ನು ಬದುಕಿಸಿತು. ಅದೇ ಗೋದಾವರಿ ನದಿಯಾಯಿತು. ಗೋದಾವರಿಯು ನಾಸಿಕ್‌ನ ತ್ರ್ಯಂಬಕ ಪರ್ವತದಲ್ಲಿ ಹುಟ್ಟಿ ೯೦೦ ಮೈಲು ದೂರ ಹರಿಯುತ್ತದೆ. ರಾಜ ಮಹೇಂದ್ರಿಯಲ್ಲಿ ಸಮುದ್ರವನ್ನು ಏಳು ಭಾಗಗಳಾಗಿ ಸೇರುತ್ತದೆ.[೨]

ಮುಯ್ಯದ ಹಾಡಿನಲ್ಲಿ ಗಲಗಲಿ ಅವ್ವನವರು ಪ್ರಾರ್ಥನಾಪದ್ಯದಲ್ಲಿ ಗಂಗಾನದಿಯನ್ನು ಸ್ಮರಿಸುತ್ತಾರೆ. ಭಾಗೀರಥಿ ಭಾಗೀರಥಿ ಬಾಗುವವರಿಗೆ ದಯವಾಗಿರತಿ ಎನ್ನುತ್ತಾರೆ. ಮಾನಸ ಸರೋವರ, ನಾನಾ ತೀರ್ಥಗಳೆಲ್ಲ ಗಂಗೆಯನ್ನು ಧೇನಿಸುತ್ತವಂತೆ. ಭಾಗೀರಥನು ಕರೆತರಲು ಕಾಶಿ ನಗರಕ್ಕೆ ಬಂದವಳೆ ನನ್ನನ್ನು ಗೆಲಿಸು ಎಂದು ಬೇಡುತ್ತಾರೆ. ಕೀರ್ತನೆ (ಕೀ.೧೫೪) ಯೊಂದರಲ್ಲಿ ಶ್ರೀಕೃಷ್ಣನು ಹಸ್ತಿನಾವತಿಗೆ ಬರುವಾಗ ನದಿ ನದಿಗಳ ದಾಟಿ ಬರುತ್ತಾನೆ. ಹಸ್ತಿನಾವತಿಯ ಜನ ಕೃಷ್ಣನ ಮುಖ ನೋಡಿ ಈಜಾಡಿ ಸುಖದ ನದಿಯೊಳು ಬಹುಜನ್ಮಕಲೇಸಾದ ಪುಣ್ಯ ಫಲಿಸಿತು ಎನ್ನುತ್ತಾರೆ. ದೂತೆಯು ಕೃಷ್ಣನನ್ನು (ಕೀ.೧೬೬) ವರ್ಣಿಸುವಾಗ ನದಿನದಿಗಳಂಜಿಕೊಂಡು ಒದಗಿ ಮುಂದಕೆ ಹರಿಯುತ್ತದಮ್ಮ ಎನ್ನುತ್ತಾಳೆ. ನದಿ ನದಗಳು ಅಂಜಿ ಹರಿಯುವುದು ಎಂಬ ಕಲ್ಪನೆ ಎಂಥ ಚಂದದ್ದು!

ಗಿರಿಯಮ್ಮನು ಉದ್ಧಾಳಿಕನ ಕಥೆಯಲ್ಲಿ ಚಂದ್ರಾವತಿಯು ಮತ್ತು ಗೆಳತಿಯರು ಅರಳುಮಲ್ಲಿಗೆ ಬಾಯ್ದೆರೆದಂತೆ ನದಿಗೆ ನಡೆಯುತ್ತಾರೆ, ಮತ್ತವಾರಣ ಕದಲಿವನ ಪೊಕ್ಕಂತೆ ರಮಣಿಯರೆಲ್ಲರು ಕರಗಳ ಪಿಡಿದು ಶರಧಿಯೊಳಗೆ ಹೋಗುತ್ತಾರೆ. ಸಿರಿಮುಡಿಯನ್ನು ಶರಧಿಯಲ್ಲಿ ಬಿಟ್ಟು ಚಮರಿಯ ಮೃಗ ಹೊಕ್ಕಂತೆ ಹೋಗುತ್ತಾರೆ. ಕರದಲ್ಲಿ ಉದಕವ ತುಂಬಿ ಅರಳು ಮಲ್ಲಿಗೆ ಉದುರುವಂತೆ ಚೆಲ್ಲುತ್ತಾರೆ. ಹೀಗೆ ಜಲಕ್ರೀಡೆಯಾಡುತ್ತಿರಲು ಕಾಲವು ಪರಿಪಕ್ವವಾಗಿ ಮುನಿ ಉದ್ಧಾಳಿಕನ ಬಿಂದುವು (ವೀರ್ಯ) ಶೀಘ್ರ ಸಡಿಲುತ್ತದೆ. ಅದನ್ನು ಕಮಲದ ಹೂವಿನೊಳಗಿಟ್ಟು ಬಂಧಿಸಿ ಬಾಳೆಸುಳಿಯಲ್ಲಿ ತಂದಡಕಿ ನದಿಯಲ್ಲಿ ತೇಲಿಬಿಡುತ್ತಾನೆ. ತೇಲುತ್ತಾ ಮುಳುಗುತ್ತಾ ಅದು ಚಂದ್ರಾವತಿ ಇದ್ದೆಡೆಗೆ ಬರುತ್ತದೆ. ನಾರಿ ಅದನ್ನು ಆಘ್ರಾಣಿಸುತ್ತಾಳೆ. ಗರ್ಭವು ನಾಭಿಯ ಕಮಲದಲ್ಲಿಳಿಯುತ್ತದೆ. ಈ ಜಲಕ್ರೀಡೆಯು ಚಂದ್ರಾವತಿಯ ಬದುಕಿನಲ್ಲಿ ಮಹತ್ವದ ತಿರುವನ್ನು ನೀಡುತ್ತದೆ. ಮುಂದೆ ಚಂದ್ರಾವತಿಗೆ

ಪ್ರಸವವಾದ ಮೇಲೆ ಮಗುವನ್ನು ನೀರಿನಲ್ಲಿ ತೇಲಿಬಿಡುತ್ತ 'ರಕ್ಷಿಸವ್ವ ತಾಯೆ ಎನ್ನ ಕುಮಾರನ ಇತ್ತೆ ನಾನಿನ್ನ ಕೈಯೊಳಗೆ, ಕಾರುಣ್ಯದಿ ಸಲಹೆಂದು' ಹೀಗೆ ಸ್ತೋತ್ರ ಮಾಡುತ್ತಾಳೆ.

ಪಾಲಿಸವ್ವ ತಾಯೆ ಎನ್ನ ಕುಮಾರನ ಮೀನು
ಮೊಸಳೆ ಮುಟ್ಟದ್ಹಾಂಗೆ
ಲಾಲಿಸಿ ಕೇಳು ಅನಾಥೆಯ ನುಡಿಯನ್ನು ಪಾಲಿಸು

ಎನ್ನ ಆತ್ಮಜನ– ಎನ್ನುತ್ತಾ ಕುರುಂಬಳೆಯಲ್ಲಿ ತೊಟ್ಟಿಲನ್ನು ಕಟ್ಟಿ ಕೊನೆಯ ಬಾರಿಗೆ ಕಂದಗೆ ಮೊಲೆಯೂಡಿಸಿ ಹರಿವ ನದಿಯೊಳಗೆ ತೇಲಿಬಿಟ್ಟು, ಕಾಡಿಗೆ ಹೋಗುತ್ತಾಳೆ. ನದಿಯಲ್ಲಿ ಮಗುವನ್ನು ತೇಲಿಬಿಡುವ ಈ ಪ್ರಸಂಗ ಕುಂತಿಯ ಕಥೆಯನ್ನು ನೆನಪಿಸುತ್ತದೆ. ಈ ಕಥೆಯೇ ಸ್ಫೂರ್ತಿಯಾಗಿರಬೇಕು. ನದಿಯು ಪತಿ ಪತ್ನಿಯರ ಸಮಾಗಮಕ್ಕೆ ಪರಿಹಾರದ ಮಾರ್ಗವಾಗಿ ಪ್ರವಹಿಸುವ ವಿಶೇಷತೆಯನ್ನಿಲ್ಲಿ ಗಮನಿಸಬೇಕು.

ನದಿ ಮತ್ತು ಶರಧಿ ಪದಗಳನ್ನು ವ್ಯತ್ಯಾಸವಿಲ್ಲದೆ ಗಿರಿಯಮ್ಮ ಇಲ್ಲಿ ಬಳಸಿರುವುದನ್ನು ಕಾಣಬಹುದು. ಹರಪನಹಳ್ಳಿ ಭೀಮವ್ವನವರು ಗಂಗಾದೇವಿಯ ಕಥೆಯನ್ನು (ಕೀ.೪೪) ಸ್ಮರಿಸಿ ಶರಣೆನ್ನುತ್ತಾರೆ. ಮಂಗಳಾಂಗನ ಮುಖ ತೋರಿಸೆ ಗಂಗಾದೇವಿ ಎಂದು ಬೇಡುತ್ತಾರೆ. ವಾಮನನ ನಖದಿಂದ ಒಡೆದು ಬ್ರಹ್ಮಾಂಡದ ಬಹಿರ್ ಆವರಣದಿಂದ ಇಳಿದು ಹರಿಯ ಆಲಯಕ್ಕೆ ಬಂದಾಗ ಹರಿಪಾದ ಸ್ಪರ್ಶದಿಂದ ಹರಿದು ಬಂದೆಯೆ ನೀನು, ಹರನ ಜಟೆಯಲ್ಲಿ ವಾಸಮಾಡಿ ಮೇರುಗಿರಿಯಲ್ಲಿ ನಾಲ್ಕು ಸೀಳಾದವಳೆ ಪ್ರಯಾಗದಿ ಮರದ ಬಾಗಿನವನ್ನು ಮುತ್ತೈದೆಯರಿಂದ ಪಡೆದು ಪೂಜೆಗೊಳ್ಳುತ್ತೀಯೆ. ಸಗರನ ಮಕ್ಕಳಿಗಾಗಿ ಭಗೀರಥನ ಹಿಂದೆ ಬಂದವಳೆ, ಹಿಮಾಲಯವನು ದಾಟಿ ಜಗವನುದ್ಧರಿಸಿದವಳೆ, ಯಮುನಾ ಸರಸ್ವತಿಯರನೊಡಗೂಡಿ ಸಮನಾಗಿ ಹರಿದಂತ ತಾಯಿ ಮುಕ್ತಿ ಕೊಡು ಎನ್ನುವಲ್ಲಿ ಗಂಗಾನದಿಯ ಕಥೆಯೇ ಇದೆ. ಹೀಗೆ ಕೂಡಿದ ನದಿಗಳು, ನದಿ ಹರಿದ ಪಟ್ಟಣಗಳು, ನದಿ ಕಡಲ ಸೇರುವ ಸಡಗರ, ಜನರಿಂದ ಪೂಜೆಗೊಳ್ಳುವ ಸಂಭ್ರಮವನ್ನು ವರ್ಣಿಸುತ್ತಾರೆ. ಗೋದಾವರಿಯನ್ನು ಕುರಿತು ಎನ್ನೊಳ್ವಿನೋದದಿಂದ ಮಾತಾಡಿ ತೋರಿಸೆ ಸಾಧು ಸಜ್ಜನರಿಗೆ ಹರಿದೈವ ಸಾಧಿಸಿಕೊಡುವವಳೆ ಎಂದು ಪ್ರಾರ್ಥಿಸುತ್ತಾರೆ. ಕೀರ್ತನೆಯೊಂದರಲ್ಲಿ (ಕೀ.೮೧) ಜಲಕ್ರೀಡೆಯನ್ನು ವರ್ಣಿಸುವಾಗ ಯಮುನಾ ನದಿಯನ್ನು ಗೋಪಿಕೆಯರು ಹೀಗೆ ಕೊಂಡಾಡುತ್ತಾರೆ.

ಕಾಳಿಮರ್ಧನ ಹಾರಿದ ಮಡುವಿದು
ಕಾಳಿಂಗನೋಡಿಸಿ ಕಳೆದ ವಿಷಕೆಟ್ಟ
ನೋಡೆ ಅಮೃತಕೆ ಮಿಗಿಲಾಗಿದೆ ಈ ಜಲ
ಏನು ಪುಣ್ಯ ಮಾಡಿದ್ದಳೊ ಯಮುನ

ನೀಲಮಾಣಿಕ್ಯ ಮುತ್ತು ಕೂಡಿಸಿದಂತೆ ತ್ರಿವೇಣಿ ಆ
ದಳು ತಾ ಪ್ರಯಾಗದಲಿ ತ್ರಿವೇಣಿ
ಭಾಗೀರಥಿ ಸರಸ್ವತಿ ಕೂಡಿ ಸಂಗಮಳಾಗಿ

ಪೋಗೋಳು ಕಾಶಿ ಪಟ್ಟಣಕೆ

ಕಮಲಸಖನ ಪುತ್ರಿ ಕಾಮಿತ ಫಲಕೊಟ್ಟು
ವರುಣನರ್ಧಾಂಗಿ ನೀ ವರವ ಕೊಡೆ ತಾಯೆ
ಯಮಧರ್ಮರಾಯನ ಭಗಿನಿ ನಿಮ್ಮ ಸ್ನಾನ
ಫಲ ಕೊಟ್ಟು ಪಾಲಿಸೀಗೆಂದೆನುತ

ಇಂಥಾ ಗೋಕುಲ ವೃಂದಾವನದಲ್ಲಾವಾಸವು
ಎಂಥಾ ಚಂದವೆ ಯಮುನಾ ನದಿಯು ಆಹಾ ಅ
ನಂತ ಜನ್ಮದಲಿ ಮಾಡಿದಂಥ ಪುಣ್ಯದಲಿ ಶ್ರೀ
ಕಾಂತ ಕೃಷ್ಣನ ಕೂಡಿಲಿದ್ದೇವಲ್ಲೆ

ನೋಡುತ ನಗುತ ಮಾತಾಡುತ ನಿಂತರು
ಓಡುತಾವೆ ಜಲ ಸೆಳವಿನಿಂದ ಆಹಾ
ಮಾಡುವ್ವೋಣ್ಹ್ಯಾಗೆ ಸ್ನಾನವ ನಾವು ಎನುತಲಿ
ಜೋಡಿಸಿ ತಮ್ಮ ಹಸ್ತ ಮುಗಿದರಾಗ – ಗೋಪಿಕೆಯರೊಂದಿಗೆ ಯಮುನೆಯನ್ನೂ ಸಖಿಯಾಗಿಸಿ, ಕಥೆಯ ಪಾತ್ರವಾಗಿಸಿದ್ದಾರೆ ಭೀಮವ್ವ.

ಗೋಪಿಕೆಯರಿಗೆ ತಮ್ಮ ವಸ್ತ್ರಗಳು ಕಾಣದೆ ಇರಲು 'ಕಣ್ಣಿಟ್ಟ ಪುರುಷೋರು ಬಿಡುವರೆ ನಮ್ಮನ್ನು' ಎಂದು ಒಂದು ಉಪಾಯವ ಯೋಚಿಸುತ್ತಾರೆ:

ಕೃಷ್ಣನು ಬಿದ್ದಂತ ಕಾಳಿ ಮಡುವಿನೊಳು
ಒಟ್ಟಾಗಿ ನಾವೆಲ್ಲ ದುಮುಕೋಣ ಹೋಗಿ

ಯಮುನಾ ನದಿಯ ಕೂಡಿ ಹೋದರೆ ನಮಗಿಂತ
ಯಮಧರ್ಮರಾಯನ ಅಂಜಿಕೆಯಿಲ್ಲವೆ ನಮಗೆ –ಎನ್ನುತ್ತಾ ತಮ್ಮ ಬದುಕನ್ನು
ಕೊನೆಗಾಣಿಸಿಕೊಂಡರೂ ಯಮುನೆಯಿಂದ ಮುಕ್ತಿ ಕಾಣುವ ಆಲೋಚನೆ ಮಾಡುತ್ತಾರೆ.

ಹರಪನಹಳ್ಳಿ ಭೀಮವ್ವನವರ 'ಶಕುಂತಲೆ ದುಷ್ಯಂತ ಮಹಾರಾಜರ ಹಾಡು' ಎಂಬ ಕೃತಿಯಲ್ಲಿ ಮಾಲಿನಿ ಎಂಬ ನದಿಯ ಪ್ರಸ್ತಾಪ ಬರುತ್ತದೆ. ದುಷ್ಯಂತ ಮಹಾರಾಜನು ಭೇಟೆಗಾಗಿ ಬಂದಾಗ ಆಶ್ರಮದ ಚಿಗರೆಯು, ಕೃಷ್ಣಸಾರಂಗವನ್ನು ಬಿಟ್ಟರೆ ಅವನಿಗೆ ಇಷ್ಟವಾಗುವ ವಿಚಾರವನ್ನು ಹೇಳುತ್ತೇನೆ ಎನ್ನುತ್ತದೆ. ಮಾಲಿನಿ ನದಿಯ ಹತ್ತಿರದಲ್ಲೇ ಕಣ್ವ ಮಹರ್ಷಿಗಳ ಆಶ್ರಮ ಇರುವುದೆಂದು ಅವರಿಗೆ ಶಕುಂತಲೆ ಎಂಬ ಮಗಳಿದ್ದಾಳೆಂಬುದನ್ನು ಹೇಳುತ್ತದೆ. ಅರಸನು ಬೇಟೆಯನ್ನು ಬಿಟ್ಟು ಮಾಲಿನಿ ನದಿಯಲ್ಲಿ ಸ್ನಾನ ಮಾಡಿ ಸಂಧ್ಯಾವಂದನೆ ಮಾಡಿ ಹರಿ ಧ್ಯಾನ ಮಾಡುತ್ತಾ ಆಶ್ರಮಕ್ಕೆ ಬರುತ್ತಾನೆ. ಇಲ್ಲಿ ದುಷ್ಯಂತ ಶಕುಂತಲೆಯನ್ನು ಹುಡುಕಲು ದಾರಿಯ ಗುರುತಾಗಿ ಮಾಲಿನಿ ನದಿ ನಿಲ್ಲುತ್ತದೆ. ಶಕುಂತಲೆಯನ್ನು ದುಷ್ಯಂತನಿಗೆ ಒಪ್ಪಿಸುವಾಗ ಮಾತ್ರ ಶಕುಂತಲೆ ನದಿಯಲ್ಲಿ ಪ್ರಯಾಣ ಮಾಡಿ ಉಂಗುರ ಕಳೆದುಕೊಳ್ಳುವ ಪ್ರಸ್ತಾಪ ಬರುವುದಿಲ್ಲ, ಬದಲಾಗಿ ಅವಳು ಸರೋವರದಲ್ಲಿ ಇಳಿದು

ಸ್ನಾನ ಮಾಡಿ ಉಂಗುರ ಕಳೆದುಕೊಳ್ಳುತ್ತಾಳೆ. ಹೀಗೆ ಬದಲಾಯಿಸಿಕೊಳ್ಳುವ ಆಶಯವೇನಿತ್ತು ತಿಳಿಯುವುದಿಲ್ಲ ಅಥವಾ ಯಾವುದಾದರೂ ಜನಪದ ಕಥೆಯ ಮೂಲ ದೊರಕಿರಬೇಕು.

ಅಂಬಾಬಾಯಿಯವರು ತಮ್ಮ 'ಶ್ರೀಕೃಷ್ಣ ಬಾಲಲೀಲೆ ಜೋಗುಳ'ದಲ್ಲಿ ಕೃಷ್ಣನೇ ತಾಯಿಗೆ ತನ್ನ ಬಾಲಭಾಷೆಯಲ್ಲಿಯೇ ತಾನು ಮುಂದೆ ಮಾಡುವ ಕೆಲಸಗಳ ಪಟ್ಟಿಯನ್ನು ಹೇಳುತ್ತಾ

ಬೃಂದ ಎನ್ನುವ ವನವು ಅಂದವಾಗಿಹುದಂತೆ
ಚಂದದಾ ಯಮುನೆ ದಡವಂತೆ/ದಡವಂತೆ ನಾವಲ್ಲಿ
ಮಂದಿರವ ಮಾಡಬೇಕಂತೆ

ಕಾಳಿಂದಿ ಉದಕ ಬಹು ನೀಲವರ್ಣದ ಸೊಬಗು
ಬಾಲಕೃಷ್ಣನ್ನ ಮೈಕಾಂತಿ/ಮೈಕಾಂತಿ ಪೋಲುತಲಿ

ಮೇಲಾಗಿ ಶೋಭಿಸುತ ಇಹುದಲ್ಲಿ – ಎನ್ನುತ್ತಾ ಯಮುನೆ ಮತ್ತು ಕಾಳಿಂದಿ ನದಿಗಳು ಕೃಷ್ಣಲೀಲೆಗಳನ್ನು ತೋರುವಲ್ಲಿ ಪ್ರಮುಖ ಪಾತ್ರವಾಗುವ ಪ್ರಸ್ತಾಪ ಇದೆ. ಕಾಳಿಂದಿಯ ಉದಕ ನೀಲವರ್ಣದ್ದು ಎನ್ನುವ ಚಿತ್ರಣ ಕಂಡುಬರುತ್ತದೆ. ಕಾಳಿಂಗ ಸರ್ಪ ಹೊಕ್ಕ ನದಿ ವಿಷಮಯ ಎನ್ನುವುದನ್ನಿಲ್ಲಿ ಅಲಂಕಾರಿಕವಾಗಿ ವರ್ಣಿತವಾಗಿದೆ.

ಅಂಬಾಬಾಯಿಯವರು ತಮ್ಮ 'ಜಲಕ್ರೀಡೆ'ಯ ಹಾಡಿನ ವಚನದಲ್ಲಿ ಯಮುನಾ ನದಿಯನ್ನು ಅದ್ಭುತವಾಗಿ ವರ್ಣಿಸಿದ್ದಾರೆ.

ಹರಿವೋ ಜಲಗಳ ನೋಡೇವರ ಮೋಹನಾಂಗಿನಿ
ನವರತ್ನ ಖಚಿತ ಸೋಪಾನಗಳಿಂದ ಮತ್ಸ್ಯ ಮಂಡೂಕಾದಿ
ಮೊಸಳಿ ಕೂರ್ಮಗಳು/ಸ್ವಚ್ಛ ಜಲ ಕುಕ್ಕುಟವು ಸ್ವೇಚ್ಛ
ಆಡುವುದು/ಪಚ್ಚ ನೀಲಗಳ ಅಚ್ಚಯ ಮುನಿಯ
ನೀರ/ಅಚ್ಯುತಾನಂತ ಹರಿ ಮೆಚ್ಚುವೋ ಜಲವೊ
ಜಲಜಂತುಗಳಿಂದ ಜಲಜಳಿಸುವೊ ಜಲವು
ನಳಿನಾಕ್ಷಿ ನೋಡೆ ಈ ಮಳಲ ಶೃಂಗಾರವು
ತೆತ್ತಿಸಾ ಕೋಟಿ ದೇವಾತ್ಮರೆಲ್ಲ ಅತ್ಯಂತ ಹರುಷದಲಿ
ಆಡುವೊ ಸ್ಥಳವೊ ಕನ್ನಿಕೆಯರೇ ಕೇಳಿ ಧನ್ಯರಾದವೆ
ನಾವು/ಈ ನದಿಯಲ್ಲಿ ಸ್ನಾನವನ್ನೇ ಮಾಡಲು
ಇಂತು ಪರಿಶೋಭಿಸುವ ಯಮುನ ತೀರವನು ನೋಡಿ

ಕಾಂತೆಯರ ಭ್ರಮಗೊಳಿಸಿತು – ಈ ರೀತಿ ನದಿಯ ಅಂತರಾಳವನ್ನು ವರ್ಣಿಸಿರುವ ಪದ್ಯಗಳು ಬೇರೆ ಯಾವ ಕೃತಿಗಳಲ್ಲೂ ಕಂಡುಬರುವುದಿಲ್ಲ.

ಕೀರ್ತನಕಾರರ ಕೃತಿಗಳಲ್ಲಿ ಬರುವ ನದಿ ಸರೋವರಗಳು ಕಥೆಯ ಮುಖ್ಯ ತಿರುವಿನಲ್ಲಿ ಕಾಣಿಸಿಕೊಳ್ಳುತ್ತವೆ, ಒಂದು ಪಾತ್ರವಾಗಿ ಮನಸ್ಸಿನಲ್ಲಿ ನಿಲ್ಲುತ್ತವೆ.

**ಪುಷ್ಪಸಂಕುಲ**

ಪುಷ್ಪ ಸಂಕುಲವನ್ನೇ ಕೀರ್ತನಕಾರರು ಪ್ರಸ್ತಾಪಿಸಿದ್ದಾರೆ. ಅವ್ವನವರ ಮುಯ್ಯದ ಹಾಡಿನಲ್ಲಿ (ಕೀ.೮೦) ಮುಯ್ಯ ತಂದ ಸುಭದ್ರೆ ದ್ರೌಪದಿಯರನ್ನು ಕೃಷ್ಣನು ವಹಿಸಿಕೊಂಡು ಭಾಮೆಯೊಡನೆ ಹೀಗೆ ಮಾತನಾಡುತ್ತಾನೆ.

ಬಲ್ಲೆ ಭಾಷೆ ನಿನ್ನ ಕ್ಷುಲ್ಲಕತನದ ಬುದ್ಧಿ
ಮಲ್ಲಿಗೆಯಂಥ ಸುಕುಮಾರಿ/ಗರತಿಗೆ
ಹೊಲ್ಲ ಮಾತುಗಳ ನುಡಿವೋರೆ

ಮದ್ದುಗಣಿಕೆ ಹೂ ಉದ್ದಾದರೇನ
ಮುದ್ದು ಮಲ್ಲಿಗೆಯ ಸರಿಯೇನ/ಭಾಮೆ
ಸುಭದ್ರಾಗೆ ನೀನು ಸರಿಯೇನ – ಮೊದಲ ನುಡಿಯಲ್ಲಿ ಸುಭದ್ರೆ ದ್ರೌಪದಿಯರ ಗುಣಗಳನ್ನು ಹೊಗಳಲು ಪುಷ್ಪವನ್ನು ಬಳಸಿಕೊಂಡರೆ, ಎರಡನೆಯ ನುಡಿಯಲ್ಲಿ ಮುದ್ದು ಗಣಿಕೆ ಹೂವು ವ್ಯಂಗ್ಯೋಕ್ತಿಯಾಗಿ ನಿಲ್ಲುತ್ತದೆ.

ಹೆಳವನಕಟ್ಟೆ ಗಿರಿಯಮ್ಮನವರ 'ಚಂದ್ರಹಾಸನ ಕಥೆ'ಯಲ್ಲಿ ಚಂದ್ರಹಾಸನು ಕುಂತಳಪುರಕ್ಕೆ ಹೋಗುವ ಸನ್ನಿವೇಶದಲ್ಲಿ ಎಸಳು ಮಲ್ಲಿಗೆ ಸಂಪಿಗೆ ಶಾವಂತಿಗೆ ಹಸನಾದ ಸುರಗಿ ಪಾದರಿಯ ಕುಸುಮದ ಪರಿಮಳವು ಅವನನ್ನು ಮುತ್ತುತ್ತವೆ, ಕೆಂದಾವರೆಯ ತಳಿರ ಸರಸಿಯು ಅವನ ಶ್ರಮವನ್ನು ಪರಿಹರಿಸುತ್ತದೆ. ಚಂದ್ರಹಾಸನು ಮುಂದೆ ಹೋಗುವ ಕಾರ್ಯದಲ್ಲಿ ಶುಭಶಕುನವನ್ನು ಸೂಚಿಸಲು ಗಿರಿಯಮ್ಮ ಸುಮಗಳನ್ನು ಬಳಸಿಕೊಂಡಿದ್ದಾಳೆ. ಲವಕುಶರ ಹಾಡಿನಲ್ಲಿ ಹೊಸದೊಂದು ಕಲ್ಪನೆಯನ್ನು ಮಾಡಿಕೊಂಡಿದ್ದು ಸ್ವಂತಿಕೆಯನ್ನು ಮೆರೆದಿದ್ದಾಳೆ. ಸೀತೆಯು ಅಂತಃಪುರದಲ್ಲಿ ಒಬ್ಬಳೇ ಇರುವಾಗ ತಾಟಕಿ ಬರುತ್ತಾಳೆ.

ಬಂದು ಪಾದಕ್ಕೆರಗಿ ಕೈಮುಗಿದು ನಿಂತಳು
ತಂದಳು ನಾಗಸಂಪಿಗೆಯ
ಅಂಗನೆ ಜಾನಕಿ ನೀ ಮುಡಿಯೆಂದು ಕೊಟ್ಟರೆ
ಸಂದೇಹಬಟ್ಟಳಾ ಸೀತೆ – ಸೀತೆಯ ವಿಶ್ವಾಸವನ್ನು ಗಳಿಸಿಕೊಳ್ಳಲು ತಾಟಕಿ ಸಂಪಿಗೆ ಹೂ ಕೊಡುತ್ತಾಳೆ. ಎಂದೂ ಕಾಣದ ಅವಳನ್ನು ಸೀತೆ ಅನುಮಾನದಿಂದಲೇ ಪ್ರಶ್ನಿಸುತ್ತಾಳೆ. ಹೀಗೆ ಹೂ ಕೊಟ್ಟ ಪ್ರಸಂಗವೇ ಸೀತೆಯ ಬದುಕಿನ ಮಹತ್ತರ ತಿರುವೊಂದಕ್ಕೆ ಕಾರಣವಾಗುತ್ತದೆ. ಹೂವಿಗೆ ಮನಸೋಲುವ ಸ್ತ್ರೀಸ್ವಭಾವವು ಇಲ್ಲಿ ಚಿತ್ರಿತವಾಗಿದೆ. ವಾಲ್ಮೀಕಿ ಮುನಿಯ ಆಶ್ರಮದಲ್ಲಿ ಗರ್ಭಿಣಿಯಾದ ಸೀತೆಗೆ ಆಶ್ರಯ ಸಿಗುತ್ತದೆ. ಆಶ್ರಮದ ಮಹಿಳೆಯರು ಸೀತೆಗೆ ಸಡಗರದಿಂದ ಸೀಮಂತ ಮಾಡಲು ಉತ್ಸುಕರಾಗುತ್ತಾರೆ. ಆದರೆ ಸೀತೆ, 'ರಾಮರನಗಲಿ ನನಗೆ ಸೀಮಂತವೇತಕ್ಕೆ, ತಂದೆ ತಾಯಿ ನಿಮ್ಮ ನೆರಳಲ್ಲಿ ಸೇರಿಹೆನು' ಎನ್ನುತ್ತಾಳೆ.

ಸಣ್ಣ ಮಲ್ಲಿಗೆ ದಂಡೆ ಸೂಸಕ ಮುಡಿದಂಡೆ
ರನ್ನ ಮಾಣಿಕ್ಯದ ತೊಂಡಲವು
ಪನ್ನಗಧರನರಸಿ ಮಡದಿ ಸೀತಾಂಗನೆಗೆ
ಸಣ್ಣ ಮಲ್ಲಿಗೆ ಮುಡಿಸೋರು

ಅಚ್ಚ ಮಲ್ಲಿಗೆ ದಂಡೆಸೂಸಕ ಮುಡಿದಂಡೆ
ರನ್ನ ಮಾಣಿಕ್ಯದ ತೊಂಡಲವುತ
ಪಕ್ಷಿವಾಹನನರಸಿ ಮಡದಿ ಸೀತಾಂಗನೆಗೆ
ಅಚ್ಚ ಮಲ್ಲಿಗೆ ಮುಡಿಸೋರು – ಈ ಸೀಮಂತದ ಸಂಭ್ರಮವು ಅರಮನೆಯಲ್ಲಿ ನಡೆಯಬೇಕಾದ್ದು ವನಮನೆಯಲ್ಲಿ ನಡೆಯುತ್ತದೆ. ಈ ಕುಸುಮೋಪಚಾರದ ಸನ್ನಿವೇಶವನ್ನು ಗಿರಿಯಮ್ಮ ಭಾವತುಂಬಿ ವರ್ಣಿಸಿದ್ದಾರೆ.

ಹರಪನಹಳ್ಳಿ ಭೀಮವ್ವನವರ ಜಲಕ್ರೀಡೆಯ ಹಾಡಿನಲ್ಲಿ (ಕೀ.೮೧) ಜಲಕ್ರೀಡೆಗಾಗಿ ಗೋಪಿಕೆಯರು ಬರುತ್ತಾರೆ. ದಾರಿಯಲ್ಲಿ ಚಲುವೆಯರು ಉಲ್ಲಾಸದಿಂದಲಿ ಘಲ್ಲುಘಲ್ಲೆಂದು ಹೆಜ್ಜೆಯನಿಡುತ ಮಲ್ಲೆ ಮಲ್ಲಿಗೆ ಪುನ್ನಾಗ ಸಂಪಿಗೆ ತೋಟ ಅಲ್ಲಲ್ಲಿ ನಿಂತು ನೋಡುತ್ತಾ ಬರುತ್ತಾರೆ. ಕುಂದ ಮಂದಾರ ಸುಗಂಧಿಕ ದವನ ಬಂಗಾರದಂತ ಕ್ಯಾದಿಗೆಯಮಲ ಚೊಕ್ಕ ದುಂಡು ಮಲ್ಲಿಗೆ ಪಾರಿಜಾತ ತಾವರೆ ಮೊಗ್ಗು ಚಂದಾಚಂದಾದ ಶಾವಂತಿಗೆ ವನವ ನೋಡುತ್ತಾ ಬರುತ್ತಾರೆ. ಮುಯ್ಯಕೊಟ್ಟ ಹಾಡಿನಲ್ಲಿ ಮುಯ್ಯ ಕೊಡಲು ಕೃಷ್ಣ ಹಸ್ತಿನಾವತಿಗೆ ಹೋಗುತ್ತಿದ್ದಾಗ ಜೊತೆಯಲ್ಲಿದ್ದ ಚೆಲ್ವೆ ರುಕ್ಮಿಣಿ ಭಾಮೆರಿಗೆ ವೃಕ್ಷಗಳೆಲ್ಲ ಮಲ್ಲಿಗೆಯ ವೃಷ್ಟಿ ಕರೆಯುತ್ತವೆ, ಶಾವಂತಿಗ್ವನದಾಗೆ ಕ್ಯಾದಿಗೆ ಕುಸುಮವು ತಾವೂರಿ ಕಮಲ ಬಿಡಿಮೊಗ್ಗನು ರಂಗನ ಮಡದಿಯರು ಮುಡಿದು ಕುಳಿತುಕೊಳ್ಳುತ್ತಾರೆ ಎನ್ನುವ ಕಲ್ಪನೆಯಂತೂ ಹೆಣ್ಣುಮಕ್ಕಳಿಗೆ ಹೂವಿನ ಬಗೆಗಿರುವ ಸಹಜ ಪ್ರೀತಿಯನ್ನು ಹೇಳುತ್ತದೆ. ರಂಗನ ಮಡದಿಯರಾದರೂ ಕಮಲದ ಮೊಗ್ಗಿಗೆ ಮನಸೋಲುತ್ತಾರೆ. ಇದು ಕೀರ್ತನಕಾರರು ಸಹಜವಾದ ತಮ್ಮ ಪುಷ್ಪಪ್ರೇಮವನ್ನು ಸ್ತ್ರೀಪಾತ್ರಗಳ ಮೂಲಕ ತೋಡಿಕೊಂಡಿದ್ದಾರೆ. ಭೀಮವ್ವನವರು ಪದ್ಯ ಬರೆಯುವ ಕಾಲಕ್ಕಾಗಲೇ ವೈಧವ್ಯವನ್ನು ಅನುಭವಿಸುತ್ತಿದ್ದರು, ಹೂ ಮುಡಿಯುವುದು ಅವರಿಗೆ ನಿಷಿದ್ಧವಾಗಿತ್ತೆಂಬುದನ್ನು ನೆನಪಿಸಿಕೊಳ್ಳಬಹುದು.

**ಜೀವಜಗತ್ತು**

ಮಹಿಳಾ ಕೀರ್ತನಕಾರರು ಜೀವಜಗತ್ತನ್ನು ತಮ್ಮ ಕೀರ್ತನೆಗಳಲ್ಲಿ ಜೀವಂತ ಪಾತ್ರಗಳಂತೆ ಚಿತ್ರಿಸಿದ್ದಾರೆ. ಗಲಗಲಿ ಅವ್ವನವರು ತಮ್ಮ ಮುಯ್ಯ ಕೊಡುವ ಹಾಡಿನಲ್ಲಿ ಸುಭದ್ರೆ ದ್ರೌಪದಿಯರು ಮುಯ್ಯ ಕೊಡಲು ಹೊರಡುವಾಗ ಹಸ್ತಿನಾಪುರದಿಂದ ಹೊರಡುವ ಮೆರವಣಿಗೆಯಲ್ಲಿ ಅಷ್ಟದಿಕ್ಪಾಲಕರು ತಮ್ಮ ಪತ್ನಿಯರೊಡನೆ ವಾಹನದಲ್ಲಿ ಹೊರಡುವ ಬಗೆಯನ್ನು ಹೀಗೆ ಹೇಳುತ್ತಾರೆ. ಇಂದ್ರನು ಶಚಿಯೊಡನೆ ಗಜೇಂದ್ರನನ್ನು ಏರಿಕೊಂಡು, ಅಗ್ನಿಯು ಸ್ವಾಹಾ ದೇವಿಯೊಡನೆ ಮೇಷವೇರಿಕೊಂಡು, ಯಮನು ಶ್ಯಾಮಲೆಯ ಸಹಿತ ಕೋಣವೇರಿ, ವರುಣನು ಭಾಗೀರಥಿಯೊಂದಿಗೆ

ಮಕರವೇರಿ, ಕುಬೇರನು ಚಿತ್ತದೊಲಭೆಯೊಡನೆ ಉತ್ತಮ ಹಯವೇರಿ ಬರುತ್ತಾನೆ. ಈಶನು ಸತಿಯೊಡನೆ ವೃಷಭವನೇರಿ ಬರುತ್ತಾನೆ. ಅಷ್ಟದಿಕ್ಪಾಲಕರ ವಾಹನಗಳನ್ನು ವರ್ಣಿಸುವ ಅವಕಾಶ ಕಲ್ಪಿಸಿಕೊಂಡಿರುವುದನ್ನು ಇಲ್ಲಿ ಗಮನಿಸಬೇಕು.

ಗಲಗಲಿ ಅವ್ವನವರು ತಮ್ಮ 'ಮುಯ್ಯದ ಹಾಡು' ಕೃತಿಯಲ್ಲಿ ಸುಭದ್ರೆ ದ್ರೌಪದಿಯರು ಮುಯ್ಯಕೊಡಲು ಕೃಷ್ಣನ ಅರಮನೆಗೆ ಹೋದಾಗ: ನೀರಾಮೇಲಾಡುವ ಪಾರಿವಾಳದ ಹಿಂಡು/ ತೋಟಪಟ್ಟಿಗಳಲ್ಲಿ ನೀಟಾದ ಹಂಸಗಳು/ಆಡುತಿರಲು ಹರುಷದಿ/ಅಲ್ಲಲ್ಲೆ ನಲಿವ ನವಿಲು ಹಿಂಡುಗಳು/ ವನದೊಳು ಸ್ವರಗೈಯ್ವ ಕೋಕಿಲವು/ಬಾಜಾರದೊಳಗೆಲ್ಲ ತೇಜಿ ಆನೆಯ ಸಾಲು/ಕೋಕಿಲಸ್ವರದಂತೆ ಮಕ್ಕಳ ಜೋಗುಳ/ನಾಲ್ಕು ದಿಕ್ಕಿಗೆ ದಿವ್ಯ ಆಕಳ ಹಿಂಡುಗಳು – ಎಂದು ವರ್ಣಿಸುತ್ತಾರೆ. ಕೃಷ್ಣನ ಅರಮನೆಯಿದು. ಕೃಷ್ಣನೆಡೆಗೆ ಪಶು–ಪಕ್ಷಿ–ಪ್ರಾಣಿಗಳು ಆಕರ್ಷಿತವಾಗಿರುವ ಪರಿಯನ್ನು ಕಾಣಬಹುದು.

ಸತ್ಯಭಾಮೆ ರುಕ್ಮಿಣಿಯರು ಕೃಷ್ಣನ ಮುಂದೆ ಬಂದು ಹಗರಣ ಮಾಡುವುದು ಹೀಗೆ: (ಕೀ.೫೨) ರುಕ್ಮಿಣಿಯು, ಚಿಕ್ಕ ಚೇಳಿಂದು ಬಲು ಅಕ್ಕರೆ ತೋರಿದೆನಮ್ಮ/ಭಾವೆಯ ಉಕ್ಕು ಹೇಳಲು ನನಗೆ ಶಕ್ಯವಿಲ್ಲವ್ವ ಎಂದರೆ, ಸತ್ಯಭಾಮೆ ಉರಗ ಹಿರಿಯದೆಂದು ಎರಗೋದೇನವ್ವ/ಅದಕೆ ಎರಗೋದೇನವ್ವ/ಉರವಣಿಗೆ ರುಕ್ಮಿಣಿಯ ಮುರಿಯಲಿಲ್ಲವ್ವ– ಎನಲು ರುಕ್ಮಿಣಿ ಕೆಂಜೀಗ ಕಚ್ಚಲು ಅಂಜೋರೇನವ್ವ/ಭಾವೆಯ ಮಂಜುಳವಾಣಿ ಮೂಲೆಗೆ ಬೀಳಲೆವ್ವ –ಎಂದರೆ, ಸತ್ಯಭಾಮೆ ಹದ್ದು ಕುಕ್ಕಿದರೆ/ಗದ್ಧರಿಸೋರೇನವ್ವ/ರುಕ್ಮಿಣಿಯ ಮುದ್ದುಮಾತುಗಳ ಸದ್ದಡಗಲಿಲ್ಲವ್ವ–ಎನ್ನುತ್ತಾ ಪರಸ್ಪರರು ಮೂದಲಿಕೆಯಲ್ಲಿ ಸಮರ್ಥರೂಪಕಗಳನ್ನು ಬಳಸಿದ್ದಾರೆ. ಪ್ರಾಣಿಗಳ ಸಹಜ ಗುಣವನ್ನಿದು ಹೇಳುತ್ತದೆ.

ಕೃಷ್ಣನನ್ನು ಕುರಿತು ಸುಭದ್ರೆ: ಹಾರುವ ಹದ್ದನೇರಿ ತಿರುಗಾಡುವಿ/ಜಾರಿ ಬಿದ್ದರೆ ತೆರನೇನು ನಿನಗೆ/ಬುದ್ಧಿ ಯಾರ ಹೇಳುವರೊ ಧರೆ ಮೇಲೆ/ನೀರೊಳು ನಿನ್ನ ಮನೆ ಹಾವಿನ ಮ್ಯಾಲೆ ನಿದ್ರೆ/ ಹಾರುವ ಹದ್ದನೇರುವಿ ತಿರುತಿಂಬೊ/ಮೂರು ಅಹಂಕಾರ ನಿನಗ್ಯಾಕೊ/ಹಾರುವ ಗರುಡ ಹಾರೀಸೆನೆಂದರೆ/ಮಾರುತಿ ಕರವ ನೆಗಹಿದ ಕಾರಣ/ಹಾರುವ ಗರುಡ ಕೈಕಾಯ್ದ ಎನ್ನುತ್ತಾಳೆ. ಅರಮನೆಯ ಚಿತ್ತಾರವ ಕಂಡು: ಜಾತಿಹಂಸಪಕ್ಷಿಗಳು ಮಾತಿನ ಗಿಳಿವಿಂಡು/ನೂತನ ನವಿಲು ಬರೆಸಿಲ್ಲ/ಹನುಮನೆಂಬೊ ಕೋತಿ ಯಾಕೆ ಬರೆಸಿಹರು/ಗಂಡಭೇರುಂಡ ಮೃಗವ ತಿದ್ದಿ ತಾನು/ ಬರೆಸಿಲ್ಲ ಬಿದ್ದು ಜನರೆಲ್ಲ ನಗುವಂತೆ/ತಾನು ಮುದಿ ಹದ್ದ ಯಾಕೆ ಬರೆಸಿಹರು ಎನ್ನುತ್ತಾಳೆ. ಇದು ಕೃಷ್ಣನ ನಿಂದಾಸ್ತುತಿ. ಪ್ರಾಣಿ ಜಗತ್ತಿನಲ್ಲೂ ಮೇಳು ಕೀಳೆಂಬ ಭಾವ ಹುಡುಕಿ ಮಾತನಾಡುತ್ತ ವ್ಯಂಗ್ಯೋಕ್ತಿಯಾಗಿ ಬಳಸಿಕೊಳ್ಳುವ ಚಮತ್ಕಾರವನ್ನಿಲ್ಲಿ ಕಾಣಬಹುದು.

ಮುಯ್ಯ ಹಿಂದಿರುಗಿಸುವ ಹಾಡಿನಲ್ಲಿ ಧರ್ಮರಾಯನ ಆಳ್ವಿಕೆಯನ್ನು ವರ್ಣಿಸುತ್ತ – ಚೆಲ್ವನ ರಾಜ್ಯದಿ ಇಲಿ ಬೆಕ್ಕಿಗೆ ಹಿತ/ಹುಲಿ ಮೊಲಕೆ ಹಿತ/ಅಪ್ಪನ ರಾಜ್ಯದಿ ಸರ್ಪ ಕಪ್ಪೆಗೆ ಹಿತ/ ಮಾನ್ಯನ ರಾಜ್ಯದಿ ಆನೆ ಸಿಂಹಕೆ ಹಿತ – ಹೀಗೆ ವೈರಿಗಳೂ ಹಿತವಾಗಿದ್ದರು ಎಂದು ವರ್ಣಿಸಲಾಗಿದೆ. ದ್ರೌಪದಿಯನ್ನು ಹೊರಗೆ ಕರೆಯುತ್ತ ಸುಭದ್ರೆ ಸರ್ಪನ ಎದುರಿಗೆ ಕಪ್ಪೆ /ದರ್ಪ ತೋರುವುದು ಉಂಟೇನು/ಬರಿಯ ಮಾತಿನ ಜಾಣೆ/ನಿಮ್ಮನ ಕರೆಯಬರಲಿಲ್ಲವೆಂದು/ಕುರಿಯಂತೆ ಕೂಗಿದೆಲ್ಲ/

ಬಾರೆ ದ್ರೌಪದಿ/ನರಿಯ ಸಿಂಹನ ಮರಿಗೆ/ ನೀನು ಸರಿಗಟ್ಟಿದಂತೆ/ಅದರ ಪರಿಯ/ ತಿಳಿದುಕೊಳ್ಳ ಬಾರೆ ದ್ರೌಪದಿ/ಅಕ್ಕ ರುಕ್ಮಿಣಿಗೆ ಭಾಳ/ಸೊಕ್ಕಿನಿಂದಲಿ ಆಣಿನಿಟ್ಟೆ/ಬೆಕ್ಕಿನಾಂಗ ಸೇರಿದ್ಯಾಕ/ಬಾರೆ ದ್ರೌಪದಿ ಎಂದು ಹಾಸ್ಯ ಮಾಡುತ್ತಾಳೆ-ಇಲ್ಲಿ ಪ್ರಾಣಿಗಳ ಗುಣಧರ್ಮಗಳನ್ನು ಪಾತ್ರಗಳಲ್ಲಿ ಕಾಣಿಸುವ ಸೂಕ್ಷ್ಮ ಪ್ರಜ್ಞೆಯನ್ನಿಲ್ಲಿ ಗಮನಿಸಬಹುದು.

ಹೆಳವನಕಟ್ಟೆ ಗಿರಿಯಮ್ಮನ ಪ್ರಸಿದ್ಧ ಕೀರ್ತನೆಯೊಂದಿದೆ. ಹೆಳವನಕಟ್ಟೆ ರಂಗನ ಉಂಗುರವು ಕಳೆದುಹೋಗುತ್ತದೆ. ಗಿರಿಯಮ್ಮನು ಈ ಕೀರ್ತನೆ ಹಾಡಿದಾಗ ಗುಬ್ಬಿಯೊಂದು ಅದನ್ನು ತಂದು ಕೊಡುತ್ತದೆ. ಇದು ಅವಳ ಬದುಕಿನಲ್ಲಿ ನಡೆದ ಪವಾಡದ ಕಥೆ. ಹೊನ್ನ ತಾ ಗುಬ್ಬಿ ಹೊನ್ನ ತಾ/ ಚೆನ್ನ ಗೋಪಾಲ ಚೆಲ್ವ ಕೃಷ್ಣನ ಕೈಗೆ/ಆಗಮನವು ತಂದು ಅಜಗಿತ್ತ ಕೈಗೆ/ಸಾಗರವನುತ್ತೊಕ್ಕಿ ಸುಧೆಯಿತ್ತ ಕೈಗೆ/ತೂಗಿ ನಡೆವ ಸ್ಥೂಲಕಾಯನ ಕೈಗೆ/ನಾಗಶಯನ ನರಸಿಂಹನ ಕೈಗೆ ಎನ್ನುತ್ತಾ ೧೪ ಸಾಲುಗಳಲ್ಲಿ ದಶಾವತಾರವನ್ನು ವರ್ಣಿಸುತ್ತಾ ಗುಬ್ಬಿಯನ್ನು ಉಂಗುರ ತಂದುಕೊಡುವಂತೆ ಹೇಳುತ್ತಾಳೆ. ಇಲ್ಲಿ ಗುಬ್ಬಿ ಉಂಗುರ ತಂದುಕೊಡುವುದು ಓದುಗರ ಮನದಲ್ಲಿ ಕೂರುತ್ತದೆ.

ಉದ್ಧಾಳಿಕನ ಕಥೆಯಲ್ಲಿ ರಾಜಕುಮಾರಿ ಚಂದ್ರಾವತಿಯು ವಿವಾಹಪೂರ್ವದಲ್ಲಿ ಗರ್ಭಿಣಿಯಾಗಿರುತ್ತಾಳೆ. ಅವಳ ಈ ಸ್ಥಿತಿಗೆ ಕಾರಣನಾರೆಂದು ಚಂದ್ರಾವತಿಯ ಗೆಳತಿಯರನ್ನು ತಾಯಿ ಕೇಳುವ ಪರಿ ಹೀಗಿದೆ:

ಗಂಡುನೊಣವು ಇತ್ತ ಸುಳಿಯಲಾರದು ಇಲ್ಲಿ/ಮುಟ್ಟುವುದೆ ಮರಿದುಂಬಿ ಸಂಪಿಗೆಯನು/ ಕಪ್ಪೆ ಮುಟ್ಟುವುದೆ ಉರಗನ/ಮತ್ಸ್ಯಕ್ಕೆ ಉರಿ ಸೋಕುವುದುಂಟೆ/ಕುಮಾರಿಯ ಮುಟ್ಟಲಮ್ಮನೆ ಪರಪುರುಷ ಎಂದು ಘಟ್ಟಿಸಿ ಕೇಳುತ್ತಾಳೆ.

ಒಡ್ಡೋಲಗವನು ಮುಗಿಸಿ ರಾಯನು ಅಂತಃಪುರಕ್ಕೆ ಬರುವಾಗ ಹೀಗೆ ಅಶುಭ ಶಕುನಗಳಾಗುತ್ತವೆ: ವಾಯಸಂಗಳು ಎಡನಾದವು ಗೌಳಿಯು ರಾವಿನ ಮೇಲೆ/ ಚೀರಿದವು – ಏನಿದು ಎಂದುಕೊಂಡು ರಾಯ ಮುಂದೆ ನಡೆಯಲು – ಎಳೇಹುಲ್ಲನೊಲ್ಲವು ಎರಳೆಯ ಮರಿಗಳು/ದನಿದೋರದಿಹವು ಕೋಗಿಲೆಯು/ಗರಿಯ ಬಿಟ್ಟಾಡಲೊಲ್ಲವು ಮಯೂರವು/ ನುಡಿಯಲೊಲ್ಲವು ಅರಗಿಣಿಯು/–ರಾಜ ಗಮನಿಸಿ ನಡೆಯುತ್ತಾನೆ. ಅಂತಃಪುರದಲ್ಲಿ ರಾಣಿ, ಸರಳ ತಾಕಿದ ಹುಲ್ಲೆಯಂದದಿ ಬೇಡನ ಬಲೆಗೆ/ಸಿಕ್ಕಿದ ಪಕ್ಷಿಯಂತೆ/ಅರಗಾಯ ಹೊಂದಿದ ನಾಗರ ಮರಿಯಂದದಿ/ಹೊರಳುತಿದ್ದಳೆ ಧರೆಮೇಲೆ– ರಾಯನಿಗೆ ಎರಳೆ ಕೋಗಿಲೆ ಮಯೂರ ಅರಗಿಣಿಯು ಅಶುಭಸೂಚಕವಾದರೆ ಅಂತಃಪುರದಲ್ಲಿ ರಾಣಿ ಸರಳತಾಕಿದ ಹುಲ್ಲೆಯಾಗಿ ಬೇಡನ ಬಲೆಗೆ ಸಿಕ್ಕಿದ ಪಕ್ಷಿಯಾಗಿ ಅರಗಾಯ ಹೊಂದಿದ ನಾಗರಮರಿಯಾಗಿ ನೋವಿನ ಪ್ರತಿನಿಧಿಯೇ ಆಗಿ ಹೊರಳುತ್ತಾಳೆ.

ಚಂದ್ರಹಾಸನ ಕಥೆಯಲ್ಲಿ, ಚಂದ್ರಹಾಸನು ಮುಂದೆ ರಾಜ್ಯದೊಡೆಯನಾಗುವನೆಂದು ಬ್ರಾಹ್ಮಣರಿಂದ ತಿಳಿದ ಮಂತ್ರಿ ದುಷ್ಟಬುದ್ಧಿಯು ಬಾಲಕ ಚಂದ್ರಹಾಸನನ್ನು ಕೊಲ್ಲಲು ಕಟುಕರಿಗೆ ಒಪ್ಪಿಸುತ್ತಾನೆ. ಕಟುಕರ ಕೈಯಲ್ಲಿ ಚಂದ್ರಹಾಸನ ಕಾಗೆಯ ಕೈಯ ಕೋಗಿಲೆಯಂತೆ/ ನೆಗಳು

ನೀರಾಗೆ ಗಜವ ಪಿಡಿದಂತೆ/ಲಾಗಿಸಿ ಪಶುವ ವ್ಯಾಘ್ರನು ಪಿಡಿದಂತೆ/ರಾಹು ತುಡುಕಿದ ಚಂದ್ರನಂತೆ/ಅರಗಿಳಿಯನ್ನು ಬಾವುಗ ಪಿಡಿದೆಳೆದಂತೆ ತಲ್ಲಣಿಸುತ್ತಾನೆ/– ಈ ರೂಪಕಗಳ ಮೂಲಕ ಚಂದ್ರಹಾಸನು ಪಾರಾಗಲು ಸಾಧ್ಯವಾಗದು ಎಂದು ಹೇಳಿದರು, ಅವನು ಪಾರಾಗುತ್ತಾನೆ. ಚಂದ್ರಹಾಸನ ಕೃಷ್ಣಭಕ್ತಿಯನ್ನು ಎತ್ತಿಹಿಡಿಯುವುದು ಉದ್ದೇಶವಿರಬೇಕು.

ಲವಕುಶರ ಕಾಳಗದಲ್ಲಿ, ಸೀತೆಯನ್ನು ರಾಮ ವಧಿಸಲು ಯೋಚಿಸಿ ಲಕ್ಷ್ಮಣನೊಡಗೂಡಿ ಅರಣ್ಯಕ್ಕೆ ಕಳುಹಿಸುತ್ತಾನೆ. ಹೊರಟ ಸೀತಾಲಕ್ಷ್ಮಣರು ಪುರದ ಬಾಗಿಲಿನಲ್ಲಿ ದ್ವಯಹಂಸ ಕಂಡು/ಗರುಡನ ತೆಕ್ಕೆಯ ಕಂಡು/ಹಿರಿಯ ಬ್ರಹ್ಮರ ಕಂಡು/ನರಿಗಳೆರಡರ ಕಂಡು/ಶುಭಶಕುನ ಎಂದು ಕೊಳ್ಳುತ್ತಾರೆ/–ಇಲ್ಲಿ ಶುಭಶಕುನಗಳಾಗಿ ದ್ವಯಹಂಸಗಳು, ತೆಕ್ಕೆಯ ಗರುಡಗಳು, ನರಿಗಳೆರಡು ಕಾಣಿಸಿಕೊಳ್ಳುತ್ತವೆ.

ಇದೇ ಕಾವ್ಯದಲ್ಲಿ ಅಗಲಿದ ಸೀತಾರಾಮರ ಸಮಾಗಮವಾಗುವುದು ಅಶ್ವಮೇದಯಾಗದ ಕುದುರೆಯ ಕಾರಣದಿಂದ. ರಾಮನ ಯಾಗದ ಕುದುರೆಯನ್ನು ಲವಕುಶರು ಕಟ್ಟಿಹಾಕುತ್ತಾರೆ. ಶತ್ರುಜ್ಞ ಅವರನ್ನು ಕುರಿತು ವನದೊಳಗಾರಿಲ್ಲಿ ತುರಗವ ಹಿಡಿದವರು/ಬಿಡಿ ನಮ್ಮ ತುರಗವ/ – ಎಂದ. ಮಕ್ಕಳು, ಹಿಡಿದ ತುರಗವ ಬಿಡವರೇನೋ ಜಾಣ/ಬಿಡುವರಾ ಬಿರುದು ಸಲ್ಲುವುದೊ– ಎನಲು. ಶತ್ರುಜ್ಞ, ಹುಡುಗರೇ ನಿಮಗಿಂತ ಹಿರಿಯ ತೇಜಿಗಳೇಕೆ/ನಡುತೇಜಿ ಕೊಡಿಸುವೆ ಬನ್ನಿ/ಒಡೆಯರ ಪಾದವ ಕಾಣಿಸಿ ನಿಮಗೊಂದು/ಪಡಿ ತೇಜವನೆ ಹಾಕಿಸುವೆ – ಎನ್ನುವ ಮಾತು ಕೇಳಿ, ಹಿರಿಯ ತೇಜಿಯು ನಿಮ್ಮ ಒಡೆಯರಿಗಾಗಲಿ/ನಡುತೇಜಿ ನಿಮಗಾಗಲಿ/ಅಯ್ಯ ಪಡಿ ಜೀತವು ನಿಮ್ಮ ಗೌಡಿ ಮಕ್ಕಳಿಗಿರಲಿ/ಒಡೆಯರ ಭಾಗ್ಯ ನಮಗುಂಟು ಎಂದು ದಿಟ್ಟ ಉತ್ತರ ನೀಡುತ್ತಾರೆ, ಲವಕುಶರು– ಕುದುರೆ ಶತ್ರುಜ್ಞ ಮತ್ತು ಲವರ ವಾಗ್ವಾದಕ್ಕೆ ಇಲ್ಲಿ ಕಾರಣವಾಗುತ್ತದೆ.

ಹರಪನಹಳ್ಳಿ ಭೀಮವ್ವನರು 'ಶಕುಂತಲ ದುಷ್ಯಂತರ ಕಥೆ'ಯಲ್ಲಿ ವಿಶ್ವಾಮಿತ್ರ ಮೇನಕೆಯರ ಸಮಾಗಮದಿಂದ ಜನಿಸಿದ ಶಕುಂತಲೆಯನ್ನು ಇಬ್ಬರೂ ಕಾಡಿನಲ್ಲಿ ಬಿಟ್ಟು ಹೋಗುತ್ತಾರೆ. ಆಗ ಪ್ರಾಣಿಗಳು ತೋರುವ ಮಾತೃವಾತ್ಸಲ್ಯವನ್ನು ಭೀಮವ್ವ ಹೀಗೆ ವರ್ಣಿಸುತ್ತಾರೆ. ಹಸಿದು ನೀರಡಿಸಿ ಬಂದವು ಕಾಡಾನೆಗಳೆಲ್ಲ/ಜತ್ತಾಗಿ ನಿಂತು ನೋಡುತಲಿ/ಮತ್ತೊಂದು ವ್ಯಾಘ್ರ ಮೃಗವು ಬಾರದಂತಾಗ/ಸುತ್ತುಗಟ್ಟಿ ನಿಂತವಲ್ಲಿ/ಬಣ್ಣಬಣ್ಣದ ಪಕ್ಷಿಗಳ ನೋಡಿ/ ಸಣ್ಣ ಕೂಸಿನ ದನಿ ಕೇಳಿ ಕಣ್ವ ಋಷಿಗಳು ಬಂದರು/ಇಂತ ಮಗಳ ಪಕ್ಷಿಗಳು ಪಾಲಿಸಿಹವು/ಹೀಗಂತ ಮನದಲ್ಲಿ/ಸಂತೋಷದಲಿ ನಾಮಕರಣ ಮಾಡುತಲಿ/ಶಾಕುಂತಲ ಎಂದು ಹೆಸರಿಟ್ಟರು– ಶಕುಂತ ಪಕ್ಷಿಗಳು ರಕ್ಷಿಸಿದ ಕಾರಣಕ್ಕೆ ಕಣ್ವರು ಶಕುಂತಲಾ ಎಂದೇ ನಾಮಕರಣ ಮಾಡುತ್ತಾರೆ. ಮುಂದೆ ಯುವತಿ ಶಕುಂತಲೆಯು ಆಶ್ರಮದಲ್ಲಿ ಗಿಡಗಳಿಗೆ ನೀರುಣಿಸುತ್ತಿರುವಾಗ ಭ್ರಮರವೊಂದು ಬಂದು ಮೈ ಮೈಗೆ ಸುತ್ತುತ್ತದೆ/ಸ್ತನದ ಮೇಲೆ ಬಂದು ಕೂಡುತ್ತದೆ/ಎದೆ ಬಗಲಲ್ಲಿ ಸುತ್ತಾಡುತ್ತದೆ/ಸುರುಗುರುಳಿನ ಮ್ಯಾಲೆ ಸುಮ್ಮನೆ ಓಡಾಡುತ್ತದೆ/ಕರ್ಣದಲ್ಲಿ ಬಂದು ವಾರ್ತೆಗಳನ್ಹೇಳುತ್ತದೆ/ತುಟಿಬಾಯಲ್ಲಿ ಚುಮ್ಮನೆ ಕೊಡುತ್ತದೆ ಮನಸಿಜನಂತೆ/ಬಂದಡರುತ್ತದೆ ಮೋರೆ ಮೋರೆಗೆ/ಹೊಡೆದರೆ ಹೋಗದು/ಇದಕೇನು ದಾಡಿ/ಪೀಡೆ ತಡೆಯಲಾರೆದೆ

ಬಾಧೆ ನೋಡಿ ಗಿಡವೊಂದರಿಂದ ಗುಂಗಾಡಿ ಏಳುತ್ತದೆ/ಎಂತ ಭ್ರಮರ ಎದೆಯೊಡಸಿ ಎನ್ನನು ಸಂತಾಪಕ್ಕೆ ಗುರಿಮಾಡುವುದೀಗ – ಎಂದುಕೊಳ್ಳುತ್ತಾಳೆ–ಈ ಭ್ರಮರವೇ ದುಷ್ಯಂತ ಶಕುಂತಲೆಯ ನಡುವೆ ಪ್ರೇಮಾಂಕುರಕ್ಕೆ ಕಾರಣವಾಗುತ್ತದೆ.

ಮುಯ್ಯ ಹಿಂದಿರುಗಿಸುವ ಹಾಡಿನಲ್ಲಿ ರುಕ್ಮಿಣಿ ಸತ್ಯಭಾಮೆಯರು ವನವನ್ನು ನೋಡುತ್ತ ಕುಳಿತಿರುವಾಗ (ಧ್ವನಿ–೧೩) ಕಿತ್ತಳೆ ವನದೊಳು ಕೃಷ್ಣನ ನೋಡುತ್ತ/ಪಕ್ಷಿ ಸರ್ಪಗಳು ಬದಿಯಲಿ/ನೋಡುತ ಬಿಟ್ಟಾವೆ ತಮ್ಮ ವೈರವ/ಹೂವಿನ ವನದಾಗೆ ದೇವರ ನೋಡುತ/ಗೋವು ವ್ಯಾಘ್ರಗಳು ಬದಿಯಲಿ/ನೋಡುತ ಮೋಹದಿಂದ್ವೈರ ಮರೆತಾವೆ/ಅರ್ಕ ಕೋಟಿ ತೇಜನಲ್ಲಿಟ್ಟು ತಮ್ಮ ದೃಷ್ಟಿ/ಬೆಕ್ಕು ಇಲಿಗಳು ಬದಿಯಲ್ಲಿ/ನೋಡುತ ಮರ್ತಾವೆ ತಮ್ಮ ವೈರ/ವನಜಾಕ್ಷನರಸೇರು ವನಮಧ್ಯೆ ಬರುತಿರೆ/ನವುಲು ನಾಚುತಲಿ ನಡೆದಾವೆ/ನುಡಿದವು ಗಿಳಿಹಿಂಡು ಕೇಳಿ ತಲೆಬಾಗಿ/ಗಜಗಮನೆಯರ ನೋಡಿ ಗಜನಾಚಿ ನಡೆದಾವೆ/ನಡುವಿಗೆ ಸಿಂಹ ತಲೆಬಾಗಿ/ಪನ್ನಂಗ ಜಡೆಯ ನೋಡುತಲಿ ಹೆಡೆ ಮುಚ್ಚಿಕೊಳ್ಳುತ್ತದೆ. ಕೃಷ್ಣನ ನೋಡುತ್ತಾ ಪ್ರಾಣಿಗಳು ತಮ್ಮ ಸಹಜ ವೈರವನ್ನು ಮರೆಯುತ್ತವೆ, ರುಕ್ಮಿಣಿ ಸತ್ಯಭಾಮೆಯರ ಸೌಂದರ್ಯ ನೋಡಿ ಪ್ರಾಣಿಗಳು ತಮ್ಮ ಸಹಜ ಗುಣವನ್ನು ಮರೆತು ನಾಚುತ್ತವೆ. ಕೃಷ್ಣನರಸಿಯರ ಸೌಂದರ್ಯ ವರ್ಣಿಸಲು ಪ್ರಾಣಿಗಳನ್ನು ಬಳಸಿರುವ ಪರಿಯಿದು.

ಜಲಕ್ರೀಡೆಯ ಹಾಡಿನಲ್ಲಿ ಗೋಪಿಕೆಯರು ಕ್ರೀಡೆಯಾಡಲು ನದಿಗೆ ಹೋಗುತ್ತಿರುವಾಗ ವನದ ದಾರಿಯಲ್ಲಿ ಗಂಡಭೈರುಂಡ ಚಕೋರ ಚಾತಕ ಗಿಳಿ/ಹಿಂಡು ನವಿಲು ಚಕ್ರವಾಕ ಪಕ್ಷಿ ಗಿಳಿವಿಂಡು/ಗಂಡೆರಳೆ ಗರುಡ ಹಂಸವು/– ಕಾಣಿಸುತ್ತವೆ. ಕಸ್ತೂರಿ ಮೃಗ ಪುನುಗಿನ ಬೆಕ್ಕು ಪಾರ್ವಾಳ/ಜಕ್ವಕ್ಕಿ ಕೊಳಲ್ಹಕ್ಕಿ ಸಾರಂಗವು ಚಾರಿ/ಕುಕ್ಕುಟ ಭೈರುಂಡ ಎಡಖಗ ಬಲಕಾಗಿ–ಜಲಕ್ರೀಡೆಗೆ ಶುಭಶಕುನವನ್ನು ನೀಡುತ್ತವೆ. ಜನಕ್ರೀಡೆಯ ಮನೋಲ್ಲಾಸಕ್ಕೆ ಪ್ರಾಣಿಪಕ್ಷಿಗಳ ವೀಕ್ಷಣೆಯೂ ಮುದ ನೀಡುತ್ತದೆ. ಸ್ತುತಿಮಾಲಿಕೆಯೊಂದರಲ್ಲಿ ಅವ್ವ ೮೦ ಕೋಟಿ ೪ ಲಕ್ಷ ಜೀವಿಗಳಿಗೆ ಭಗವಂತನು ಇಂಬು ಕೊಡುತ್ತಾನೆ ಎಂದು ಪ್ರಸ್ತಾಪಿಸಿದ್ದಾರೆ.

ನಳಚರಿತ್ರೆಯಲ್ಲಿ (ಧ್ವನಿ–೭) ನಳನು ಬೇಟೆಗೆ ಬರುತ್ತಾನೆ. ಸಂಪಿಗೆಯ ವನದಲ್ಲಿ ಗುಂಪು ಗುಂಪಾಗಿ ಆಡೋ ಪಕ್ಷಿಗಳ ನೋಡುತ್ತಾನೆ. ಬೇಟೆಯಾಡಲು ಮುಂದಾದಾಗ ಎಲ್ಲವೂ ಹಾರಿ ಹಿರಿಯ ಪಕ್ಷಿಯೊಂದು ಸೆರೆಸಿಕ್ಕುತ್ತದೆ. ಅದು ನನ್ನನ್ನು ಬಿಟ್ಟು ಬಿಡು ನಿನಗೊಂದು ಸಡಗರದ ಸುದ್ದಿ ಹೇಳುತ್ತೇನೆ, ರೂಪವತಿಯಾದ ದಮಯಂತಿಗೆ ನೀನು ಕಾಂತನಾಗುವಂತೆ ನಾನು ಮಾಡುತ್ತೇನೆ. ಹವಳಕ್ಕೆ ಮುತ್ತು ಕೂಡಿಸಿದಂತೆ ಬಿಳಿಯ ಅಡಕೆಯ ಜೊತೆ ಸುಣ್ಣದಂತೆ ನಿಮಗಿಬ್ಬರಿಗೂ ಸೊಗಸು ಎನ್ನುವ ಮಾತು ಕೇಳಿ ರಾಜ ಅದನ್ನು ಹಾರಿ ಬಿಟ್ಟ, ಅದು ದಮಯಂತಿಯ ಅರಮನೆಯ ಸಂಪಿಗೆ ವನಕ್ಕೆ ಹೋಗುತ್ತದೆ. ಹೊಸ ಪಕ್ಷಿ ನೋಡಿ ದಮಯಂತಿ ಬೆರಗಾಗುತ್ತಾಳೆ. ಅವಳು ಹಿಡಿಯಲು, ಕೊಸರಿಕೊಂಡು ಹೋಗುತ್ತದೆ. ಕುಶಲ ಮಾತಿನಲಿ ಕರೆಯಲು ಬಂದು ಕೈ ಸೇರುತ್ತದೆ. ನಿನ್ನ ಯೌವನಕೆ ತಕ್ಕಂತ ದೆಸೆವಂತನಾದ ನಳರಾಯನೆಂಬುವ ದೊರೆಯು ಪುರುಷನಾದರೆ ನಿನ್ನ ಪುಣ್ಯಕ್ಕೆ ಸರಿಯಿಲ್ಲ. ಮೊಸರು ತಂದು ಹಾಲಿಗೆ ಹೆಪ್ಪಿಟ್ಟಂತೆ ಕೂಡುವುದು. ಮಾಣಿಕ್ಯಕ್ಕೆ

ಮುತ್ತು ಬೆರೆಸಿದಂತಾಗುವುದು. ಅರಸನರಸಿಯು ಆಗಿ ಸರಸ ಸುಖಬಡುವಾಗ್ಗೆ ನನ್ನ ನೆನೆಸಿಕೊಂಬುವಿ. ಎನ್ನ ಮಾತನ್ನು ಮರೆಯದೆ ನೀನು, ಮನಸ್ಸು ಬಂದರೆ ಮಾಡಿಕೊಂಡು ಮಕ್ಕಳ ಪಡೆದು ಸುಖದಿಂದ ಬಾಳು ಎನ್ನುತ್ತದೆ. ಪಕ್ಷಿಯ ಮಾತನ್ನು ಕೇಳಿ ಇನ್ನೊಬ್ಬ ಪತಿಯ ನೋಡುವಳಲ್ಲ ಎಂದು ಮಾತು ಕೊಡುತ್ತಾಳೆ. ತಕ್ಷಣ ಹಕ್ಕಿ ಹಾರಿ ಹೋಗಿ ನಳರಾಯನಿಗೆ ವಾರ್ತೆ ತಿಳಿಸಿ ಅಂತರಿಕ್ಷಕ್ಕೆ ಹಾರುತ್ತದೆ–ನಳ ದಮಯಂತಿಯರ ವಿವಾಹಕ್ಕೆ ಪಕ್ಷಿಯು ಸೇತುವಾಗುತ್ತದೆ. ಮುಂದೆ ಎಲ್ಲವನ್ನೂ ಕಳೆದುಕೊಂಡ ನಳ ದಮಯಂತಿಯರು ಕಾಡು ಪಾಲಾಗುತ್ತಾರೆ. ಆಹಾರವಿಲ್ಲದೆ ಅತಿ ದುಃಖದಲ್ಲಿ ಬರುತ್ತಿರಲು ಅರಣ್ಯದಲ್ಲಿ ಆಡುವ ಪಕ್ಷಿಯೊಂದನ್ನು ನೋಡುತ್ತಾರೆ. ಕೃಷ್ಣನು ನಮಗಾಗಿಯೇ ಸೃಷ್ಟಿಮಾಡಿದನೆಂದುಕೊಳ್ಳುತ್ತಾರೆ. ಬಂಗಾರದ ರೆಕ್ಕೆ, ಹೊಳೆವ ಕಣ್ಣುಗಳು ಮಾಣಿಕ್ಯದಂತೆ ಹಾರಾಡುವ ಪಕ್ಷಿ. ಆರು ಪಕ್ಷಿಗಳು ಸಿಕ್ಕರೆ ಮೂರು ದಿನದ ಆಹಾರವಾಯಿತು. ಎನ್ನುತ್ತ ಉಟ್ಟ ವಸ್ತ್ರವನ್ನೇ ಬಿಚ್ಚಿ ಹಿಡಿಯಲು ಹೋಗುತ್ತಾನೆ. ಥಟ್ಟನೆ ವಸ್ತ್ರವನ್ನು ಕಚ್ಚಿಕೊಂಡೇ ಪಕ್ಷಿ ಹಾರಿ ನಳನೇ ನೀನು ಉಟ್ಟ ವಸ್ತ್ರ ಸೆಳೆದ ಕಲಿ ನಾನೆಂದು ತಿಳಿಯೊ ಎಂದು ಮರದ ಮೇಲೆ ಕುಳಿತು ಮಾತನಾಡುತ್ತದೆ–ಮುಂದೆ ರಾಜ ದಮಯಂತಿಯನ್ನು ಅಗಲುತ್ತಾನೆ. ಪತಿ ಪತ್ನಿಯರ ಅಗಲುವಿಕೆಗೆ ಕಲಿಯ ಪಕ್ಷಿ ರೂಪವೇ ಕಾರಣವಾಗುತ್ತದೆ.

ನಿಡಗುರಕಿ ಜೀವೂಬಾಯಿಯವರು ತಮ್ಮ 'ಸಮುದ್ರಮಥನ' ಕೃತಿಯಲ್ಲಿ ಗರುಡ ವಾಸುಕಿ, ಕೂರ್ಮನ ಪ್ರಸ್ತಾಪವಿದೆ. ದೇವತೆಗಳಿಗೆ ಹರಿ ಸಮುದ್ರಮಥನ ಮಾಡಲು ಹೇಳಿದಾಗ ಪರ್ವತವನ್ನು ನಮ್ಮಿಂದ ಎತ್ತಲು ಸಾಧ್ಯವಿಲ್ಲ ಎನ್ನುತ್ತಾರೆ. ದಾನವರಿಂದ ಆ ಕೆಲಸ ಮಾಡಿಸಿಕೊಳ್ಳಿ ಎಂದು ಹೇಳಿದಾಗ ದೇವತೆಗಳು ಗರುಡನನ್ನು ಸ್ತುತಿಸುತ್ತಾರೆ. ಗರುಡನು ದಾನವರನ್ನು ದೇವತೆಗಳನ್ನು ಈ ಕಾರ್ಯಕ್ಕೆ ಒಂದುಗೂಡಿಸುತ್ತಾನೆ. ಮಂದರ ಪರ್ವತವನ್ನು ಕಡೆಯಲು ವಾಸುಕಿಯನ್ನು ಬಳಸಿಕೊಳ್ಳುತ್ತಾರೆ. ದೈತ್ಯರು ವಾಸುಕಿಯ ಮುಖವನ್ನು ಹಿಡಿದರೆ ದೇವತೆಗಳು ಅದರ ಬಾಲವನ್ನು ಹಿಡಿದು ಮಥಿಸಲು ಮಂದರವು ಮುಳಗಲಾರಂಭಿಸುತ್ತದೆ. ನಾರಾಯಣನು ಕೂರ್ಮಾವತಾರ ತಾಳಿ ಮಂದರವನ್ನು ಎತ್ತಿ ಹಿಡಿಯುತ್ತಾನೆ. ಸಮುದ್ರಮಥನ ಕಾರ್ಯದಲ್ಲಿ ವಾಸುಕಿಯೂ, ಕೂರ್ಮವೂ ಪ್ರಧಾನಪಾತ್ರವಾಗಿ ನಿಲ್ಲುತ್ತದೆ.

ಸರಸಾಬಾಯಿಯವರ ಕೀರ್ತನೆಯೊಂದು ವಿಶಿಷ್ಟವಾಗಿದೆ. (ಕೀ.೭೮). ಹರಿನಾಮದರಗಿಳಿಯು ದೊರಕಿತಿಂದು/ವರಹಿರಿಯರ ಕರುಣದಿಂದೆನಗೆ ಎನ್ನುತ್ತ ವೇದಶಾಸ್ತ್ರ ಮರ್ಮ ಅರಿತ ಸಾಧಿಸಿ ಕಂಸನ ಗೆದ್ದ ದುಷ್ಟರ ಶಿಕ್ಷಿಪ ಕಷ್ಟ ಪರಿಹರಿಪ ಬಂಧನವ ಪರಿಹರಿಪ ಸಂಪತ್ತುಗಳ ಕೊಡುವ ಸಂಕಟ ಪರಿಹರಿಸುವ ಪರಮ ಪದವಿಯನು ಕೊಡುವ ಮುದ್ದು ಮುಖದೊಳು ತಿಲಕ ತಿದ್ದಿದ ಹದ್ದು ವಾಹನನಾದ –ಎನ್ನುತ್ತ ಕೇಶವ ನಾರಾಯಣ ಮುಂತಾದ ಕೃಷ್ಣನ ಹೆಸರುಗಳನ್ನು ಹೇಳಿ ಈ ಹರಿನಾಮದರಗಿಳಿಯು ನನಗೆ ದೊರಕಿತೆನ್ನುತ್ತಾರೆ– ಇಂತಹ ರಚನೆ ಇನ್ಯಾರ ಕೀರ್ತನೆಗಳಲ್ಲೂ ಕಂಡು ಬರುವುದಿಲ್ಲ.

**ಅಡಿ ಟಿಪ್ಪಣಿಗಳು**

೧. ವಸಂತ ಎ.ಆರ್.ರಂಗರಾವ್,ಸಂಪುಟ:೪, ಸಂಚಿಕೆ–೨, ರಂಗವಿಠಲ; ಪುಟ:೩೭, ನವೆಂಬರ್ ೨೦೦೭

೨. ಶ್ರೀನಿವಾಸ ಸು ಮಠದ; ರಂಗವಿಠಲ; ಏಪ್ರಿಲ್ ೨೦೦೮; ಸಂಚಿಕೆ:೭, ಸಂಪುಟ:೪, ಪು:೧೯

# ಅಧ್ಯಾಯ–ಎಂಟು

## ಸ್ತ್ರೀ ಪಾತ್ರಗಳು

ಮಹಿಳಾಕೀರ್ತನಕಾರರು ಮಹಾತ್ಯಾಗಿಗಳು ಅಥವಾ ಬಂಡಾಯಗಾರ್ತಿಯರು ಎಂಬ ಭಿನ್ನ ಅಭಿಪ್ರಾಯಗಳು ಮೇಲ್ನೋಟಕ್ಕೆ ಕಂಡುಬಂದರೂ ಇವರ ಬದುಕು ಮತ್ತು ಬರಹವನ್ನು ಸೂಕ್ಷ್ಮವಾಗಿ ಅಧ್ಯಯನ ಮಾಡಿದಾಗ ಈ ಎರಡೂ ಅಭಿಪ್ರಾಯಗಳಿಗಿಂತ ಭಿನ್ನವಾದ ವ್ಯಕ್ತಿತ್ವದ ಚೌಕಟ್ಟಿನಲ್ಲಿ ಇವರು ಕಾಣಿಸಿಕೊಳ್ಳುತ್ತಾರೆ. ಇವರು ಬದುಕಿದ ಸಾಂಪ್ರದಾಯಿಕ ಹಿನ್ನೆಲೆಯ ಕುಟುಂಬಗಳು ಮತ್ತು ಸಾಮಾಜಿಕ ಪರಿಸ್ಥಿತಿಯಲ್ಲಿ ಅನಿವಾರ್ಯವಾದ ಹೊಂದಾವಣಿಕೆಗಳು ಮುಖ್ಯವಾಗಿದ್ದವು. ಸಂಘರ್ಷವಿಲ್ಲದ ಸಹಚರ್ಯವನ್ನವರು ಅನುಸರಿಸಿದರು. ಸ್ತ್ರೀಯರ ವಿಭಿನ್ನ ಮುಖಗಳ ಪರಿಚಯವು ಇವರ ಕೃತಿಗಳ ಸ್ತ್ರೀಪಾತ್ರಗಳಲ್ಲಿ ಕಾಣಿಸಿಕೊಳ್ಳುತ್ತವೆ. ಇನ್ನೂ ಮುಖ್ಯವಾದುವೆಂದರೆ ಇವರಿಗೆ ಒಳಧ್ವನಿ ಇತ್ತೇ ಹೊರತು, ಹೊರಧ್ವನಿ ಸಾಮಾಜಿಕ ಅಥವಾ ಸಾರ್ವಜನಿಕ ಧ್ವನಿ (public voice) ಇರಲಿಲ್ಲ. ಆದರೂ ಇವರು ಕವಿಗಳಾಗಿ ಅವಕಾಶ ಗಳಿಸಿಕೊಂಡು ತಮ್ಮ ಧ್ವನಿಯನ್ನು ಹೊರಗೆ ಕೇಳಿಸುವಂತೆ ಮಾಡಿದ್ದಾರೆ.

ಗಲಗಲಿ ಅವ್ವನವರ 'ಮುಯ್ಯದ ಹಾಡುಗಳಲ್ಲಿ' ಬರುವ ಮುಖ್ಯ ಸ್ತ್ರೀ ಪಾತ್ರಗಳೆಂದರೆ ಶ್ರೀಕೃಷ್ಣನ ಮಡದಿಯರಾದ ರುಕ್ಮಿಣಿ ಸತ್ಯಭಾಮೆಯರು, ಕೃಷ್ಣನ ತಂಗಿಯರಾದ ಸುಭದ್ರೆ ದ್ರೌಪದಿಯರು. ಸುಭದ್ರೆ ದ್ರೌಪದಿಯರು ತಮ್ಮ ಅಣ್ಣನನ್ನು, ತವರನ್ನು ನೋಡುವ ಹಂಬಲದಿಂದ ಮುಯ್ಯ ಒಯ್ಯಲು ತೀರ್ಮಾನಿಸುವುದರಿಂದ ಕೀರ್ತನೆ ಪ್ರಾರಂಭವಾಗಿದೆ. ಸುಭದ್ರೆಗೆ ಅಣ್ಣ ಕೃಷ್ಣನನ್ನು ನೋಡುವ ಹಂಬಲ ಹೆಚ್ಚಾಗಿ ತವರನ್ನೆ ಹೀಗೆ ಸ್ಮರಿಸಿಕೊಳ್ಳುವುದು ಹೆಣ್ಣಿಗೆ ತವರಿನ ಬಗೆಗಿರುವ ಸಹಜವಾದ ಸೆಳೆತವು ಯಾರನ್ನು ಬಿಡುವುದಿಲ್ಲ ಎಂಬುದನ್ನು ಎತ್ತಿ ತೋರಿಸುತ್ತದೆ. ಸುಭದ್ರೆಗೆ ಗಂಡನ ಮನೆಯಲ್ಲಿ ಯಾವ ಕೊರತೆಯೂ ಇರಲಿಲ್ಲ. ಆದರೂ

ತಿಂಗಳಿಗೆ ಸುಭದ್ರ ಬಂದೇನಾ ನಿನ ನೋಡಲು
ಒಂದೆ ಮನದಿಂದ ಇರುಯೆಂದ
ಒಂದೆ ಮನದಿಂದ ಇರುಯೆಂದು ಕಳುಹಿಸಿ
ಇಂದೆನ್ನ ಮನಸು ಕಲಕೀತ (ಮು–೪, ಕೀ. ೨–೩) ಎನ್ನುತ್ತ ಅವಳ

ತಳಮಳ ಹೆಚ್ಚಾಗುತ್ತದೆ. ಈ ಸಾಲುಗಳು "ಪಂಚಮಿ ಹಬ್ಬ ಉಳದಾವು ದಿನ ನಾಕ, ಅಣ್ಣ ಬರಲಿಲ್ಲ ಯಾಕ ಕರೆಯಾಕ" ಎನ್ನುವ ಜನಪದ ಗೀತೆಯನ್ನು ನೆನಪಿಸುತ್ತದೆ. ಇದೇ ನೆವದಲ್ಲಿ ತವರಿನ ಸಿರಿಯು ವರ್ಣಿತವಾಗಿದೆ. ಗೆಳತಿಯರು 'ಗೋಕುಲೇಶ ರಾಮೇಶ ಯಾಕೆ ಮಧುರೆ

ಬಿಟ್ಟ ವಾಕ್ಕು ಪೇಳೆಂದು' ಕೇಳುತ್ತಾರೆ. ಸುಭದ್ರೆ ದ್ವಾರಕೆಯನ್ನು ವರ್ಣಿಸುತ್ತಾಳೆ. ಸುಭದ್ರೆ ಎಲ್ಲರನ್ನೂ ಒಪ್ಪಿಸಿ ಮುಯ್ಯ ತೆಗೆದುಕೊಂಡು ಹೊರಡುತ್ತಾಳೆ. ಇವರೊಡನೆ ಅಷ್ಟದಿಕ್ಪಾಲಕರು ಹೊರಡುತ್ತಾರೆ. ಇಂದ್ರ ಶಚಿಯೊಡನೆ, ಅಗ್ನಿ ಸ್ವಾಹಾಳೊಡನೆ, ಯಮನು ಶ್ಯಾಮಲೆಯೊಡನೆ, ವರುಣನು ಭಾಗೀರಥಿಯೊಡನೆ, ಮರುಥನು ಪ್ರವಹಿಯೊಡನೆ, ವಿತ್ತಪನು ಚಿತ್ತದೊಲ್ಲಭೆಯೊಡನೆ, ಈಶನು ಸತಿಯೊಡನೆ ಹೊರಡುತ್ತಾರೆಂದು ಅವ್ವ ವರ್ಣಿಸುವಲ್ಲಿ ಸ್ತ್ರೀಪಾತ್ರಗಳಿಗೆ ಅವ್ವನವರು ನೀಡಿರುವ ಪ್ರಾಧಾನ್ಯತೆಯನ್ನು ಕಾಣಬಹುದು.

ಅವ್ವ ಬರೆದಿರುವ ಪದ್ಯವೊಂದರಲ್ಲಿ (ಕೀ.೧೯) ನೀತಿ ಹೀಗಿದೆ.

ಅತ್ತೆ ಸೊಸೆವೊಂದೆ ಮಕ್ಕಳು ಮರಿಯೊಂದೆ/ಹೆತ್ತಮ್ಮನೊಂದೆ ಮಡದಿಯೊಂದೆ/ ಹೆತ್ತಮ್ಮನೊಂದೆ ಮಡದಿ/ಒಂದೆ ಆದರೆ ವಿತ್ತವೆಚ್ಚಾಗಿ ಮದುವೆ ಯಾಕೆ/ ಅಕ್ಕತಂಗಿಯೊಂದೆ ಮಕ್ಕಳು ಸೊಸೆಯೊಂದೆ/ ಚಿಕ್ಕಮ್ಮನೊಂದೆ ಮಡದಿ ಒಂದೆ/ಚಿಕ್ಕಮನೊಂದೆ ಮಡದಿ ಒಂದೆ ಆದರೆ ವಿತ್ತವೆಚ್ಚಾಗಿ ಮದುವೆ ಯಾಕೆ – ಮಹಿಳೆಗೆ ಸಮಾಜದಲ್ಲಿ ನೀಡಬೇಕಾದ ಸ್ಥಾನಮಾನ, ಗೌರವ ನೀಡದಿದ್ದಲ್ಲಿ ಸಂಬಂಧಗಳಿಗೆ ಅರ್ಥವಿಲ್ಲದಂತಾಗಿ ಅನರ್ಥಗಳಾಗಿ ಕಾರಣವಾಗುತ್ತದೆ, ಅಲ್ಲದೆ ತಾರತಮ್ಯದ ಅನಿವಾರ್ಯತೆಯೂ ಲೋಕಕ್ಕೆ ಇದೆ ಎಂಬುದನ್ನು ಈ ಪದ್ಯದಲ್ಲಿ ತಾರ್ಕಿಕವಾಗಿ ಹೇಳಲಾಗಿದೆ. ಸ್ತ್ರೀ ಸಂಬಂಧಗಳನ್ನು ಈ ತರ್ಕದ ರೂಪಕಗಳಾಗಿ ಪರಿಣಾಮಕಾರಿಯಾಗಿ ಅವ್ವ ಬಳಸಿಕೊಂಡಿದ್ದಾರೆ.

ಸುಭದ್ರೆ ಕೃಷ್ಣನ ಅರಮನೆಗೆ ಬಂದಾಗ ನಾದಿನಿಯಾದ ರುಕ್ಮಿಣಿ ಎದುರುಗೊಳ್ಳಲು ಬರುವುದಿಲ್ಲ. ಸುಭದ್ರೆ ನೊಂದುಕೊಳ್ಳುತ್ತಾ...:

ತಾಯಿಮನೆಗೆ ಬಂದು ಬಹಳ ಹೊತ್ತಾಯಿತು
ತಾಯಿಯ ಸೊಸೆಯರು ಬರಲಿಲ್ಲ
ತಾಯಿಯ ಸೊಸೆಯರು ಬರಲಿಲ್ಲ ನಮಗಂಜಿ
ಬಾಯಿ ಬಿಡುತಾರೆ ಒಳಗಿನ್ನು
ಅಣ್ಣನ ಮನೆಗೆ ಬಂದು ಸಣ್ಣ ಹೊತ್ತಾಯಿತು
ಅಣ್ಣನ ಮಡದಿ ಬರಲಿಲ್ಲ
ಅಣ್ಣನ ಮಡದಿ ಬರಲಿಲ್ಲ ರುಕ್ಮಿಣಿ
ಇನ್ನು ಬಾ ಅಭಯ ಕೊಡತೇವ
ಅತ್ತಿಗೆ ಮನೆಗೆ ಬಂದು ಹತ್ತು ಘಳಿಗ್ಯಾದೀತು
ಎತ್ತ ಓಡಿದಳೇ ನಮಗಂಜಿ
ಎತ್ತ ಓಡಿದಳೇ ನಮಗಂಜಿ ಸತ್ಯಭಾಮೆ
ಇತ್ತ ಬಾ ಅಭಯ ಕೊಡತೇವ (ಪುಟ–೭೯–೮೦, ಕೀ–೬೧) – ಎಂದು

ನುಡಿಯುತ್ತಾಳೆ. ಲೋಕದ ವ್ಯಾಪಾರದಲ್ಲಿ ಅತ್ತಿಗೆ ನಾದಿನಿಯರ ನಡುವೆ ಇರುವ ಸಂಬಂಧದ ಒಡಕನ್ನು ಹಾಗು ಸಮಯ ಬಂದಾಗ ಅದನ್ನು ವ್ಯಕ್ತಪಡಿಸುವ ಸ್ತ್ರೀಯರ ಮನೋಭಾವವನ್ನು

ಸಜಹವಾಗಿ ಚಿತ್ರಿಸಿದ್ದಾರೆ. ತಾಯಿ ಇಲ್ಲದ ತವರಿನಲ್ಲಿ ಅತ್ತಿಗೆಯು ತಾಯಿಯ ಸ್ಥಾನದಲ್ಲಿ ನಿಲ್ಲದೆ ತಾಯಿಯ ಸೊಸೆಯಾಗಿ, ಅಣ್ಣನ ಹೆಂಡತಿಯಾಗಿ ನಿಲ್ಲುವ ಪರಿಯನ್ನು ತಮ್ಮ ಅನುಭವದ ಹಿನ್ನೆಲೆಯಲ್ಲಿಯೇ ಅವ್ವ ಚಿತ್ರಿಸಿದ್ದಾರೆ. ತಾಯಿಯಿಲ್ಲದ ತವರು ಹೆಣ್ಣುಮಕ್ಕಳಿಗೂ ಅಣ್ಣನ ಮನೆಯಾಗಿ, ಅತ್ತಿಗೆಯ ಮನೆಯಾಗಿ ದೂರವಾಗುತ್ತ ಹೋಗುತ್ತದೆ. ಅದು ತನ್ನದಲ್ಲದ್ದು ಎನಿಸತೊಡಗುತ್ತದೆ.

ಕೀರ್ತನಕಾರರ ಸ್ತ್ರೀ ಸಹಜವಾದ ವರ್ಣನೆಯೊಂದು ಹೀಗಿದೆ:

ಒಳ್ಳೆ ಮನುಜರ ಸಂಗ ಮಲ್ಲಿಗೆ ಮುಡಿದಂತೆ/ಕ್ಷುಲ್ಲಕ ಮತರ ಸಹವಾಸವೆಂಬೊದು ನೀರುಳ್ಳಿ ತಿಂದ ಪರಿಯಂತೆ/ಭಾವಜ್ಞರ ಸಂಗ ಶಾವಿಗೆ ಉಂಡಂತೆ/ಬಾಳ್ವೆವಂತರ ಸಂಗ ಹೋಳಿಗೆ ಉಂಡಂತೆ/ ಹಿಟ್ಟು ಬೂದಿಯೊಂದೆ/ರೊಟ್ಟಿ ಮುಚ್ಚಳವೊಂದೆ/ಕಟ್ಟಿಗೆಯೊಂದೆ ಕಬ್ಬೊಂದೆ ಆದಾರೆ–ಎನ್ನುವ ಉಪಮೆಗಳು ಅವರ ಬದುಕಿನ ಅನುಭವಗಳಲ್ಲಿ ಕಟ್ಟಿಕೊಟ್ಟಿರುವಂತದ್ದು.

ದ್ವಾರಕೆಗೆ ಬಂದ ಸುಭದ್ರೆ ದ್ರೌಪದಿಯರು ಸುದ್ಧಿ ತಿಳಿಸಲು ಕೃಷ್ಣನರಮನೆಗೆ ದೂತೆಯನ್ನು ಕಳುಹಿಸುತ್ತಾರೆ. ಆಕೆ ಹೋಗಲು ಕೃಷ್ಣನು ಅವಳಿಗೆ ಉಡುಗೊರೆ ನೀಡಿ ಗೌರವಿಸಿ ಕಳುಹಿಸುತ್ತಾನೆ. ಹಿಂದಿರುಗಿದ ಅವಳು ದ್ರೌಪದಿ ಸುಭದ್ರೆಯರಿಗೆ ದ್ವಾರಕೆಯ ವೈಭವವನ್ನು, ಕೃಷ್ಣನ ಔದಾರ್ಯವನ್ನು ವರ್ಣಿಸುತ್ತಾಳೆ. ಮತ್ತೆ ಮುಯ್ಯ ಹಿಂದಿರುಗಿಸುವಾಗ ರುಕ್ಮಿಣಿ ಸತ್ಯಭಾಮೆಯರು ದೂತೆಯ ಮೂಲಕ ಸುದ್ಧಿ ಕಳುಹಿಸುತ್ತಾಳೆ. ಸುಭದ್ರೆ ದ್ರೌಪದಿಯರು ದೂತೆಯನ್ನು ಗೌರವಿಸಿ ಕಳುಹಿಸುತ್ತಾರೆ. ಅವಳು ಸತ್ಯಭಾಮೆ ರುಕ್ಮಿಣಿಯರಿಗೆ ಹಸ್ತಿನಾಪುರದ ವೈಭವವನ್ನು, ಧರ್ಮರಾಯನ ರಾಜ್ಯಭಾರದ ವರ್ಣನೆಯನ್ನು ಮಾಡುತ್ತಾಳೆ. ದೂತೆಯಂತಹ ಸಣ್ಣ ಪಾತ್ರವನ್ನು ಅಕ್ಕರೆಯಿಂದ ಬೆಳೆಸಿರುವ ಅವ್ವನ ಸ್ತ್ರೀಪರ ನಿಲುವನ್ನಿಲ್ಲಿ ಕಾಣಬಹುದು. ಇಲ್ಲಿನ ದೂತೆ ತನ್ನ ಪಾತ್ರಕ್ಕೆ ಬೇಕಾದ ಸೂಕ್ಷ್ಮಗ್ರಾಹಿ, ವಿನಯಶೀಲೆ. ರುಕ್ಮಿಣಿ ಸತ್ಯಭಾಮೆಯರ ಸಾಂಸಾರಿಕ ಬದುಕಿನ ಒಳಮುಖವನ್ನು ದೂತೆಯ ಪಾತ್ರದ ಮೂಲಕ ಪರಿಚಯಿಸುವ ರೀತಿ ವಿಶಿಷ್ಟವಾಗಿದೆ. ಅವ್ವನವರು ಸಾಂಸಾರಿಕ ಬದುಕಿನಲ್ಲಿ ತಾವು ಕಂಡ ಪತಿ ಪತ್ನಿಯರ ನಡುವಿನ ಸೂಕ್ಷ್ಮ ಭಾವಗಳನ್ನು ಈ ದೂತೆಯ ಪಾತ್ರದ ಮೂಲಕ ಅಭಿವ್ಯಕ್ತಪಡಿಸಿದ್ದಾರೆ.

ದ್ವಾರಕೆಯಿಂದ ಹಿಂದಿರುಗಿ ಬಂದ ದೂತೆ ರುಕ್ಮಿಣಿ ಸತ್ಯಭಾಮೆಯರು ಕೃಷ್ಣನ ಬಳಿ ಮಾಡಿದ ಹಗರಣವನ್ನು ವರ್ಣಿಸುತ್ತ, ಭಾವೆ ಎದೆ ಕಿಚ್ಚಿನವಳು, ಚೇಳಿನಂತವಳು, ಕೆಂಜಗದಂತವಳು, ಮುಳ್ಳಿನಂತವಳು, ರುಕ್ಕಿಣಿ ಕಲಹಗಾತಿ, ಅಗ್ಗಿಷ್ಟಿಕೆ ಆದಳು, ಅತಿ ಸಿಟ್ಟಿನ ಹುಲಿ, ಉರುಗ ಕುಕ್ಕುವ ಹದ್ದಿನಂತವಳು, ಸುಳ್ಳಿ, ಶೂಲದಂತವಳು ಎಂದೆಲ್ಲ ಪರಸ್ಪರರು ಸವತಿ ಮಾತ್ಸರ್ಯದಿಂದ ದೂಷಿಸುತ್ತ ನಾಚಿಕೆಯಿಲ್ಲದೆ ಮುಂಜರಗು ಹಿಡಿದು ಗುಂಜಿಸಿ ಎಳೆದಾಡುತ್ತಿದ್ದರು. ರುಕ್ಮಿಣಿ ಭಾಮೆಯರಿಗೆ ಸಮಧಾನ ಪಡಿಸಿ, ಬುದ್ಧಿ ಹೇಳಿದ ಕೃಷ್ಣ 'ಸಿರಿ ರಮಿಯರಸಗೆ ಸರಿಯಿಬ್ಬರು ನೀವವ್ವಾ ಬರಿಯ ಕರೆಕರೆಯ ಹಿರಿಯರಲ್ಲವ್ವಾ' ಎನ್ನುತ್ತಾನೆ. ಅವ್ವನವರು ಸವತಿ ಮಾತ್ಸರ್ಯ, ಸ್ತ್ರೀಯರ

ಜಗಳಗಂಟತನವನ್ನು ಸಮರ್ಥ ರೂಪಕಗಳಲ್ಲಿ ಹಿಡಿದಿಟ್ಟಿದ್ದಾರೆ. ಈ ರೂಪಕಗಳು ಶಕ್ತಿಯುತ ಪದಗಳಾಗಿಯೂ ಬಳಕೆಯಾಗಿವೆ. ಪರಸ್ಪರ ಮೂದಲಿಕೆಗಳು ಪರಿತಪಿಕೆಗಳು ಕೂಡು ಕುಟುಂಬದ ಬದುಕಿನ ಚಿತ್ರಣವನ್ನು ನೀಡುತ್ತದೆ.

ಭಯವುಳ್ಳ ಬಾಲೆ ನೀ ಐವರಿಗೆ ಇಂತಿಪ್ಪೆ/ಸೈವಲ್ಲದ ಮಾತು ಜಗಕಿದು/ಈ ನಡತೆ ನಯವಲ್ಲವೆಂದು ನಗುತಾರೆ/ಲೋಕದೊಳೊಬ್ಬಳಿಗೆ ಏಕಪತಿಯುಂಟು/ಏಕಕಾಲದಲ್ಲೇ ಐವರ/ಕೂಡೋದು ನಾಕಾಣೆನೆಲ್ಲೂ ಕೌತುಕವ/ಕತ್ತಲೆಗಂಜುವುದೇನು/ಮೈದುನ ನಿನ್ನ ಬತ್ತಲೆ ಮಾಡಿದನೆ/ಚಿತ್ತ ಸ್ವಸ್ಥ್ಯವಾದ ಚಪಲಾಕ್ಷಿ ನೀ ಇಂತ ಕತ್ತಲೆಗಂಜುವುದೇನು/ಆತುರವಾಗಿದ್ದ ಕೀಚಕನಿಗೆ/ಮಾತು ಕೊಟ್ಟವನ ಮಡುಹಿದಿ/ನಿನ್ನಂತ ಘಾತುಕಳುಂಟೆ ಜಗದೊಳು ದ್ರೌಪದಿ/ಮಾಯಗಾರುತಿ ಪತಿಯ ದಾಯದಾಟಕೆ ಹಚ್ಚಿ/ಕಾಯ ಕಾಂತಿಯಡಗಿಸಿ/ಮೆರೆಸಿದಿ ಯಾವ ಕಚ್ಚತನ ಪರಿಯಲೆ ದ್ರೌಪದಿ/ಸೃಷ್ಟಿಕರ್ತನೆಂಬೊ ಧಿಟ್ಟ ಗಂಡನ ಒಯ್ದು ಅಟ್ಟು ಹಾಕುವನ ಪರಿಯಲಿ/ಕೈಯೊಳು ಹುಟ್ಟು ಕೊಟ್ಟವನ ಮೆರೆಸಿದಿ/ಕಳೆಯಾಸುರಿಯುವ ಮುದ್ದು ಎಳೆಯ ಚೆನ್ನಿಗ ಪತಿಗೆ/ಬಳಿಯನೆ ಇಡಿಸಿ ಜನರೊಳು/ರೂಪವ ತಿಳಿಯದಂತೆ ವನ ತಿರುಗಿಸಿ ದ್ರೌಪದಿ/ರಾಜಪುತ್ರನ ಒಯ್ದು ತೇಜಿ ಕೆಲಸಕೆ ಕೊಟ್ಟೆ/ಘನ ಗಂಭೀರನ ಒಯ್ದು/ದನದ ಕೆಲಸಕೆ ಇಟ್ಟೆ/ಹಿತದ ಅಗ್ರಜನ ಒಯ್ದು ರಥಿಕನ ಮಾಡಿ ದ್ರೌಪದಿಯ ಬಹುಪತಿತ್ವ, ಪಾಂಡವರ ಸ್ಥಿತಿಗೆ ದ್ರೌಪದಿಯೇ ಕಾರಣವಾದ ಬಗೆಯನ್ನು ಸತ್ಯಭಾಮೆ ರುಕ್ಮಿಣಿಯರು ಹಾಸ್ಯ ಮಾಡಿ ನಗುತ್ತಾರೆ.

ರುಕ್ಮಿಣಿಯು ಸುಭದ್ರೆಯನ್ನು ಕುರಿತು, ಓಡಿ ಬಂದವಳೆಂದು ಆಡದೆ ನೀ ಎನಗೆ/ಅಣ್ಣನ ವಂಚಿಸಿ/ ಅಣ್ಣನ ವಂಚಿಸಿ ಓಡಿ ಬಂದವಳೆಂದು/ಎನ್ನನೆ ನುಡಿದೆ ಭದ್ರೆ ಎಲೆ ನೋಡೆ/ನಿನ್ನಂತೆ ಸನ್ಯಾಸಿಯೊಡನೆ ಬರಲಿಲ್ಲ/ಒಂದು ನುಡಿದು ಹನ್ನೊಂದು ನುಡಿಸಿಕೊಂಡೆ/ಕುಂದಿದಂತಹವಳೆ ನಿನ್ನ ಬಣ್ಣ ಸುಭದ್ರ/ಬಂದ ದಾರಿ ಹಿಡಿದು ತಿರುಗಿ ಹೋಗೆ/ಬಾಳುವರ ಮನೆ ಮುಂದೆ ಕೋಳಿ ಕೂಗಿದಂತೆ/ವೀಳ್ಯವ ಕೊಟ್ಟು ಯ್ಯಾತರಿಂದ ಹೊಡೆಸಿಕೊಂಡೆ/ನಿಲ್ಲದೆ ಹೋಗೆ ಮನೆತನಕ – ಎಂದು ಬಯ್ಯುತ್ತಾಳೆ. ರುಕ್ಮಿಣಿಯನ್ನು ಸಾಮಾನ್ಯವಾಗಿ ಸೌಮ್ಯ ಸ್ವಭಾವವೆಂದೇ ಚಿತ್ರಿಸುತ್ತಾರೆ. ಆದರೆ ಅವ್ವನವರ ರುಕ್ಮಿಣಿಯು ಭಾಮೆಯಂತೆ ನಿಂತು ಜಗಳವಾಡುವ ಮುಡಿ ಹಿಡಿದು ಎಳೆದಾಡುವ ಜಗಳಗಂಟಿಯಾಗಿ ಚಿತ್ರಿತವಾಗಿರುವುದು ಒಂದು ವಿಶೇಷ.

'ಉದ್ಧಾಳಿಕನ ಕಥೆ'ಯಲ್ಲಿ ಬರುವ ಚಂದ್ರಾವತಿಯ ಜನನ ಸಂದರ್ಭದಲ್ಲಿ ಚಂದ್ರಾವತಿಯು ಚಿಪ್ಪಿನೊಳಗೆ ಮುತ್ತು ಮೂಡುವ ತೆರನಂತೆ ಪುತ್ರಿ ಹುಟ್ಟಿದಳ್' ಎಂದು ಗಿರಿಯಮ್ಮ ವರ್ಣಿಸಿದ್ದಾರೆ. ಪುತ್ರಿ ಹುಟ್ಟಿದಳೆಂದು ತಂದೆ ಉತ್ತಮನು 'ಹೊನ್ನಿನ ರಾಸಿ ಸುವರ್ಣದ ಬೆಟ್ಟವು ಕನ್ಯಾದಾನದ ಹೆಬ್ಬೆಳಸು ಪುಣ್ಯದ ಪುಂಜ ಪೂರ್ಣವಿತ್ತೆ ಎನಗೊಂದು ಹೆಣ್ಣು ಮಾಣಿಕವೇ ಸಂತಾನ' ಎಂದು ಸಂತೋಷಪಡುವನು. ಗಿರಿಯಮ್ಮನ ಕಾಲಕ್ಕೆ 'ಸುತರಿಲ್ಲದೆ ಸದ್ಗತಿಯಿಲ್ಲ' ಎಂಬ ನಂಬಿಕೆಯಿತ್ತು. ಉದ್ಧಾಳಿಕನ ಕಥೆಯು ಇದನ್ನೇ ಹೇಳುತ್ತದೆ. ಇಂತಹ ಕಾವ್ಯದ ಧ್ವನಿಯಲ್ಲೂ ಹೆಣ್ಣು ಹುಟ್ಟಿದ ಸಂಭ್ರಮವನ್ನು ಗಿರಿಯಮ್ಮ ಎತ್ತಿ ಹಿಡಿದಿದ್ದಾರೆ. ಚಂದ್ರಾವತಿಯ ಬಾಲ್ಯವನ್ನು ವರ್ಣಿಸುತ್ತಾ:

ಹೊಡೆ ಮಗ್ಗುಲಿಗಿಕ್ಕೋಳು ಇಡುವಳಂಬೆಗಾಲ/ನಡೆಯೋಳು ದಟ್ಟಡಿಯಿಡುತ/ನುಡಿವೋಳು ತೊದಲ್ನುಡಿಯಲಿ ಅರಗಿಣಿಯಂತೆ/ ಕಡುಬಾಲಲೀಲೆ/ನಡೆದಿರೆ ದಿಟ್ಟ ತಾಕೀತೆಂದು ಕುಮಾರಿಗೆ ನುಡಿದರೆ/ಬಡವಾದಳೆಂದು/ಮುಡಿಯ ಭಾರಕೆ ಸೆಳೆ ನಡುವು ನೊಂದೀತೆಂದು ಕಡು ಹರುಷದಲಿ ಹಿಗ್ಗಿದರು-ಎನ್ನುತ್ತಾರೆ.

ಅಕ್ಷರಾಭ್ಯಾಸವ ಮಾಡಿಸಿ ಕುಮಾರಿಗೆ/ನರ್ತನ ಗೀತನ ಕಲಿಸಿ/ಉತ್ತಮವಾದ ನಾಟಕ ಕವಿಶಾಸ್ತ್ರವ/ ಪುತ್ರಿಗಭ್ಯಾಸ ಮಾಡಿಸಿದ – ಎನ್ನುವ ಸಾಲುಗಳಲ್ಲಿ ಸ್ತ್ರೀಯರಿಗೆ ಉತ್ತಮ ವಿದ್ಯಾಭ್ಯಾಸವನ್ನು ಕಲ್ಪಿಸುವ ಆಶಯ ವ್ಯಕ್ತವಾಗಿದೆ.

ಚಂದ್ರಾವತಿ ಗರ್ಭವತಿಯಾದಾಗ ಅವಳ ಮೈಸಿರಿಯನ್ನು, ಮನಸ್ಥಿತಿಯನ್ನು ಗಿರಿಯಮ್ಮ ಹೀಗೆ ವರ್ಣಿಸಿದ್ದಾರೆ:

ತಿಂಗಳು ತುಂಬಿತು ಕಂಗಳು ಬಳೆಬಿಟ್ಟು ಸರ್ವಾಂಗ/ಬಡವಾಗಿ ತೋರಿದವು/ಹೊಂಬಣ್ಣವೇರಿತು ಹೊಳೆವ ದೇವಾಂಗವು ತುಂಬಿದ/ಕೊಳ ಸೂಸುವಂತೆ ಮಾಸವೆರಡರಲಿ ಮಂಚದಿಂದಿಳಿಯಳು/ ಪೂಸಳು ಗಂಧ ಕಸ್ತೂರಿಯ/ಲೇಸಾದ ಪಂಚಪರಮಾನ್ನ ಮೃಷ್ಟಾನ್ನದ ವಾಸನೆ/ಸೇರದಂಗನೆಗೆ/ ಮಂಚದಿಂದಿಳಿಯಳು/ಮಂಡೆಯ ಕಟ್ಟಳು/ದುಂಡು ಮಲ್ಲಿಗೆಯ ಮುಡಿಯಳು/ಕಂಡ ಸಕ್ಕರೆ ನೊರಹಾಲು ಪರಮಾನ್ನವ ಕಂಡರೆ/ಮುಖದಿರುವಳು

ಇದೇ ಕಾವ್ಯದಲ್ಲಿ ಬರುವ ಬಸುರಿಯ ಬಯಕೆಯ ಚಿತ್ರಣ ಹೀಗಿದೆ: ನಳಿದಳಾಕ್ಷಿಗೆ ತಿಳಿದವು ಬಯಕೆಯು ಎಳೆಹುಳಿ/ಮಧುರವಾಗಿದ್ದ/ಕಳಿತ ಕರ್ಜುರ ಕಿತ್ತಳೆ ಜಂಬುನೇರಳೆ/ಫಲಗಳ ಅಪೇಕ್ಷೆ ಮಾಡುವಳು/ತುರುಗಾಯಿ ಕಡುವು ಹಪ್ಪಳ ಬೆಲ್ಲ ಪುಂಡಿಗೆ/ಎರೆಯಪ್ಪ ಅತಿರಸಗಳನು/ಹುಡಿಗಡಲೆ ಸೂಸಲಡಸಿದ ಸಕ್ಕರೆ ಬುರುಡೆ/ಫೇಣಿಗಳ ಬಯಸುವಳು/ಹಾತಾಂಗು ಬೇತಾಂಗು ಎಳ್ಳುಮಂಡಿಗೆ ಘೃತವಳಿಯ ಬೆಣ್ಣೆ ಚಕ್ಕುಲಿಯು ಸಣ್ಣ ಸಜ್ಜಿಗೆ ಶೇವಿಗೆ ಪರಮಾನ್ನವ ಉಣ್ಣಬೇಕೆಂದು/ಬಯಸಿದಳು/ ನವನಾರಿ ಕುಂಜರ ಪಂಚ ತುರಂಗವು/ನವಪರಿಯಿಂದ ರಂಜಿಸುವ/ಬಿಡು ಹೊಲಿಗೆ ಭುಜದ ಹಸಿರು ಕುಪ್ಪಸವ/ತೊಡಬೇಕೆಂದು ಬಯಸಿದಳು.

ದಿನಗಳೆದಂತೆ ಬದಲಾಗುತ್ತಿದ್ದ ಚಂದ್ರಾವತಿಯ ದೇಹಸ್ಥಿತಿ ವರ್ಣಿತವಾಗಿರುವುದು ಹೀಗೆ:

ನಾಲ್ಕು ತಿಂಗಳಿಗೆ ನಿಡಿಕೇಶ ಕವಲೊಡೆದವು/ಭಾಸೆ ಕಪ್ಪತ್ತಿ ತೋರಿದವು/ಕಾಂತೆಗೆ ಗರ್ಭ ಉನ್ನತವಾಗಿ ಬೆಳೆಯಿತು/ಭೂತಳಕೆ ರವಿ ಇಳಿದಂತೆ/ರಂಭೆಯ ಕುಚಗಳಲಿ ತುಂಬಿತು ಕ್ಷೀರವು ಇಂಬುಗೊಂಡವೆ ಸುಳಿನಾಭಿ/ಹೊಂಬಣ್ಣವೇರಿತು ಹೊಳೆವ ದೇವಾಂಗವು ತುಂಬಿದ/ಕೊಳ ಸೂಸುವಂತೆ ಮತ್ಸ ಮಾಣಿಕ ನುಂಗಿ ಇಪ್ಪ ತೆರನಂತೆ/ಸುಪ್ಪಾಣಿಯ ಮುತ್ತಿನಂತೆ/ಕಪ್ಪುಗೊಂಡವೆ ಕುಚ ಕೊನೆಯಲ್ಲಿ ನಗುಮುಖ/ದರ್ಪಣದಂತೆ ರಾಜಿಸಿತು.– ಇದು ಸ್ತ್ರೀಯೊಬ್ಬಳು ಮಾತ್ರ ಕಟ್ಟಿಕೊಡಬಹುದಾದ ಚಿತ್ರಣ. ಗಿರಿಯಮ್ಮನವರು ಸಂಸಾರದಲ್ಲಿ ವಿರಕ್ತಿ ಹೊಂದಿ ಗಂಡನಿಗೆ

ಇನ್ನೊಂದು ಮದುವೆ ಮಾಡಿಸಿದಳು. ಮಕ್ಕಳನ್ನು ಪಡೆದವಳಲ್ಲ. ಆದರೂ ತನ್ನ ಪರಿವಾರದಲ್ಲಿ ಕಂಡ ಬಸಿರು ಬಯಕೆಗಳ ವರ್ಣನೆಯನ್ನು ಅದ್ಭುತವಾಗಿ ಚಿತ್ರಿಸಿದ್ದಾರೆ.

ವಿವಾಹಪೂರ್ವದಲ್ಲೇ ಗರ್ಭಧರಿಸಿದ ಮಗಳನ್ನು ನೋಡಿದ ಚಂದ್ರಾವತಿಯ ತಾಯಿ ಅನುಕೂಲೆ ಒಂದ ದಿವಸ ಕರೆಸಿದಳ್ ಕುಮಾರಿಯ/ವಿವರಿಸಿ ನೋಡಿ ಗರ್ಭವನು/ಎದೆಯೊಳಲಗು ನೆಟ್ಟಂದದಿ ಬಿದ್ದಳು ಮಗಳ/ಕಾಣುತ ಧರೆಯ ಮೇಲೆ/ಇಕ್ಕೆಲದ ಸತಿಯರು ಎತ್ತಿ ಸಂತೈಸುತ್ತಾರೆ. ರಾಣಿ ಕೆಳದಿಯರನ್ನು ಗದರಿಸಿ ವರನಾರೆಂದು ಕೇಳುತ್ತಾಳೆ. 'ಗಂಡು ನೊಣವೂ ಇತ್ತ ಸುಳಿಯಲಾರದು ಇಲ್ಲಿ ಬಂದವರ್ಯಾರೆ ಮಂದಿರಕೆ, ಧರಣೀಶ ಕೇಳಿದರೆ ಕಿವಿ ಮೂಗು ಕೊಯ್ಯುವ' ಎಂದು ಗದರಿಸುತ್ತಾಳೆ. ಇಲ್ಲಿ ತಾಯಿ ಮಗಳ ಪರಿಸ್ಥಿತಿಗಳು ಅಂತಃಕರಣವನ್ನು ಕಲಕುತ್ತವೆ. ರಾಜಕುಮಾರಿಯಾಗಿ ಬೆಳೆದ ಚಂದ್ರಾವತಿ ಅರಣ್ಯದ ಪಾಲಾಗುತ್ತಾಳೆ. 'ಬತ್ತಿಗಟ್ಟಿದ ಮಂಡೆ ಬಾಡಿದ ನಯನವು/ಉಟ್ಟಿದ್ದ ಮಲಿನ ವಸ್ತ್ರಗಳು/ಅಸ್ತಿಚರ್ಮವು ನೆರೆ ಬತ್ತಿದ ಕಾಯವು/ಮುನಿಯೊಬ್ಬನೊಂದಿಗೆ ಅವನ ಆಶ್ರಮಕ್ಕೆ ಹೋಗುತ್ತಾಳೆ. ಮುನಿ ಸತಿಯು 'ಹುಲಿಚರ್ಮದ್ವಾಸಿಗೆ ತರಗಲೆ ಮಂದಿರ/ಉಡುವುದು ನಾರಿನೊಸ್ತ್ರವನು ಇಡುವಾಭರಣ ವಿಭೂತಿ ರುದ್ರಾಕ್ಷಿಗೆ ಮಡದಿಯರಿಬ್ಬರು ಯಾತಕ್ಕೆ ಎನ್ನುತ್ತಾಳೆ. ಮುನಿಯು 'ಮಗಳ ತಂದೆನು ನಿನಗೊಬ್ಬಳ' ಎನಲು ಹರುಷಗೊಳ್ಳುತ್ತಾಳೆ. ಋಷಿಪತ್ನಿಗೆ ತಕ್ಷಣವೇ ಜಾಗೃತಗೊಳ್ಳುವ ಸ್ತ್ರೀ ಸಹಜ ಸವತಿ ಮಾತ್ಸರ್ಯವನ್ನಲ್ಲಿ ಕಾಣಬಹುದು.

ಏಳು ವರ್ಷಗಳ ನಂತರ ನಾಶಿಕನನ್ನು ಚಂದ್ರಾವತಿಯು ಆಶ್ರಮದಲ್ಲಿ ಕಾಣುತ್ತಾಳಾದರೂ ಅವನೇ ಮಗನೆಂದು ತಿಳಿಯದು. ಆದರೆ ಕಣ್ಣು ಅರಿಯದ್ದನ್ನು ಕರುಳು ಅರಿಯುತ್ತದೆ ಎನ್ನುವುದನ್ನು ಗಿರಿಯಮ್ಮ ಹೀಗೆ ಹೇಳುತ್ತಾಳೆ; 'ನಾನಾರೊ ಇವನ ಕಾಣುತ ಮೊಲೆ ಮೊರೆದವು/ನೀರಿನೊಳಿಟ್ಟ ಬಾಲಕನು/ತೇಲಿಸಿ ಕಡೆಗೆ ತಂದಿಟ್ಟಳೊ ನದಿಯೀಗ ಪಾಲಿಸಿದರೊ/ಮುನೀಶ್ವರರು/ಬೆನ್ನ ತಡವಿ ತನ್ನ ಚಿಣ್ಣನ ನುಡಿಸಿದಳ್ ಕಣ್ಣಲಿ/ಜಲವ ತುಂಬಿದಳು/ನಿನ್ನ ಸಂತೈಸುವರಿಲ್ಲವೆಂದೆನುತಲೆ ಕನ್ಯೆ ತಾ ಶಿರವ ಬಾಗಿದಳು/ಬೆಂಬಲವಾಗಿ ಸಂಗಾತಲೆ ತಿರುಗವಳು/ರಂಗವಾಲೆಗಳನಿಕ್ಕುವಳು/ಸಾರಿಸಿ ರಂಗವಾಲೆಯನಿಕ್ಕಿ ಮುನಿಪಗೆ/ಪೂಜಗನುಕೂಲವ ಮಾಡುವಳು– ಅವಳನ್ನು ನೋಡಿ ಮಗನು 'ಈಗ ನಮ್ಮಯ್ಯ ಕಂಡರೆ ನಿನ್ನ ಬಯ್ದಾನು ಹೋಗು ಮತ್ತೊಂದು ಕಾನನಕೆ' ಎಂದರೂ ಮುಂದಕ್ಕೆ ಹೆಜ್ಜೆಯನಿಡುವರೆ ಕಾಲೆಳವು, ನಿಂದು ನಿಂದೊಮ್ಮೆ ನೋಡುವಳು– ಹೀಗೆ ಮಾತೃಹೃದಯದ ತಲ್ಲಣವನ್ನು ಗಿರಿಯಮ್ಮ ಕಣ್ಣಿಗೆ ಕಟ್ಟುವಂತೆ ಚಿತ್ರಿಸಿದ್ದಾರೆ.

'ಶಂಕರಗಂಡನ ಹಾಡು' ಕೃತಿ ಶಿವ ಮನ್ಮಥರ ಕಥೆ. ಶಿವನು ತಂಗಿ ರತಿಯನ್ನು 'ನಡೆದರೆ ಬಡವಾಹಳು' ಎಂಬಂತೆ ಕಡು ಮೋಹದಿಂದ ಸಾಕುತ್ತಾನೆ. ಮನ್ಮಥನೇ ಸರಿಯಾದ ಗಂಡನೆಂದು ರತಿಯನ್ನು ಅವನಿಗೆ ಮದುವೆ ಮಾಡಿಕೊಡುವಾಗ 'ಹಬ್ಬ ಹುಣ್ಣಿಮೆಗೆ ಕಳಿಸದೆ ನಮ್ಮನೆಗೆ ನಿರ್ಬಂಧ ಮಾಡುವಿರಿ' ಎನ್ನುತ್ತಾನೆ ಶಿವ. ಮನ್ಮಥನು 'ನೆನೆದಾಗ ಕಳುಹುವೆ ನಿಮ್ಮ ಮನೆಗೆ' ಎಂದು ಮಾತು ಕೊಡುತ್ತಾನೆ. ಹಬ್ಬ ಹುಣ್ಣಿಮೆಗೆ ತವರಿಗೆ ಬರಬೇಕೆಂದೆನಿಸಿದಾಗ ಬರುವ ಸ್ವಾತಂತ್ರ್ಯ ಹೆಣ್ಣಿಗಿರಿಬೇಕೆಂಬ ಗಿರಿಯಮ್ಮನ ನಿಲುವನ್ನಿಲ್ಲಿ ಕಾಣಬಹುದು. ಆದರೆ ಮನ್ಮಥ ಕೊಟ್ಟ ಮಾತಿಗೆ ತಪ್ಪುತ್ತಾನೆ. ಶಿವ

ಕೋಪಿಸಿಕೊಳ್ಳುತ್ತಾನೆ. ರತಿಗೆ ಯಾರ ಪರವಾಗಿಯೂ ಮಾತನಾಡದ ಇಕ್ಕಟ್ಟಿನ ಪರಸ್ಥಿತಿ ಬರುತ್ತದೆ. ಶಿವನು ಮನ್ಮಥನ ಸಕಲೈಶ್ವರ್ಯವನ್ನು ಮಣ್ಣುಗೂಡಿಸುತ್ತಾನೆ. ಬೇಡುಣ್ಣುವ ಪರಿಸ್ಥಿತಿಗೆ ತಂದು ನಿಲ್ಲಿಸುತ್ತಾನೆ. ಮನ್ಮಥನು ಶಿವನ ಮನೆಯಲ್ಲೇ ದನ ಕಾಯ್ದುಕೊಂಡಿರುತ್ತಾನೆ. ಶಂಕರನೊ ಗಂಡನೋ ಎನ್ನುವ ರತಿಯ ಆತಂಕದ ಮನಸ್ಥಿತಿಯನ್ನು ಗಿರಿಯಮ್ಮ ಚೆನ್ನಾಗಿ ಚಿತ್ರಿಸಿದ್ದಾರೆ.

'ಸೀತಾಕಲ್ಯಾಣ'ದ ಸೀತೆ ನಗೆ ನುಡಿ ಮಾತನಾಡಲು ಇಷ್ಟು/ದುಗುಡವ್ಯಾತಕೆ ದೇವೋತ್ತಮನೆ/ ಜಗವನೆಲ್ಲವ ನಿಮ್ಮ ಹೃದಯದೊಳಿಂಬಿಟ್ಟ/ಸುಗುಣ ಶ್ರೀರಾಮ ಮುಖ ತಾರೆಂದು' ಅರಿಶಿಣೆಣ್ಣೆಯ ಹಚ್ಚಲು ನಾಚಿಕೊಳ್ಳುವ ನವವಧುವಾಗಿ ಸೀತೆ ಚಿತ್ರಿತವಾಗಿದ್ದಾಳೆ.

'ಚಂದ್ರಹಾಸನ ಕಥೆ'ಯಲ್ಲಿ ಅನಾಥನಾದ ಚಂದ್ರಹಾಸನನ್ನು ಸಾಕುವ ದಾಸಿ, ಸೂಳೆವೆಣ್ಣುಗಳು ಮಾತೃವಾತ್ಸಲ್ಯವನ್ನು ಮೆರೆಯುವ ಪರಿ ಅನನ್ಯವಾಗಿದೆ. ಚಂದ್ರಹಾಸನ ಚೆಲುವಿಗೆ ಮನಸೋತಿದ್ದ ವಿಷಯೆ 'ವಾಕಾರವನೆ ಚೆಳ್ಳುಗುರಿಂದಲಿ ತಿದ್ದಿ ಯೆಕಾರವನೆ ಮಾಡಿ' ಇಡೀ ಕಥೆಗೆ ತಿರುವು ನೀಡಿ ತನ್ನ ಮನದ ಬಯಕೆಯನು ಈಡೇರಿಸಿಕೊಳ್ಳುವ ತುಂಟ ಹುಡುಗಿಯಾಗಿ ಕಾಣಿಸಿಕೊಳ್ಳುತ್ತಾಳೆ.

'ಬ್ರಹ್ಮ ಕೊರವಂಜಿ'ಯ ದೇವಕಿ ಕಂಸಾಸುರನು ಇಟ್ಟ ಸೆರೆಯಲ್ಲಿ ಕಷ್ಟಪಡುತ್ತ ನಿಮಿಷವನ್ನು ಯುಗವಾಗಿ ಕಳೆಯುತ್ತಿರುತ್ತಾಳೆ. ಬ್ರಹ್ಮನು ಕೊರವಂಜಿಯ ವೇಷದಲ್ಲಿ ಬಂದು ಕಣಿ ಹೇಳುತ್ತಾನೆ. ಕೆಳಜಾತಿಯ ಕೊರವಂಜಿಯ ಪಾತ್ರವನ್ನೂ ಗಿರಿಯಮ್ಮ ಪಾತ್ರಬೇಧವಿಲ್ಲದೆ ಚಿತ್ರಿಸಿದ್ದಾರೆ. ದೇವಕಿಯ ಅಂತರಂಗದ ಬೇಗುದಿಯನ್ನು ತಣಿಸುವ ಪಾತ್ರವನ್ನಿಲ್ಲಿ ಕೊರವಂಜಿ ನಿರ್ವಹಿಸುತ್ತಾಳೆ.

ಮಿಂದು ಮಂಡೆಯ ಬಾಚಿ ತುರುಬಿಗೆ/ಮಲ್ಲಿಗೆಯ ವನಮಾಲೆಯ/ಚಂದ್ರಗಾವಿಯನುಟ್ಟು ಫಣೆಯೊಳು ತಿದ್ದಿ ತಿಲಕವನಿಟ್ಟನು/ಗಂಧ ಕಸ್ತೂರಿ ಪರಿಮಳವನು ಲೇಪಿಸಿ ಸರ್ವಾಂಗದಿ/ಇಂದ್ರ ಮಾಣಿಕದೋಲೆ ಹೊಳೆಯಲು ಇದಿರು/ಭಾಸ್ಕರನಂದದಿ ಆದನೆ ಕೊರವಿ/ಗುಂಜಿಯ ದಂಡೆಯು ತೋಳ ಭಾಪುರಿ/ಗಲ್ಲಕೊತ್ತಿದ ವೀಳ್ಯವು/ಮಂಜಾಡಿಯ ಸರ ಹವಳಸರ ಹತ್ತೆಸರವ/ ಕೊರಳಲಿ ಹೊಳೆಯಲು ಅಂಜನವಿಟ್ಟು ಅಲರಗಣ್ಣಿಗೆ ಅತಿ ಹರುಷದಿಂದ ಬೇಗದಿ/ಕಂಜೋದ್ಭವ ಶೃಂಗರಿಸಿ ಬೆಳಗುವ ಕನ್ನಡಿಯ/ನಿರೀಕ್ಷಿಸುತ್ತಾನೆ– ಎನ್ನುತ್ತಾ ಕೊರವಿಯು ಸಿಂಗರಿಸಿಕೊಳ್ಳುವ ಪರಿಯನ್ನು ಹೇಳಿದ್ದಾಳೆ. ಸೆರೆಮನೆಯ ಬಾಗಿಲಲ್ಲಿ ನಿಂತು: ವನದ ಕೋಗಿಲೆಯಂತೆ ಯುವ್ವ ಯವ್ವಾ ಎನುತ ಕೂಗುತ್ತ ಬಂದು ದೇವಕಿಗೆ ಭಾಗವತದ ಕಥೆಯನ್ನು ಇಪ್ಪತ್ತೊಂದು ನುಡಿಗಳಲ್ಲಿ ಹೇಳುತ್ತಾರೆ.

ಕಣಿ ಹೇಳಿ ಮುಗಿದ ಮೇಲೆ 'ಹಿತವರ್ಯಾರಿಲ್ಲ ಎನಗಿಂತ ಹಿರಿಯರು/ಸತಿಯರು ಕೊರಮಗುಂಟು/ ಮತಿವಂತೆ ನೀ ಎನ್ನ ಮನ್ನಿಸಿ ಕಳುಹವ್ವ ಪತಿಯಾಜ್ಞೆಗ್ಗಳುಂಟು/ಬಹಳ ಹೊತ್ತಾಯಿತು ಬಯ್ದಾಳು ಸವತಿಯು/ಆಳುವ ಕೊರಮ ಹೀನ/ಬಾಲನ ನೆತ್ತಿಗೆ ಎಣ್ಣೆಯನೆರೆಯವ್ವ ವೀಳ್ಯವ ಕೊಡು ಎನಗೆ' ಎಂದು ಕೊರವಿಯ ಬಾಯಿಂದಲೇ ಆಕೆಯ ಸಾಂಸಾರಿಕ ಬದುಕಿನ ಚಿತ್ರಣವನ್ನು ಕಟ್ಟಿಕೊಟ್ಟಿದ್ದಾರೆ.

ಬದುಕಿಗಾಗಿ ಬವಣೆ ಪಡುವ ಸೂಳೆ, ಕೊರವಂಜಿ, ದಾಸಿಯಂತಹ ಕೆಳವರ್ಗದ ಹೆಣ್ಣುಗಳನ್ನು ಕೂಡ ಹಿರಿದಾಗಿ ನಿರ್ವಹಿಸುವ ಕೀರ್ತನಕಾರ್ತಿಯರ ಅಂತಃಕರಣವನ್ನಿಲ್ಲಿ ಕಾಣಬಹುದು. ವೃತ್ತಿ

ನಿರತ ಹೆಣ್ಣುಗಳ ಬದುಕಿನ ಆತಂಕ, ನಿಷ್ಠೆಯನ್ನು ಚಿತ್ರಿಸಿರುವ ಪರಿ ಸೊಗಸಾಗಿ ಮೂಡಿಬಂದಿದೆ. ಕೊರವಂಜಿ ಕಣಿ ಹೇಳಿದ್ದಕ್ಕಾಗಿ ಯಾವ ಬೆಲೆ ಬಾಳುವ ವಸ್ತುವನ್ನೂ ಕೇಳುವುದಿಲ್ಲ. ಅಂತಹ ಅಭಿಲಾಶೆಯೂ ಅವಳಿಗಿಲ್ಲ. ಗಿರಿಯಮ್ಮ ಜಾತಿ ಬೇಧವಿಲ್ಲದೆ ಅಂದಿನ ಸಾಮಾಜಿಕ ಪರಿಸ್ಥಿತಿಯಲ್ಲಿಯೂ ಕೆಳವರ್ಗದವರ ನಡುವೆ ಬದುಕಿದಳು ಹಾಗಾಗಿ ಅಂತಹ ತಲ್ಲಣದ ಬದುಕುಗಳ ಪರಿಚಯವನ್ನು ಇಲ್ಲಿ ನೀಡಲು ಸಾಧ್ಯವಾಗಿದೆ.

'ಕೃಷ್ಣ ಕೊರವಂಜಿ'ಯಲ್ಲಿ ಮದುವೆಯ ವಿಷಯದಲ್ಲಿ ರುಕ್ಮಿಣಿಗಿದ್ದ ಆತಂಕವನ್ನು ನಿವಾರಿಸಲು ಕೃಷ್ಣನು ಕೊರವಿಯ ಪಾತ್ರವನ್ನೇ ಆಶ್ರಯಿಸುತ್ತಾನೆ. ರುಕ್ಮಿಣಿಗೆ ಕಣಿ ಹೇಳುತ್ತಾನೆ. ಕೃಷ್ಣನಂತಹ ಶ್ರೇಷ್ಠ ಪಾತ್ರ ತನ್ನ ತಲ್ಲಣಗಳನ್ನು ನಿವಾರಿಸಿಕೊಳ್ಳಲು ಕೊರವಿಯನ್ನು ಆಶ್ರಯಿಸುವುದು ಮನೋಜ್ಞವಾಗಿ ಮೂಡಿಬಂದಿದೆ. ರುಕ್ಮಿಣಿಯು ಕೃಷ್ಣನಿಗಾಗಿ ಕಾಯುವ ಪ್ರಿಯತಮೆಯಾಗಿ ಕಾಣಿಸಿಕೊಳ್ಳುತ್ತಾಳೆ.

'ಲವಕುಶರ ಕಾಳಗ'ದ ಸೀತೆ ಸಾಂಸಾರಿಕ ಕಷ್ಟಗಳನ್ನು ಅನುಭವಿಸುವ ಸಾಮಾನ್ಯ ಸ್ತ್ರೀಯಾಗಿ, ಮಂಥುಣಿಯ ಒತ್ತಾಯಕ್ಕೆ ಮಣಿದುಬಿಡುವ ಮುಗ್ಧ ಹೆಣ್ಣಾಗಿ ಮೂಡಿ ಬಂದಿದ್ದಾಳೆ. ಹಾಸುಗೆಯಲ್ಲಿ ರಾವಣನ ಪಠ ನೋಡಿ 'ಏಸು ದಿವಸ ಭೋಗಿಸಿದೆ' ಎಂದು ಕೇಳುವಷ್ಟು ನಿಷ್ಠುರನಾಗುತ್ತಾನೆ ರಾಮ. 'ಭೂದೇವಿ ಮಗಳೆಂದು ನಾ ತಂದೆನೆ ನಾಡೊಳಗೆ ಪತಿವ್ರತೆ' ಎನ್ನುವ ಪುರುಷ ಸಹಜ ಪ್ರತಿಕ್ರಿಯೆಗೆ ನೋಯುವ ಸೀತೆ, ಗಿರಿಯಮ್ಮನ ಕಾಲದ ಸ್ತ್ರೀಯರ ಸ್ಥಾನಮಾನಗಳ ಮಾದರಿಯಾಗಿ ನಿಲ್ಲುತ್ತಾಳೆ.

ರಾಮನು ಸೀತೆಯನ್ನು ವಿಚಾರಣೆಗೆ ಕರೆತರಲು ನಾರಿಯರನ್ನೇ ಕಳುಹಿಸುತ್ತಾನೆ. ಅಲ್ಲಿಗೆ ಬಂದ ಸೀತೆ ರಾಮನ ಮುಂದೆ ನಿಂತು 'ಇಂದು ಗೆದ್ದರೆ ಮುಂದೆ ಗೆಲುವು' ಎಂದುಕೊಳ್ಳುವುದು ಅಗ್ನಿಪರೀಕ್ಷೆಗಿಂತಲೂ ದೊಡ್ಡದೆ. 'ಅಂಗನೆ ಜಾನಕಿ ನಿನ್ನ ಬಂಗಾರದೊಡವೆಯನು ಚೆಂದಾದ ಪೆಟ್ಟಿಗೆಗೆ ತುಂಬು/ಅಂಗಲ್ಯಾಭರಣವು/ಮಾಂಗಲ್ಯಸೂತ್ರವು ಚಂದಾದ ಬೆರಳಮುದ್ರಿಕೆಯು– ಎನ್ನುತ್ತಾ ರಾಮ ಸೀತೆಯ ಮೈಮೇಲಿನ ಒಡವೆಗಳ ಜೊತೆಗೆ ಮಾಂಗಲ್ಯವನ್ನೂ ತೆಗೆಸಿ ವಿಧವೆಯನ್ನಾಗಿಸುವ ಧಾರುಣತೆಗೆ ಸಾಕ್ಷಿಯಾಗುತ್ತಾನೆ. ಸ್ತ್ರೀಯರ ಬಗೆಗೆ ಪುರುಷರ ನಿಷ್ಕಾರುಣ್ಯ ವರ್ತನೆಯನ್ನು ಗಿರಿಯಮ್ಮ ಪುರುಷೋತ್ತಮನಾದ ರಾಮನ ಮೂಲಕವೇ ಚಿತ್ರಿಸಿದ್ದಾರೆ. ಅಂದು ರಾಮ ಹನುಮನ ಮೂಲಕ ಕಳುಹಿಸಿದ ರಾಮಾಭಿಜ್ಞಾನದ ಮುದ್ರಿಕೆ ಇಂದು ರಾಮನಿಂದಲೇ ಅಗಲಿಕೆ. ಬಂಗಾರದೊಡವೆಯನ್ನು ಒಂದೊಂದಾಗಿ ಬಿಚ್ಚಿ ಕೊಡುತ್ತಾಳೆ ಸೀತೆ. ಚಂದದ ಗಾಜಿನ ಬಳೆಯ ತೊಟ್ಟು ಚಂದದ ಪೆಟ್ಟಿಗೆ ತುಂಬಿ ಮುದ್ರಿಕೆ ಹಾಕಿ ತಂದು ರಾಮನಿಗೊಪ್ಪಿಸುತ್ತಾಳೆ. 'ಮುಂದಿನ ಜನ್ಮಕ್ಕೆ ನನ್ನ ಸತಿಯೇ ನೀನು ಇಂದಿಗೆ ಹೋಗಿ ಬಾ' ಎನ್ನುತ್ತಾನೆ ನಿರ್ದಯಿ ರಾಮ.

ವನಕ್ಕೆ ಹೊರಟ ಸೀತೆಗೆ ಶುಭಶಕುನಗಳಾಗುತ್ತವೆ. ಅಳುವ ಕಾಲಕ್ಕಿನ್ನು ಅನುಮಾನವೇತಕ್ಕೆ/ ಶುಭಗಳಿನ್ನ್ಯಾತಕ್ಕೆ ನಮಗೆ/ಶುಭಗಳೆಲ್ಲವು ನನ್ನ ಧರಣೀಶಗಾಗಲಿ/ಕಿರಿಯ ಲಕ್ಷ್ಮಣನಿಗಾಗಲೆಂದ್ಲು– ಸೀತೆಯ ಅನುಭವ ಜನ್ಯ ಮಾತುಗಳಿವು. ಇದಕ್ಕಿಂತಹ ವಿಷಾದ ಎಲ್ಲಿಯದು? ಅಯೋಧ್ಯಪುರದ ನಾರಿಯರಿಗೆ ವಿಷಯ ತಿಳಿಯುತ್ತದೆ. ಅಂದು ಅಯೋಧ್ಯದ ಪುರದ ನಾರೇರೆಲ್ಲ/ ರಾಮನಿಗೆ

ಭಿನ್ನಹ ಮಾಡೆ/ದೇವಿಯ ತಪ್ಪನು ಕಾಯಬೇಕೆನುತಲಿ/ಪಾದಕ್ಕೆರಗಿದರು ನಾರೇರು- ಇಡೀ ಅಯೋಧ್ಯೆಯ ನಾರಿಯರೆಲ್ಲಾ ಬಂದು ಬೇಡಿದರೂ ರಾಮ ನಿರ್ಧಾರ ಬದಲಿಸುವುದಿಲ್ಲ. 'ಇಂದಿನ ತಪ್ಪನು ಕಾದರೇನಹುದು/ಎಂದಿಗಾದರೂ ಸೀತೆ ಅಸುರರ/ಕೂಡಿದವಳು ಮುಂದೆ ನಮಗೆ ಆಗೋಳಲ್ಲ' ಎಂದುಬಿಡುತ್ತಾನೆ. ನೆರೆದಿದ್ದ ನಾರೇರು ಕರವೆತ್ತಿ ಮುಗಿಯುತ್ತಾರೆ. ಧಾರುಣಿಯ ಮೇಲಡ್ಡ ಬಿದ್ದು ಕೇಳಿಕೊಳ್ಳುತ್ತಾರೆ.

ರಾಮನ ವನವಾಸಕ್ಕೆ ಪುರಜನರೆಲ್ಲ ಬಂದಿದ್ದರೆ ಈಗ ನಾರಿಯರು ಮಾತ್ರ ಬಂದಿದ್ದಾರೆ. 'ಹಡೆದವರಿದ್ದ್ರೆ ನಮ್ಮ ಮನವ ಸಂತೈಸುವರು ಕಡೆಗಣ್ಣಲುದುಕ ಕಾರೋರು' ಎನ್ನುವ ಮಾತಂತೂ ಕಷ್ಟಕಾಲದಲ್ಲಿ ತವರನ್ನು ನೆನೆಯುವ ಎಲ್ಲ ಹೆಣ್ಣಮಕ್ಕಳ ಅಂತರಂಗದ ಧ್ವನಿಯಾಗಿ ನಿಲ್ಲುತ್ತದೆ.

ಪುರಜನರನ್ನು ಅಂದು ರಾಮ ಕಳಿಸಿದ್ದರೆ ಇಂದು ಸೀತೆ ತನ್ನನ್ನು ಬೀಳ್ಕೊಡಲು ಬಂದ ಪುರದ ನಾರಿಯರನ್ನು ಹಿಂದಿರುಗಿ ಕಳುಹಿಸುತ್ತಾಳೆ. ಸೀತೆಯನ್ನು ರಾಮನಷ್ಟೇ ಜನಾನುರಾಗಿಯನ್ನಾಗಿ ಗಿರಿಯಮ್ಮ ಚಿತ್ರಿಸಿದ್ದಾರೆ.

ಲಕ್ಷ್ಮಣ ಸೀತೆಯನ್ನು ಕಡಿಯದೆ ಅರಣ್ಯದಲ್ಲಿ ಬಿಟ್ಟು ಹೋಗಲು 'ಕಾಯವನುಳುಹಿದ ತಾಯಿ ತಂದೆದಾರು/ದಾರ ಆಸೆಯಲಿ ಬದುಕಲಿ/ರಾಮರರಸಿ ಸೀತೆ ಓಡಿಹೋದಳೆಂದು ನಾಡೊಳಗೆ ಅಪಕೀರ್ತಿ' – ಎಂದು ರಾಣಿ ಸೀತೆ ಕಾಡಿನಲ್ಲಿ ಗೋಳಿಡುವ ಪರಿಯಂತೂ ಮನ ಕಲಕುತ್ತದೆ. ಲಕ್ಷ್ಮಣನ 'ಕೆಂಡಕ್ಕೆ ಇರುವೆ ಮುತ್ತುವುದುಂಟೆ ಎಲೆ ದೇವಿ ಚಂದ್ರಮಕೆ ರವಿ ಬೀಸಲುಂಟೆ' ಎನ್ನುವ ಮಾತು ಸೀತೆಯ ಪಾವಿತ್ರ್ಯವನ್ನು ಸಾರುತ್ತವೆ. 'ತಾಯೇ ನೀ ಅಳದಿರೆ ಈ ವನವನು ಸೇರೆ ದೇವರಕ್ಷಿಗಳಿಹರಿಲ್ಲಿ ಕಾಯವು ಕೆಡದಂತೆ ದೇವಿ ಸತ್ಕಾರ್ಯವ ಮಾಡಿ ಕಾಲಕಳೆ' ಎಂದು ಲಕ್ಷ್ಮಣ ಮಾತೃಭಕ್ತಿಯನ್ನು ಮೆರೆಯುತ್ತಾನೆ. ಕಾಡಿನಲ್ಲಿದ್ದ ಸೀತೆಯನ್ನು ನೀರಿಗೆ ಬಂದ ನೀರೇರೆಲ್ಲಾ ನೋಡುತ್ತಾರೆ. ಕಥೆಯ ಪ್ರತಿ ತಿರುವಿನಲ್ಲಿಯೂ ಸ್ತ್ರೀ ಪಾತ್ರವನ್ನು ಪ್ರಾಧಾನ್ಯವಾಗಿಸಿರುವ ಗಿರಿಯಮ್ಮನವರ ಸ್ತ್ರೀಪರ ನಿಲುವನ್ನಿಲ್ಲಿ ಕಾಣಬಹುದು. ದೇವಋಷಿ ನಾರೇರೆಲ್ಲಾ ಗರ್ಭಿಣಿ ಸೀತೆಗೆ ಹಸೆ ಹಾಕಿ ಅಕ್ಷತೆ ಇಟ್ಟು ಹರಸಿ ತೈಲೋಪಚಾರ, ಜಲೋಪಚಾರ ಮಾಡಿ ಸೀಮಂತಕ್ಕೆ ಸಿದ್ಧತೆ ಮಾಡುತ್ತಾರೆ. 'ರಾಮರನಗಲಿ ನಮಗೆ ಸೀಮಂತವೇತಕ್ಕೆ/ದಾವದುತ್ಸವವಿನ್ನ್ಯಾಕೆ/ತಂದೆ ತಾಯಿ ನಿಮ್ಮ ನೆರಳಲಿ ಸೇರಿ/ರಾಮರ ಭಜಿಸುತ್ತಲಿಹೆನು' ಎನ್ನುವ ಸೀತೆಯ ಮಾತುಗಳು ಅವಳ ಪತಿಪ್ರೇಮವನ್ನು ಸಾರುತ್ತವೆ. 'ಆದರೇನಾಯಿತು ತಾಯಿ ಚಿಂತೆಗಳ್ಯಾಕೆ ನಾರೇಯರಿಗೆ ತವರು ಮನೆಯು ತಾಯಿತಂದೆಯರು ಕಣ್ಣೆತ್ತಿ ನೋಡೋರು' ಎನ್ನುವಲ್ಲಿ ಯಾರು ಕಷ್ಟಕಾಲದಲ್ಲಿ ಸಂತೈಸುತ್ತಾರೊ ಅವರೇ ತವರಿನವರೆಂದು ಭಾವಿಸಬೇಕೆಂಬ ಬುದ್ಧಿಮಾತಿನ ಅಂತರಾರ್ಥವಿದೆ. ನಾರಿಯರೆಲ್ಲ ಸೀತೆಗೆ 'ಪುತ್ರರ ಪಡೆದು ಶ್ರೀರಾಮರ ಕೂಡು' ಎಂದು ಹರಸುತ್ತಾರೆ. ಋಷಿಪತ್ನಿಯರ ಹಾರೈಕೆ ಸೀತೆಯಿಂದಲೇ ಫಲಿಸುವಂತಾಗುತ್ತದೆ. ಈ ಹಾರೈಕೆಯಲ್ಲಿ ಕಾವ್ಯದ ಒಳನೋಟವನ್ನಿಲ್ಲಿ ಕಾಣಿಸಿದ್ದಾರೆ. ಸೀತೆ ಮಕ್ಕಳನ್ನು ಪಡೆದ ಸಂದರ್ಭದಲ್ಲಿ ನಾರೇರೆಲ್ಲರು 'ನವಮಾಸ ತುಂಬಿತು ಮೈಭಾರವಿಸಿತು,

ಲಲನೆ ಮಕ್ಕಳ ಪಡೆದಳೆಂದು' ವಾಲ್ಮೀಕಿಗೆ ತಿಳಿಸುತ್ತಾರೆ. ಇಲ್ಲಿಯೂ ಸ್ತ್ರೀಭಾಷೆಯನ್ನೆ ಬಳಸಿರುವುದು ಕಾಣಬಹುದು.

ಮುಂದೆ ಯುದ್ಧ ಸಂದರ್ಭದಲ್ಲೂ ಸೀತೆ 'ಬಾಲರೆ ನಿವ್ಹಾಕಿದ ಬಾಣ ಶ್ರೀರಾಮರಿಗೆ ಪಾದಪೂಜೆಯ ಮಾಡಲೆಂದು, ರಾಮರು ಹಾಕಿದ ಬಾಣ ನಿಮ್ಮಿಬ್ಬರಿಗೆ ಹೂವಿನ ಅರಳಾಗಲೆಂದು' ಹರಸುತ್ತಾಳೆ. ತಾಯಿಯಾಗಿ ಹೆಂಡತಿಯಾಗಿ ಸೀತೆಯು ತೆಗೆದುಕೊಳ್ಳುವ ನಿರ್ಧಾರ ಸ್ತ್ರೀಯರ ಮನೋಭಾವಕ್ಕೆ ಹಿಡಿದ ಕನ್ನಡಿಯಾಗಿದೆ.

ಸೀತೆಯ ಪುನರ್ಮಿಲನದ ಸಂದರ್ಭದಲ್ಲಿ ರಾಮ ಮತ್ತದೇ ಪ್ರಶ್ನೆಯೆತ್ತುತ್ತಾನೆ 'ದೇವಿ ನಿನ್ನನಗಲಿ ಆಳಿದೆನೆ ಪಟ್ಟ ಬಾಲಾರನೆಂತು ಪಡೆದೆಯೆ' ಎನ್ನಲು ಸೀತೆ 'ದೇವ ನೀನಲ್ಲದೆ ಬೇರೆ ಪರಪುರುಷನ ಮಾರಿಯ ನೋಡಿದರೆ ನಾನು ಭೂಮಿದೇವಿಯ ಸಾಕ್ಷಿ ಬಾಲರಿಬ್ಬರ ಸಾಕ್ಷಿ ದೇವಋಷಿಗಳ ಪಾದ ಸಾಕ್ಷಿ' ಎನ್ನುತ್ತಾಳೆ. ಸೀತೆಯ ಮಾತುಗಳಲ್ಲಿ ಸೌಮ್ಯ ಪ್ರತಿಭಟನೆಯ ಧ್ವನಿಯನ್ನು ಕಾಣಿಸಿದ್ದಾಳೆ. ಕೊನೆಗೆ ಲಕ್ಷ್ಮಣ ಮತ್ತು ವಾಲ್ಮೀಕಿಯ ಸಾಕ್ಷಿ ಕೇಳಿ ಒಪ್ಪಿಕೊಳ್ಳುತ್ತಾನೆ. ಕಥೆ ಸುಖಾಂತ್ಯವಾಗುತ್ತದೆ. ಅಯೋಧ್ಯೆಯಲ್ಲಿ ಅಂದು ಬೀಳ್ಕೊಟ್ಟ ನಾರಿಯರೆ ಇಂದು ಆರತಿ ಎತ್ತಿ ಸ್ವಾಗತಿಸುವಲ್ಲಿ ಕಥೆ ಮುಕ್ತಾಯಗೊಳ್ಳುತ್ತದೆ.

ಸೀತೆಯ ಕಥೆಗೆ ಸುಖಾಂತ್ಯ ತಂದಿರುವುದು ಗಿರಿಯಮ್ಮನ ಸ್ತ್ರೀಪರ ನಿಲುವನ್ನು, ಸಂಘರ್ಷವಿಲ್ಲದ ಸಹಚರ್ಯದ ಬದುಕನ್ನು ಧ್ವನಿಸುತ್ತದೆ.

ಹರಪನಹಳ್ಳಿ ಭೀಮವ್ವನವರ ಗೋಪಿಗೀತೆಯೊಂದರಲ್ಲಿ (ನೀಲವರ್ಣ ಗೋಪಾಲ, ಕೀ.೨೨) ಕೃಷ್ಣನ ಪ್ರೀತಿಯ ಸುಳಿಗೆ ಸಿಕ್ಕ ಗೋಪಿಕೆಯರು ತಮ್ಮ ಇರವನ್ನೇ ಮರೆತ ಶೃಂಗಾರಮಯ ಸನ್ನಿವೇಶ ಹೀಗಿದೆ:

ಮಾರಜನಕ ಮಾಧವ ತಾ ಕೊಳಲೂದು/ತಿರೆ ನಾವು ಮೋಹಿತರಾಗಿ ಹೋದ/ ಸುದ್ದಿಗಳೊಂದ್ವೇಳೆ ಲಜ್ಜೆ ಬಾ/ಹೋದೆ ನಮಗಿನ್ನು ಬಳೆ ಬಾಪುರಿ ಕಂಕಣ ಚೂಡ್ಯ/ಗಳನು ತೊಡೆಗೇರಿಸಿ ಕಾಲಂದಿಗೆ/ಕರದಿ ಕಾಲುಂಗರ ಕಿವಿಗಿಟ್ಟು ಬಾವುಲಿ ಪಾದದಿ ರಚಿಸಿದೆನೆ/ಹೊನ್ನಾಲೆ ಹೊಸ ಕೊಪ್ಪು ಮೂಗುತಿ/ಚಿನ್ನದ ವಡ್ಯಾಣದ ನಡುವಿಟ್ಟು/ಕಣ್ಣಿಗೆ ಕಸ್ತೂತಿ ಬಟ್ಟು ಕುಂಕುಮ ಕಾಡಿಗೆ/ನೊಸಲಿಗೆ ರಚಿಸಿ/ಬಿಟ್ಟ ಮಂದೆ ಕಟ್ಟದೆ ಕರುಗಳ/ತೊಟ್ಟಿಲೊಳಗಿಟ್ಟು ಶಿಶುವಿಗೆ – ಹೀಗೆ ಎಚ್ಚರವಿಲ್ಲದೆ ಅಚ್ಯುತನಿಗಾಗಿ ಹಂಬಲಿಸುತ್ತಾರೆ.

ಭೀಮವ್ವನವರ ಸ್ತ್ರೀ ಪಾತ್ರಗಳು ಸಿದ್ಧಪಡಿಸಿರುವ ಅಡಿಗೆ ವರ್ಣಿಸಿರುವುದರಲ್ಲಿ ಭೀಮವ್ವ ಸಿದ್ಧಹಸ್ತರು. ಅವಕಾಶವಿದ್ದೆಡೆಯಲ್ಲೆಲ್ಲಾ ಬಹು ಅಕ್ಕರೆಯಿಂದ ವರ್ಣಿತವಾಗಿದೆ.

ಭಕ್ಷ್ಯ ಶ್ಯಾವಿಗೆ ಪರಮಾನ್ನ ಚಿತ್ರಾನ್ನ ಸಣ್ಣಕ್ಕಿ/ಶ್ಯಾಲ್ಯಾನ್ನ ಸೂಪಗಳು/ ಚಕ್ಕುಲಿ ಗಿಲಗಂಜಿ ಚಂದ ಚಿರೋಟಿ/ಹಪ್ಪಳ ಸಂಡಿಗೆ ಆಂಬೊಡೆಗಳು ಸಕ್ಕರೆ ಘೃತ ಕ್ಷೀರ ಸಕಲ ಪಕ್ವಾನ್ನ/ಮಂಡಿಗೆ ಬೀಸೋರಿಗೆ ಗುಳ್ಳೋರಿಗೆಯು/ಚಂದ್ರನಂತ್ಹೊಳೆವೊ ಶಾವಿಗೆಯ ಫೇಣಿಯು/ದಿವ್ಯ ಬುಂದ್ಯ

ಬುರಿಬುರಿಯ ಅನಾರಸವು/ಬೇಕಾದ ಬೇಸನ್ನು ಬಿಳಿಯದಳಿಯದುಂಡೆ/ಮೋತಿಚೂರು ಚೂರ್ಮಲಾಡು/ಸೇತು ಬಿಳುಪಿನ ಚಕ್ರದಂತ ಜಿಲೇಬಿ/ ಸುಕಿಯದುಂಡೆ ಮುಖವಿಲಾಸಗಳು/ಹೋಳಿಗೆ ಎಣ್ಣೋರಿಗೆ ಹೊಯ್ಗಡುಬು ಗೇಹೂರಿ/ಕಾಯ್ಹಾಲು ಹೂರಣಗಡುವು/ತೇಂತೋಳಿತಿರುವಿದುದ್ದಿನಬ್ಯಾಳೆ/ಮೆಣಸು ಜೀರಿಗೆ ಇಂಗು ಹಾಕಿದುಪ್ಪಿನ ಕಡುಬು/ಸಾರು ಸಾಂಬಾರ ಪಡವಲಕಾಯಿ ಪಳದ್ಯ/ಉಪ್ಪೇರಿ ಉಪ್ಪಿನಕಾಯಿ ರಸವು/ಕೀರು ಮಾಲತಿಗೌಲಿ ಪರಡಿ ಪರಮಾನ್ನ ಕೋಸಂಬರಿ/ಕಾಯಿ ಕಲಸಿಮೇಲೋಗರ ಬಜ್ಜಿಗಳು ಸಬ್ಜಿಬಾತು ಸೌತೆಬಾತು ಕೇಸರಿಬಾತು–ಮುಂತಾದವುಗಳ ವರ್ಣನೆ ಬಾಯಲ್ಲಿ ನೀರೂರಿಸುತ್ತದೆ. ನಂತರ ಬರುವ ಕೀರ್ತನಕಾರ್ತಿಯರಲ್ಲಿ ಇದೇ ಭಕ್ಷ್ಯಭೋಜ್ಯಗಳು ವರ್ಣನೆಗೊಳ್ಳುತ್ತವೆ.  ಭೀಮವ್ವನವರಷ್ಟು ಅಡಿಗೆಗಳನ್ನು ಯಾರೂ ವರ್ಣಿಸಿಲ್ಲ.

'ಪತಿದಾನ ಕೊಟ್ಟ ಹಾಡು' ರುಕ್ಮಿಣಿ ಸತ್ಯಭಾಮೆಯರ ನಡುವಿನ ಸವತಿ ಮಾತ್ಸರ್ಯವನ್ನು ರುಕ್ಮಿಣಿಯ ಹಿರಿಮೆಯನ್ನು ಹೇಳುತ್ತದೆ.

ದ್ರೌಪದಿಯ ವಸ್ತ್ರಾಪರಣ' ದ್ರೌಪದಿ ತನಗಾದ ಅನ್ಯಾಯವನ್ನು ನೇರವಾಗಿಯೇ ಪ್ರತಿಭಟಿಸುತ್ತಾಳೆ. ದುಶ್ಯಾಸನನು ಸಭೆಗೆ ಅವಳನ್ನು ಎಳೆದು ತರುವುದಿಲ್ಲ ಬದಲಾಗಿ ಭಟರು ದ್ರೌಪದಿಯ ಮುಂದೆ ಕರವ ಮುಗಿದು ನಿಂತು ಇಂದು ನಮ್ಮ ರಾಜಸಭೆಗೆ ಬನ್ನಿ ಎಂದು ಕರೆಯುತ್ತಾರೆ. ದುಶ್ಯಾಸನನು ಎಳೆದು ಹಾಕಿದ ಸೀರೆಗಳನ್ನು ಎತ್ತಿ ಭಂಡಾರಕ್ಕೆ ಒಯ್ಯಬೇಕೆಂದು ದುರ್ಯೋಧನನು ಭಟರಿಗೆ ಆಜ್ಞಾಪಿಸುತ್ತಾನೆ. ದ್ರೌಪದಿಯ ತಕ್ಷಣ ಭರದಿ ಕೋಪದಿಂದ, ತೆರೆದ ಕಂಗಳಿಂದ ನೋಡಿದಾಕ್ಷಣ ಸೀರೆಗಳು ಉರಿದು ಭಸ್ಮವಾಗಿ ಧರೆಗೆ ಬೀಳುತ್ತವೆ. ಇದು ಭೀಮವ್ವನದೇ ಕಲ್ಪನೆ. ಸ್ತ್ರೀಪಾತ್ರಗಳನ್ನು ಎತ್ತಿ ಹಿಡಿಯುವ ಭೀಮವ್ವನವರ ಜಾಣ್ಮೆಯನ್ನಿಲ್ಲಿ ಕಾಣಬಹುದು.

'ಶ್ರೀಕೃಷ್ಣ ಪಾರಿಜಾತ'ದಲ್ಲಿ ಮಧುರದಾಂಪತ್ಯದ ಬದುಕಿನ ಚಿತ್ರಣವಿದೆ. ಶ್ರೀಕೃಷ್ಣನು ರುಕ್ಮಿಣಿಗೆ ಪಾರಿಜಾತ ಮುಡಿಸಿದ ವಿಷಯ ಕೇಳಿ ಸಿಟ್ಟಾದ ಭಾಮೆಯನ್ನು ನೋಡಲು ಕೃಷ್ಣ ಬರುತ್ತಾನೆ. ಅಂತಃಪುರದಲಿ ದಿಕ್ಕು ದಿಕ್ಕಿಗೆ ಬಿದ್ದ ವಸ್ತ್ರಾಭರಣವನ್ನು ಆರಿಸಿ ಬಂದು ಮಿಂಚು ಸೂರ್ಯಗೆ ಮಿಗಿಲಾಗಿದ್ದ ಮುಖಮಾಡಿ ಸಂಪಿಗೆ ಸರವ ಈಡ್ಯಾಡಿ ಚಿಂತೆ ಮಾಡುವರೆ ಚೆನ್ನದ ಗೊಂಬೆ ಏಳೆಂದು ಮಂಚದ ಮೇಲೆ ತಾ ಕುಳಿತುಕೊಳ್ಳುತ್ತಾನೆ. ಬೆವರಿದ್ದ ಸತ್ಯಭಾಮೆಯ ಮುಖವನ್ನು ಮುಂಜೆರಗಿಲಿನಿಂದೊರೆಸುತ ಹರವಿದ ಹಾರ ಹಾಕುತ ಪರಮ ಪ್ರೀತಿಯಲಿ ತನ್ನ ಕರಗಳಿಂದ ಹಿಡಿದೆತ್ತಿ ಎನ್ನರಗಿಳಿ ಏಳೆಂದು ಎಬ್ಬಿಸುತ್ತಾನೆ. ಭಾಮೆ ಸಿಟ್ಟಿನಲಿ 'ಈ ಕೃಷ್ಣನನ್ನು ಒಳಗೆ ಬಿಟ್ಟವರಾರು ಈಗ' ಎಂದು ಕೋಟಿ ಸೂರ್ಯಪ್ರಕಾಶನಾದ ಅವನನ್ನು ಎವೆಯಿಕ್ಕದೆ ನೋಡಿದರೂ ಕೊನೆಗೆ – ಬಾಳ ಮಾತುಗಳ್ಯಾಕೆ ಹೋಗು ಹದಿನಾರು ಸಾವಿರ ಮಡದಿಯರ ಮಂದಿರಕೆ ಏಳೆನ್ನ ಮನೆಲಿರಸಲ್ಲ ಹೋಗೆನ್ನುತ ಕಾಲಿಗೆ ನಮಸ್ಕರಿಸುತ್ತಾಳೆ. ಯಾವ ಹೆಣ್ಣೂ ತನ್ನ ಗಂಡನನ್ನು ಹೊರಗೆ ಕಳುಹಿಸಲು ಶಕ್ತಳಾಗಿರುವುದಿಲ್ಲ ಎನ್ನುವ ಸ್ತ್ರೀಸಹಜ ದೌರ್ಬಲ್ಯವನ್ನಿಲ್ಲಿ ಹೇಳಿದೆ.

ಕೃಷ್ಣನ ಜೊತೆಯಲ್ಲಿ ಸತ್ಯಭಾಮೆಯು ಪಾರಿಜಾತವನ್ನು ತರಲು ದೇವಲೋಕಕ್ಕೆ ಹೋಗಿ ಹೋರಾಡುತ್ತಾಳೆ. ಸ್ತ್ರೀಪಾತ್ರಗಳಿಗೆ ಭೀಮವ್ವ ಕೊಡುವ ಮಾನ್ಯತೆಯನ್ನಿಲ್ಲಿ ಮತ್ತೊಮ್ಮೆ ಕಾಣಬಹುದು.

ಇಂದ್ರನು ಕದನಕ್ಕೆ ಬಂದಾಗ ಕೃಷ್ಣ ಹಿಂಜರಿಯುತ್ತಾನೆ. ಪಾರಿಜಾತವನ್ನು ಬಿಟ್ಟು ಹೊರಟರೆ 'ನಾರಿ ರುಕ್ಮಿಣಿ ನಿನ್ನ ಮೋರೆ ನೋಡುತ ಹಾಸ್ಯ ಮಾಡಿ ತಾ ನಗದೆ ಬಿಡುವಳೆ' ಎನ್ನುತ್ತಾಳೆ ಸತ್ಯಭಾಮೆ. ಆ ಸಮಯದಲ್ಲೂ ಅವಳಿಗೆ ರುಕ್ಮಿಣಿಯ ಹೊರತಾಗಿ ಮತ್ಯಾರು ನೆನಪಾಗುವುದಿಲ್ಲ.

ಭೀಮವ್ವನವರ ಕಾವ್ಯ ಕನ್ನಿಕೆಯರು ಅಲಂಕಾರ ಪ್ರಿಯರು. ಜಲಕ್ರೀಡೆಯ ಹಾಡಿನಲ್ಲಿ ಗೋಪಿಕೆಯರು ಅಲಂಕರಿಸಿಕೊಂಡ ಆಭರಣಗಳು ಹೀಗಿವೆ. ಹೆರಳು ಬಂಗಾರ ರಾಗಟೆ ಗೊಂಡ್ಯ ಕ್ಯಾದಿಗೆ/ಅರಳುಮಲ್ಲಿಗೆ ಸಂಪಿಗೆ ಮುಡಿದು ದಿವ್ಯ/ಕೊರಳಕಟ್ಟಾಗಿ ಸರಿಗೆ ಚಂದ್ರಹಾರ/ಮುತ್ಥಳಿ ಪಚ್ಚ ಪದಕಗಳ್ಹೊಳೆಯುತಲಿ/ಕಡಗ ಕಂಕಣ ದ್ವಾರ್ಯ ನಾಗಮುರಿಗೆ ವಂಕಿ/ಬಿಡಿಮುತ್ತಿನ ಗೊಂಡ್ಯ ಬಾಜು ಬಂದು ದೊಡ್ಡ/ಎಡಬಲ ಕಿವಿಯಲ್ಲಿ ವಾಲೆ ಸರಪಳಿ ಮುತ್ತು ಬು/ಗುಡಿ ಚಂದದಾ ಬಾಳ್ಯ ಹೊಳೆಯುತಲಿ/ಮುದ್ದು ಮೋರೆಗೆ ತಕ್ಕ ಮುಕುರಿಯ ಬುಲಾಕವನಿಟ್ಟಚವ/ಜ್ರದ್ಹರಳು ಬಲಮೂಗಿನಲಿ ದಿವ್ಯ/ತಿದ್ದಿ ಮುಂಗುರುಳು ಮುತ್ತಿನಬೊಟ್ಟು ಕುಂಕುಮ–ಹೀಗೆ ಸಡಗರದಿಂದ ವರ್ಣನೆ ಮಾಡುತ್ತಾರೆ. ಜಲಕ್ರೀಡೆ ಹಾಡಿನಲ್ಲಿ ನಾಕು ಸಾಲುಗಳ ಇಳ ನುಡಿಗಳಲ್ಲಿ ಸೀರೆಗಳನ್ನು ವರ್ಣಿಸಿದ್ದಾರೆ. ಇವರಷ್ಟು ಸೀರೆಗಳ ವರ್ಣನೆ ಮಾಡಿರುವ ಮಹಿಳಾ ಕೀರ್ತನಕಾರರು ಮತ್ತೊಬ್ಬರಿಲ್ಲ.

ಪ್ರಸ್ತಕ್ಕೆ ತಂದದ್ದು ಉಪ್ಪಾಡಿ ಪತ್ತಲ ಕಸ್ತೂರಿ ಬಣ್ಣದ ಕಮಲದ ಪೇಟೆಯಂಚು/ ಮುತ್ತಿನ ಬೊಟ್ಟಿನ ಸೀರೆ ಮೊದಲೆ ಮೈನೆರೆದಾಗ್ನ/ಮ್ಮತ್ತಿಗ್ಯಕ್ಕರದಿಂದ ಕೊಟ್ಟಿದ್ದಾಳೆ/ಪಂಚ ಪೈಠಣಿ ನಂದು ಪಗಡೆ ಮಣೆ ನಂದು/ಅಂಚೆಲ್ಲಾ ಜರತಾರಿ ಸೆರಗು ನೋಡೆ/ಮಿಂಚುತ ನಾವುಟ್ಟುಕೊಂಡರೆ ನನಗಂಡ/ ಮಂಚ ಇಳಿಯದೆ ಇಲ್ಲ ಕೂಡೆಂಬೋರೆ/ಹಂಡ್ಯಾಪೈಠಣಿ ಸೀರೆಗೊಂಡ್ಯ ಮುತ್ತಿನ ಸೆರಗು/ ಗಂಡನೊಲಿಸಿಕೊಂಬೊ ಸೀರೆ ಅದು ನೋಡ/ಕಂಡ ಕಂಡಲ್ಲೆ ನಾ ತಿರು ತಿರುಗಿ ಬಂದರೆ/ಒಂದು ಮಾತಾಡುತ್ತಿದ್ದಿಲ್ಲವರು–ಸೀರೆಗಳೊಂದಿಗಿನ ಹೆಂಗಸರ ಭಾವನಾತ್ಮಕ ಸಂಬಂಧವನ್ನು ಈ ನುಡಿಗಳಲ್ಲಿ ಚಿತ್ರಿಸಿದ್ದಾರೆ.

ಸೀರೆ ಕಳೆದುಕೊಂಡ ಗೋಪಿಕೆಯರು ಅರಣ್ಯ ಸೇರಿಕೊಳ್ಳಲು ಯೋಚಿಸುತ್ತಾರೆ: ಹೆಣ್ಣು ಮಕ್ಕಳು ನಾವು ಚೆನ್ನಾರ ಚೆಲುವೇರು/ಅರಣ್ಯವ ಸೇರಿಕೊಂಬುವುದು ಹ್ಯಾಗೆ ಹೋಗಿ/ಕಣ್ಣಿಟ್ಟ ಪುರುಷರು ಬಿಡುವೋರೆ ನಮ್ಮನ್ನು/ಇನ್ನೊಂದುಪಾಯ ನಾ ಹೇಳುವೆನು/ಕೃಷ್ಣನು ಬಿದ್ದಂತೆ ಗಾಳಿ ಮಡುವಿನೊಳು ಒಟ್ಟಾಗಿ ನಾವೆಲ್ಲ ಧುಮುಕೋಣ ಹೋಗಿ–ಎಂಬ ತೀರ್ಮಾನಕ್ಕೆ ಬರುತ್ತಾರೆ. ಆ ಕಾಲಕ್ಕೂ ಇದ್ದ ಪುರುಷರ ದೌರ್ಜನ್ಯವನ್ನಿದು ಹೇಳುವುದರ ಜೊತೆಗೆ ಶೀಲ ಕಳೆದುಕೊಳ್ಳುವ ಸಮಯ ಬಂದಾಗ ಆತ್ಮಾಹುತಿಯ ಬಗ್ಗೆ ಆಲೋಚಿಸುವ ಸ್ತ್ರೀಯರ ಮನಸ್ಸನ್ನಿಲ್ಲಿ ಹಿಡಿದಿಡಲಾಗಿದೆ.

ನಳ ಚರಿತ್ರೆಯಲ್ಲಿ ಬರುವ ದಮಯಂತಿಯ ವರ್ಣನೆ ತಿದ್ದಿ ತೀಡಿದಂತಿದೆ:ಎರಡು ಪಾದಗಳು, ಎಳೆ ಮಾವಿನ ತಳಿಲಂತೆ/ನಡೆದರಾಗಜ ನೋಡಿ ನನಗೆ ಮಿಗಿಲೆಂಬುದು/ನಡುವ ನೋಡುತ ಸಿಂಹ ನಾಚಿ ಬೆರಗಾಗುವುದು/ಕಡಗ ಬಳೆ ಕರ ಬಾಳೆದಿಂಡಿನಂತೆ ತೋರುವುದು/ಜಡೆಯ ನೋಡುತ ಸರ್ಪ ಮಡುವ ಸೇರುವುದು ಪೋಗಿ/ಉಡುರಾಜ ನೋಡಿ ಮುಖಕಾಂತಿಗೆ ಕಪ್ಪಾದ/ಬಿಳಿ ಮುತ್ತು ಪುಟ್ಟ ಕರಡಿಗೆಯಂಥ ಬಾಯಿಂದ ನುಡಿದ ಮಾತಿಗೆ ಮರುಳುಗೊಂಡುವಾ ಗಿಳಿವಿಂಡು/ಒಡೆದು

ದಾಳಿಂಬ್ರ ಬಾಯ್ಬಿಡಲು ದಂತಕೆ ಹವಳ/ಕುಡಿಯಂತೆ ತುಟಿ ಕೆಂಪು ಕದಪು ಕನ್ನಡಿಯಂತೆ/ ಮುಡಿಯ ಸಂಪಿಗೆ ತೆನೆಯು ಮೂಗು ಮಾಟಕೆ ಬಾಡೆ/ಕಡೆಗಣ್ಣು ಕಮಲದೆಸಳಂತೆ ತಿದ್ದಿದ ಹುಬ್ಬು/ಕಡಲಂತೆ ಗುಣಕೊಂಡು ಕಡಿಮ್ಯಿಲ್ಲದ್ಹಾಗೆ

ಭೀಮವ್ವನವರ ವ್ರತಕಥೆಗಳಲ್ಲಿ ಬರುವ ಸ್ತ್ರೀಯರು ಸಂಪ್ರದಾಯ ಶರಣರು ತಮ್ಮ ಬೇಡಿಕೆ ಈಡೇರಿಕೆಗಾಗಿ ವ್ರತ ಮಾಡುವವರು. ವ್ರತ ಮಾಡಿದ ಎಲ್ಲ ಹೆಣ್ಣುಮಕ್ಕಳ ಬದುಕು ಸುಖಾಂತ್ಯವಾಗುತ್ತದೆ. ಸ್ತ್ರೀ ಬದುಕಿನ ಬಗ್ಗೆ ಭೀಮವ್ವನಿಗಿರುವ ಕಾಳಜಿಯನ್ನಿದು ತೋರುತ್ತದೆ. ವಿರಹಿಗಳ ಪ್ರತಿನಿಧಿಗಳಾಗಿ ಕಾಣಿಸುತ್ತಾರೆ.

ಸತ್ಯಭಾಮೆಯೊಡನಿರುವ ಸಖಿಯರು, ದಮಯಂತಿ-ಶಕುಂತಲೆಯ ಜೊತೆಗಿರುವ ಆಪ್ತಗೆಳತಿಯರನ್ನು ಚಿತ್ರಿಸುವುದನ್ನು ಭೀಮವ್ವ ಮರೆಯುವದಿಲ್ಲ. ಗಿರಿಯಮ್ಮನ ರಾಮ ಸೀತೆಯನ್ನು ನಡೆಸಿಕೊಂಡಂತೆ, ಭೀಮವ್ವನ ದುಷ್ಯಂತನು ಶಕುಂತಲೆಯನ್ನು ನಡೆಸಿಕೊಳ್ಳುತ್ತಾನೆ. ಶಕುಂತಲೆ ತನ್ನನ್ನು ಸ್ವೀಕರಿಸುವಂತೆ ದುಷ್ಯಂತನನ್ನು ಕೇಳಿಕೊಂಡಾಗ 'ವೇಶ್ಯೆಯಂತೆ ಭಾಳ ದೇಶ ದೇಶ ತಿರುಗಿ ಬಂದು ಏಸು ಮಂದಿ ರಾಜರನ್ನು ಮೋಸ ಮಾಡಿ ಬಂದೆ'-ಎನ್ನುತ್ತಾನೆ.

ಕೌಂಡ್ರಿಕನನ್ನು ಸಂಹಾರ ಮಾಡುವ ದ್ರೌಪದಿಯ ಚಿತ್ರಣ ಹೀಗಿದೆ: (ಧ್ವನಿ-೪೩)

ಉರ್ವಿ ಮ್ಯಾಲೂರಿ ಪಾದವನು ನಿಂತು/ದೂರ ಬೆಳೆಸಿ ಶರೀರವನು ಸ್ಥೂಲವಾಗಿದ್ದ ಕಾಯವನು ಕಂಡು ತಾ/ಬೆರಗಾದ ಮಾಯವನು ಸೂರ್ಯಚಂದ್ರರು/ತಾರಾಗಣಗಳು ತೋರುತಿರಲಾ ಮುಖದ ಮಧ್ಯದಿ/ಮಾರಿ ದುರ್ಗಿ ಚಂಡಿಯೊ ಮಾಂಕಾಳಿಯೊ ಮಾಘೋರ ರೂಪವ/ಉಟ್ಟಳು ಬಿಳಿಯ ಪತ್ತಲವ ಮ್ಯಾಲೆ/ತೊಟ್ಟ ಕುತ್ತನಿಯ ಕುಪ್ಪಸವ/ಪಟ್ಟೆ ಕುಂಕುಮ ಹಚ್ಚಿ ನೊಸಲೊಳು ಇಂಥ/ ದುಷ್ಟನ ಮ್ಯಾಲೆ ಸಾಹಸವೊ ಅಷ್ಟಭುಜ/ಅಷ್ಟಾಯುಧಂಗಳ ಕತ್ತಿ ಖಡ್ಗವ ಪಿಡಿದು ತಿರುಗುತ/ಕೆಟ್ಟ ಕೌಂಡ್ರಿಕನ್ನ ಎದೆಯ ಮೆಟ್ಟಿ ಸೀಳುವೆನೆನುತಲಾಗ/ಆಲಯದಂತ ಕಿವಿಗಳು ಬಂಡಿ/ಗಾಲಿಯಂಥ ಹರಳಿನ್ವಾಲೆಗಳು/ಜೋಲುಬಿದ್ದಂತ ತುಟಿಗಳು ದೊಡ್ಡ/ಭೇರಿಯಂತಿದ್ದ ಸ್ತನಗಳ ಕಾಮನು/ಬಿಲ್ಲೂಡಿಂತೆ ನೀಲವೇಣಿಯ ಹುಬ್ಬುಗಳು ವಿ/ಶಾಲ ನೇತ್ರದಿ ಕಿಡಿಗಳು ಹೂಬಾಣದಂತಾಗ್ಹಾರುತಿರಲು/ರಥಚಕ್ರದಂಥ ನೇತ್ರಗಳು ತಿರು/ಗುತಲಿದ್ದ/ಕಣಣುಗುಡ್ಡೆಗಳು ಉ/ನ್ನತವಾದ ಮೂಗು ಮಾಟಗಳು ಪ/ರ್ವತದಂತೆ ಹೊಟ್ಟೆ ಬೆನ್ನುಗಳು/ಮಿತಿಯು ಇಲ್ಲದೆ ತೆರೆದು ಬಾಯಾರ್ಭಟದಿ ಕೋರೆಹಲ್ಲು ನಾಲಗೆ/ಶತಯೋಜನ ಪರ್ಯಂತ್ರ ಚಾಚಿ ಅತಿ ಭಯಂಕರವಾಗಿ ತೋರ್ಪಳು – ಎನ್ನುವ ದ್ರೌಪದಿಯ ರುದ್ರ ರೂಪದ ವರ್ಣನೆಯನ್ನು ಇನ್ನಾರ ಕೀರ್ತನೆಗಳಲ್ಲೂ ಕಾಣುವುದಿಲ್ಲ. ಇಂಥ ಹೆಂಗಸರನ್ನು ಭೀಮವ್ವ ಬದುಕಿನಲ್ಲಿ ಕಂಡಿರಬೇಕು. ಜನಪದ ಮಹಾಭಾರತದಲ್ಲಿ ಬರುವ ದ್ರೌಪದಿಯ ಇಂತಹ ಚಿತ್ರಣ ಇದಕ್ಕೆ ಸ್ಫೂರ್ತಿಯಾಗಿರಬೇಕು.

ಅಂಬಾಬಾಯಿಯವರು ಬರೆದಿರುವ 'ಸೀತಾಪತಿ ವಿಠಲದಾಸಳ ನಿರ್ಣಾಯ ಪದ'ವು ಅಂಬಾಬಾಯಿಯ ಅಜ್ಜಿಯನ್ನು ಕುರಿತಾದದ್ದು. ಮಹಿಳಾ ಕೀರ್ತನಕಾರರ ಬದುಕಿಗಿಂತ ಏನು ಭಿನ್ನವಾಗಿಲ್ಲ ಅವರ ಬದುಕು. ಮುಂದೆ ಇದೇ ಹಾದಿ ಹಿಡಿಯುವ ಅಂಬಾಬಾಯಿಗೆ ಅವರ ಅಜ್ಜಿ

ರುಕ್ಮಿಣಿಬಾಯಿಯು ಆದರ್ಶವಾಗುತ್ತಾರೆ. ಸಮುದ್ರ ಮಥನ ಕಾಲದಲ್ಲಿ ಹುಟ್ಟಿದ ಮೋಹಿನಿಯು ಅಂಬಾಬಾಯಿಯವರಿಗೆ ಆಕರ್ಷಕವಾಗಿ ಕಂಡಿದ್ದಾಳೆ. (ಕೀ–೬) 'ಹಲವು ಸೂರ್ಯರ ಕಾಂತಿ ಹೊಳೆವ ಪೀತಾಂಬರ/ಸರಿಗೆ ಅಂಚಿನ ಕುಪ್ಪಸವನೆ ತೊಟ್ಟು/ನಡುವಿಗೆ ನವರತ್ನ ಬಿಗಿದ ಪಟ್ಟೆಯನಿಟ್ಟು/ ಸಡಗರದಲಿ ಆಣೆ ಮುತ್ತಿನ ಸರಗಳು/ಸರಗಿ ಏಕಾವಳಿಯು ವಜ್ರದ/ಪದಕಗಳು ಥಳಕೆಂಬ ಸರಗಳು/ ಕೊರಳ ಗೆಜ್ಜೆಟ್ಟಿಕೆಯ ಕಂಠಿಯು/ಮುರಳಿಸರ ಕಠ್ಠಾಣಿ ನಲಿಯುತ/ಹೊಳೆವ ಗಲ್ಲಕೆ ಥಳಥಳಿಪ ಅರಿಶಿನ ಹಚ್ಚಿ/ ಹೊಳೆವ ಮೀನ ಬಾವುಲಿ ಕರ್ಣದಲಿ/ಗಿಲಿಗೆಜ್ಜೆ ಚಳೆತುಂಬು ಬುಗುಡಿ ಬಾವಲಿ ಚಂದ್ರ/ಮುರುವು ಸರಪಳಿಗಳು ಥಳಥಳ ಹೊಳೆಯು/ಆಣಿಮುತ್ತಿನ ಮುಕುರ ಬೇಸರಿ/ಜಾಣೆ ನಾಶಿಕದಲಿ ಹೊಳೆವ ಬುಲಾಕುಗಳನಿಟ್ಟು ಬೆಳಕು ಗಲ್ಲದ/ಮೇಲೆ ಥಳಥಳ ಹೊಳೆವ ಕಾಂಚಿಯು/ ಸಣ್ಣ ಬೈತಲೆ ಬಟ್ಟು ಚಂದ್ರ ಸೂರ್ಯರನಿಟ್ಟು/ಹಿಂದೆ ಜಡೆಬಿಲ್ಲೆ ಗೊಂಡ್ಯೆಗಳನಿಟ್ಟು/ಚಂದ್ರ ಸೂರ್ಯರ ಪೋಲ್ವ ಚೌರಿ ರಾಗಟೆ ಜಡೆ/ಬಂಗಾರ ಹೊಳೆಯುತ್ತ ಬಡ ನಡು ಬಳುಕುತ್ತ/ಕಂಗಳ ಕಡೆನೋಟದಿಂದಲಿ/ಭಂಗ ಪಡಿಸುತ ಅಸುರ ಕೋಟಿಯ ಮಂದ ಗಮನದಿ ಅಡಿಯನಿಡುತಲಿ/ ಬಂದಳಮೃತ ಕಲಶ ಪಿಡಿಯುತ– ಎನ್ನುವ ವರ್ಣನೆ ಮೋಹಿನಿಯ ರೂಪವನ್ನು ಕಣ್ಣಮುಂದೆ ನಿಲ್ಲಿಸುತ್ತದೆ.

**ಸಮುದ್ರಮಥನದಲಿ ಹುಟ್ಟಿ ಬಂದ ಲಕ್ಷ್ಮಿ, ವರನನ್ನು ಆಯ್ಕೆ ಮಾಡಿಕೊಳ್ಳುವ ಪರಿ ಹೀಗಿದೆ**

ಇಂದ್ರ ಮೈಗಣ್ಣ, ಚಂದ್ರ ಕಳೆಗುಂದಿದವನು, ಸೂರ್ಯ ಸುತ್ತ ಸುಡುವವನು, ವಾಯು ಗಾಳಿ ಬೀಸುವನು, ಯಮ ಭಯವ ಕೊಡುವವ, ಕುಬೇರ ಧನಪ, ವರುಣ ಎರಳೆವಾಹನ, ಗಿರಿಜೆಪತಿ ಗರಳ ಕುಡಿದವನು, ಮತ್ಸ್ಯ ಜಲನಿವಾಸಿ, ಕೂರ್ಮ ಕೈಕಾಲು ಮುಚ್ಚಿದವನು, ವರಾಹ ನಾರುಬೇರು ಹುಡುಕುವವನು, ವಾಮನ ಭೂಮಿ ಅಳೆದವನು, ಪರಶುರಾಮ ಕೊಡಲಿ ಪಿಡಿದವನು, ರಾಮ ಮಡದಿ ನೀಗಿದವನು, ಬೌದ್ಧ ನಾರೇರ ವ್ರತವಳಿದ, ಕಲ್ಕಿ ತೇಜಿಯೇರಿದವನು –ಎನ್ನುತ್ತ ಕೊನೆಗೆ ವಿಷ್ಣುವಿಗೆ ವನಮಾಲೆ ಹಾಕುತ್ತಾಳೆ. ದಶಾವತಾರವನ್ನು ಬಣ್ಣಿಸುವ ಪದ್ಯವಾದರೂ ಹೆಣ್ಣಿಗೆ ಆಯ್ಕೆ ಮಾಡಿಕೊಳ್ಳುವ ಸ್ವಾತಂತ್ರ್ಯ ಇರಬೇಕೆಂಬುದನ್ನು ಪದ್ಯ ಎತ್ತಿ ಹಿಡಿಯುತ್ತದೆ.

'ಶ್ರೀಹರಿ ಮಾನಸ ಪೂಜೆ' ಪೂಜಾ ವಿಧಾನವನ್ನು ತಿಳಿಸುವ ಪದ್ಯವಿದು. ಮಂತ್ರದ ಹಂಗಿಲ್ಲದೆ ಸ್ತ್ರೀಯರು ತಾವೇ ಹಾಡು ಹೇಳಿಕೊಳ್ಳುವ ಮೂಲಕ ಪೂಜಿಸುವ ವಿಧಾನವನ್ನು ಇದು ಒಳಗೊಂಡಿದೆ. ಅಂಬಾಬಾಯಿಯ ಸ್ತ್ರೀಪರ ಕಾಳಜಿಯನ್ನಿಲ್ಲಿ ಗುರುತಿಸಬಹುದು. 'ಗಾಲವ ಮಹಿರ್ಷ ಕಥೆ' ಪದ್ಯದಲ್ಲಿ ಗಾಲವ ಸತ್ಯಭಾಮೆಯ ಕಾಲು ಹಿಡಿದು ಮೊರೆ ಹೋಗಿ ಕಾರ್ಯ ಸಾಧಿಸಿಕೊಳ್ಳುತ್ತಾನೆ. ಉದ್ದಕ್ಕೂ ಮಹಿಳಾ ಕೀರ್ತನಕಾರರು ಸ್ತ್ರೀ ಪಾತ್ರಗಳಿಗೆ ಮಾನ್ಯತೆ ನೀಡಿರುವುದನ್ನು ಗಮನಿಸಬೇಕು.

ಓರಾಬಾಯಿ ಲಕ್ಷ್ಮಿದೇವಮ್ಮನವರ 'ದ್ರೌಪದಿ ವಸ್ತ್ರಾಪಹರಣ' ಕೃತಿಯಲ್ಲಿ ದ್ರೌಪದಿ ಎರಡನೆ ಬಾರಿ ಜೂಜಿಗೆ ಕುಳಿತು ತನ್ನ ಸಕಲ ಸಂಪತ್ತನ್ನು ಜಯಿಸುತ್ತಾಳೆಂಬ ಬದಲಾವಣೆ ಮಾಡಿಕೊಂಡಿರುವುದೆ ಇಂತಹ ಸ್ತ್ರೀಪರ ನಿಲುವಿಗೆ ಸಾಕ್ಷಿಯಾಗಿದೆ. 'ಗೊಲ್ಲತಿ ಹಾಡು' ಕೃತಿಯ ಗೊಲ್ಲತಿ ಕೃಷ್ಣನನ್ನೊಮ್ಮೆ ಸೇರಲು ಹಂಬಲಿಸಿ ಅತ್ತೆಯ ಕಣ್ಣು ತಪ್ಪಿಸಿ ಕೃಷ್ಣನೊಂದಿಗೆ ಸೇರಿದರೂ

ಅದನ್ನು ಸಮರ್ಥಿಸಿಕೊಳ್ಳುತ್ತಾಳೆ. ಸ್ತ್ರೀಯೊಬ್ಬಳು ತನ್ನ ಜಾರತ್ವವನ್ನು ಸಮರ್ಥಿಸಿಕೊಳ್ಳುವ ಅಪರೂಪದ ಚಿತ್ರಣವಿದು. ಸಮಾಜದಲ್ಲಿ ಗಂಡಸರಿಗೆ ಮಾತ್ರ ಅಂತ ಅವಕಾಶಗಳನ್ನು ನೀಡಿರುವುದು ಕಾಣಬಹುದು. 'ಜಲಕ್ರೀಡೆಯ ಹಾಡು' ಕೂಡ ಮಹಿಳೆಯ ಸ್ವಚ್ಛಂದ ಮನೋಭಾವದ ಪ್ರತೀಕಕ್ಕೆ ಹಿಡಿದ ಕೈಗನ್ನಡಿ.

ಹೆಣ್ಣಿನ ಮನಸ್ಸಿನ ನಿರೀಕ್ಷೆ, ಆಸೆ ಆಕಾಂಕ್ಷೆಗಳು, ನೋವು ನಲಿವುಗಳು, ಈರ್ಷೆ ಒಲವುಗಳು, ಕೋಮಲ ಅಂತಃಕರಣಗಳು ಕೀರ್ತನೆಗಳಲ್ಲಿ ಚಿತ್ರಿತವಾಗಿವೆ. ಪ್ರಿಯತಮೆಯಾಗಿ ಮಗುವಿಗಾಗಿ ಹಂಬಲಿಸುವ ತಾಯಾಗಿ, ಅವಿವಾಹಿತ ತಾಯಾಗಿ, ಮಗುವನ್ನು ಹಡೆದ ತಾಯಾಗಿ, ಸವತಿಯಾಗಿ ಒಂದೊಂದು ಪಾತ್ರವೂ ಜೀವಂತವಾಗಿ ಮೂಡಿ ಬಂದಿದೆ.

ಕೀರ್ತನಕಾರ್ತಿಯರು ಭಕ್ತಿಯ ತೊಡಿಗೆಯಲ್ಲಿ ಸ್ತ್ರೀ ಮನೋಭಾವ ಹಾಗು ಸಂತಸ, ಒಳಗುದಿ, ಬದುಕನ್ನು ನೋಡುವ ಕ್ರಮ, ಸಂಯಮಶೀಲತೆ ಮುಂತಾದವನ್ನು ಹಿಡಿದಿಟ್ಟಿದ್ದಾರೆ. ಭಕ್ತಿ ಆಲಂಬನೆಯಾದ್ದರಿಂದ ಅದರ ಲಕ್ಷಣಗಳಲ್ಲೊಂದಾದ 'ಮೃದುತನ'ವನ್ನು ಮೈಗೂಡಿಸಿಕೊಂಡಿರುವರು. ಇಲ್ಲಿ 'ಬಂಡಾಯ'ವನ್ನು ಕಾಣಲೇ ಬೇಕೆಂಬ ಹಟದ ಅಗತ್ಯವಿಲ್ಲ. ಅದು ಕೃತಿಯಲ್ಲೇ ಅಂತರ್ಗತವಾಗಿದ್ದರೆ ತಂತಾನೆ ಪ್ರಕಟವಾಗುತ್ತದೆ. ಬಂಡಾಯ ಎಂಬುದು ಮನೋಭಾವವೇ ಹೊರತು ಅದು ಹೊರಗಿನ ಒತ್ತಾಯವಲ್ಲ. ಇದರಂತೆ ಮಹಿಳಾ ಕೀರ್ತನೆಗಳಲ್ಲಿ ಅದರದೇ ದನಿಯಲ್ಲಿ ಬಂಡಾಯವಿರುವುದಂತೂ ಖಚಿತ. ಅದು ಅಂತರ್ಗತ ಬಂಡಾಯ. ಹೊರಧ್ವನಿಯಾಗುವಂತೆ ಒತ್ತಾಯಿಸುವ ಅಂತರಂಗದ ಮಾತು. ವಚನ ಸಾಹಿತ್ಯಯುಗದಲ್ಲಿ ಆದಂತೆ ಚಳುವಳಿ ಇವರ ಕಾಲಕ್ಕೆ ಬೆಂಬಲವಾಗಿರಲಿಲ್ಲ ಎಂಬುದು ಮುಖ್ಯ ಸಂಗತಿ.

## ಅಧ್ಯಾಯ– ಒಂಬತ್ತು

# ಕೀರ್ತನೆಯಲ್ಲಿ ಪ್ರಸ್ತಾಪಿಸಲಾಗಿರುವ ಸಂಪ್ರದಾಯಗಳು

ಮದುವೆ
ಪೂಜೆಯ ಹಾಡುಗಳು
ಪುರುಡು ನಿವಾರಣೆ ಹಾಡುಗಳು

# ಅಧ್ಯಾಯ–ಒಂಬತ್ತು

## ಕೀರ್ತನೆಯಲ್ಲಿ ಪ್ರಸ್ತಾಪಿಸಲಾಗಿರುವ ಸಂಪ್ರದಾಯಗಳು

ಸಂಪ್ರದಾಯಸ್ಥ ಮನೆತನಗಳಲ್ಲಿ ಷೋಡಶ ಕರ್ಮಗಳ ಆಚರಣೆ ನಡೆಯುತ್ತವೆ. ಗರ್ಭದಾನ, ಪುಂಸವನ, ಸೀಮಂತ, ಜಾತಕರ್ಮ, ನಾಮಕರಣ, ನಿಷ್ಕ್ರಮಣ, ಅನ್ನಪ್ರಾಶನ, ಚೂಡಾಕರ್ಮ, ಕಿವಿ ಚುಚ್ಚುವುದು, ವಿದ್ಯಾರಂಭ, ಉಪನಯನ, ವೇದಾರಂಭ, ಕೇಶಾಂತ, ಸಮಾವರ್ತನ, ವಿವಾಹ, ಅಂತ್ಯಸಂಸ್ಕಾರ ಇವೇ ಷೋಡಶ ಕರ್ಮಗಳು. ನಮ್ಮ ಪೂರ್ವಿಕರು ಸಂಪ್ರದಾಯಗಳನ್ನು ವೈಜ್ಞಾನಿಕ ಹಿನ್ನೆಲೆಯಲ್ಲಿಯೇ ಮಾಡಿದ್ದಾರೆ. ಇದರ ಅನುಸರಣೆಯಿಂದ ಒಳಿತಾಗುತ್ತದೆ. ಸಂಪ್ರದಾಯಗಳು ಮೂಢನಂಬಿಕೆಗಳಲ್ಲ. ಅವು ಎಂದೆಂದಿಗೂ ಪ್ರಸ್ತುತ. ಸಂಪ್ರದಾಯದಲ್ಲಿ ಸಾಮಾನ್ಯವಾಗಿ ಸ್ತ್ರೀಯರು ಹೆಚ್ಚು ಪಾಲ್ಗೊಳ್ಳುವುದರಿಂದ ಪ್ರತಿಯೊಂದು ಸಂಪ್ರದಾಯಕ್ಕೂ ಹಾಡುಗಳಿವೆ. ಸಂಪ್ರದಾಯದ ಹಾಡುಗಳ ಪರಂಪರೆ ಇಂದಿಗೂ ನಡೆದು ಬಂದಿದೆ. ಮಹಿಳಾ ಕೀರ್ತನಕಾರರ ರಚನೆಗಳಲ್ಲಿ ಸಂಪ್ರದಾಯದ ಹಾಡುಗಳು ಬಿಡಿ ಕೀರ್ತನೆಗಳಲ್ಲಿಯೂ, ದೀರ್ಘ ಕೀರ್ತನೆಗಳಲ್ಲಿಯೂ ಸಾಂದರ್ಭಿಕವಾಗಿ ಬಳಕೆಯಾಗಿದೆ. ದೀರ್ಘ ಕೀರ್ತನೆಗಳಲ್ಲಿರುವ ಸಂಪ್ರದಾಯದ ಹಾಡುಗಳನ್ನು ಮಾತ್ರ ಆಯಾ ಸಂದರ್ಭದಲ್ಲಿ ಆಯ್ದು ಹಾಡುವುದರಿಂದ ಅದರಲ್ಲಿ ಅಂಕಿತವು ಇರುವುದಿಲ್ಲ. ಹೀಗಾಗಿ ಸಂಪ್ರದಾಯದ ಹಾಡುಗಳು ಪ್ರಚಾರಕ್ಕೆ ಬರುತ್ತವೆಯೇ ಹೊರತು ಬರೆದವರು ಅನಾಮಿಕರಾಗಿಯೇ ಉಳಿಯುತ್ತಾರೆ. ಸಂಪ್ರದಾಯಗಳು ಪ್ರಾಂತ್ಯದಿಂದ ಪ್ರಾಂತ್ಯಕ್ಕೆ ಬದಲಾಗುತ್ತವೆ. ಇಲ್ಲಿ ಪ್ರಸ್ತಾಪಿಸಲಾಗಿರುವ ಹಾಡುಗಳೇ ಶಾಸ್ತ್ರಗಳ ವಿಧಿವಿಧಾನಗಳನ್ನು ಹೇಳುತ್ತವೆ. ಕೀರ್ತನಕಾರರು ಪ್ರಸ್ತಾಪಿಸಿರುವ ಸಂಪ್ರದಾಯಗಳು ಒಂದು ವರ್ಗವನ್ನು ಮಾತ್ರ ಕುರಿತಾದದ್ದು ಎನ್ನುವುದನ್ನು ಮರೆಯುವಂತಿಲ್ಲ. ಇದು ಸಂಪ್ರದಾಯದ ಹಾಡುಗಳ ಮಿತಿಯೂ ಹೌದು.

'ಕೊಯ್ಲುಶಾಸ್ತ್ರ'ವು ಮಗು ಜನನವಾದ ಹನ್ನೊಂದನೆ ದಿವಸ ಮಾಡುವ ಸಂಪ್ರದಾಯ. ಕೊಯ್ಲು ಎಂದರೆ ಕೊಯ್ಯುವಿಕೆ, ಕಟಾವು ಎನ್ನುವ ಅರ್ಥ ಬರುತ್ತದೆ. ಇದು ಪುರುಡು ಕಳೆದುಕೊಳ್ಳುವ ಸಂಪ್ರದಾಯವಾದ್ದರಿಂದ ಪುರುಡಿನಿಂದ ಹೊರಬರುವುದು ಎನ್ನುವ ಅರ್ಥದಲ್ಲಿ ಕೊಯ್ಲು ಪದವನ್ನು ಬಳಸಿರಬೇಕು. ಮನೆಯ ಅಂಗಳವನ್ನು ಸಾರಿಸಿ ಮಣೆ ಹಾಕಿ, ಮಣೆಯ ಐದು ಕಡೆ ಎಕ್ಕ, ಮಾವು, ಬೇವನ್ನು ಇಟ್ಟು ಶುಂಠಿ ಪುಡಿ ಉಂಡೆ, ಕ್ಯಾಸಕ್ಕಿ, ಕೊಬ್ಬರಿ, ಕಡಲೆಕಾಳು, ಎಲೆ ಅಡಿಕೆಗಳನ್ನು ಇಟ್ಟು ಬಾಣಂತಿಯ ಜೊತೆಗೆ ಕೊಯ್ಲು ಮುತ್ತೈದೆಯನ್ನು (ಗುಂಡಪ್ಪನ ತಾಯಿ) ಕೂರಿಸಿ ಶಾಸ್ತ್ರ ಮಾಡುವರು. ಓಕುಳಿಯಲ್ಲಿ ಬೇವಿನ ಸೊಪ್ಪನ್ನು ಅದ್ದಿ ಪ್ರೋಕ್ಷಿಸುತ್ತಾರೆ. ಹಾಲು ಮೆಣಸು ಅರೆದಿರುವ ಮಿಶ್ರಣವನ್ನು ಬಾಣಂತಿಯ ತಲೆಗೆ ಹಚ್ಚಿ ಸ್ನಾನ ಮಾಡಿಸಿ ಪುರುಡು ನಿವಾರಿಸಿಕೊಳ್ಳುತ್ತಾರೆ. ಇಲ್ಲಿ

ಬಳಸಿರುವ ವಸ್ತುಗಳೆಲ್ಲ ನಂಜು ನಿವಾರಕವಾಗಿ ಕೆಲಸ ಮಾಡುತ್ತವೆ. ಅದೇ ದಿನ ಸಾಯಂಕಾಲ ಮಗುವನ್ನು ತೊಟ್ಟಿಲಿಗೆ ಹಾಕಿ ಗುಂಡಪ್ಪನ ಜೊತೆಗೆ ಆರತಿ ಮಾಡುತ್ತಾರೆ. ಕಲ್ಲು ಗುಂಡಿನಂತೆ ಬದುಕಬೇಕೆಂಬ ಆಶಯದ ಜೊತೆಗೆ ಮಗುವಿಗೆ ದೃಷ್ಟಿ ತಾಕಬಾರದೆಂಬ ಉದ್ದೇಶವಿದು.

'ನಾಮಕರಣ'ದಲ್ಲಿ ಮಗುವಿಗೆ ಹೆಸರಿಡುವಾಗ ಮಾಸನಾಮ, ನಕ್ಷತ್ರನಾಮ, ರೂಢನಾಮಗಳನ್ನು ಲೆಕ್ಕಕ್ಕೆ ತೆಗೆದುಕೊಳ್ಳುತ್ತಾರೆ. ಕಂಚಿನ ತಟ್ಟೆಯಲ್ಲಿ ಅಕ್ಕಿಯನ್ನು ಹರಡಿ ಅದರ ಮೇಲೆ ಮೊದಲಿಗೆ ಶ್ರೀಕಾರ ಬರೆಸಿ ಪಂಚಾಗದ ಪ್ರಕಾರ ಮಾಸ ನಾಮ, ನಕ್ಷತ್ರದಂತೆ ನಕ್ಷತ್ರ ನಾಮ, ತಂದೆ ತಾಯಿಯ ಇಚ್ಛೆಯಂತೆ ವ್ಯವಹಾರಿಕ ನಾಮವನ್ನು ಇಡುತ್ತಾರೆ.

'ಕರ್ಣಭೇದ'ವು ಒಂದು ಸಂಪ್ರದಾಯ. ಮಗುವಿಗೆ ಕಿವಿ ಚುಚ್ಚುವ ಶಾಸ್ತ್ರ. ಹಿಂದೆ ಲಿಂಗಬೇಧವಿಲ್ಲದೆ ಮಕ್ಕಳಿಗೆ ಕಿವಿ ಚುಚ್ಚುತ್ತಿದ್ದರು. ಈಗ ಹೆಣ್ಣುಮಕ್ಕಳಿಗೆ ಮಾತ್ರ ಕಿವಿ ಚುಚ್ಚುವ ಸಂಪ್ರದಾಯ ಉಳಿದುಕೊಂಡು ಬಂದಿದೆ. ಕಿವಿ ಚುಚ್ಚುವುದರಿಂದ ದೇಹದಲ್ಲಿನ ಹೆಚ್ಚುವರಿ ವಿದ್ಯುತ್ ವಿಸರ್ಜನೆಯಾಗಲು ಸಹಕಾರಿ. ದೇಹದ ಉಷ್ಣದ ಸಮತೋಲನವನ್ನು ಕಾಯ್ದುಕೊಳ್ಳಲು ಸಾಧ್ಯವಾಗುತ್ತದೆ. ಉಷ್ಣದ ಉತ್ಪಾದನೆ ಮತ್ತು ವಿಸರ್ಜನೆ ದೇಹದ ನಿಯಮ. ಜೀವಕೋಶಗಳು ಸರಿಯಾದ ಕೆಲಸ ನಿರ್ವಹಿಸಬೇಕಾದಲ್ಲಿ ಈ ಸಮತೋಲನದ ಅವಶ್ಯಕತೆಯಿದೆ.

'ಅನ್ನಪ್ರಾಶನ' ಎಂದರೆ ಎಳೆಯ ಮಗುವಿಗೆ ಮೊದಲನೆಯ ಸಲ ಅನ್ನ ತಿನ್ನಿಸುವುದು. ಮಗು ಸುಲಭವಾಗಿ ಅನ್ನ ತಿನ್ನುವುದನ್ನು ರೂಢಿಸಿಕೊಳ್ಳಬೇಕೆಂದು ಈ ಸಂಪ್ರದಾಯವನ್ನು ಮಾಡಿದ್ದಾರೆ. ಐದು ಬಗೆಯ ಪಾಯಸ, ಹಾಗು ಜೇನುತುಪ್ಪ, ಮೊಸರು ಬೆರೆಸಿದ ಅನ್ನವನ್ನು ಚಿನ್ನದುಂಗುರದಲ್ಲಿ ಅದ್ದಿ ಮಗುವಿನ ಸೋದರಮಾವ ತಿನ್ನಿಸುತ್ತಾನೆ. ಸಿಹಿಯ ಆಕರ್ಷಣೆಯಿಂದ ಮಗು ತಿನ್ನುವುದನ್ನು ರೂಢಿಸಿಕೊಳ್ಳುತ್ತದೆ.

'ಚೂಡಾಕರ್ಮ'– ಗಂಡುಮಕ್ಕಳಿಗೆ ಎರಡು ವರ್ಷವಾದ ಮೇಲೆ ಮೂರನೆಯ ವರ್ಷ ತುಂಬುವುದರೊಳಗೆ ತಲೆಯ ಕೂದಲು ತೆಗೆಯುವ ಶಾಸ್ತ್ರವನ್ನು ಮಾಡುವುದೇ ಚೂಡಾ ಕರ್ಮ ಎನಿಸುತ್ತದೆ. ಕ್ಷೌರಿಕನು ಈ ಕೆಲಸ ಮಾಡುತ್ತಾನೆ. ಅವನಿಗೆ ಉಡುಗೊರೆ ಕೊಟ್ಟು ಗೌರವಿಸಲಾಗುತ್ತದೆ.

'ಅಕ್ಷರಾಭ್ಯಾಸ'–ನಿಗದಿತ ಮುಹೂರ್ತದಲ್ಲಿ ತಂದೆ ತಾಯಿಗಳ ಜೊತೆಯಲ್ಲಿಯೇ ಹಸೆಯ ಮೇಲೆ ಮಗುವನ್ನು ಕೂರಿಸಿ ಅಕ್ಷರಾಭ್ಯಾಸ ಮಾಡಿಸುತ್ತಾರೆ. ಸ್ಲೇಟು ಬಳಪಕ್ಕೆ ಪೂಜೆ ಮಾಡಿಸಿ ತಂದೆಯು ಮಗುವನ್ನು ತೊಡೆಯ ಮೇಲೆ ಕೂರಿಸಿಕೊಂಡು ಮಗುವಿನ ಕೈಯಲ್ಲಿ ಬಳಪ ಹಿಡಿಸಿ ಸ್ಲೇಟಿನ ಮೇಲೆ ಓಂಕಾರ ಬರೆಸುತ್ತಾನೆ.

'ಋತುಮತಿಗೆ ಆರತಿ' (ಒಸಗೆ) – ಹೆಣ್ಣುಮಕ್ಕಳು ಬಾಲ್ಯಾವಸ್ಥೆಯನ್ನು ಕಳೆದು ಯೌವನಕ್ಕೆ ಕಾಲಿಡುವುದನ್ನು ಋತುಮತಿಯಾದಳು/ದೊಡ್ಡವಳಾದಳು ಎನ್ನುತ್ತಾರೆ. ಹುಡುಗಿಯು ಮದುವೆಗೆ ಸಿದ್ಧಳಾದಳೆಂದು ಸಮಾಜಕ್ಕೆ ಗೊತ್ತುಪಡಿಸುವ ಕಾರ್ಯಕ್ರಮವಿದು. 'ದಡಮ' ಹಾಸಿ ಐದು ಜನ

ಮುತ್ತೈದೆಯರಿಗೆ ಅರಿಶಿಣೆಣ್ಣೆ ಕೊಟ್ಟು ಊಟಕ್ಕೆ ಕರೆದು ಸತ್ಕರಿಸಬೇಕು. ಸಂಜೆ ಹುಡುಗಿಗೆ ಅಲಂಕಾರ ಮಾಡಿ ಆರತಿ ಮಾಡಬೇಕು.

ವಿವಾಹವು ಸ್ತ್ರೀ ಪುರುಷರನ್ನು ಒಂದಾಗಿ ಮಾಡುವ ಯಾವಜ್ಜೀವ ಅನುಬಂಧ. ಸ್ತ್ರೀಯರ ಬದುಕಿನಲ್ಲಿ ಇದು ಪ್ರಧಾನ ಘಟ್ಟ. ವಿವಾಹವು ವಾನಪ್ರಸ್ತ, ಸನ್ಯಾಸಾಶ್ರಮಕ್ಕೆ ತಳಹದಿ. ಯಜ್ಞ ಯಾಗಾದಿಗಳ ಆಚರಣೆಯ ಕೇಂದ್ರ. ವಂಶವನ್ನು ಬೆಳೆಸಲು ಉದ್ದೇಶಪೂರ್ವಕವಾಗಿ ಸ್ಥಾಪಿಸಿಕೊಂಡ ಒಂದು ವ್ಯವಸ್ಥೆ. ಒಂದು ಒಪ್ಪಂದ. ವಂಶೋದ್ಧಾರ, ಮೋಕ್ಷ ಸಾಧನ, ಕಾಮಗಳ ಈಡೇರಿಕೆಗಾಗಿ ಇದೊಂದು ಸಾಧನ. ಅದಕ್ಕಾಗಿಯೇ ಮದುವೆಯಲ್ಲಿ ಧರ್ಮೇಚ, ಅರ್ಥೇಚ, ಕಾಮೇಚ ನಾತಿ ಚರಾಮಿ ಎಂದು ಹೇಳುತ್ತಾ ವರನು ಅಗ್ನಿಸಾಕ್ಷಿಯಾಗಿ ವಧುವಿನ ಕೈಹಿಡಿದು ಸಪ್ತಪದಿ ತುಳಿಯುತ್ತಾನೆ.

ಸ್ತ್ರೀಪುರುಷರು ಧರ್ಮವನ್ನು ಅತಿಕ್ರಮಿಸದೆ ಗಂಡ ಹೆಂಡಿರಾಗಿ ಬಾಳಲು ಸಮಾಜವು ಕೊಡುವ ಒಪ್ಪಿಗೆಯನ್ನೇ ಮದುವೆ ಎನ್ನುವರು. ವೈದಿಕ ಧರ್ಮದಲ್ಲಿ ವಿವಾಹವನ್ನು ಅತಿ ಪವಿತ್ರವಾದ ಸಂಸ್ಕಾರವೆಂದು ಭಾವಿಸಲಾಗಿದೆ. ವಿವಾಹ ಸಂಸ್ಕಾರದಲ್ಲಿ ವರನು ತನ್ನ ವಧುವನ್ನು ತಂದೆ ತಾಯಿ ಬಂಧು ಬಳಗ ಆಪ್ತರು ಅಷ್ಟದಿಕ್ಪಾಲಕರು ಪಂಚಭೂತಗಳ ಸಾಕ್ಷಿಯಾಗಿ ಮದುವೆಯಾಗುತ್ತಾನೆ. ಹೆಣ್ಣಿನ ತಂದೆಯು ಗಂಡಿನ ಮನೆಗೆ ಬಂದು 'ಹೆಣ್ಣು ನೋಡುವ ಶಾಸ್ತ್ರ'ದಿಂದ ಮದುವೆಯ ಕಾರ್ಯಕ್ರಮ ಆರಂಭವಾಗುತ್ತದೆ. ಹೆಣ್ಣು ಒಪ್ಪಿಗೆಯಾದ ಮೇಲೆ 'ನಿಶ್ಚಿತಾರ್ಥ' (ತಾಂಬೂಲ ಶಾಸ್ತ್ರ) ಮಾಡುತ್ತಾರೆ. ಆ ದಿನ ಗಂಡಿನ ಕಡೆಯವರಿಗೆ ಗೌರವದಿಂದ ಬೆಲೆ ಬಾಳುವ ವಸ್ತುಗಳನ್ನು ಉಡುಗೊರೆಯಾಗಿ ನೀಡಲಾಗುತ್ತದೆ. ಇದು ಇಂದು ವರದಕ್ಷಿಣೆಯಾಗಿ ಬದಲಾಗಿದೆ. ಇಬ್ಬರ ಮನೆಯಲ್ಲೂ ಮದುವೆಯ ಸಡಗರಗಳು ಪ್ರಾರಂಭವಾಗುತ್ತವೆ. ಹಿಂದೆ ಒಂದು ವಾರದವರೆಗೂ ಮದುವೆಯು ನಡೆಯುತ್ತಿತ್ತು. ಮದುವೆಯಲ್ಲಿ ಹೆಣ್ಣು ಮಕ್ಕಳು ಹೆಚ್ಚು ಜವಾಬ್ದಾರಿಯನ್ನು ಹೊತ್ತುಕೊಳ್ಳುತ್ತಿದ್ದರು. ಈ ಎಲ್ಲ ಕೆಲಸಗಳು ಸಾಮುದಾಯಿಕವಾಗಿ ಹಾಡು ಹೇಳುತ್ತಲೇ ಮಾಡುತ್ತಿದ್ದುದರಿಂದ ಸಂಪ್ರದಾಯದ ಹಾಡುಗಳು ಹುಟ್ಟಲು ಕಾರಣವಾಯಿತು. ಮದುವೆಯಲ್ಲಿ ಜರುಗುವ ಪ್ರತಿ ಹಂತಕ್ಕೂ ಸಂಪ್ರದಾಯದ ಹಾಡುಗಳಿವೆ.

'ದೇವತಾ ಸಮಾರಾಧನೆ'ಯಿಂದ ಮದುವೆಯ ಕಾರ್ಯಗಳು ಪ್ರಾರಂಭವಾಗುತ್ತವೆ. ಹೆಣ್ಣನ್ನು ವಧುವನ್ನಾಗಿ, ಗಂಡನ್ನು ವರನನ್ನಾಗಿ ಮಾಡುತ್ತಾರೆ. ಮುತ್ತೈದೆಯರು ವಧು ವರರ (ಅವರವರ ಮನೆಗಳಲ್ಲಿ) ತಲೆಗೆ ಎಣ್ಣೆ ಹಚ್ಚುವುದರ ಮೂಲಕ 'ಎಣ್ಣೆ ಶಾಸ್ತ್ರ' ಮಾಡುತ್ತಾರೆ. ಈ ಸಂದರ್ಭದಲ್ಲಿ ಹಾಡುವ ಹಾಡುಗಳೇ 'ಎಣ್ಣೆ ಶಾಸ್ತ್ರದ ಹಾಡುಗಳು'. ಕಾರ್ಯದಲ್ಲಿ ವಿಘ್ನವು ಬಾರದಂತೆ ಗಣಪತಿ ಪೂಜೆ ಮಾಡುತ್ತಾರೆ. ಅರಿಶಿಣ ಕುಟ್ಟುವ ಸಂಪ್ರದಾಯವಿರುತ್ತದೆ. ಆಗ ಹಾಡುವ ಹಾಡೆ 'ಅರಿಶಿನ ಕುಟ್ಟುವ ಹಾಡುಗಳು'.

ಮದುವೆಯ ಹಿಂದಿನ ದಿನ ವರನ ಕಡೆಯವರು ವಧುವಿನ ಮನೆಗೆ ಬರುತ್ತಾರೆ. ಬಂದವರನ್ನು ಹೆಣ್ಣಿನ ಕಡೆಯವರು ಹೂವಿನ ಹಾರ ಹಾಕಿ, ಕಳಶ-ಕನ್ನಡಿ ಹಿಡಿದು ಮಂಗಳವಾದ್ಯಗಳೊಂದಿಗೆ ಗೌರವದಿಂದ ಬರಮಾಡಿಕೊಳ್ಳುತ್ತಾರೆ. ಇದು 'ಎದುರುಗೊಳ್ಳುವ ಶಾಸ್ತ್ರ'. ಈ ಸಂದರ್ಭದಲ್ಲಿ ಹಾಡುವ ಹಾಡುಗಳೇ 'ಬೀಗರ ಹಾಡುಗಳು'.

ಬೀಗರಿಗೆ ಉಪಚಾರವಾದ ನಂತರ ಹೆಣ್ಣಿನ ಕಡೆಯವರು ಬಂದು ವರನನ್ನು 'ವರಪೂಜೆ'ಗೆ ಕರೆಯುತ್ತಾರೆ. ಹಸೆಗೆ ಬಂದ ಮೇಲೆ ವಿಘ್ನೇಶ್ವರನ ಪೂಜೆಯ ನಂತರ ಸಂಕಲ್ಪಗಳನ್ನು ಮಾಡಿ ವಧು ವರರಿಗೆ ಹೊಸವಸ್ತ್ರಗಳನ್ನು ನೀಡುತ್ತಾರೆ. ಹೊಸ ಬಟ್ಟೆ ಧರಿಸಿ ಬಂದ ವಧುವಿಗೆ ಮುತ್ತೈದೆಯರು ಮಡಿಲು ತುಂಬುತ್ತಾರೆ, ಆರತಿ ಮಾಡುತ್ತಾರೆ. ಈ ಸಂದರ್ಭದಲ್ಲಿ ಹಾಡುವ ಹಾಡುಗಳೇ 'ವರಪೂಜೆ ಹಾಡು' 'ಮಡಿಲು ತುಂಬುವ ಹಾಡು' 'ಆರತಿಯ ಹಾಡು'.

ವಿವಾಹದ ದಿನ ವರನು ಕಾಶಿಯಾತ್ರೆಗೆ ಹೋದ ಸಂದರ್ಭದಲ್ಲಿ ವಧುವು ಗೌರಿಪೂಜೆ ಮಾಡುತ್ತಾಳೆ. ಆಗ ಕಾಶಿಯಾತ್ರೆ ಮತ್ತು ಗೌರಿಪೂಜೆಯ ಹಾಡುಗಳನ್ನು ಹಾಡಲಾಗುತ್ತದೆ. ಕಾಶಿಯಾತ್ರೆ ಸಂದರ್ಭದಲ್ಲಿ ವಧುವಿನ ತಂದೆಗೆ ವರನು ಅವರ ಮಗಳನ್ನು ಮದುವೆಯಾಗುವುದಾಗಿ ಮಾತು ಕೊಡುತ್ತಾನೆ. ಆಗ ಎರಡನೆ ಬಾರಿ ವರನಿಗೆ ಯಜ್ಞೋಪವೀತ ಧಾರಣೆಯಾಗುತ್ತದೆ. 'ಕಾಶಿಯಾತ್ರೆ'ಯ ಸಂದರ್ಭದಲ್ಲಿ ಪಾದರಕ್ಷೆಗಳನ್ನು, ಊರುಗೋಲನ್ನು, ಒಂದು ಗಂಟನ್ನು ವರನಿಗೆ ನೀಡಲಾಗುತ್ತದೆ. ಬದುಕಿನ ದಾರಿಯಲ್ಲಿ ಪ್ರಯಾಣಿಸುವಾಗ ಹೊರಬೇಕಾದ ಜವಾಬ್ದಾರಿ ಮತ್ತು ಬರುವ ಕಷ್ಟಗಳ ಸಂಕೇತವಾಗಿ ಗಂಟನ್ನು ನೀಡಲಾಗುತ್ತದೆ. ಅವನು ಸ್ವಾವಲಂಬಿಯಾಗಿ ಎಲ್ಲವನ್ನು ನಿಭಾಯಿಸಬೇಕೆಂಬ ತತ್ವವನ್ನು ಸಾರುತ್ತದೆ. ವಧುವನ್ನು ಸೋದರಮಾವ ಹಸೆಗೆ ಕರೆತರುತ್ತಾನೆ. ವಧು ವರರು ಪರಸ್ಪರ ನೋಡದಿರಲೆಂದು ಅಂತರ್ಪಟ ಹಿಡಿದಿರುತ್ತಾರೆ. ಅಂತರ್ಪಟ ಸರಿಯುವಾಗ ಜೀರಿಗೆ ಬೆಲ್ಲವನ್ನು ಪರಸ್ಪರರು ತಲೆಯ ಮೇಲೆ ಹಾಕಿಕೊಳ್ಳುತ್ತಾರೆ. ಇದನ್ನೇ 'ಜೀರಿಗೆ ಧಾರೆ' ಎನ್ನುವರು. ವಧುವರರನ್ನು ಎದುರು ಬದುರು ಕೂರಿಸುತ್ತಾರೆ. ಅವರನ್ನು ಲಕ್ಷ್ಮೀನಾರಾಯಣ ಸ್ವರೂಪರೆಂದೇ ಭಾವಿಸುತ್ತಾರೆ. ವರನ ಬೊಗಸೆ ಕೈಗಳಲ್ಲಿ ವಧುವಿನ ಬೊಗಸೆ ಇರಿಸುತ್ತಾರೆ. ತೆಂಗಿನಕಾಯೊಂದನ್ನು ಕೈಗಳಲ್ಲಿರಿಸಿ ವಧುವಿನ ತಂದೆತಾಯಿಗಳು ನೀರನ್ನು ಹಾಕಿ ಕನ್ಯಾದಾನ ಮಾಡಿಕೊಡುತ್ತಾರೆ. ವರನು ಧರ್ಮಾರ್ಥ ಕಾಮಗಳನ್ನು ಜೊತೆಯಲ್ಲಿ ಆಚರಿಸುತ್ತೇನೆ (ನಾತಿ ಚರಾಮಿ) ಎಂದು ಮೂರು ಸಾರಿ ಹೇಳುತ್ತಾನೆ. ನಂತರ 'ಅಕ್ಕಿಧಾರೆ'ಯಾಗುತ್ತದೆ. ನೆನೆಸಿದ ಅಕ್ಕಿಯನ್ನು ಪರಸ್ಪರ ವಧುವರರು ತಲೆಯ ಮೇಲೆ ಸುರಿದುಕೊಳ್ಳುತ್ತಾರೆ. ಈ ಸಂದರ್ಭದಲ್ಲಿ ಹೇಳುವ ಹಾಡುಗಳೇ 'ಧಾರೆಯ ಹಾಡುಗಳು'. ಧಾರೆಯ ನಂತರ ಹಾಲಿನಲ್ಲಿ ನೆನೆಸಿದ ಹಸಿ ದಾರವನ್ನು ಐದು ಜನ ದಂಪತಿಗಳು ಐದು ಎಳೆ ದಾರವಾಗಿ ಸುತ್ತಲೂ ಸುತ್ತುತ್ತಾರೆ. ಅದನ್ನು ಪರಸ್ಪರರಿಂದ ಮುಂಗೈಗೆ ಕಟ್ಟಿಸುತ್ತಾರೆ. ಇದನ್ನೇ 'ಕಂಕಣ ಧಾರಣ' ಎನ್ನುತ್ತಾರೆ. ನಂತರ 'ಮಾಂಗಲ್ಯಧಾರಣೆ'. ವರನು ವಧುವಿಗೆ ಮಾಂಗಲ್ಯ ಧಾರಣೆ ಮಾಡುತ್ತಾನೆ. ಮಾಂಗಲ್ಯವನ್ನು 'ತಾಳಿ', 'ತಾಳಿಬೊಟ್ಟು' ಎಂದೂ ಕರೆಯುತ್ತಾರೆ. ಹಿಂದೆ ತಾಳೆ ಎಲೆಯನ್ನು ಗುಂಡಗೆ ಸುತ್ತಿ ಅರಿಶಿನಹಚ್ಚಿ ದಾರದಲ್ಲಿ ಸುತ್ತಿ ಹೆಣ್ಣಿನ ಕೊರಳಿಗೆ ಕಟ್ಟಿ ಮೂರು

ಗಂಟು ಹಾಕುತ್ತಿದ್ದರು. ಆದ್ದರಿಂದಲೇ ಅದಕ್ಕೆ 'ತಾಳಿ' ಎಂಬ ಹೆಸರು ಬಂದಿದೆ. ಈ ಸಂದರ್ಭಗಳಲ್ಲೂ ಸಂಪ್ರದಾಯದ ಹಾಡುಗಳನ್ನು ಹಾಡುತ್ತಾರೆ. ಮುತ್ತೈದೆಯರು ಮಂಗಳ ಸೂತ್ರಕ್ಕೆ ಅರಿಶಿನ ಕುಂಕುಮ ಹಚ್ಚುತ್ತಾರೆ. ಆಗ ಹಾಡುವ ಹಾಡುಗಳೇ 'ಮಂಗಳ ಸೂತ್ರದ ಹಾಡುಗಳು'. ಮುಂದೆ ಅಗ್ನಿಹೋತ್ರಾದಿ ಕರ್ಮಗಳನ್ನು ವಧು ವರರಿಂದ ಮಾಡಿಸುತ್ತಾರೆ. ನಂತರ 'ಪಾಣಿಗ್ರಹಣ'. ಹೆಂಡತಿಯು ಕೊನೆಯವರೆಗೂ ನನ್ನ ಜೊತೆಯಲ್ಲಿರಲಿ ಎನ್ನುವ ಅರ್ಥದಲ್ಲಿ ಈ ಶಾಸ್ತ್ರ ನಡೆಯುತ್ತದೆ.

ಸೂರ್ಯ ವರುಣ ಅಗ್ನಿ ಪ್ರಜಾಪತಿ ದೇವತೆಗಳಿಗೆ ಲಾಜವನ್ನು ಆಹುತಿ ಕೊಡುವುದೇ 'ಲಾಜಾಹೋಮ'. ವಧು ವರರು ಮಂಗಳಕರವಾದ ಬದುಕನ್ನು ಆಶಿಸಿ ಲಾಜಾಹೋಮ ಮಾಡುತ್ತಾರೆ. ವಧುವಿನ ಸೋದರನಿಂದ ಲಾಜವನ್ನು ಸ್ವೀಕರಿಸಿ ತುಪ್ಪದೊಂದಿಗೆ ವರನು ಹೋಮಕ್ಕೆ ಅರ್ಪಿಸುತ್ತಾನೆ. ನಂತರ ಇಬ್ಬರೂ ಜೊತೆಯಾಗಿ ಏಳು ಹೆಜ್ಜೆಗಳನ್ನು ಇಡುವುದೇ 'ಸಪ್ತಪದಿ'. ಹಾಗೆ ಹೆಜ್ಜೆ ಇಡುವಾಗ ವರನು ವಧುವಿನ ಕಾಲನ್ನು ಸಾಣೆ ಕಲ್ಲಿನ ಮೇಲೆ ಇಡಿಸುತ್ತಾನೆ. ಕಷ್ಟಗಳಿಗೆ ಕಲ್ಲಾಗಬೇಕೆಂಬುದನ್ನು ಸಾಂಕೇತಿಕವಾಗಿ ಇದು ಸೂಚಿಸುತ್ತದೆ. ನಂತರ ಅರುಂಧತಿ ನಕ್ಷತ್ರದ ದರ್ಶನ ಮಾಡಿಸುತ್ತಾರೆ. ಒಳಬರುವ ವಧು ವರರನ್ನು ಬಾಗಿಲಲ್ಲೇ ತಡೆದು ನಿಲ್ಲಿಸಿ ಹೆಸರು ಹೇಳಿಸುತ್ತಾರೆ. ಸ್ತ್ರೀಯರು ಬಾಗಿಲು ತಡೆವ ಹಾಡುಗಳನ್ನು ಈ ಸಂದರ್ಭದಲ್ಲಿ ಹೇಳುತ್ತಾರೆ. ವಧು ವರರನ್ನು ವಿನೋದ ಪಡಿಸುವುದು, ಉಲ್ಲಾಸಗೊಳಿಸುವುದು ಇದರ ಉದ್ದೇಶವಾಗಿರುತ್ತದೆ. ನಂತರ ಮದುಮಕ್ಕಳಿಗೆ 'ಭೂಮದೂಟ'. ದೊಡ್ಡ ಬಾಳೆ ಎಲೆಯನ್ನು ಹಾಕಿ ಅದರ ಸುತ್ತ ರಂಗವಲ್ಲಿ ಹಾಕಿ, ಅದರ ಸುತ್ತ ದೀಪ ಹಚ್ಚಿಟ್ಟು ಭಕ್ಷ್ಯ ಭೋಜ್ಯಗಳನ್ನು ಸಮೃದ್ಧವಾಗಿ ಬಡಿಸುವುದೇ ಭೂಮ. ಈ ಸಂದರ್ಭದಲ್ಲಿ ಬಂಧು ಬಳಗದವರೂ ಒಟ್ಟಾಗಿ ಸೇರಿ ಹಾಡುವ ಹಾಡುಗಳೇ ಭೂಮದ ಹಾಡುಗಳು. ಊಟದ ಪ್ರಾರಂಭಕ್ಕೆ ಆಪೋಷಣೆ ತೆಗೆದುಕೊಳ್ಳಲು ತುಪ್ಪವನ್ನು ಹಾಕುವುದು ವಿಶೇಷ.

ಬೀಗರುಗಳು ಪರಸ್ಪರರು ಹಾಸ್ಯಕ್ಕೋಸ್ಕರ ಜರಿದು ಹಾಡುವ ಹಾಡುಗಳೇ 'ಜರಿಯುವ ಪದಗಳು'. ಇದನ್ನು ಸಾಮೂಹಿಕವಾಗಿ ಬೀಗರಿಬ್ಬರು ಪೈಪೋಟಿಯ ಮೇಲೆ ಹಾಡುತ್ತಾರೆ. ಮದುವೆಯ ನಾಲ್ಕನೆಯ ದಿನದ ಕಾರ್ಯಕ್ರಮವಾಗಿ ಮಧ್ಯಾಹ್ನದ ಊಟದ ನಂತರ 'ನಾಗೋಲಿ' (ನಾಕ+ಬಲಿ). ದೇವಾನುದೇವತೆಗಳಿಗೆ ಬಲಿಕೊಟ್ಟು ಅವರ ಆಶೀರ್ವಾದ ಪಡೆದುಕೊಳ್ಳುವುದು ಇದರ ಉದ್ದೇಶ. ಉಪ್ಪಾನೆ, ಅಕ್ಕಿ ಆನೆ, ಬೇಳೆ ಆನೆ ಬರೆಸಿ ವಧು ವರರನ್ನು ಪ್ರದಕ್ಷಿಣೆ ಹಾಕಿಸಿ, ಐದು ಜನ ಮುತ್ತೈದೆಯರು ಕಲಶ, ನಿಂಬೆಹಣ್ಣು (ಚಾಕುವಿನಿಂದ ಚುಚ್ಚಿಕೊಂಡು), ಅಕ್ಕಿನ ಹಿಟ್ಟಿನ ದೀಪ (೧೬) ಹಿಡಿದು ನಡೆಯುತ್ತಾರೆ ಇದೇ ಬಲಿ. ನಂತರ ಪಾತ್ರೆಯಲ್ಲಿ ನೀರು ಹಾಕಿ ಅದರೊಳಗೆ ಉಂಗುರ ಹಾಕಿ ವಧು ವರರಿಂದ ಹುಡುಕಿಸುತ್ತಾರೆ. ಯಾರು ಮೊದಲು ಹುಡುಕುತ್ತಾರೋ ಅವರು ಗೆದ್ದಂತೆ. ನಂತರ ವಧುವಿನ ತಮ್ಮ ತಾಂಬೂಲ ಮಡಿಚಿ ಕೊಡುತ್ತಾನೆ. ತೊಟ್ಟಿಲಲ್ಲೊಂದು ಬೊಂಬೆ ಹಾಕಿ ವಧು ವರರಿಂದ ತೂಗಿಸುತ್ತಾರೆ. ಈ ಸಂದರ್ಭಗಳಲ್ಲಿ ಹಾಡುವ ಹಾಡುಗಳೇ 'ನಾಗೋಲಿ ಹಾಡುಗಳು'. ವಧುವರರನ್ನು ಹಿರಿಯರು ಆಶೀರ್ವದಿಸುತ್ತಾರೆ. ಈ ಸಂದರ್ಭದಲ್ಲಿ

ಹಾಡುವ ಹಾಡುಗಳೇ 'ಆಶೀರ್ವಾದದ ಹಾಡುಗಳು'. ಹಸೆ ಮೇಲೆ ಕೂತ ವಧು ವರರಿಗೆ ಹೂ ಚೆಂಡಾಟ ಆಡಿಸುತ್ತಾರೆ. ಈ ಸಂದರ್ಭದಲ್ಲಿ ಹಾಡುವ ಹಾಡುಗಳೇ 'ಉರುಟಣೆಯ ಹಾಡುಗಳು'. ವಧುವನ್ನು ವರನ ಮನೆಗೆ ಕಳುಹಿಸುವ ಮುಂಚೆ ಮಂಗಳದ ಸಾಮಗ್ರಿಗಳಿಂದ ಮಡಿಲು ತುಂಬುತ್ತಾರೆ. ಇಂತಹ ಸಂದರ್ಭದಲ್ಲಿ ಹೇಳುವ ಹಾಡುಗಳೇ 'ಉಡಿ ತುಂಬುವ ಹಾಡು'. ಉಡಿ ತುಂಬಿದ ವಧುವನ್ನು ವರನ ಕಡೆಯವರಿಗೆ ಒಪ್ಪಿಸುತ್ತಾರೆ. ದುಃಖ ಮತ್ತು ಸಂಭ್ರಮ ತುಂಬಿದ ಈ ಸಂದರ್ಭದಲ್ಲಿ ಹೇಳುವ ಹಾಡುಗಳೇ 'ಹೆಣ್ಣೊಪ್ಪಿಸುವ ಹಾಡುಗಳು'. ಗಂಡನ ಮನೆಯಲ್ಲಿ ಹೇಗಿರಬೇಕೆಂಬ ಬುದ್ಧಿವಾದವನ್ನು ಹೇಳಲು ಈ ಸಂದರ್ಭವನ್ನು ಬಳಸಿಕೊಳ್ಳುತ್ತಾರೆ. ಪ್ರಸ್ತದ ಸಮಯದಲ್ಲಿ ಹಾಡುವ ಹಾಡುಗಳು 'ಶೋಭನದ ಹಾಡುಗಳು'. ಗರ್ಭಿಣಿಗೆ ಆರತಿ ಮಾಡುವಾಗ ಹಾಡುವ ಹಾಡುಗಳು 'ಸೀಮಂತದ ಹಾಡುಗಳು'. ಗರ್ಭವತಿಯಾದ ಹೆಂಡತಿಯ ಬಯಕೆಗಳನ್ನು ಗಂಡನು ತೀರಿಸುತ್ತಾನೆ. ಇದನ್ನೇ ವಸ್ತುವನ್ನಾಗಿಸಿಕೊಂಡು 'ಬಯಕೆಯ ಹಾಡುಗಳು' ಹುಟ್ಟಿಕೊಂಡಿವೆ. ಈ ಹಾಡುಗಳು ಅವರ ಉತ್ಸಾಹ ಮತ್ತು ಬದುಕಿನ ಉದಾತ್ತ ಕಲ್ಪನೆಗೆ ಹಿಡಿದ ಕನ್ನಡಿಯಾಗಿದೆ.

**ಮಹಿಳಾಕೀರ್ತನಕಾರರ ಕೃತಿಗಳಲ್ಲಿ ಪ್ರಸ್ತಾಪಿಸಲಾಗಿರುವ ಸಂಪ್ರದಾಯದ ಹಾಡುಗಳು**

**ಪೂಜೆಯ ಹಾಡುಗಳು**

ಮಹಿಳಾ ಕೀರ್ತನಕಾರರ ಹಾಡುಗಳಲ್ಲಿ ಪೂಜೆಯ ಹಾಡುಗಳು ಕಂಡುಬರುತ್ತವೆ. ಪ್ರಾತಃಕಾಲದಲ್ಲಿ ಎದ್ದು ಸ್ನಾನ ಮಾಡಿ ಮಡಿವಸ್ತ್ರ ಧರಿಸಿ, ಪೂಜಾ ಸ್ಥಳ ಶುದ್ಧಿಗೊಳಿಸಿ, ರಂಗವಲ್ಲಿ ಹಾಕಿ, ನಂತರವೇ ಪರಮಾತ್ಮನನ್ನು ಪೂಜಿಸಬೇಕು. ಅವನನ್ನು ಮೂರ್ತಿವಂತನಾಗಿ ಭಾವಿಸಿ, ಶೋಡಷೋಪಚಾರ ಮಾಡಿ ಪೂಜಿಸುವುದರಿಂದ ಸುಖ, ನೆಮ್ಮದಿ ಪ್ರಾಪ್ತವಾಗುವುದೆಂದು ನಂಬಿಕೆ. ಪರಮಾತ್ಮನ ಅನುಗ್ರಹ ಕೋರಿ ಮಾಡುವ ಕ್ರಿಯಾಕಲಾಪಗಳೆ ಪೂಜೆ. ಈ ಸಮಯದಲ್ಲಿ ಹೆಂಗಸರು ಹೇಳುವ ಹಾಡುಗಳೇ 'ಪೂಜೆಯ ಹಾಡುಗಳು'. ಸ್ತ್ರೀಯರಿಗೆ ಮಂತ್ರೋಚ್ಚಾರಣೆಯ ಅಧಿಕಾರ, ಅವಕಾಶಗಳು ಇಲ್ಲದ ಕಾರಣ ಈ ಹಾಡುಗಳು ಹುಟ್ಟಿಕೊಂಡಿವೆ. ಪೌರಾಣಿಕ ಹಿನ್ನೆಲೆಯು ಇದರ ವಸ್ತುವಾಗಿರುತ್ತದೆ.

**ಪುರುಡು ನಿವಾರಣೆ ಹಾಡುಗಳು**: (ಪುಟ–೨೪೮ ಹೆ.ಗಿ)

ಹತ್ತನೆಯ ದಿನ ಕುಯಿಲು ಮಿಂದು ಜಾನಕಿ
ಒಪ್ಪುವ ಬೇರು ಕುಡುಗೋಲು
ಮಿತ್ರರೆಲ್ಲರು ಕುಯಿಲುಕ್ಕು ನಿಂದರು
ಅರ್ತಿಯೀರ್ಲ್ಲು ಮಾಡೋರು

**ಜಾತಕರ್ಮ**: ನಾಮಕರಣ, ಮುಂಜಿ, ಅನ್ನಪ್ರಾಶನ, ಚೌಲಕರ್ಮ(ನುಡಿ –೭–೮, ಉದ್ಧಾಳಿಕನ ಕಥೆಯಲ್ಲಿ. ಹೆ.ಗಿ)

ಸುತ ಜನಿಸಿದ ಉದ್ಧಾಳಿಕ ಅತಿ ಹರುಷದಿ

ಜಾತಕರ್ಮ, ನಾಮಕರಣ ಸುತಗೆ
ಅನ್ನಪ್ರಾಶನ ಚೌಲ ಕರ್ಮಂಗಳ ಮಾಡಿ
ಚೆಣ್ಣಗೆ ಮೌಂಜಿಯ ಕಟ್ಟಿ

| | |
|---|---|
| **ಅಕ್ಷರಾಭ್ಯಾಸ:** | ಚಂದ್ರಾವತಿಗೆ ಅಕ್ಷರಾಭ್ಯಾಸವ |
| (ನುಡಿ ೨೨) | ಮಾಡಿಸಿ ಕುಮಾರಿಗೆ ನರ್ತನ ಕೀರ್ತನ ಕಲಿಸಿ |
| ನುಡಿ (೨೭೮) | ಅಕ್ಷರಾಭ್ಯಾಸವ ಮಾಡಬೇಕೆಂದು |
| | ಗಂಧಾಕ್ಷತೆ ಫಲ ಪುಷ್ಪದಿಂದ |
| | ಇಕ್ಷುದಂಡವು ಕದಳಿ ಭಕ್ಷ್ಯ ಮೋದಕ ಚಿಗುಳಿ ಸಾಕ್ಷಾತ್ |
| | ಗಣಪನೊಂದಿಸಿದ |
| (ನುಡಿ ೨೭೯) | ಸರಸ್ವತಿ ಗಣಪಗೆರಗಿ ತಾನು(ತಂಡುಲ)ಹರವಿದ |
| | ಹಲಗೆಯ ಮೇಲೆ |
| | ಓನ್ನಮೋ ನಾರಾಯಣೆನುತಲೆ ಬರೆದನು |
| | ತನಯನ ಕೈಲಿ ಓದಿಸಿದ |
| **ಬಾಗಿನ ಸಂಪ್ರದಾಯ:** | ಚಂದ್ರಾವತಿ ಜಲಕ್ರೀಡೆ ನಂತರ–ಮುತ್ತೈದೆಯರಿಗೆ ಮರದ |
| | ಬಾಗಿನ ಕೊಟ್ಟು |
| (ನುಡಿ ೯೮) | ಮೃಷ್ಟಾನ್ನ ಉಣಿಸುವರು |
| **ಬಸುರಿ:** | ತಿಂಗಳು ತುಂಬಿತು ಕಂಗಳು ಬಳೆಬಿಟ್ಟು ಸರ್ವಾಂಗ ಬಡವಾಗಿ |
| | ತೋರಿದವು |
| (ನುಡಿ–೧೦೩) | ಹೊಂಬಣ್ಣವೇರಿತು ಹೊಳೆವ ದೇವಾಂಗವು ತುಂಬಿದ ಕೊಳ |
| | ಸೂಸುವಂತೆ |
| **ಬಯಕೆ:** | ನಳಿನದಳಾಕ್ಷಿಗೆ ತಿಳಿದವು ಬಯಕೆಯು ಎಳೆಹುಳಿ |
| (ನುಡಿ ೧೧೦) | ಮಧುರವಾಗಿದ್ದ ಕಳಿತ ಖರ್ಜೂರ ಕಿತ್ತಳೆ ಜಂಬುನೇರಳೆ |
| | ಫಲಗಳಪೇಕ್ಷೆ ಮಾಡುವಳು |
| **ಕಾಲುಂಗುರ ಇಡುವುದು** | ಮಂಗಳ ಜವಳಿಯ ಉಡಿಸಿ ಕಾಲಂದಿಗೆ |
| ಆರತಿ ಎತ್ತುವುದು | ಉಂಗುರ ಸಲಿಗೆಯನಿಟ್ಟು |
| (ನುಡಿ ೪೧೮) | ರಂಭೆಯರೆಲ್ಲರು ಹರಸಿ ಅಕ್ಷಯತೆಯ ಹಾಕಿ |
| | ಮಂಗಳಾರತಿ ಎತ್ತಿದರು |
| **ವರಪೂಜೆ** | ದಧಿ ಮಧು ಆಜ್ಯ ಗಂಧಾಕ್ಷತೆ ಪುಷ್ಪವು |
| **ವರದಕ್ಷಿಣೆ** | ಅಳಿಯನಿಗೆ ಉಡುಗೊರೆಗಳನು |

| | |
|---|---|
| **ಕನ್ಯಾದಾನ** | ಹರಿವಾಣದೊಳಗೆ ತಂದಿಳುಹಲು ರಾಯನು ಚರಣವ |
| (ನುಡಿ ೪೨೦) | ತೊಳೆದು ಭಕ್ತಿಯಲಿ |
| ನು-೪೨೧ | ಚರಣವ ತೊಳೆದು ಶ್ರೀಗಂಧವ ಲೇಪಿಸಿ |
| | ಉಡುಕೊಟ್ಟ ಪಟ್ಟಾವಳಿಗಳ |
| | ಮರುಗ ಮಲ್ಲಿಗೆ ಜಾಜಿ ಸುರಗಿ ಸೇವಂತಿಗೆ |
| | ಸರವ ಹಾಕಿದ ಕೊರಳೊಳಗೆ |
| ನು-೪೨೨ | ಅಕ್ಷತೆ ಗಂಧವ ಇಡುವರು ನೊಸಲಿಗೆ |
| | ಒಪ್ಪುವ ಅಗರು ಚಂದನವು |
| | ಅರ್ತಿಯಿಂದಲಿ ಪೂಜಿಸಿ ತನ್ನ ಅಳಿಯನಿಗೆ |
| | ಮಧುಪರ್ಕದ ಕ್ರಮವ ನಡೆಸಿದನು |
| ನು.೪೨೩ | ಕಾಮಧೇನು ಭೂಮಿದಾನ ಸಾಲಿಗ್ರಾಮ |
| | ಆ ಮಹಾಕನ್ಯಾದಾನಗಳು |
| | ಕಾಮಿನಿ ಕನ್ಯಾದಾನದ ಸಮಯದಿ ಕೊಟ್ಟ |
| | ಸ್ವಾಮಿಗರ್ಪಿತವಾಗಲೆಂದು |
| ನು-೪೨೪ | ಪನ್ನಗಧರಗೆ ಅರ್ಪಿತವಾಗಲೆನುತಲೆ |
| | ಕನ್ಯಾದಾನದ ಸಮಯದಲಿ |
| | ಹೊನ್ನುಂಗುರ ಚೌಕುಳಿ ಕಿವಿಗಿಟ್ಟರು ಹಿಡಿ ಹೊನ್ನ |
| | ಕಟ್ಟಿದರು ಸೆರಗಿನಲಿ |
| **ಧಾರೆ** | ಹಚ್ಚಡದ ತೆರೆಯ ಹಿಡಿದರು |
| **ಅಂತರ್ಪಟ ಹಿಡಿಯುವುದು** | ದಂಪತಿಗಳ ಇಕ್ಕೆಲದಲಿ ನಿಲ್ಲಿರಿಸಿ |
| ನು-೪೨೫ | ಉಚ್ಚರಿಸಿದರು ಗೋತ್ರ ಪ್ರವರಂಗಳ |
| | ಎತ್ತಿ ಧಾರೆಗಳನೆರೆದರು |
| ನು-೪೨೬ | ಕನ್ಯಾಕ್ಷತೆ ಮುಂಚೆ ಬಿದ್ದವೆ ಮುನಿಪನ |
| | ಉನ್ನಂತ ಉತ್ತಮಾಂಗದಲಿ |
| | ಸೊನ್ನೆಧಾಮನ ಗಿಡಿಬಿಡಿ ವಾದ್ಯವೆಸೆದವು |

ಚಿನ್ನಗಾಳೆಗಳು ಚೀರಿದವು – ಅಂತರ್ಪಟ ಸರಿದ ತಕ್ಷಣ ಯಾರು ಮೊದಲು ತಲೆಯ ಮೇಲೆ ಅಕ್ಷತೆ ಹಾಕಿಸಿಕೊಳ್ಳುತ್ತಾರೊ ಅವರು ಹೇಳಿದಂತೆ ಕೇಳಿಕೊಂಡಿರುತ್ತಾರೆಂಬ ನಂಬಿಕೆಯಿದೆ. ಇದಕ್ಕಾಗಿ ವಧು ವರರ ಕಡೆಯವರಿಬ್ಬರೂ ಮೊದಲು ಅಕ್ಷತೆ ಹಾಕಿಸಲು ಪೈಪೋಟಿ ನಡೆಸುತ್ತಾರೆ.

**ಶಕುನದ ಸೊಡಲು** (ನು-೪೨೭) ಬಡನಡುವಿನ ಬಾವಕೆಯರಿಬ್ಬರು ನಿಂದು
ಹಿಡಿದರೆ ಶಕುನದ ಸೊಡಲ

| | |
|---|---|
| | ಅಡಕುವ ಮಿಂಚಿನಂದದ ನೋಟದಬಲೆಯರು |
| | ಪಿಡಿದರು ಇಕ್ಕೆಲದಲಿ |
| **ಕಂಕಣ ಕಟ್ಟುವುದು**(ನು–೪೨೮) | ಬ್ರಾಹ್ಮಣರು ವೇದಮಂತ್ರವನ್ನೋಳಿ |
| | ಕಂಕಣದಾರವ ಕೈಗೆ ಕಟ್ಟಿದರು |
| **ಮಾಂಗಲ್ಯದಾರಣೆ**(ನು–೪೨೮) | ಮಾನಿನಿ ಕೊರಳಿಗೆ ಮಾಂಗಲ್ಯ ಸೂತ್ರವ |
| | ತಾನಾಗ ಕಟ್ಟಿದ ಮುನಿಯು |
| **ಸೆರಗಿಗೆ ಗಂಟು ಹಾಕುವುದು** | ಇಟ್ಟರು ಸಕಲಾಭರಣವ ಸತಿಯರು |
| (ನು–೪೨೯) | ಅಷ್ಟಪತ್ರಿಕೆ ನುಡಿಸಿದರು |
| | ಕಟ್ಟಿದರು ಗಂಟಿಕ್ಕಿ ಸೆರಗ |
| | ದಂಪತಿಗಳು ಹೊಕ್ಕರೆ ದೇವರಮನೆ |
| **ಚಟ್ಟು ಬಡಿಯುವುದು** (ನು–೪೩೦) | ಹಾಲು ತುಪ್ಪವ ಕುಡಿದರು |
| | ಚಟ್ಟು ಬಡಿದರು |
| | ಬಾಗಿನಂಗಳ ಕೊಡಿಸಿದರು |
| | ಮಾಣಿಕದ ಹಸೆಮೇಲೆ ಬಂದು ಕುಳ್ಳಿದ್ದರೆ |
| | ಹೋಮಗನುಕೂಲ ಮಾಡಿದರು |
| **ಲಾಜಾ ಹೋಮ** (ನು–೪೩೨) | ಆಜ್ಯ (ತಂಡುಲ) ಸಮಿತ್ತುಗಳನೆ ತಂದರು |
| | ಪೂಜಿಸಿದರು ಯಜ್ಞೇಶ್ವರನ |
| | ಲಾಜಾ ಹವನವ ಮಾಡಿ ಸತಿಯಳ |
| | ನೊಸಲಿಗೆ ಮೇಧಾವಿಯನಿಟ್ಟ ಮುನಿಯು |
| **ಅರುಂಧತಿ ನಕ್ಷತ್ರ ದರ್ಶನ** | ಸಪ್ತಋಷಿಗಳು ನಡೆತಂದು |
| **ಆರತಿ** | ಮಧುಮಕ್ಕಳಿಗೆ ಕೈಯೆತ್ತಿ |
| (ನು–೪೩೩) | ತೋರಿದರಾನಂದ್ಯತಿಯ |
| | ಮುತ್ತೈದೆಯರೆಲ್ಲರು ಹರಸಿ ಅಕ್ಷತೆಯನಿಟ್ಟು |
| | ಮುತ್ತಿನಾರತಿಯನೆತ್ತಿದರು |
| **ಭೂಮದೂಟ**(ನು–೪೩೫–೪೩೭) | ಸೋಮಶಾಲೆಯೊಳಗೆ ಬ್ರಾಹ್ಮಣರಿಗೆ ಮಾಡಿ |
| | ಠಾಣ ದೀವಿಗೆಗಳನಿರಿಸಿ |
| | ನಾರಿಯರೆಲ್ಲರು ರಂಗವಾಲೆಯನಿಕ್ಕಿ |
| | ಭೂಮಕನುಕೂಲ ಮಾಡಿದರು |
| | ಹಪ್ಪಳ ಸಂಡಿಗೆ ಹಲವು ಶಾಖಂಗಳು |
| | ಒಪ್ಪುವ ಪರಮಾನ್ನ ಘೃತವು |
| | ಒಪ್ಪದಿ ಸತಿಯರು ಹಿರವಾಣದಲಿ ತಂದು |

ಚಪ್ಪರದಲಿ ಬಡಿಸಿದರು
ಹೊಂಬಟ್ಟಲಲಿ ತಿಳಿತುಪ್ಪ ಸಕ್ಕರೆಯನು
ತಂದಿಳುಹಿದರು ಭೂಮವನು
ಅಂಬುಜಮುಖಿ ಆಪೋಶಣಕ್ಕೊರೆಯಲು ಅಂದು
ಭೋಜನವ ಮಾಡಿದರು

**ನಾಗೋಲಿ**(೪೩–೪೦)

ವಿವಾಹದ ನಾಲ್ಕನೆಯ ದಿನದಲ್ಲಿ
ನಾಗವೋಲೆಗಳನ್ನ ಮುಗಿಸಿ
ನಾರಿಯರೆಲ್ಲರು ಹೊಳಲ ಪ್ರದಕ್ಷಿಣೆ
ಮಾಡುತ ಬಲಿಯ ಚೆಲ್ಲಿದರು
ಅಕ್ಕಿಯಾನೆ ಉಪ್ಪಿನಾನೆ ಬೇಡಿದ ಮಕ್ಕಳು
ಸುತ್ತಿ ಪ್ರದಕ್ಷಿಣೆ ಬರಲು
ಮುತ್ತೈದೆಯರಿಗೆ ಮರದ ಬಾಗಿನ ಕೊಟ್ಟು
ಮುತ್ತಿನಾರತಿಯನೆತ್ತಿದರು

**ಉರುಟಣೆ :** 'ಸೀತಾಕಲ್ಯಾಣ' ಕೃತಿಯಲ್ಲಿ ಗಿರಿಯಮ್ಮನವರು ರಾಮಜಾನಕಿಯರ ಮದುವೆಯ ಉರುಟಣೆ ಶಾಸ್ತ್ರದ ವರ್ಣನೆ ಮಾಡುತ್ತಾರೆ.

ಮದುವೆಯ ನಾಲ್ಕು ದಿವಸದಲ್ಲಿ
ಮದುವಣಿಗನಾರಾಮ ಜಾನಕಿಗೆ
ಮುದದಿಂದ ಅರಿಶಿನೆಣ್ಣೆಯ ಮಾಡೊ ಸಂಭ್ರಮ
ಪದವ ಹೇಳುವೆ

ಮದುವೆಯ ನಾಲ್ಕನೆಯ ದಿನ ಮಾಡುವ ಅರಿಶಿನೆಣ್ಣೆಯ ಶಾಸ್ತ್ರದ ವರ್ಣನೆಯೇ ಮುಖ್ಯವಾಗಿದೆ. ಶ್ರೀರಾಮನಿಗೆ ಅರಿಶಿನದೆಣ್ಣೆಯ ಮಾಡಲು ಕೌಸಲ್ಯ ಕೇರಿ ಕೇರಿಯ ಗುಂಟೆ ಮುತ್ತೈದೆರನ್ನು ಕರೆಸುತ್ತಾಳೆ. ಜನಕನ ಮನೆಯಲ್ಲಿ ನಡೆದ ಈ ಸಮಾರಂಭಕ್ಕೆ ದಶರಥ 'ಸೊಲ್ಲು ಸೊಲ್ಲಿಗೆ ಹಿಡಿ ಹೊನ್ನು ಹೊನ್ನನು ಬೇಗನೆ ಚೆಲ್ಲುತ' ಬರುತ್ತಾನೆ.

ಹೆಂಗೆಳೆಯರು ರಾಮನನ್ನು ಹಸೆಗೆ ಕರೆಯುತ್ತಾರೆ. ಸೀತೆಯು ಸರ್ವಾಲಂಕಾರ ಭೂಷಿತೆಯಾಗಿ ಹಸೆಗೆ ಬರುತ್ತಾಳೆ. ಶ್ರೀರಾಮನು ಸೀತೆಯ ಕೈಹಿಡಿದು ಎತ್ತುತ್ತಾನೆ.

ಅರಳುವ ಕೆಂದಾವರೆ ಕುಸುಮ
ಪರಿಮಳ ಸುರಮ್ಯ ಕಣ್ಗೆಸೆಯೆ
ಎರಗುವ ಮರಿದುಂಬಿಗಳಂತೆ ರಾಘವ
ಕರಗಳ ಪಿಡಿದೆತ್ತಿ ಸತಿಯ
ಇಳೆಯ ಜಗಂಗಳನುದರದಲಿ

ಅಳವಡಿಸಿದ ಮಹಾತ್ಮರನು
ಇಳೆಯ ಮಗಳನು ಎತ್ತಲಾರದೆ ರಾಮ
ಬಳಲಿದನು–

ಎಂದು ಜನರು ಗೇಲಿ ಮಾಡಿ ನಗುವ ಪ್ರಸಂಗವನ್ನು ತಂದಿದ್ದಾರೆ ಗಿರಿಯಮ್ಮ. ಕೌಸಲ್ಯೆಯ ರಾಮನಿಗೆ ಅರಿಶಿಣವ ಹಚ್ಚೆಂದು ಸೀತೆಗೆ ಕೊಟ್ಟಾಗ ರಾಮನೆ ಸಿರಿಮುಖವ ತೋರೆಂದು ಸೀತೆ ನಾಚುತ್ತ ದಶಾವತಾರಗಳನ್ನು ವರ್ಣಿಸುತ್ತಾಳೆ. ಕುಳಿತುಕೊಂಡ ಸೀತೆಗೆ ಅರಿಶಿಣ ಹಚ್ಚಲು ಮುಂದಾದಾಗ ಪಾರ್ವತಿಯು:

ಬಲ್ಲೆವೊ ದೇವೋತ್ತಮ ನಿನ್ನ
ಪುಲ್ಲಲೋಚನೆ ಜಾನಕಿಯೊಡನೆ
ಸಲ್ಲದು ಸಲಿಗೆಯು ರಾಘವನಿಗೆ
ನಿಲ್ಲಬೇಕೆನುತ

–ಪಾರ್ವತಿ ಛೇಡಿಸುತ್ತಾಳೆ. ಅರಿಶಿಣ ಶಾಸ್ತ್ರ ಮುಗಿದ ಮೇಲೆ ಪರಸ್ಪರರು ನೀವಳಿಸಿ ದೃಷ್ಟಿ ತೆಗೆದುಕೊಳ್ಳುತ್ತಾರೆ. ಮುತ್ತೈದೆಯರ ಆರತಿ, ಹಾರೈಕೆಯಾಗುತ್ತದೆ.

**ನಾಮಕರಣ:** ಕೋಮಲಾಂಗವು ಕಳಕಳಿಸುವ ನಗೆಮುದ್ದು
ಸೋಮವದನ ಸಣ್ಣವಗೆ
ನಾಮಕರಣ ಮಾಡಬೇಕೆಂದು ಧ್ಯಾನಿಸಿ
ಬ್ರಾಹ್ಮಣರೆಲ್ಲರ ಕರೆಸಿದರು

ಕಂದರ್ಪಕೋಟಿ ಲಾವಣ್ಯದ ತರಳೆಗೆ
ಚಂದದಾಭರಣವನಿಟ್ಟು
ಚಂದ್ರಹಾಸನೆಂಬ ಪೆಸರಿಟ್ಟು ಕರೆದರು
ಮುಕುಂದನ ಕರುಣದ ಸುತಗೆ (ಹೆ.ಗಿ. ಚಂದ್ರಹಾಸನ ಕಥೆ)

– ಎಂದು ಚಂದ್ರಹಾಸನಿಗೆ ನಾಮಕರಣ ಮಾಡಿದ ಪ್ರಸ್ತಾಪ ಬರುತ್ತದೆ.

**ಅಕ್ಷರಾಭ್ಯಾಸ:** ಚಂದ್ರಹಾಸನಿಗೆ ಅಕ್ಷರಾಭ್ಯಾಸ ಮಾಡಿಸಿದ ಸಂದರ್ಭ ಹೀಗಿದೆ:

ಅಕ್ಷರಾಭ್ಯಾಸವ ಮಾಡಬೇಕೆನುತ
ಗಂಧಾಕ್ಷತೆ ಫಲಪುಷ್ಪದಿಂದ
ಸಾಕ್ಷಾತು ಗಣಪತಿಗರ್ಪಿಸಿ ತರಳನ ಶಿಕ್ಷಾಗುರುವಿಗೆ ಒಪ್ಪಿಸಿದ

ಮಣ್ಣಹರಹಿ ಅಕ್ಷರವ ಬರೆದು ಎನ್ನಣ್ಣ ನೀ ತಿದ್ದು ಬಾ ಎನಲು
ಪನ್ನಗಶಯನ ನಾರಾಯಣ ಹರಿಕೃಷ್ಣ ಎನ್ನೊಡೆಯ ಶರಣೆಂದು ಬರೆದ

ಓನಾಮವ ಬರೆಯೆಂದರೆ ಬರೆಯದೆ
ಶ್ರೀನಾಥ ಶರಣೆಂದು ಬರೆದ

ನಾನೊಂದ ಹೇಳಲು ನೀನೊಂದ ಬರೆವೆ

ನಿನ್ನ ಜ್ಞಾನ ಬೇರೆ ಚಿತ್ತ ಬೇರೆ –ಎನ್ನುವಲ್ಲಿ ಮರಳಿನಲ್ಲಿ ವಿಧ್ಯಾಭ್ಯಾಸ ಕಲಿಸುತ್ತಿದ್ದ ಗುರುಕುಲ ಪದ್ಧತಿಯನ್ನು ಚಿತ್ರಿಸಿರುವುದನ್ನು, ಚಂದ್ರಹಾಸನ ವಿಷ್ಣು ಭಕ್ತಿಯನ್ನು ಸಾರುತ್ತದೆ.

**ಮದುವೆಯ ಚಿತ್ರಣ:** ಚಂದ್ರಹಾಸನ ಮದುವೆಯ ಸಂಭ್ರಮದ ಸಂಪ್ರದಾಯಗಳು:

**ಅಂತರ್ಪಟ ಹಿಡಿಯುವುದು:** ತೆರೆಯ ಹಚ್ಚಡವನು ಹಿಡಿದು ದಂಪತಿಗಳ
(ನು–೨೫) ತೆರೆಯಲಿ ತಂದು ನಿಲ್ಲಿಸಿದರು
ಧುರಧೀರ ಇಂದುಹಾಸನು ಕುಲಗೋತ್ರವ
ಅರುಹಬೇಕೆಂದು ಕೇಳಿದರು

(ನು–೨೬) ಎನ್ನ ಪವಿತ್ರ ಪಿತಾಮಹ ಪರೇಪಿತ
ಸಂಪನ್ನಶಯನ ಶ್ರೀಹರಿಯು
ಎನ್ನದು ವಾಮಗೋತ್ರವು ಪುಳಿಂಗನು
ಎನ್ನ ಪರಮಗುರುವೆಂದ

(ನು–೨೭) ಕ್ರಮದಿಂದ ಮಧುಪರ್ಕವನೆ ಮಾಡಿದರತಿ
ಸಮಯಲಗ್ನವೆಂದೆನುತ
ರಮಣಿಯ ಕರೆದು ಮಂಗಳಾಷ್ಟಕವನು
ಬ್ರಾಹ್ಮಣೋತ್ತಮರು ಹೇಳಿದರು

(ನು–೨೮) ಪುರೋಹಿತರು ಕನ್ಯಾರ್ಥ ಕೇಳಲು
ಸಮಯವು ಲಗ್ನವೆಂದೆನುತ
ಪಿಡಿದ ತಂಡಲಿ ಇಂದುಹಾಸನು ಶೀಘ್ರದಿ ಮಡದಿಯ
ಮೇಲೆ ಸೂಸಿದನು

(ನು–೨೯) ರತ್ನ ಕಂಕಣವನು ಕರದಿ ಧಾಳಿಸುತ
ಶತಪತ್ರ ನಯನೆ ಸಮಗಾತ್ರೆ
ಚಿತ್ತವಲ್ಲಭನ ಮತ್ತಕದಿ ತಂಡುಲವ
ಚಮತ್ಕಾರದಿ ಸೂಸಿದಳು

**ಶಕುನದ ಸೊಡಲು**(ನು–೩೦) ಬಡ ನಡುವಿನ ಭಾವಕಿಯರು ಶಕುನದ
ಸೊಡರುಗಳನೆ ಹಚ್ಚುವರು
ಅಡರುವ ಮಿಂಚಿನಂದದಿ ನೋಟದ ಭಾವೆಯರು
ಪಿಡಿದರು ಇತ್ತಂಡದಲಿ

**ಚಟ್ಟು ಬಡಿಯುವುದು**(ನು–೩೧)ಹೆತ್ತುಪ್ಪ ಕ್ಷೀರದಲಿ ಚಟ್ಟನೆ ಹೊಯ್ಸಿದರು
ಮುತ್ತೈದೆಯರೆಲ್ಲ ಅಲಂಕರದಿ

ಹತ್ತು ಸಾವಿರ ಹೊಸ ಬಾಗಿನವ ತಂದಿತ್ತಳು
ವಿಷೆಯೆ ಸಂಭ್ರಮದಿ

**ಅರುಂಧತಿ ನಕ್ಷತ್ರ ವೀಕ್ಷಣೆ**(ನು–೩೨) ಇತ್ತ ತಾವ್ವ ಎನುತ ಮದುವಳಿಗೆಯ ಎತ್ತಿ
ಕೈಯಿಂದ ತೋರುವರು
ಸುತ್ತ ನಕ್ಷತ್ರದ ಮಧ್ಯದಿ ಕಂಡಳು
ಪ್ರತ್ಯಕ್ಷದಿಂದರುಂಧತಿಯ

**ಹೋಮ** (ನು.೩೩) ಕನಕದ ಹಸೆಯ ಮೇಲೆ ಕುಳ್ಳಿರಿಸೋರು
ದಿನಕರ ಪ್ರತಿಬಿಂಬದಂತೆ
ವನಜೆ ಸಾಜದಿ ತಂಡುಲವಿಟ್ಟು ಹೋಮಕ್ಕೆ
ಅನುಕೂಲಗಳನೆ ಮಾಡಿದರು

**ಭೂಮದೂಟ**(ನು–೩೫) ತಡಮಾಡದೆ ಠಾಣ ದೀವಿಗೆಯನು ಹಚ್ಚಿ
ಎಡೆಮಾಡಿ ಚಪ್ಪರದೊಳಗೆ
ಬಿಡಿಮುತ್ತಿನ ಹಸೆಯ ಮೇಲೆ ದಂಪತಿಗಳ ಒಡವೆ
ಭೋಜನಕೆ ಕುಳ್ಳಿರಿಸಿ

(ನು–೩೬) ಉಪ್ಪಿನ್ನೆಸರುಕಾಯಿ ಪರಿ ಪರಿ ಶಾಖವು ಹಪ್ಪಳ ಬಾಳಕಗಳನು
ಅಪ್ಪಲು ಅತಿರಸ ಸೂಪಾಕ್ಷತಾ ಶಾಲ್ಯಾನ್ನ ಚಪ್ಪರದಲಿ
ಬಡಿಸುವರು

(ನು–೩೭) ಕಾಮಿನಿಯರು ಕನಕದ ಹರಿವಾಣದಿ ಶಾವಿಗೆ ಪರಮಾನ್ನವ
ಘೃತವ
ಭಾವಕಿಯರು ಮಂಗಳ ಧವಳವ ಪಾಡಿ
ಭೂಮಕ್ಕೆ ಬಡಿಸಿದರಾಗ

(ನು–೩೮) ಆಜ್ಯದಿಂದಲಿ ಆಪೋಶನೆ ಎರೆದಳು ರಾಜೀವ
ಮುಖಿ ತನ್ನ ಪತಿಗೆ

ನಿಡಗುರಕಿ ಜೀವೂಬಾಯಿಯವರ ಬಿಡಿ ಕೀರ್ತನೆಯೊಂದರಲಿ (ಕೀ.೧೧೪ 'ಆರೋಗಣೆಯ ಮಾಡು') ನೈವೇದ್ಯದ ಹಾಡು, ಉಡಿ ತುಂಬಿದ ಹಾಡು(ಕೀ.೧೧೫ 'ಉಡಿಯ ತುಂಬಿರೆ ಕಡಲೊಡೆಯನ ಮಡದಿಗ್ಗರುಷದಿ'), ಹಸೆಗೆ ಕರೆದ ಹಾಡು (ಕೀ–೧೧೮ 'ಜಯ ಜಯ ಮುತ್ತಿನ ಮಂಟಪದಿ)', ಮಂಗಳದ ಹಾಡು (ಕೀ ೧೧೯, 'ಜಯ ಜಯ ಮಂಗಳ), ಆಶೀರ್ವಾದದ ಹಾಡು (ಕೀ.೧೨೬,೧೨೭ 'ಪತಿ ಮಂದಿರದಲ್ಲಿ ಸುಖವಾಗಿದ್ದಾಳೆ), ಶೋಬಾನೆ ಹಾಡು (ಕೀ.೧೮೭ ಸುಂದರ ಮೂರುತಿ ಹರಿಯ.... ಶೋಬಾನೆ), ಆರತಿ ಹಾಡು (ಕೀ.೧೬೧ ಆರತಿ ಎತ್ತಿರೆ), ಕಂದಪದ್ಯ ಒಂದರಲ್ಲಿ (ಪುಟ–೨೭೦) ದಶರಥನ ನಾಲ್ಕು ಮಕ್ಕಳಿಗೆ ಜನಕನ ಪುತ್ರಿಯರು ಹಾರ ಹಾಕಿ ವರಿಸುವುದನ್ನು ವರ್ಣಿಸಲಾಗಿದೆ.

ಮರುಗ ಮಲ್ಲಿಗೆ ಸುರಗಿ ಸಂಪಿಗೆ
ಪರಿಪರಿಯ ಪುಷ್ಪದಿ
ಸರಗಳನ್ನೇ ಕಟ್ಟಿ ಪ್ರೇಮದಿ
ರಘುವರನಿಗೆ ಹಾಕಲು

ಊರ್ಮಿಳೆಯು ನಗುನಗುತ ಲ
ಕ್ಷ್ಮಣನ ಕೊರಳಿಗೆ
ಭರತ ಶತೃಘ್ನರಿಗೆ ಮಾಂಡವಿ
ಶ್ರುತಕೀರ್ತಿಯರು ಹರುಷದಿ
ಮಾಲೆ ಹಾಕಲು

ಇನ್ನೊಂದು ಆರ್ಯದಲಿ ಏಳು ನುಡಿಗಳಲಿ ಮದುವೆಯ ಶಾಸ್ತ್ರವನ್ನೆಲ್ಲಾ ದ್ವಿಪದಿಯಲ್ಲಿ ಹಿಡಿದಿಡಲಾಗಿದೆ.

| | |
|---|---|
| **ಕನ್ಯಾದಾನ** | ದಾನವ ಮಾಡಿದನು ಮಾನ್ಯ ತಾ<br>ಕನ್ಯಾದಾನವ ಮಾಡಿದನು |
| **ವರಪೂಜೆ** | ವರನಪೂಜಿಸಿ ಪರಿಪರಿ ವಸ್ತ್ರಾಭರಣವು<br>ಕೊಡುತ ವಿಚಿತ್ರದಿ ವರದಕ್ಷಿಣೆಯ ಕೊಟ್ಟು<br>ಗಂಗೆಯುದುಕದಿ ಪಾದಂಗಳ ತೊಳೆಯುತ್ತ<br>ಕಂಗೊಳಿಸುವ ರತ್ನದುಂಗುರಗಳ ಕೊಟ್ಟು |
| **ಮಾಂಗಲ್ಯ ಧಾರಣೆ** | ಮಂಗಳಾಷ್ಟಕ ಪೇಳುತಿರಲು ವಸಿಷ್ಠರು<br>ಮಂಗಳಸೂತ್ರ ಕಟ್ಟಿದ ರಾಮ ನಗುತಲಿ |
| **ಕಂಕಣಧಾರಣೆ, ಉರುಟಣೆ** | ಪಂಕಜಾಕ್ಷೆಯರ ಸಹಿತ ಕಂಕಣ ಕಟ್ಟುತ<br>ಬಿಂಕದಿಂದುರುಟಣೆ ಮಾಡಿಸಿ |
| **ಲಾಜಾ ಹೋಮ, ಹರಿಭೂಮ** | ಲಾಜಾಹೋಮವ ಮಾಡಿ, ಕಂಕಣಬಿಚ್ಚಿ<br>ರಾಜಿಪ ಹರಿಭೂಮ ಮೇಲಾಗಿ ನಡೆಸುತ್ತ |
| **ಬಲಿ, ಓಕುಳಿ** | ನಾಕು ಬಲಿಯ ಮುಗಿಸಿ ನಾಗವೇಣಿಯ ಕೂಡಿ<br>ಬೇಗದಿಂದೋಕುಳಿಗಳನಾಡಿಸಿ ಹರುಷದಿ |
| **ಬಾಗಿಲು ತಡೆಯುವ ಹಾಡು** | ವರಕನ್ನಿಕೆಯರು ಹರಿಯ ದರುಶನಕೆ<br>ಬರೆ ಸುಂದರಿಯರು ಬಾಗಿಲು ತಡೆದು<br>ಮದುವಣಿಗರ ಕಯ್ಯಿಂದವರವರ<br>ಹೆಸರುಗಳನು ಹೇಳಿಸಿ ನಗುತಿರಲು |

'ರಾಧಾಮಾಧವ ವಿಲಾಸ'ದಲ್ಲಿಯೂ ಲಾಜಾ ಹೋಮ, ಅರುಂಧತಿ ನಕ್ಷತ್ರ ವೀಕ್ಷಣೆ, ಉರುಟಣೆ, ಓಕುಳಿ, ಬಾಗಿಲು ಕಟ್ಟುವುದು, ನಾಗವಲ್ಲಿಗಳ ಪ್ರಸ್ತಾಪ ನಾಲ್ಕು ಸಾಲುಗಳಲ್ಲೇ ಬಂದಿದೆ.

'ಶ್ರೀಹರಿ ಮಾನಸ ಪೂಜಾ'ದಲ್ಲಿ ಮಂಟಪ ರಚನೆ, ಸಾರಣೆ, ರಂಗವಲ್ಲಿ, ದೀಪಕಂಬಗಳ ಸ್ಥಾಪನೆ, ದೇವತಾಹ್ವಾನ, ಮುಂತಾದ ಮಂಟಪ ಅಲಂಕರಿಸುವ ಕ್ರಮ ಹಾಗು ಪುಷ್ಪಮಾಲಿಕೆ ಸಮರ್ಪಣೆ, ನೈವೇದ್ಯ, ಮಂಗಳಾರತಿ, ಛತ್ರಚಾಮರಗಳ ಉಪಚಾರ, ಶಯನೋತ್ಸವಗಳನ್ನು ಕ್ರಮವಾಗಿ ವರ್ಣಿಸಿದೆ. 'ವರಮಹಾಲಕ್ಷ್ಮಿ ವ್ರತಕಥೆ'ಯಲ್ಲಿ ಇದೇ ಪೂಜಾ ವಿಧಾನಗಳನ್ನು ಹೇಳಿದೆ.

'ಪಾಂಡುರಂಗ ಚರಿತ್ರೆ'ಯಲ್ಲಿ ವರಪೂಜೆಯಿಂದ ಪ್ರಾರಂಭವಾಗಿ ಕಳಸಗಿತ್ತಿ ಪ್ರಸ್ತಾಪ, ಕನ್ಯಾದಾನ, ಕಾಲುಂಗುರ ಧಾರಣೆ, ಧಾರೆ, ಭೂಮದೂಟ, ಕನ್ಯೆಯನ್ನು ಒಪ್ಪಿಸುವವರೆಗೆ ಮದುವೆಯ ಚಿತ್ರಣ ನೀಡಲಾಗಿದೆ.

ಹರಪನಹಳ್ಳಿ ಭೀಮವ್ವ ತಮ್ಮ 'ಅಮೃತ ಮಥನ' ಕೃತಿಯಲ್ಲಿ ಲಕ್ಷ್ಮಿಯು ಹರಿಯನ್ನು ವಿವಾಹವಾದ ಸಂದರ್ಭವನ್ನು ಹೀಗೆ ವರ್ಣಿಸಿದ್ದಾರೆ:

| | |
|---|---|
| **ಧಾರೆ:** | ಸಾಗರರಾಜ ತನ್ನ ಭಾಗೀರಥಿ ಕೂಡಿ<br>ಬ್ಯಾಗ ಬಂದ್ಹರಿಗೆ ಸಿರಿ ಧಾರೆಯನೆರೆದ |
| **ಮಾಂಗಲ್ಯ ಧಾರಣೆ** | ಅಚ್ಚ ಕರಿಮಣಿ ಮಂಗಳ ಸೂತ್ರವ ಪಿಡಿದು<br>ಅಚ್ಯುತ ಲಕುಮಿಗೆ ಕಟ್ಟಿದ ನಗುತ<br>ಮಂಗಳಾಷ್ಟಕ ಹೇಳುತ ಇಂದ್ರಾದಿ ಸುರರು<br>ಲಕ್ಷ್ಮಿಗೆ ಲಗ್ನವ ಮಾಡಿದರು |
| **ನಾಗೋಲಿ** | ಲಾಜಾಹೋಮವ ಮಾಡಿ ಭೂಮವನುಂಡು<br>ನಾಗೇಶಶಯನಗೆ ನಾಗೋಲಿ ಮಾಡಿದರು<br>ಸಿಂಧುರಾಜನ ರಾಣಿಗೆ ಸಿಂಧೂಪವನಿತ್ತು<br>ತಂಡುಲುಪ್ಪಿನಲಿ ಗಜ ಚಂದದಿ ಬರೆದು<br>ಕುಂದಣದ್ಹೊನ್ನ ಕೂಸಿನ ತೊಟ್ಟಿಲೊಳಿಟ್ಟು<br>ಕಂದನಾಡಿಸಿ ಜೋ ಜೋ ಎಂದು ಪಾಡಿದರು |
| **ಬಾಗಿನ** | ಮುತ್ತು ಮಾಣಿಕ್ಯ ತುಂಬಿ ಮರದ ಬಾಗಿನವ<br>ಕೊಟ್ಟಳು ಸಿರಿ ತಾ ಋಷಿಪತ್ನಿಯರನೆ ಕರೆದು |
| **ಹೆಣ್ಣೊಪ್ಪಿಸುವುದು** | ಹೆಣ್ಣನೊಪ್ಪಿಸಿಕೊಟ್ಟು ಚೆನ್ನದಾರತಿಯ<br>ಕರ್ನೆ ಸರಸ್ವತಿ ಭಾರತಿ ಬೆಳಗಿದರಾಗ |
| **ಪ್ರಸ್ತ** | ಪೀತಾಂಬರಧಾರಿ ತನ್ನ ಪ್ರೀತಿಯುಳ್ಳ ಜನಕೆ<br>ಮಾತುಳಾಂತಕಗೆ ಮಾವನೆ ಪ್ರಸ್ತ ಮಾಡಿದನು |

ಭೀಮವ್ವನವರು ಬರೆದಿರುವ ಹಸೆಗೆ ಕರೆದ ಹಾಡು (ಕೀ.೯೫), ಹೂ ಬೇಡಿದ ಹಾಡು (ಕೀ.೯೬), ಆರತಿ ಹಾಡು (ಕೀ.೯೭,೯೮,೯೯), ನೈವೇದ್ಯದ ಹಾಡು (ಕೀ.೧೦೦), ಹೂ ಮುಡಿಸಿದ ಹಾಡು (ಕೀ.೧೨೪,೧೨೫), ಉಡಿ ತುಂಬಿದ ಹಾಡು (ಕೀ.೧೦೨), ಬಾಗಿಲು ತಡೆದ ಹಾಡುಗಳು (ಕೀ.೧೦೪) ಇವೆ. ನೀಲಕಂಠನ ಸುತಗಭಿ ನಮಿಸಿ (ಕೀ.೧೦೮) ಎಂದು ಪ್ರಾರಂಭವಾಗುವ

ದ್ರೌಪದಿ ಸ್ವಯಂವರದಲ್ಲಿ ಗೆದ್ದ ಪಾರ್ಥನೊಂದಿಗೆ ದ್ರೌಪದಿಯ ವಿವಾಹದಲ್ಲಿ ಬರುವ ನಿಶ್ಚಿತಾರ್ಥ, ವರಪೂಜೆ, ಧಾರೆ, ಮಾಂಗಲ್ಯಧಾರಣೆ, ಲಾಜಾಹೋಮ, ಉರುಟಣೆ, ಅರಿಶಿನೆಣ್ಣೆ, ಮಾಲಾರ್ಪಣೆಯೊಂದಿಗೆ ಮದುವೆಯ ಶಾಸ್ತ್ರ ಮುಗಿಯುತ್ತದೆ. ನಂತರ ಬೀಗರಿಗೆ ಬಂಡಿ ಬಾಗಿನ ಕಳುಹಿಸುತ್ತಾರೆ. ಈ ಹಾಡಿನ ವಿಶೇಷವೇನೆಂದರೆ ದ್ರೌಪದಿ ಪಾಂಡವರೈವರನ್ನು ಒಬ್ಬೊಬ್ಬರನ್ನಾಗಿ ವಿವಾಹ ಮಾಡಿಕೊಳ್ಳುವ ಚಿತ್ರಣ ಬರುತ್ತದೆ.

'ಪುಣ್ಯ ಪಡೆಯೆ' (ಕೀ.೧೧೦) ಎಂದು ಪ್ರಾರಂಭವಾಗುವ ಆಶೀರ್ವಾದದ ಹಾಡೊಂದಿದೆ

ಗಂಡುಸುತರನೆ ಪಡೆದು ನೀ
ಪೃಥಿವಿಯನಾಳೆನುತ ದ್ರೌಪದಿ ಹರಸಿದರೆ

ಅಕ್ಕರದಿಂದ್ಹೆಣ್ಣುಮಕ್ಕಳ ಪಡೆದು ಪ
ಲ್ಲಕ್ಕಿನೇರೆನುತ ದೇವಕ್ಕಿ ಹರಸಿದಳು

ಕಟ್ಟಿದ ಮಾಂಗಲ್ಯ ಕರಿಯ ಕಾಜಿನ ಬಳೆ
ಮುತ್ತೈದೆತನಕೆ ಸಾವಿತ್ರಿ ಹರಸಿದಳು

ಅನ್ನ ಗೋವಳಿ, ಕನ್ಯಾದಾನ ಮಾಡೆನುತ ಸಂ
ಪನ್ನ್ಯಾಗಿರೆನುತ ಅರುಂಧತಿ ಹರಿಸಿದಳು

ಆಯುಷ್ಯ ಆರೋಗ್ಯ ಶ್ರೇಯಸ್ಸು ಸೌಭಾಗ್ಯ
ನೀ ಪಡೆ ಸುಖ ಶ್ರೀ ಮಹಾಲಕ್ಷ್ಮಿ ಹರಸಿದಳು

ಪರಮ ಪತಿವ್ರತೆಯರಾದ ಶ್ರೇಷ್ಠ ನಾರಿಯರ ಆಶೀರ್ವಾದ ಇರಲೆಂದು ಹರಸುವ ಹಾಡು ಬಹುಷಃ ವಧುವಿಗೆ ಹೇಳಿದ ಹಾಡಿರಬೇಕು. ಪುರುಷರೈವರು ಕೂಡಿ (ಕೀ.೧೧೧) ಎನ್ನುವ ಹಾಡು ೩೭ ನುಡಿಗಳ ದೀರ್ಘ ಪದ್ಯ. ಪ್ರತಿ ನುಡಿ ೩ ಸಾಲುಗಳನ್ನು ಒಳಗೊಂಡಿದೆ. ದ್ರೌಪದಿಯನ್ನು ಪಾಂಡವರೈವರಿಗೆ ಒಪ್ಪಿಸಿ ಕೊಡುವ ಪದ್ಯ.

ಸಂಪತ್ತು ಶನಿವಾರದ ಹಾಡಿನಲ್ಲೂ ದೇವರ ಪೂಜೆಯ ವಿಧಾನಗಳನ್ನು ಹೇಳಿದೆ.

ಶ್ರಾವಣ ಶುಕ್ರವಾರದ ಹಾಡಿನಲ್ಲಿ ಬಡವರ ಮನೆಯಿಂದ ಸೂಲಗಿತ್ತಿ ತಂದ ಮಗುವಿಗೆ ಜಾತಕ ಬರೆಸುವುದು ನಾಮಕರಣ, ಜುಟ್ಟು, ಉಪನಯನದ ಪ್ರಸ್ತಾಪ ಬರುತ್ತದೆ.

ನಂಜನಗೂಡು ತಿರುಮಲಾಂಬನವರ ಆರತಿಯ ಹಾಡುಗಳು, ಹಸೆಗೆ ಕರೆದ ಹಾಡು, ಮಂಗಳದ ಹಾಡುಗಳು, ಆಶೀರ್ವಾದದ ಹಾಡುಗಳಿವೆ.

ಸರಸ್ವತಿಬಾಯಿಯ ಕೀರ್ತನೆಗಳಲ್ಲಿ ಹಸೆಗೆ ಕರೆವ ಹಾಡು, ಉರುಟಣೆ ಹಾಡು, ಅರಿಶಿಣ್ಣೆಯ ಹಾಡು, ತಾಂಬೂಲ ನೀಡುವ ಹಾಡುಗಳು ಕಂಡುಬರುತ್ತವೆ.

# ಅಧ್ಯಾಯ–ಹತ್ತು

## ಅನಾಮಿಕರ ಹಾಡುಗಳು

ಸಂಪ್ರದಾಯದಲ್ಲಿ ಸಾಮಾನ್ಯವಾಗಿ ಸ್ತ್ರೀಯರು ಹೆಚ್ಚು ಪಾಲ್ಗೊಳ್ಳುವುದರಿಂದ ಪ್ರತಿಯೊಂದು ಸಂಪ್ರದಾಯಕ್ಕೂ ಹಾಡುಗಳಿವೆ. ಸಂಪ್ರದಾಯದ ಹಾಡುಗಳ ಪರಂಪರೆ ಇಂದಿಗೂ ನಡೆದು ಬಂದಿದೆ. ಮಹಿಳಾಕೀರ್ತನಕಾರರ ರಚನೆಗಳಲ್ಲಿ ಸಂಪ್ರದಾಯದ ಹಾಡುಗಳು ಬಿಡಿ ಕೀರ್ತನೆಗಳಲ್ಲಿಯೂ, ದೀರ್ಘ ಕೀರ್ತನೆಗಳಲ್ಲಿ ಸಾಂದರ್ಭಿಕವಾಗಿಯೂ ಬಳಕೆಯಾಗಿದೆ. ದೀರ್ಘ ಕೀರ್ತನಗಳಲ್ಲಿರುವ ಸಂಪ್ರದಾಯದ ಹಾಡುಗಳನ್ನು ಮಾತ್ರ ಆಯಾ ಸಂದರ್ಭದಲ್ಲಿ ಆಯ್ದು ಹಾಡುವುದರಿಂದ ಅದರಲ್ಲಿ ಅಂಕಿತವು ಇರುವುದಿಲ್ಲ. ಹೀಗಾಗಿ ಸಂಪ್ರದಾಯದ ಹಾಡುಗಳು ಪ್ರಚಾರಕ್ಕೆ ಬರುತ್ತವೆಯೇ ಹೊರತು ಬರೆದವರು ಅನಾಮಿಕರಾಗಿಯೇ ಉಳಿಯುತ್ತಾರೆ. ನನ್ನ ಹುಟ್ಟೂರು ಹಾಸನ ಜಿಲ್ಲೆಯ ಕಣಕಟ್ಟೆ. ಅಲ್ಲಿನ ಪುರೋಹಿತರಾಗಿದ್ದ ಮಠಮುದ್ರೆ ದಿ:ನಾಗಪ್ಪಶಾಸ್ತ್ರಿಗಳವರ ಪತ್ನಿ ದಿ:ಸಾವಿತ್ರಮ್ಮನವರು. ಅವರ ಹಾಡಿಲ್ಲದೆ ಯಾವ ಸಂಪ್ರದಾಯದ ಕಾರ್ಯಕ್ರಮಗಳು ನಡೆಯುತ್ತಿರಲಿಲ್ಲ. ಸಂಪ್ರದಾಯದ ಎಲ್ಲ ಮುಖಗಳನ್ನು ತಮ್ಮ ಕೃತಿಗಳಲ್ಲಿ ಮೂಡಿಸಿರುವ ಮಹಿಳಾಕೀರ್ತನಕಾರರ ಕೃತಿಗಳಲ್ಲಿ ಹೊರತಾದ ಒಸಗೆಯ ಹಾಡುಗಳುನ್ನು ಇವರ ಬಾಯಲ್ಲಿ ಕೇಳಿದ್ದೆ. ಬೆಂಗಳೂರಿನಲ್ಲಿ ಇರುವ ಇವರ ಮಗಳು ಶ್ರೀಮತಿ ವನಜಾಚಂದ್ರಶೇಖರರನ್ನು ಭೇಟಿಯಾದಾಗ ಅನಾಮಿಕರ ಒಸಗೆಯ ಹಾಡುಗಳು, ಆ ಮೂಲಕ ಒಸಗೆಯ ಸಂಪ್ರದಾಯದ ರೀತಿ ನೀತಿಗಳು ದೊರೆತವು. ದೊರೆತ ಹಾಡುಗಳು ಅಪೂರ್ಣವಾಗಿರುವುದುನ್ನು ಗಮನಿಸಬೇಕು. ಬಾಯಿಂದ ಬಾಯಿಗೆ ಹರಿದು ಬರುವ ಹಾಡುಗಳಲ್ಲಿ ಇಂತಹವು ಸಾಮಾನ್ಯ. ಚಿಗಳಿ ಕುಟ್ಟುವ ಶಾಸ್ತ್ರ, ದಡಬ (ಬಿಳಿಯ ಹೊಸ ಬಟ್ಟೆ) ಹಾಸುವ ಶಾಸ್ತ್ರ, ಚೆಟ್ಟು ಬಡಿಯುವುದು, ಮಡಿಲು ತುಂಬುವ ಶಾಸ್ತ್ರದ ಹಾಡುಗಳು ಇದರಲ್ಲಿವೆ. ಪುಷ್ಪವತಿಯಾದ ಹುಡುಗಿಗೆ ಲಕ್ಷ್ಮಿ, ಸರಸ್ವತಿ, ರತಿ, ಶಕುಂತಲೆ ಇತ್ಯಾದಿ ವೇಷ ಹಾಕಿ ಬಂಧು ಬಳಗ ಸೇರಿಸಿ ಆರತಿ ಮಾಡುವ ಶಾಸ್ತ್ರವಿದು. ಮಹಿಳಾಕೀರ್ತನಕಾರರ ಸಂಪ್ರದಾಯದ ಹಾಡುಗಳಲ್ಲಿ ಮೈನೆರೆದ ಹಾಡುಗಳು ಕಂಡುಬಂದಿಲ್ಲ. ಆ ಶಾಸ್ತ್ರದ ಪ್ರಸ್ತಾಪ ಮಾತ್ರ ಕಂಡುಬಂದಿವೆ. ಮೈನೆರೆಯುವುದಕ್ಕೆ ಮುಂಚೆ ಮದುವೆ ಮಾಡುತ್ತಿದ್ದುದು ಅಥವಾ ಮೈನೆರೆಯುವ ಹೊತ್ತಿಗಾಗಲೇ ವಿಧವೆಯಾಗಿರುತ್ತಿದ್ದುದು ಕಾರಣವೆನಿಸುತ್ತದೆ. ದೊರೆತಿರುವ ಹಾಡುಗಳು ಸಂಪ್ರದಾಯದ ಹಾಡುಗಳು. ಸಾಂದರ್ಭಿಕವಾಗಿ ಅವುಗಳನ್ನು ಆಯ್ದು ಹಾಡುವುದರಿಂದ, ಬಾಯಿಂದ ಬಾಯಿಗೆ ಹರಿದು ಬಂದಿರುವುದರಿಂದ ಕೆಲವು ಅಪೂರ್ಣವಾಗಿರುವುದನ್ನು ಗಮನಿಸಬಹುದು.

**ದಡಮ ಹಾಸಿದ್ದು**

ದಡಮ (ದಡಬ) ಬಿಳಿಯ ವಸ್ತ್ರ. ಮೈನೆರೆದ ಹುಡುಗಿಯನ್ನು ಕೂರಿಸಿ ನೆರೆವೇರಿಸುವ ಶಾಸ್ತ್ರದ ಚಿತ್ರಣವನ್ನು ಈ ನುಡಿಗಳು ನೀಡುತ್ತವೆ.

೧. ಸುಕುಮಾರಿಯರೆಲ್ಲ ಸೇರಿ ಮಕರವ ಕಟ್ಟಿಸಿ
ವಿಕಸಿತದ ಸುಮದಿಂದ – ಅಲಂಕರಿಸಿ
ರಂಗೋಲಿ ಬಿಡುತಾರೆ

೨. ಬಿಳಿಯ ದಡಮದ ಮಧ್ಯೆ ಬರೆದು ಚಾವಳಿಯಿಂದ
ಲಲಿತಾಷ್ಟವನ್ನ – ಅಲಂಕರಿಸಿ – ಮಣೆಹಾಕಿ
ಸುತ್ತ ದೀವಿಗೆಯನಿರಿಸ್ಯಾರೆ.

೩. ದಡಬದ ಕೊನೆಗಳನು ಹಿಡಿದು ಮುತ್ತೈದೇರು
ಸಡಗರದಿಂದ ಲದನ್ಯಾಸೆ ಕಂದಮ್ಮನ
ಹರಸುತ ಅಕ್ಷತೆಯ ತಳೆದಾರೂ....

**ಚಿಟ್ಟು ಬಡಿದದ್ದು**

ಓಕುಳಿಯಲ್ಲಿ ಮೈನೆರೆದ ಹುಡುಗಿಯ ಕೈ ಅದ್ದಿಸಿ ದಡಬದ ನಾಲ್ಕು ಅಂಚಿಗೆ ಮತ್ತು ಮಧ್ಯಕ್ಕೆ ಬಡಿಸುವ ಶಾಸ್ತ್ರವಿದು. ಚಿಗುಳು ತಂಬಿಟ್ಟು ಮಾಡಿ ಆರತಿ ಎತ್ತುವುದು ನಡೆಯುತ್ತದೆ.

೧.ಚಿಟ್ಟು ಬಡಿದಳು ಶ್ರೀರಾಮನ ಪಟ್ಟದರಸಿ
ನೆಟ್ಟನಂಬುಜಾತ ಕರವನಿಟ್ಟು
೨.ಸೋಮ ಮುಖಿಯರೆಲ್ಲ ಸೇರಿ ಕೋಮಲಾಂಗಿಯ
ಪ್ರೇಮದಿಂದ ಕೋರುತಿರಲು ಭಾಮೆ ಭೂವಿ ಭೂಮಿಜೆ
೩.ಮಧುರಗೀತಾದಿಂದ ಹರಿಸಿ ಸುದತಿ ಮಣಿಯಾರು
ಮುದದೆ ನೀಡಿದರಿಷಿಣದೊಳು ಮುದದಿ ಕರಗಳಿಂ
೪.ಮರವು ಅಪಾಂಗದಿಂದ ಕುಸುಮ ಶರನ ಕರೆಯುತ
ಸ್ಮರಿಸಿ ಕಾಂತನ್ನ ಹಳದಿ ಪಡಿದು ನಾಚುತ ಚಟ್ಟು ಬಡಿದಳು
೫.ಭಾಮೆ ಮೈನೆರೆದದ್ದ
ಬಾಣಂತಿಯರು ಕಂಡು
ರೂವಾರ ಬರೆದ ಜಗಲಿಗೆ ಕರೆತಂದರು
೬. ವಜ್ರದಾ ಒರಳಲ್ಲಿ ವಿಭ್ರಮದಾ ಒನಕೆ
ಯಲಿ ಹಾಡುತ್ತ ಕುಟ್ಟಿದರೆ ಚಿಗುಳಿಯ
ಸೀತಾದೇವಿಗೆ ಮಡಿಲಾ ತುಂಬಿ ಹರಸಿದರು
೭. ಸಪ್ತಋಷಿಪತ್ನಿಯರು ಅಕ್ಷತೆ

ವೀಳ್ಯವ ಕೊಟ್ಟು ರಾಘವ

ಮಡದೀಗೆ ಪಾಡುತ್ತ ಮುತ್ತಿನಾರತಿಯ ಎತ್ತಿದರು

ಒಸಗೆಯು ಸಂಪ್ರದಾಯದಲ್ಲಿ ಪ್ರಮುಖವಾದ ಘಟ್ಟ. ಅದಕ್ಕೆಂದೇ ಸಂಶೋಧನಾ ಅವಧಿಯಲ್ಲಿ ದೊರೆತ ಈ ಹಾಡುಗಳನ್ನು ದಾಖಲಿಸಲಾಗಿದೆ. ಕೀರ್ತನಕಾರರ ಪದಶಕ್ತಿ, ರಾಚನಿಕ ಸಾಮರ್ಥ್ಯವನ್ನಿಲ್ಲಿ ಕಾಣಬಹುದಾಗಿದೆ.

**ಕಪ್ಪು ಹಚ್ಚುವ ಹಾಡು**

ಕಪ್ಪನ್ಹಚ್ಚಿದಳು ಗೋಪಿ ಗೋಪಾಲಗೆ

ಕಪ್ಪನ್ಹಚ್ಚಿದಳು ಸರ್ಪಶಯನನಿಗೆ

ದೃಷ್ಟಿ ತಾಕುವುದೆಂದು ಚೆಲುವ ರಂಗಯ್ಯಗೆ

ಉಡಿಗಂಟೆ ಘಳಿರೆನುತ ರಂಗಯ್ಯಗೆ

ಬಿಡುವ ಕಣ್ಣಿನ ದಾಳವು

ಜನನಿಯ ಮುಖ ನೋಡಿ ನಸುನಗುತ

ಚಿನ್ಮಯಾತ್ಮಕನಿಗೆ ಚಿನ್ನಿ ಪಾಲೆರೆದು

ನಾಲ್ಕು ಬಾಗಿಲುಗಳಿಂದ ಹಸ್ತಕೆ ಒಪ್ಪುವ

ನಾಲ್ಕು ಗುಂಡಿನ ಚೆಂದವು

ಲೋಕ ನಾಯಕ ಜಗದೇಕ ಕುಮಾರನಿಗೆ

ಏಕಭಕ್ತರ ಪತಿ ಗೋಪಾಲಗೆ– ಮೊದಲ ಬಾರಿಗೆ ಮಗುವಿನ ಕಣ್ಣಿಗೆ ಕಪ್ಪು ಹಚ್ಚುವ ಸಂಭ್ರಮ ಇಲ್ಲಿ ವರ್ಣಿತವಾಗಿದೆ. ಕಣ್ಣಿಗೆ ಕಪ್ಪು ಹಚ್ಚುವುದು ಆರೋಗ್ಯದ ದೃಷ್ಟಿಯಿಂದ ಒಳ್ಳೆಯದು. ಶಾಸ್ತ್ರಗಳು ಇಂತಹವನ್ನು ದಾಖಲಿಸುತ್ತವೆ, ಒತ್ತಾಯಿಸುತ್ತವೆ.

**ಕವಿ ಚುಚ್ಚುವುದು**

ದಿನ ಒಳ್ಳೇದೆಂದು

ಗೋಕುಲ ಶೃಂಗಾರವ ಮಾಡಿ

ಮದನನಯ್ಯನ ಕಿವಿಗಳ ಚುಚ್ಚಿದರು

ವಾರ ಒಳ್ಳೆಯದೆಂದು

ನಾರಿಯರೆಲ್ಲರು

ಪಾರ ಸುಂದರನ ಕಿವಿಗಳ ಚುಚ್ಚಿದರು

ನಕ್ಷತ್ರ ಒಳ್ಳೇದೆಂದು

ಮಿತ್ರೆಯರೆಲ್ಲರೂ

ನಕ್ಷತ್ರತೇಜನ ಕಿವಿಗಳ ಚುಚ್ಚಿದರು

ಯೋಗ ಒಳ್ಳೇದೆಂದು
ನಾಗವೇಣಿಯರೆಲ್ಲ
ಭೋಗಿಶಯನನ ಕಿವಿಗಳ ಚುಚ್ಚಿದರು

ಕರಣ ಒಳ್ಳೇದೆಂದು
ತರುಣೀಯರೆಲ್ಲ
ರವಿಕಿರಣ ತೇಜ
ದಿವ್ಯತೇಜನ ಕಿವಿಗಳ ಚುಚ್ಚಿದರು

ಹಸುಗೂಸೆನುತಲೆ ಕುಸುಮಗಂಧಿಯರೆಲ್ಲ
ಕುಸುಮದಿಂದಲೇ ಎಳೆಕಿವಿಗಳ ಊರಿದರು

**ಆರತಿ ಹಾಡು**

ಹದಿನಾರು ಸಾವಿರ ಚದುರೆಯರೊಳಗಿನ
ಚತುರಾ ಕೃಷ್ಣನಿಗೆ
ಮಧುಸೂದನಗೆ ಮದಗಜಗಮಗೆ
ಮುದದಿಂದ ನರಹರಿಗೆ
ಅರಸಿಯರೆ ಸರಸಿಯರೆ
ಅರಸಾರ ಸುಂದರ ಚದುರೆಯರೊಳಗಿನ ಚತುರಾ ಕೃಷ್ಣನಿಗೆ

ಆಕಳ ಕಾಯುವ ಗೋಕುಲದಲ್ಲಿ
ಗೋವುಗಳ ಕಾಯ್ದವಗೆ ಸಖಿಯರೆ
ಗೋವುಗಳ ಕಾಯ್ದವಗೆ
ಅರಸಿಯರೆ ಸರಸಿಯರೆ
ಅರಸಾರ ಸುಂದರ ಚದುರೆಯರೊಳಗಿನ ಚತುರಾ ಕೃಷ್ಣನಿಗೆ

ಭಕ್ತರ ಸಲಹುವ ಹತ್ತವತಾರ
ಎತ್ತಿ ಬಂದವಗೆ ಉತ್ತುಮಗೆ
ಮುತ್ತಿನಾ ಆರತಿ ಚಿತ್ತಜ ಪಿತನಿಗೆ
ಎತ್ತುವೆನಚ್ಯುತಗೆ
ಹದಿನಾರು ಸಾವಿರ ಚದುರೆಯರೊಳಗಿನ
ಚತುರಾ ಕೃಷ್ಣನಿಗೆ

**ತುಳಸಿ ಹಾಡು**

ಅಂಗಳದೊಳಗೆಲ್ಲ ತುಳಸಿಯ ವನವಾಗಿ

ಸಿಂಗಾರವಾಗಿದೆ ಶೀಘ್ರದಿಂದ
ಕಂಗಳ ಪಾಪವ ಪರಿಹರಿಸಬೇಕೆನುತಲಿ
ಶ್ರೀರಂಗ ಬಂದಿಲ್ಲಿ ನೆಲೆಸಿದನು
ಕಲ್ಯಾಣಂ ತುಳಸಿ ಕಲ್ಯಾಣಂ

ಸಾರಿಸಿ ರಂಗವಲ್ಲಿಯನಿಟ್ಟು
ಕಾರಣಿ ಕಾರಣಂಗಳ ರಚಿಸಿ
ನಾರಾಯಣನಾದರದಿಂದ ಪೂಜಿಸಿದರೆ
ಬೇಡಿದಿಷ್ಟಾರ್ಥವ ನೀಡುವಳು

ಉತ್ಥಾನದ್ವಾದಶಿ ಧೂಳ್‌ಸಂಜೆ ಹೊತ್ತಲಿ
ಮತ್ತೈದೆಯರೆಲ್ಲ ಮಡಿಯನುಟ್ಟು
ಮುತ್ತಿನಾರತಿ ಎತ್ತಿ ವರಗಳ ಬೇಡಲು
ಪುತ್ರ ಸಂತಾನವ ಕೊಡುತ್ತಿದ್ದಳು

ಉದಯದೊಳೆದ್ದು ದೃಷ್ಟಿಸಿ ನೋಡಿದವರಿಗೆ
ದೃಷ್ಟಿಯ ಪಾಪವು ಪರಿಹಾರವು
ಮುಟ್ಟಿ ಪ್ರದಕ್ಷಿಣೆ ಮಾಡೆ
ಪಾಪ ಪರಿಹಾರವು ರಂಗನ ಮಡದಿ ಶ್ರೀತುಳಸಿಗೆ

ಚಿನ್ನದ ಕೋಟೆಗೆ ರನ್ನದ ತೆರೆಮೂಡಿ
ಕನ್ನಡಿ ಕಳಸವ ತಂದಿರಿಸಿ
ಚೆನ್ನಾಗಿ ಮನಮುಟ್ಟಿ ಪೂಜಿಸಿದವರಿಗೆ ತಾ
ಬನ್ನೆ ಭಾಗ್ಯವ ಕೊಟ್ಟು ಸಲಹುವಳು
ರಂಗನಾ ರಾಣಿ ತುಳಸಿಗೆ ಚೆಲ್ವ
ಅಂಗನೆಯರಾರತಿ ಎತ್ತಿರೆ

ದಳದಳದ ಮಧ್ಯದಲಿ ನಳನಳಿಸಿ ಹೊಳೆಯುವ
ಭಂಟಾರ ಬಾಗಿಲ ಮುಂದೆ ತಾ ನಿಲ್ಲುವಳು
ಮಂಟಾಪವನೆ ಕಟ್ಟಿಸಿಕೊಳುವಳು
ತೆಂಟೆತೆಂಟೆಗೆ ಒಮ್ಮೆ ಗಂಟೆಯನೆ ಹೊಡಯುವಳು

ಅಡವಿಯ ಒಳಗೆಲ್ಲ ಗಿಡವಾಗಿ ಹುಟ್ಟುವಳು
ಹುಡುಗಾರ ಕೈಲಿ ಚಿವುಟೀಸಿ ಕೊಂಬೋಳು
ಒಡೆಯ ಪಾಂಡುರಂಗ ವನಮಾಲೆಯಾಗುವಳು

ಇಂತ ಹುಡುಗಿ ತುಳಸೀಗೂ ನಮಗೂ ಸರಿಬರುವುದೆ
ಜಯಮಂಗಳ ನಿತ್ಯ ಶುಭಮಂಗಳ

**ಶಿವನ ಹಾಡು**

ಪಾರ್ವತಿಯ ಪತಿಯಂತೆ ಶಿವ
ಪಾಪಸಂಹರನಂತೆ
ಮೂರ್ಲೋಕದೊಡೆಯನಂತೆ
ಮುಕ್ತಿದಾಯಕನಂತೆ
ಈರೇಳು ಲೋಕಕ್ಕೆ ತಾನೇ ಆಗಿ ಪತಿಯಂತೆ

ನಂಜುಂಡ ಲಿಂಗನಂತೆ ಶಿವ
ನಂದಿವಾಹನನಂತೆ ಗಂಗಾಧರನಂತೆ
ಗೌರಿಯ ಪತಿಯಂತೆ ನಂಜುಂಡ ಲಿಂಗನಂತೆ
ನಮ್ಮ ರಕ್ಷಿಪನಂತೆ

ವಿಷಕಂಠ ಹರನಂತೆ ಶಿವ
ವಿಭೂತಿಪ್ರಿಯನಂತೆ ತ್ರಿಶೂಲಧರನಂತೆ
ತ್ರೈಲೋಕ್ಯವಂದ್ಯನಂತೆ ಜಟಾಮುಕುಟನಂತೆ

**ಬಲೀಂದ್ರನ ಹಾಡು**

ದೀವಳಿಗೆ ಪಾಡ್ಯದಲಿ ಧೂಳು ಸಂಜೆ ಹೊತ್ತಿನಲಿ
ರಾಯ ಬಲೀಂದ್ರನ ಎದುರುಗೊಳುವಳು

ಅಮಾವಾಸ್ಯೆ ಪಾಡ್ಯದಲಿ ಆಗ ಸಂಜೆ ಹೊತ್ತಿನಲಿ
ರಾಯ ಬಲೀಂದ್ರನ ಬೆಳಕು ತುಂಬಿತು ಪಟ್ಟಣದಿ
ಪಟ್ಟೆಯ ಸೀರೆಯ ಬೆಳಕು ಮುತ್ತಿನ ಗಿಂಡಿಯ ಬೆಳಕು
ಅಪ್ಪ ಬಲೀಂದ್ರನ ಬೆಳಕು ತುಂಬಿತು ಪಟ್ಟಣದಿ
ಪಟ್ಟೆ ಸೀರೆಯ ಬೆಳಕು ನೀಲಗಿಂಡಿಯ ಬೆಳಕು
ರಾಯ ಬಲೀಂದ್ರನ ಬೆಳಕು ತುಂಬಿತು ಪಟ್ಟಣದಿ

ಅಚ್ಚಮಲ್ಲಿಗೆಯ ತಂದು ಹೆಚ್ಚು ಹೆಚ್ಚೆಂದು ಚೆಲ್ಲಿದರು
ಅಪ್ಪ ಬಲೀಂದ್ರನ ಎದುರುಗೊಳುವ ಅರ್ತಿಯಲಿ
ಅಮರಿಕೆಯ ತಂದು ಹೊನ್ನುಹೊನ್ನೆಂದು ಚೆಲ್ಲಿದರು
ನಮ್ಮ ಬಲೀಂದ್ರನ ಬೆಳಕು ತುಂಬಿತು ಪಟ್ಟಣದಿ

ವರುಷಕ್ಕೆ ಬರುವುದೊಂದು ಅರಸು ದೀವಳಿಗೆ

ಹರುಷದಿಂದಲಿ ನೀರು ಮಡಿಯನುಟ್ಟು
ನಮ್ಮಾನೆ ಹಸುವಿಗಾರತಿಯ ಬೆಳಗಿರೆ
ಕಾಲಕ್ಬರುವುದೆಂದು ರಾಯ ದೀವಳಿಗೆ
ಬೇಗದಲಿ ನಿಂದು ಮಡಿಯಟ್ಟು
ಮಡಿಯುಟ್ಟು ನಮ್ಮನೆಯ ಗೋವಿಗಾರತಿ ಬೆಳಗೀರೆ

ತುಂಬೀದ ಕೆಚ್ಚಲಿಗೆ ಬಂದ್ಹೋದಾರ ದೃಷ್ಟಿ
ಬಂದ್ಹೋದಾರ ದೃಷ್ಟಿ ಬಹುದೃಷ್ಟಿ ಕೆಮ್ಮಾನ
ಕೆಂದೀಗಾರತಿಯ ಬೆಳಗೀರೆ

ತುಂಬಿದ ಕೆಚ್ಚಲಿಗೆ ಹೊರಗ್ಹೋದಾರ ದೃಷ್ಟಿ
ಹೊರಗ್ಹೋದಾರ ದೃಷ್ಟಿ ಕೆಮ್ಮಾನ
ಕರುವೀಗಾರತಿಯ ಬೆಳಗೀರೆ

**ವಿನಾಯಕನು ಚಂದ್ರಗೆ ಶಾಪ ಕೊಟ್ಟ ಹಾಡು**

ಶರಣು ಸಿದ್ಧಿ ವಿನಾಯಕ ವಿದ್ಯಾದಾಯಕ
ದೇಶ ದೇಶದಿ ಪೂಜಿಸಿ ಸಂತಸದಿ
ಮೂಷಕವೇರಿ ಬರುತಿರಲು
ಶೇಷನ ಕಂಡು ದೃಷ್ಟಿ ಹೆದರಲು
ಉರುವು ಬಿಚ್ಚಿ ಮೋದಕವು ಚೆಲ್ಲಲು
ಉರಗನ ಸುತ್ತಿದ
ಗಗನದಲಿ ಚಂದ್ರ ನೋಡಿ ನಕ್ಕನು :ಶರಣು:

ಚಂದ್ರ ನಕ್ಕನೆಂದೆನುತ
ದಂತಾವ ಮುರಿದು ಬಾಣ ಬಿಟ್ಟಂತೆಸೆದನು
ನಿತ್ಯದಲಿ ನಿನ ಕಂಡ ಜನರಿಗೆ
ಜಾರ ಚೋರಕ ಬರಲಿ ಎಂದು
ಪೂರ್ಣ ಚಂದ್ರನೆ ಬಾನಿನಾಗೆ
ಕ್ಷೀಣವಾಗೆಂದು ಶಾಪ ಕೊಟ್ಟನು

ಕೊಟ್ಟಶಾಪವನು ಕೇಳಿ ಚಂದ್ರನು
ಕಂಗೆಟ್ಟು ಬಾಯ್ಬಿಡುತಲಿ
ನಿತ್ಯಾಪವಾದ ಬಂದರೆ
ಮತ್ತೇನು ಗತಿ ಎನುತ ಪೇಳಲು
ಇವೊತ್ತು ನಿನ್ನಾ ನೋಡಿದ ಜನರಿಗೆ

ಕೊಟ್ಟಾ ಶಾಪವು ತಪ್ಪಲಾಗದು

ತನ್ನಾ ಸುತನೆಂದೆನುತ

ಹರನು ತಾನು ಮನ್ನಿಸದಿರುತಿರಲು

ತನ್ನ ಸುತನ ಮಹಾತ್ಮೆಯೆನುತ

ಮನ್ನಿಸಿ ವಿನಾಯಕನ ವ್ರತವ ನಡೆಸಿ

ಚಿನ್ನ ನಿನಗೆ ಸರಿಯಾರೆನುತ :ಶರಣು:

**ಗಣಪತಿಯನ್ನು ವರಬೇಡಿದ ಹಾಡು**

ಸೊಂಡಿಲಗಣಪಾಗೆ ಉಂಡೊಲಿಗೆ ಕೊಡುವೆ

ತಂಡ ಸಕ್ಕರೆ ಕಬ್ಬು ಕದಳಿ ತೆಂಗಿನಕಾಯಿ

ತಂದಿರಿಸುವೆನಯ್ಯ ಸರ್ವೇಶ ಪುತ್ರನೆ

ಆಡಿ ಬಾ ನಮ್ಮ ಅರಮನೆಯಲಿ ನೀನು

ನೋಡುವೆ ಮನದಣಿಯ

ಬೇಡಿದ್ದನೆಲ್ಲಾ ಕೊಡುವೆ ಗಣಪನೆಂದು ಕರೆವೆ

ಆಡಿ ಬಂದು ನಿಂದು ಮನೆಯಂಗಳದೊಳಗೆ

ಹೊಟ್ಟೆಗೆ ಬಿಗಿದಿದ್ದ ಸತ್ತ ಸರ್ಪವನೆ ತಂದು

ಮೃಷ್ಟಾನ್ನವನೆ ತಂದು ತುಪ್ಪ ಹಾಲನೆ ತಂದು

ಅರ್ಪಿಸುವೆನಯ್ಯಾ ನಿನಗೆ ಉಮೇಶಪುತ್ರನೆ

ಆನೆ ಮುಖಾದವನೆ ಅಂಬಿಕಪುತ್ರನೆ ನಂಬಿದೆ

ವರವ ಕೊಡು ಸಂಭವಿನಾಯಕ ಕರೆಯುವೆ ನಿನ್ನನು

ಬಂದು ನಿಂದು ನಮ್ಮನೆಯಂಗಳದೊಳಗೆ ಆಡಿ

ಮೂರುದಿವಸ ಇದ್ದು ಮುದ್ದು ಗಣೇಶ

ಕಾರೆಳ್ಳ ಕಡುಬು ಚಿಗುಳಿ ತಂಬಿಟ್ಟನು

ನೈವೇದ್ಯ ಇಡುವೆನು ಮಂಗಳಾರತಿಯ ಬೆಳಗುವೆನು

**ವರಪೂಜೆ ಹಾಡು**

ಚಿನ್ನದ ಹರಿವಾಣವನೆ ತಂದಿರಿಸುತ

ಸನ್ನುತಾಂಗನ ಪಾದವ

ಚಿನ್ನದಾಗಿಂಡಿಯೋಳ್

ಪನ್ನೀರಿನಿಂದಾಲಿ

ಚೆನ್ನಾಗಿ ಪಾದ ತೊಳೆಯುತ ನಲಿಯುತಲಿ

ವರನಾ ಪೂಜೆಯ ಮಾಡಿದನು ಹಿಮವಂತನು
ತರುಣಿ ಮೇನಕೆಯೊಡನೆ

ಹರನ ಶಂಕರನಾ ಮೃಗಧರನ ಶಶಿಧರನ
ಸುರನರ ಸೇವಿತನ ಸುಂದರನ
ನೂತನ ಸುರ ಪಾರಿಜಾತ ಮಾಲೆಗಳಿಂದ
ಸಂಪ್ರೀತಿಯಿಂದರ್ಪಿಸುತ

ಪೀತಾಂಬರ ವಜ್ರ ಜಾತಮನೋಹರ
ಎರೆದು ಪಾಲ ಕರದಿ ಸಡಗರದಿ
ವರ ಧೂಪ ದೀಪವು ವಿರಚಿಸಿ ನೈವೇದ್ಯ
ಪರಿಪರಿ ಪುಷ್ಪದ ಮಾಲೆಗಳನು ಹಾಕಿ

**ಬೀಗರ ಹಾಡು**

ಹತ್ತಿದ ತಕ್ಷಣ ಹತ್ತು ನಿಮಷದಿ
ಅರಮಾನೆ ಸೇರಿದರು
ರೈಲಿಂದಿಳಿದ ಬೀಗರಿಗೆರೆಲ್ಲ
ಮಕ ಕಾಲ್ಗಳ ತೊಳೆಯಲು
ಸಾಲು ಸಾಲಾಗಿಹರು

ಬೀಗರಿಗೆಲ್ಲ ಬಿಡದಿ ಮನೆಗಳ
ಬೇಗದಿ ರಚಿಸಿದೆವು
ನಾಗವೇಣಿಯರಿಗೆ ಕುಳಿತುಕೊಳುವುದಕೆ
ಸ್ಥಳಗಾಳ ತೋರಿದೆವು
ಗೋಡೆ ಗೋಡೆಗೆ ಸಾಲುಗನ್ನಡಿ
ನೀಳಾದ ಬಾಗಿಲು
ಬೀಗರಿಗೆಲ್ಲ ಕುಳಿತುಕೊಳ್ಳುವುದಕ್ಕೆ

**ಕನ್ಯಾದಾನ**

ಧರೆಯ ಒಳಗೆ ಪರ್ವತವುದರದಲಿ
ವರಪುತ್ರಿ ಜನಿಸಿದಳು
ತರಳೆಯ ಮದುವೆಗೆ ಅಣಿಮಾಡಬೇಕೆನುತ
ಪರಮೇಶ್ವರನಿಗೆ ಕೊಡಬೇಕೆನುತಲಿ
ಕನ್ಯಾದಾನವ ಮಾಡಿದ ಪರ್ವತರಾಜ

ಧನ್ಯ ತಾನೆಂದಾಡಿದ

ಧಾರೆಯ ಮಂಟಪದೊಳಗೆ
ಅಳಿಯನ ಕಾಲುಗಳನೆ ತೊಳೆದು
ಮೇಲೆ ಸಕಲಾಭರಣವ ತಂದಿಟ್ಟು
ಸಂತಾನವ ಕೊಟ್ಟು ಸಲಹಬೇಕೆನುತಲಿ

ಲಕ್ಷ ವರಹಗಳನು ತಂದು
ತಟ್ಟೆಯೊಳಗೆ ವರದಕ್ಷಿಣೆಗಳ ಕೊಡುತ
ವಿಷ್ಣು ಸಹಿತ ಸಾಲಿಗ್ರಾಮವ ಕೊಟ್ಟು ತಾ
ಎತ್ತಿದರು ನೆರೆದ ಪುತ್ರಿ ಪಾರ್ವತಿಯನು

ಧಾರೆ ಮಂಟಪದೊಳಗ
ಅಳಿಯನಿಗೆ ಹಾಲು ಸಕ್ಕರೆಯ ಕೊಟ್ಟು
ಮೇಲಾದ ಸಕಲಾಭರಣವ ತಂದಿಟ್ಟು
ಲೀಲೆಯಿಂದಲಿ ತನ್ನ ಬಾಲೆ ।ಕನ್ಯಾದಾನವ।

**ಮಾಲೆ ಹಾಕುವುದು**

ಮಾಲೆ ಹಾಕಿದಳೆ ದೇವಿ
ಶ್ರೀಕೃಷ್ಣನಿಗೆ ಮಾಲೆ ಹಾಕಿದಳೆ
ಧರೆಯು ಭೀಷ್ಮಕನ ಮಗಳ
ಹರಿಗೇ ಕೊಡಬೇಕೆನುವಾಗ
ಜೀರಿಗೆ ಬೆಲ್ಲ ಕಟ್ಟಿ ದೇವಿ ರಂಗನ ಮೆಚ್ಚಿ
ಊರು ಶೃಂಗಾರ ಮಾಡಿ ಧಾರೆಯನೆರೆವಾಗ ।ಮಾಲೆ।

**ಆರತಿ ಹಾಡು: ಬಳ್ಳಕ್ಕಿ ಚನ್ನಮ್ಮನವರು ಹಾಡಿದ್ದು**

ಶ್ರೀರಾಮಗೆ ಸೀತಾದೇವಿಗೆ
ನಾರೀಯರಾರತಿ ಮಾಡಿರೆ
ಆದಿಯಲ್ಲಸುರರ ಭಾದೆಯ ತಾಳದೆ ಸುರರು
ಮಾಧವನಿಗೆ ಹೋಗಿ ಮೊರೆಯಿಡಲು
ಮೇಧಿನಿಯೊಳು ತಾ ರಾಮನಾಗುವೆನೆಂದು ।ಶ್ರೀರಾಮ।

ವಸಂತಾ ಋತುಕಾಲದೊಳು
ಕುಶಲದಿಂ ಚೈತ್ರಮಾಸದೊಳು
ಎಸೆಯುತ್ತಲಿಹ ಶುದ್ಧ ನವಮಿಯಲ್ಲಿ

ಅಸುರಸಂಹಾರಕ ವಸುದೆಯೊಳಗುದಿಸಿದ

ಷೋಡಷ ವರುಷದ ಬಾಲರು

ನೋಡದೆ ತಾಟಕಿಯನು ಮರ್ಧಿಸೆ

ಮಾಡಿದ ಮುನಿ ಯಾಗವನು ನಡೆಸಿ

ಮಾರೀಚ ಸುಬಾಹು ದುಷ್ಟರ ಗೆಲಿದಗೆ ।ಶ್ರೀರಾಮ।

**ಅಂಬಾಸ್ತುತಿ: – ಇದು ನಾಲ್ಕು ಸಾಲುಗಳ ಮೂವತ್ತೊಂದು ನುಡಿಗಳನ್ನೊಳಗೊಂಡ ಅಂಬಾಸ್ತುತಿ. ಇಲ್ಲಿ ಒಂದರೆಡು ನುಡಿಗಳು ಬಿಟ್ಟುಹೋಗಿರುವ ಸಾಧ್ಯತೆಗಳಿದೆ. ನನ್ನ ಅಕ್ಕ ಕಮಲಾಕ್ಷಿ ಸುಮಾರು ೩೫ ವರ್ಷಗಳ ಹಿಂದೆ ಶಿವಮೊಗ್ಗದಲ್ಲಿ ಕಲಿತುಕೊಂಡ ಹಾಡಿದು. ಕೃತಿಕಾರರು ತಿಳಿದಿಲ್ಲ. ಸ್ತುತಿಯ ಕೊನೆಯಲ್ಲಿ 'ವರ ಸುಬ್ಬಾಶಾಸ್ತ್ರಿ ಪುತ್ರಿ' ಎಂದಿದೆ. ಕರ್ತೃವು ಸುಬ್ಬಾಶಾಸ್ತ್ರಿಯ ಪುತ್ರಿಯಾಗಿದ್ದು ಜಯ ಎಂಬುದು ಆಕೆಯ ಹೆಸರಿರಬೇಕು. 'ಪಾಟಕರುಣೆ' ಎಂಬುದು ಮನೆತನದ ಹೆಸರಿರಬೇಕೆಂದು ಅದೇ ಪ್ರಾಂತ್ಯದ ದೊಡ್ಡಮ್ಮನವರು ಅಭಿಪ್ರಾಯಪಟ್ಟಿದ್ದಾರೆ. ಅಂಬೆಯನ್ನು ಸ್ತುತಿಸಿರುವ, ಮಾನಸ ಪೂಜೆಯನ್ನು ವರ್ಣಿಸುವ ಅಪರೂಪದ ಧೀರ್ಘ ಕೃತಿಯೆಂದು ಇದನ್ನಿಲ್ಲಿ ದಾಖಲಿಸಿದೆ.**

ಕೈಲಾಸಗಿರಿನಿವಾಸಿ ಅಂಬಾ ಶರಣು ಶಂಕರಿ ಭವಾನಿ
ಪರಮಪಾವನೆ ಲೋಕಪಾವನೆ ಭಕ್ತಿ ಚಿಂತಾಮಣಿ
ಗುಣಗಾಮಿನಿ ಅಂಬಾ ಪಾಹಿಮಾಂ ಪರಮೇಶ್ವರಿ ।೧।

ವಾರಾಹಿಣಿ ವೈಷ್ಣವಿ ಅಂಬಾ ಕೌಮಾರಿ ನಾರಸಿಂಹಿಣಿ
ಕಾಳಿ ಕಟಾಕ್ಷಿಣಿ ಶ್ಯಾಂಭವಿ ಶ್ಯಾಮಲೇ
ವೀರಮಾತೆ ಭಗವತಿ ಅಂಬಾ ಪಾಹಿಮಾಂ ಪರಮೇಶ್ವರಿ ।೨।

ಬ್ರಹ್ಮಾಂಡ ಬಾಂಡೋದರಿ ಅಂಬಾ
ಬ್ರಹ್ಮರೂಪಿಣಿ ಬ್ರಾಹ್ಮಿಣಿ
ಬ್ರಹ್ಮ ಮಹೇಶ್ವರಿ ಬ್ರಹ್ಮ ಮಂತ್ರೋದಾರಿ
ಪರಬ್ರಹ್ಮ ನಂದ ಸ್ವರೂಪೆ ಅಂಬಾ ಪಾಹಿಮಾಂ ಪರಮೇಶ್ವರಿ ।೩।

ಸೋಮಸೂರ್ಯಾಗ್ನಿ ನೇತ್ರೆ ಅಂಬಾ
ಭಾನುಕೋಟಿ ಪ್ರಕಾಶೆ ಭಾರತಿ ಭಾರ್ಗವಿ
ಪಾರ್ವತಿ ಸರಸ್ವತಿ ಸಾವಿತ್ರಿಗಾಯಿತ್ರಿಣೀ
ಅಂಬಾ ಪಾಹಿಮಾಂ ಪರಮೇಶ್ವರಿ ।೪।

ದುರ್ಗಿ ಮಹಾಂಕಾಳಿನಿ ಅಂಬಾ
ಕೋಮಲೆ ಕೌಮಾರಿ ಜನನಿ
ಅಂಬಾ ಕದಂಬ ದುರ್ಗಾಂಬೆಯ ಜಗದಂಬ

ಸೌಂದರ್ಯ ಧೀರ್ಘ ನಯನೆ
ಅಂಬಾ ಪಾಹಿಮಾಂ ಪರಮೇಶ್ವರಿ ।೫।

ವೀರಶಕ್ತಿ ಮೋಹಿನಿ ಅಂಬಾ ಗೀರ್ವಾಣಿ ಕಿನ್ನರಾಂಗಿ
ಗೌರಿಮಹೇಶ್ವರಿ ಶಾಖಾಂಬರಿ ದುರ್ಗಿ
ಸರ್ವೇಶ್ವರಿ ತ್ರಿಪುರ ಸುಂದರೀ
ಪಾಹಿಮಾಂ ಪರಮೇಶ್ವರಿ ।೬।

ಕನಕವೀಳ್ಯದ ಸಂಯುತೆ ಅಂಬಾ
ಪದ್ಮಮುಕ್ತಾಲ ಖಚಿತೆ
ಕರ್ಪೂರ ಆರತಿ ಮಂಗಳಮೇ ಸದಾ
ಮಂಗಳಂ ಜಯಮಂಗಳಂ
ಅಂಬಾ ಪಾಹಿಮಾಂ ಪರಮೇಶ್ವರಿ ।೭।

ನಕ್ಷತ್ರ ಮುಕ್ತಾಮಿನಿ ಅಂಬಾ
ಪುಷ್ಪ ನಾಶಿಕಾ ಧಾರಿಣಿ
ಕಮಲನೇತ್ರೇ ನೀರೆ ರೇಖಾವಳಿ ರಾಖಿಣಿ
ಕಸ್ತೂರಿ ತಿಲಕಪಾಲೆ ಅಂಬಾ ಪಾಹಿಮಾಂ ಪರಮೇಶ್ವರಿ ।೮।

ಶಿವಶಕ್ತಿ ಶಿವರೂಪಿಣಿ ಅಂಬಾ
ಶಿವಕೇಶಿ ಶಿವವಲ್ಲಬೆ ಶಿವವಿಶ್ವರೂಪಿಣಿ
ಶಿವಪಾಟಲೀ ಶಿವೆ ಶಿವೆ ಕಾಯುಕ ಮೋಹಿನೀ
ಅಂಬಾ ಪಾಹಿಮಾಂ ಪರಮೇಶ್ವರಿ ।೯।

ದೇಹಿಮೇ ಮಾಂಗಲ್ಯಮಂ ಅಂಬಾ
ದೇಹಿಮೇ ಭಕ್ತಿಮುಕ್ತಿ
ವಿದೇಹರಾಜಕುಮಾರೀ ಧೀರ್ಘಾಯುಪಾಲಿನಿ
ದೇಹಿಮೇ ದೇಹಿ ಶರಣಂ
ಅಂಬಾ ಪಾಹಿಮಾಂ ಪರಮೇಶ್ವರಿ ।೧೦।

ರತ್ನಮಂಟಪ ವಿರಚಿತಂ ಅಂಬಾ
ಕಸ್ತೂರಿ ಪೀಟಕದಲಿ
ದಿವ್ಯ ಪೀಠಸ್ತಿಕೌ ದಿವ್ಯಾಂಬರಾಲಂಕಾರಿ
ರತ್ನ ಯಜ್ಞಪವೀತಧಾರಿಣಿ
ಅಂಬಾ ಪಾಹಿಮಾಂ ಪರಮೇಶ್ವರಿ ।೧೧।

ತ್ರಾಹಿಮಾಂ ಗಿರಿಪುತ್ರಿಣಿ ಅಂಬಾ
ತ್ರಾಹಿಮಾಂ ಪಂಕಜಾಕ್ಷಿ
ತ್ರಾಹಿತ್ರಾಹಿಮೇ ದೇವಿ ಪಾಟಲೀ ಚಂಪಕ
ಸಾವಿತ್ರಿ ಗಾಯಿತ್ರಿಣಿ
ಅಂಬಾ ಪಾಹಿಮಾಂ ಪರಮೇಶ್ವರಿ ।೧೨।

ವೇದ ಮೂಲಾದಿ ದೇವಿ ಅಂಬಾ
ವೇದಮುಖಿ ವೇದಮಾತಾ
ವೇದಪೋಷಿಣಿ ವೇದ ಮಂತ್ರೋದಾರಿ
ವೇದನಾಯಕ ಪಾಲಿನೀ
ಅಂಬಾ ಪಾಹಿಮಾಂ ಪರಮೇಶ್ವರಿ ।೧೩।

ಗಿರಿಪುತ್ರಿ ರೂಪಿಣಿ ಅಂಬಾ
ಗಿರಿಮಧ್ಯ ಸಂಚಾರಿಣಿ
ವನಪುಷ್ಪ ಸಂಜಾತೆ ವನದೇವತಾನಂದೆ
ವನಭೋಜನಾಪ್ರಿಯಳೇ ಅಂಬಾ ಪಾಹಿಮಾಂ ಪರಮೇಶ್ವರಿ ।೧೪।

ಇಂದ್ರನೀಲಾದಿ ವಜ್ರೆ ಅಂಬಾ ಮಾಣಿಕ್ಯ ಪದ್ಮಪದಕೆ
ಮುಕ್ತ ಮನೋಹಾರ ರತ್ನ ಕೇಯೂರಕೆ
ನಾನಾಭರಣ ಭೂಷಿತೆ
ಅಂಬಾ ಪಾಹಿಮಾಂ ಪರಮೇಶ್ವರಿ ।೧೫।

ಹರಿದ್ರಾಕುಂಕುಮ ಸಂಯುತೆ ಅಂಬಾ
ಶ್ರೀಗಂಧ ಶಿವಶಾಶ್ವತೆ
ಪೂಜಿತಂಮೇ ಸದಾ ದೇವಿ ದಯಾನಿಧೆ
ರಕ್ಷಿಸೆ ಮಮ ರಕ್ಷಿಣಿ
ಅಂಬಾ ಪಾಹಿಮಾಂ ಪರಮೇಶ್ವರಿ ।೧೬।

ಶಾಕಲ್ಯ ಗಿರಿನಿವಾಸಿ ಅಂಬಾ
ಚಾಮುಂಡಿ ಸಪ್ತಮಾತಾ
ಮಮಬಂಧು ಭೀಕರಿ ಮಮಮಾತಾ ಮಾಚಮ್ಮ
ಮನಬಂಧು ಜನಪೋಷಿಣಿ
ಅಂಬಾ ಪಾಹಿಮಾಂ ಪರಮೇಶ್ವರಿ ।೧೭।

ಲಲಿತಾಂಗಿ ಲಲಿತರೂಪೆ ಅಂಬಾ

ಲಲಿತ ಲಾವಣ್ಯ ಶ್ಯಾಮಲೆ
ಲಲಿತ ಪಾರಾಯಣೆ ಲಲಿತ ಮಂತ್ರೋದಾರಿ
ಲಲಿತ ರಾಜ್ಯಪಾಲಿನಿ
ಅಂಬಾ ಪಾಹಿಮಾಂ ಪರಮೇಶ್ವರಿ ।೧೮।

ಸರ್ವಲೋಕ ಸೂತ್ರಿಣಿ ಅಂಬಾ
ಸರ್ವಮಂತ್ರ ಸ್ವರೂಪಿಣಿ
ಸರ್ವಯಂತ್ರ ತ್ರಾಣಿ ಸರ್ವ ಮಂತ್ರೋದಾರಿ
ಸರ್ವಮೇ ಸರ್ವಜನನಿ
ಅಂಬಾ ಪಾಹಿಮಾಂ ಪರಮೇಶ್ವರಿ ।೧೯।

ಇಂದ್ರಾಕ್ಷಿ ಪಂಚಾಕ್ಷರಿ ಅಂಬಾ
ಓಂಕಾರಿ ಬೀಜಾಕ್ಷರಿ
ಕಾಮಾಕ್ಷಿ ಮೀನಾಕ್ಷಿ ಲೋಲಾಕ್ಷಿ ಪದ್ಮಾಕ್ಷಿ
ಕಮಲಾಕ್ಷಿ ಲೋಕಸಾಕ್ಷಿಣಿ
ಅಂಬಾ ಪಾಹಿಮಾಂ ಪರಮೇಶ್ವರಿ ।೨೦।

ಯೋಗಮೇ ಯೋಗಾಂಬಿನಿ ಅಂಬಾ
ಯೋಗನಿಷ್ಠಾವೇಷ್ಟಿತೆ
ಯೋಗಮಂತ್ರಾ ಯೋಗ ಯೋಗಮಂತ್ರಧ್ಯಾನ
ಯೋಗಧ್ಯಾನ ಪ್ರಸಾದೆ
ಅಂಬಾ ಪಾಹಿಮಾಂ ಪರಮೇಶ್ವರಿ ।೨೧।

ದಿವ್ಯಮಂಗಳರೂಪಿಣಿ ಅಂಬಾ
ವರಗೌರಿ ನಿಮ್ಮ ಧ್ಯಾನಿಪೆ
ಆವಾಹನಾಮೇ ದೇವಿ ಜಯನಿತ್ಯ ಕಲ್ಯಾಣಿ
ಜಯಭಕ್ತಕುಲ ಸಂಭವೆ
ಅಂಬಾ ಪಾಹಿಮಾಂ ಪರಮೇಶ್ವರಿ ।೨೨।

ಚಕ್ರಾಂಕೆ ಚಕ್ರರೂಪೇ ಅಂಬಾ
ಚಕ್ರಕರೇ ಚಕ್ರಸಾಕ್ಷಿ
ಚಕ್ರಕರ್ತಾಭೌಕ್ತೆ ಚಕ್ರಮಹಾದೇವಿ
ಭೂಚಕ್ರ ಮಂಡಲ ಪಾಲಿನಿ
ಅಂಬಾ ಪಾಹಿಮಾಂ ಪರಮೇಶ್ವರಿ ।೨೩।

ಯಜ್ಞಾಂಗಿ ಯಜ್ಞರೂಪೇ ಅಂಬಾ
ಯಜ್ಞಕರ ಯಜ್ಞಸಾಕ್ಷಿ
ಯಜ್ಞಕರ್ತಾ ಭೌಕ್ತೆ ಯಜ್ಞಮಹಾದೇವಿ
ದಕ್ಷಯಜ್ಞ ವಿನಾಶಿನೀ
ಅಂಬಾ ಪಾಹಿಮಾಂ ಪರಮೇಶ್ವರಿ ।೨೪।

ಸೌಭಾಗ್ಯವತಿ ಪಾರ್ವತಿ ಅಂಬಾ
ಮಂಗಳಸ್ನಾನಾನಂತರ
ದಿವ್ಯಪೀಠಸ್ತಿಕೌ ದಿವ್ಯಾಂಬರಾಲಂಕಾರಿ
ರತ್ನಯಜ್ಞೋಪವೀತ ಧಾರಿಣಿ
ಅಂಬಾ ಪಾಹಿಮಾಂ ಪರಮೇಶ್ವರಿ ।೨೫।

ಕನಕನೂಪುರ ಸಂಯುತೆ ಅಂಬಾ
ಕನಕವಡ್ಯಾಣ ಖಚಿತೆ
ನವರತ್ನಮಣಿ ಕುಂಡಲ ಭೂಷಿತಾನಂದೆ
ಕ್ಷೀರಪಲ್ಲವಶೋಭಿತೆ
ಅಂಬಾ ಪಾಹಿಮಾಂ ಪರಮೇಶ್ವರಿ ।೨೬।

ಮಲ್ಲಿಕಾ ಮರುಗ ಜಾಜಿ ಅಂಬಾ
ಸೌಗಂಧರಾಜ ಸುರಗಿ
ಕುಸುಮ ಕಲ್ಹಾರ ಕೇತಕಿ
ಪಾದರಿಸಮರ್ಪಿತಂ ಪಾರ್ವತಿ ಮಮರಕ್ಷಿಣಿ
ಅಂಬಾ ಪಾಹಿಮಾಂ ಪರಮೇಶ್ವರಿ ।೨೭।

ಅಪರಾಧಂ ಕ್ಷಮೇ ಕ್ಷಮೇ
ತ್ರಿಪುರ ಸಂಹಾರಿ ಕ್ಷಮೇ
ಸಕಲ ಸಂಪತ್ಕಾರಿ ಸರ್ವಾಪರಾಧಂ ಕ್ಷಮೇ
ಸಕಲಮೇ ಸಕಲ ಜನನಿ
ಅಂಬಾ ಪಾಹಿಮಾಂ ಪರಮೇಶ್ವರಿ ।೨೮।

ಛತ್ರ ಛಾಮರಂ ಅಂಬಾ
ನೃತ್ಯಗೀತಂ ಶಿವೆ
ಅಶ್ವಾಂಧೂಳಿಕೈ ಗಜಸಹಿತಮೇ ದೇವಿ
ಧಾರುಣಿ ದಯಪಾಲಿನಿ
ಅಂಬಾ ಪಾಹಿಮಾಂ ಪರಮೇಶ್ವರಿ ।೨೯।

ವರಸುಬ್ಬಾಶಾಸ್ತ್ರಿ ಪುತ್ರಿ ಅಂಬಾ
ಜಯಕೃಷ್ಣ ಪಾಟಕರುಣಿ
ವರಗೌರಿ ಮಂಗಳಂ ದೃಢಭಕ್ತಿ ನಿರ್ಮಿತಂ
ಆನಂದಮೇ ಭಾಷಿತಂ
ಅಂಬಾ ಪಾಹಿಮಾಂ ಪರಮೇಶ್ವರಿ ।೩೦।

ಮಂಗಳಂ ಜಗದೀಶ್ವರಿ ಅಂಬಾ
ಮಂಗಳಂ ಪರಮೇಶ್ವರಿ
ಸರ್ವಮಂಗಳೇ ನಿತ್ಯ ಜಗದಿ ಸುಜನರ ಪೊರೆವ
ಸನ್ಮಂಗಳೇ ಭವಾನಿ
ಅಂಬಾ ಪಾಹಿಮಾಂ ಪರಮೇಶ್ವರಿ ।೩೧। –

ಸಂಸ್ಕೃತ ಭೂಯಿಷ್ಟವಾದ ರಚನೆಯಿದು. ಅವರ ಭಾಷಾ ಪ್ರೌಢಿಮೆಯನ್ನಿಲ್ಲಿ ಕಾಣಬಹುದು. ಪ್ರತಿನುಡಿಯು 'ಅಂಬಾ ಪಾಹಿಮಾಂ ಪರಮೇಶ್ವರಿ' ಎಂದು ಕೊನೆಯಾಗುತ್ತದೆ.

ಶ್ರೀಮತಿ ವನಜ ಚಂದ್ರಶೇಖರ್, ಹೊಯ್ಸಳ ಕರ್ನಾಟಕ ಸಂಘ, ಬೆಂಗಳೂರು ಇವರು ರಾಜ್ಯಾದ್ಯಂತ ಮಹಿಳೆಯರನ್ನು ಸಂಘಟಿಸಿ ಸಂಪ್ರದಾಯದ ಹಾಡುಗಳನ್ನು ಸಂಕಲಿಸಿದ್ದಾರೆ. ಸಂಶೋಧನಾ ಕಾರ್ಯದಲ್ಲಿ ಇದನ್ನು ಬಳಸಿಕೊಳ್ಳಲಾಗಿದೆ. ಹಾಡಿದವರ ಹೆಸರುಗಳನ್ನು ದಾಖಲಿಸಲಾಗಿದೆ.

ಸೀಮಂತ ಶಾಸ್ತ್ರದಿಂದ ಮಗುವನ್ನು ತೊಟ್ಟಿಲಿಗೆ ಹಾಕುವ ಶಾಸ್ತ್ರದ ಹಾಡುಗಳು:

ಮೊದಲು ಗರ್ಭವತಿಯಾದಾಗ ೩, ೫, ೭, ೯ನೇ ತಿಂಗಳಲ್ಲಿ ಮಾಡುವ ಶಾಸ್ತ್ರಗಳನ್ನು ಹಾಡಿನ ರೂಪದಲ್ಲಿ ಹಾಡಿ ಶಾಸ್ತ್ರೋಕ್ತವಾಗಿ ಮಾಡಿದ ಕಾರ್ಯಕಲಾಪಗಳು: ಎಣ್ಣೆ ಶಾಸ್ತ್ರದಿಂದ ಆಶೀರ್ವಾದದವರೆಗೆ:

ಎಣ್ಣೆ ಶಾಸ್ತ್ರ (ಸರಸ್ವತೀ ಶಾಸ್ತ್ರಿ)
ತೈಲವನು ತೀದರು ಲಲನೆಯರೆಲ್ಲರು
ಜಲಜ ಸಂಭವೆಗೀಗ ಸುಲಲಿತ ಕುಸುಮದಿ
ಅಂಗನೆಯರು ಕೂಡಿ ಮಂಗಳವನು ಹಾಡಿ
ಅಂಗೈಯೊಳು ನವ ಭೃಂಗಾಮಲಕವ :ಪ:

ಸಾರಸ ನೇತ್ರೆಗೆ ಶ್ರೀರಮಣಿಗೆ ದಿವ್ಯ
ಚಾರುಚರಿತೆಗೆ ಸಾರಸ ಸುಮದಿಂ :ಪ:

ಸುರಗಿ ಸೇವಂತಿಗೆ ಪರಿಮಳ ಕುಸುಮಗಳು
ಸಿರಿಮಾಂಗಿರಿ ಪತಿ ಅರಸಿಗೆ ಮುದದಿಂ

**ಹಸೆಗೆ ಕರೆಯುವುದು: ಸರಸ್ವತಿ ಶಾಸ್ತ್ರಿ, ಉಷಾ**

ವರರತ್ನದಾ ಹಸೆಗೆ ಸಿರಿಲಕ್ಷ್ಮಿ ಬಾರೌ ನೀ
ಮಂಧರೋದ್ಧಾರಿ ಹರಿ ಮಡದಿ ಮಹಾಲಕ್ಷ್ಮಿ
ಸಾಂದ್ರ ಸುಗುಣ ರಾಮಚಂದ್ರ ನಾರಾಯಣ

ಕ್ಷೀರಸಾಗರ ಸುತೆ ವಾರಿಜಾಕ್ಷನಾ ಪ್ರಿಯೆ
ನಾರದಾ ವಂದೀತೆ ನಾಮಗಿರಿಯೆ

ಪದುಮದಳಾಕ್ಷಿಯೆ ಪಂಕಜಾಮುಖಿಯೆ ಮುಖಿ ನೀ
ವೆಂಕಟಾರಮಣಾನ ಬಿಂಕದಾ ರಾಣೀಯೆ

**ಗಣಪತಿ ಪೂಜೆ: ಸುಂದರು ರಾಮಚಂದ್ರ**

ಪರಿಪಾಹಿ ಪರಾತ್ಪರ ಗಿರಿಜಾಕುಮಾರ
ಇಂದೂಧರ ಪುತ್ರ ವಂದೀಪೆ ಪುತ್ರ
ಸ್ಕಂಧ ಪ್ರೀತಿಪಾತ್ರ ಸುಂದರಾ ಗಾತ್ರ

ಗಜವದನಾನೆ ಭುಜನಭೂಷಣಾನೆ
ಸುಜನ ರಕ್ಷಕ ಭಜಿಸುವೆ

ತ್ರಿಜಗ ಪೂಜ್ಯನೆ ನಿಜದಿ ನಂಬಿದೇನು
ಕುಜನ ದೂರನೆ ನಿಜತೇಜನೆ

**ಬಯಕೆ ಹಾಡು: ನಳಿನಿ ಪ್ರಭಾಕರ್ ವಸ್ತಾರೆ**

ಮಾನವೇಂದ್ರನ ಕಾಂತೆ
ಭೂನಂದನ ಜಾತೆ ಏನೇನ ಬಯಸಿದಳು

ತಿಂಗಳು ತುಂಬಲು ಕಂಗಳು ಗುಳಿಬೀಳೆ
ಅಂಗವು ಬಡವಾದವು
ಬಂಗಾರ ಬಣ್ಣವು ಮಂಗಳಾಂಗಿಯ ಮೈಯ
ಸಿಂಗರಿಸುತಲಿದ್ದ ಅಂಗನಾಮಣಿಯು

ಮಾಸವೆರಡಾಗಲು ಮಂಚದಿಂದಿಳಿಯಳು
ಪೂಗಳು ಗಂಧವನು
ಲೇಸಾಗಿ ಪಾಯಸ ಶಾಲ್ಯಾನ್ನಗಳ
ವಾಸನೆ ಐತಾರೆ ಸಹಿಸದಂಗನೆಗೆ

ಮಂಡೆಯ ಬಾಚಳು ಮಂಚದಿಂದಿಳಿಯಳು
ದುಂಡು ಮಲ್ಲಿಗೆಯ ಮುಡಿಯಳು

ಪೆಂಡಾಸಕ್ಕರೆ ದ್ರಾಕ್ಷಿ ಪೆಂಟಖರ್ಜೂರವ
ಕಂಡರೆ ಮುಖ ತಿರುಹಿಕೊಂಡು ಕೂಡುವಳು

ತಿಳಿದು ಬಯಕೆಯಲ್ಲಿ ವನಜಾಯತಾಕ್ಷಿಗೆ
ಎಳಹುಳಿ ಸಿಹಿ ಹಣ್ಣುವೆರೆಸಿದ
ಎಳಚಿ ಕಿತ್ತಳೆ ದಾಳಿಂಬೆ ನೇರಳೆ
ಹಣ್ಣುಗಳ ತಾನು ಬಯಸುವಳು

ಎಳಬಿಸಿಲೊಳೂ ತನ್ನ ಕೆಳದಿಯರೊಡನೆ
ತಂಗಳುಣಬೇಕೆಂಬೋಳು
ಪಿಳುಪಂಚ ಮುನಿ ಲಲನೆಯರೊಡಗೂಡಿ
ತಳಿರು ಮಂಚದ ಮಾಲೆ ಮಲಗಬೇಕೆಂಬೋಳು

ಹೋಳಿಗೆ ಹೊಯ್‌ಗಡುಬು ಎಣ್ಣೋರಿಗೆ ಚಕ್ಕುಲಿ
ತಾರಾ ಪೇಣಿಗಳ ಖಾರದಾಂಬೊಡೆಗಳ ಸೇರಿದ ಗೊಜ್ಜನು
ನಾರಿಮಣಿಯು ತಾ ಬಯಸುತಲಿಹಳು

ಹೊಸ ಪತ್ತಲವುಟ್ಟು ಹಸಿರು ಬಣ್ಣವ ತೊಟ್ಟು
ನಲಿನಲಿಯುತಳಿಹಳು ಬಿಸುಜಲೋಚನೆಯು
ಬಿಸಲಲ್ಲಿ ಬಳಲುತ್ತ ಅವಸರದಿಂದಲಿ
ವಸುಧೆಯೊಳು ಮಲಗಿದಳು

ಮೇಲ್ಯೆದು ತಿಂಗಳು ತರುಣಿಗೆ ತುಂಬಲು
ಹರಿದೆಯರು ಪರಿಪರಿ ಬಳೆಗಳ ಕರದಲಿ
ಹಿಡಿಸುತ ಪರಮಪುರುಷನ ಲಹರಿಯ
ಹರುಷದಿ ಮುದದಿಂದ

**ಹೂ ಮುಡಿಸಿದ್ದು – ವಿಜಯಗೋಪಾಲಕೃಷ್ಣ**

ಕುಸುಮಾವ ಮುಡಿಸಿದರು
ಬಿಸಜಾಕ್ಷಿಗೊಲಿದು
ಕುಸುಮಾವ ಮುಡಿಸಿದರು

ಕ್ಷೀರಸಾಗರ ಜಾತೆ ನೀರಜ ಭವಮಾತೆ
ರಮಣೀಗೆ ವರಪಾರಿಜಾತದ ನವ :ಕುಸುಮಾವ:
ಶೀತಕರಾನನೆ ಪೂತನತಾವನೆ (?)
ಶೀತರುಣಿಗೆ(?) ನವಕೇತಕಿ ಮೊದಲಾದ :ಕುಸುಮಾವ:

ಬಾಲಶಶಿಪ್ರಭ ಹಾಲಜನಕ ಜನಪಾಲೆಗೆ ಶ್ರೀಹರಿ
ಲೋಲೆಗೆ ಮಲ್ಲಿಕಾ :ಕುಸುಮಾವ:

**ಬಳೆ ತೊಡಿಸುವ ಶಾಸ್ತ್ರ: ಶಾರದಾ ಶಂಕರಸ್ವಾಮಿ**

ಬಳೆಯನಿಡಲಿ ಬಂದ ರಜತಾದ್ರಿಯಿಂದ
ಮಡದಿಯರರಿಯದಂತೆ/ತನ್ನ
ಮಡದಿಯರಿಯದಂತೆ ವರದ ನಂಜುಂಡ

ಆವಿಗೆಯನೆ ಮೆಟ್ಟಿ ಹಾವು ಕೊರಳಗೆ ಸುತ್ತಿ
ಕಾವಿಬಟ್ಟೆಯನುಟ್ಟು ಕೈಲಾಸ ಬಿಟ್ಟು
ಹೂವಿನಾ ಬಳೆ ಸಂಚಿ ಹೆಗಲೊಳಗಿಟ್ಟು
ಹಿಮಗಿರಿಸುತೆಯ ಮೇಲೆ ಮನಸ್ಸಿಟ್ಟು :ಬಳೆ:

ಈಶ ನಿನ್ನಯ ದೇಶ ನಾಶವೆ ಹೇಳು
ಕಾಶಿಯ ಕ್ಷೇತ್ರದಿ ಇರುವೆನು ಕೇಳು
ಸುವಾಸಿನಿಯರು ಪೂಜೆ ಮಾಳ್ಪೆವು ತಾಳು
ಬಾಸುರಾಂಗಿಯರಿಗೆ ಬಳೆಗಳ ನೀಡು :ಬಳೆ:

ಸಣ್ಣಪಾಣಿಯ ಬಳೆ ಚಿನ್ನದ್ಹೂವಿನ ಬಳೆ
ಕನ್ನಡಿಹಾಕಿದ ಹೊನ್ನು ಹೊಸಬಳೆಯು
ಷಣ್ಮುಖ ಪಿತನಗುತಾ ಕನ್ಯೆ ಪಾರ್ವತಿಕೈಗೆ
ಸುವರ್ಣದ ಬಳೆಯನಿಟ್ಟು ಪನ್ನಗಧರನು :ಬಳೆ:

ಹಸಿರುಪಟ್ಟೆಯ ಬಳೆ ಕುಸುರಿ ಹಚ್ಚಿದ ಬಳೆ
ಹೊಸವಜ್ರದಾ ಬಳೆ ಹರಳೀನ ಬಳೆ
ತ್ರಿಶೂಲಪಾಣಿ ನಗುತ ಗಜಗೌರಿ ಹಸ್ತಕೆ
ಮಿಸುಣಿಯ ಬಳೆಯನಿಟ್ಟ
ವಿಷಮ ಲೋಚನನ

**ಮಡಿಲು ತುಂಬುವ ಶಾಸ್ತ್ರ: ಸುಂದರು ರಾಮಚಂದ್ರ**

ಕಮಲಾಕ್ಷಿ ಕೋಮಲಾಂಗಿಗೀಗ ವಿಮಲಮುಖಿಯರು
ಫಲವಸ್ತು ಪರಿಪರಿಗಳಿಂದ ಮಡಿಲ ತುಂಬಿರೆ

ಮಾವು ಮಾದಳದ ಫಲ ಬಾಳೆಯಾ ಫಲ
ರಾಮನಾ ರಾಣಿಗೀಗ ಮಡಿಲ ತುಂಬಿರೆ

ನಿಂಬೆ ನೇರುಳೆಯ ಫಲ ತೆಂಗಿನಾ ಫಲ

ರಂಗನಾ ರಾಣಿಗೀಗ ಮಡಿಲ ತುಂಬಿರೆ

ದ್ರಾಕ್ಷಿ ದಾಳಿಂಬ ಫಲ ಖರ್ಜೂರ ಫಲ
ಕೃಷ್ಣನಾ ರಾಣಿಗೀಗ ಮಡಿಲ ತುಂಬಿರೆ

**ಕುಯ್ಲು ಹೋಗುವ ಶಾಸ್ತ್ರ: (ಬಾಣಂತಿ ಶಾಸ್ತ್ರ) –ಶಾರದಾ ಶಂ.ಸ್ವಾಮಿ**

ದಶರಥ ರಾಮರಿಗೆ ದಶರಾತ್ರಿಯಾಗಿರಲು
ವಸಮಿನುಣಿಯಾ ರಚಿಸಲು
ನಾಲ್ಕುದಿಕ್ಕಿಗೆ ನಂದನ ದೇವನೆ ಸಖಿ
ಬೇವು ಕುಡುಗೋಲು ಹಿಡಕೊಂಡು
ಜಾನಕಿ ಸೂರ್ಯನಿಗರ್ಘ್ಯವ ಕೊಡುವಳು
ಭಾಮೆ ನೀ ಕ್ಷೇಮವೆ ಭಾವ ಮನ್ಮಥ
ಸುಖವೆ ಆದಾವೆ ದಶರಾತ್ರಿ ಕಳೆದಾವೆ
ಹಾಗೆಂದು ಭಾಮೆಯರೆಲ್ಲಾ ನುಡಿದರು
ಮಿತ್ರೆ ನೀ ಕ್ಷೇಮವೆ ಪುತ್ರ ಮನ್ಮಥ ಸುಖವೆ
ಆದಾವೆ ದಶರಾತ್ರಿ ಕಳೆದಾವೆ
ಕಳೆದಾವೆ ಹಾಗೆಂದು ಮಿತ್ರೆಯರೆಲ್ಲ ನುಡಿದರು

ಹತ್ತುದಿನದಾ ಬಾಣಂತಿ ಹಿತ್ತಲೆಗೆ ಬಂದಾಳೆ
ಕಿತ್ಲೇ ಹಣ್ಣಿನಂತೆ ಮುಖಪದ್ಮ
ಮುಖಪದ್ಮ ಬಾಣಂತಿ
ಪುತ್ರರಿನ್ನೆಷ್ಟು ಚೆಲುವಾರೆ

**ಬಾಣಂತಿ ಹಸೆಗೆ ಕರೆದದ್ದು: ವಿಜಯ ಗೋಪಾಲಕೃಷ್ಣ**

ಸ್ವರ್ಣನಾ ಗೌರಿಯ ಸುತಗೆ ವಂದನೆ ಮಾಡಿ
ಕನ್ನೆ ಶಾರದೆ ಬಹು ಕಾರುಣ್ಯದಿಂದಲಿ
ವಿಶ್ವಾಸದಲಿ ಒಳ್ಳೆ ಮಾತುಗಳನಿತ್ತು
ಸನ್ಮಾನದಿಂದಲೆ ಕರುಣಿಸು ತಾಯೆ

ಮಾಳಿಗೆ ಮನೆಯಲ್ಲಿ ಮಾಣಿಕ್ಯದ್ಹಾಸೆ ಬರೆದು
ದೇವಾಂಗವನೆ ತಂದು ನೆರೆಹಿಡಿದು ಉಡಿಸಿ
ಕೋಮಲಾಂಗಿಯು ಸುಕ್ಷೇಮ ಬಾಣಂತಿಯ
ಬಾರೆಂದು ಹಸೆಗೆ ಕರೆದಾರು

ಬೆಳ್ಳುಳ್ಳಿ ಬಗೆಕಂಪು ಎಲ್ಲೆಲ್ಲೂ ಎಸೆಯುತ

ಹಲ್ಲಿನ ಕರೆಕಪ್ಪ ಥಳಥಳಿಸುತಲಿ
ಹುಣ್ಣಿಮೆ ಚಂದ್ರನಂತ್ಹೊಳೆವೊ ಬಾಣಂತಿಯ
ಚಲುವೆಯರು ಹಸೆಗೆ ಕರೆದಾರು

ಕಾಲಿಗಚ್ಚೇದರಿಷಿಣ ಮೇಲ್ಹೊದಿಕೆಯು ಜಿಡ್ಡು
ಬಾಯ ತಾಂಬೂಲವು ಘಮಘಮಿಸುತಲಿ

**ಕರ್ಣಭೇದನ ಶಾಸ್ತ್ರ (ಸುಂದರು ರಾಮಚಂದ್ರ)**

ಚಿನ್ನಾದ ಮುರುವಲ್ಲಿ
ಸುಣ್ಣಾದ ಗುರುತಿಟ್ಟು
ಇನ್ನೂರು ವರುಷ ಸುಖಿಯಾಗಿ
ಸುಖಿಯಾಗಿ ಬದುಕೆಂದು
ಚಿನ್ನನಿಗೂರಿದರೇ ಕಿವಿಗಳ

ನೀಲಾದ ಮುರುವಲ್ಲಿ
ನೀದಾನಿಸಿ ಗುರುತಿಟ್ಟು
ಲಕ್ಷ್ಮಿಗೆ ಊರಿದರೆ ಕಿವಿಗಳ
ಬಂದ ಮುತ್ತೈದೆಯರಿಗೆ
ಜಮ್ಮುಖಾನವ ಹಾಸಿ
ತಂಡತಂಡದಲಿ ಉಪಚರಿಸಿ
ಉಪಚರಿಸಿ ಬಂದು ಫಲದಾನ
ಕೊಡುತ್ತಿದ್ದರು

**ಹಾಲು ಕುಡಿಸುವ ಹಾಡು: (ನಳಿನಿ ಪ್ರಭಾಕರ ಶಾಸ್ತ್ರಿ)**

ಕುಡಿ ಹಾಲನು ಬಾಲಗೋಪಾಲ ಶೀಲ
ಕುಡಿಯೋ ಹಾಲನು ಪೊಡವಿ ಪಾಲನೆ
ಕಡಲಶಯನನೆ ಗರುಡಗಮನನೆ
ತಡವ ಮಾಡದೆ ತಂದ ಮೀಸಲು
ಅಳಿಯದಿರು ನೀ ಮೃಢನ ಸಖನೆ
ಕಂದನಿಗೊಲಿದವನೆ ಕಂಬದಿಂದಲಿ ಬಂದು
ತಂದೆ ಹಿರಣ್ಯಾಕ್ಷನ ಕೊಂದನೆ
ಇಂದಿರೇಶನ ವಿಮಲ ಚರಿತನೆ
ಅಂದು ರುಕ್ಮಾಂಗದನಿಗೆ ಒಲಿದನೆ
ಖಂಡ ಸಕ್ಕರೆ ಬೆರೆಸಿ ತರುವೆನೆ

ಮಂದಹಾಸನೆ ಮುಕುಂದಲೋಲನೆ

ದೇವಕಿ ವಸುದೇವರ ಉದರದಲಿ ಜನಿಸಿ
ಬಾಲಲೀಲೆಯ ತೋರುತ
ಮಾವ ಕಂಸನ ಕೊಂದು
ಪೂತನಿಯ ಅಸುವ ಹೀರಿದ ಅಪ್ರಮೇಯನೆ
ಮೂರುಲೋಕವ ಬಾಯಲ್ತೋರಿದ
ಮೂಲ ಕರ್ತೃವೆ ನಿನ್ನ ವದನದಿ

**ಹಾಲು ಕುಡಿಸುವುದು ಹಾಡು** (೨) ಶಾರದಾ ಶಂ.ಸ್ವಾಮಿ.

ಹಾಲು ಕುಡಿಯೆ ಸೀತಾ ದೇವಿ
ಕರೆದ ಹಾಲು ಆರಿದವಲ್ಲೆ
ಜನಕಕುಮಾರಿ ಸೀತಾದೇವಿ
ಜನಕರಾಯನ ಮುದ್ದುಬಾಲೆ
ದಶರಥರಾಯನ ಸೊಸೆಯೇ ಸುಶೀಲೆ
ಜಗದೊಳು ನಿನ್ನನು ಪೋಲುವರಾರೆ

ಮಕ್ಕಳೊಳಗೆ ಗುಣರನ್ನೆ ಸಂಪನ್ನೆ
ಗಾಡಿ ಸಕ್ಕರೆಯನು ಕೊಡುವೆನು ನಿನಗೆ
ತೊಟ್ಟಿಲೊಳಗಿಟ್ಟು ತೂಗುವೆ ತಾಯೆ
ಕಟ್ಟುವೆವ್ಹಾಕಿ ಗುಂಡುಗಳನು
ಕರ್ನೆರೊಳಗೆ ಸಂಪನ್ನೆ
ನಿನ್ನ ಪುಣ್ಯಕೆ ಎಣೆ ಕಾಣೆ ಈ ಲೋಕದೊಳಗೆ
ನೀ ಕನ್ನಡಿ ಕದಪಿನ ಜಾಣೆ
ಈ ಜಗವ ಸೋದಿಸುವಂಥ ಮದಪಟ್ಟದಾನೆ

**ಮಕ್ಕಳಿಗೆ ರಕ್ಷೆಯಿಡುವ ಹಾಡು: (ವಿಜಯ ಗೋಪಾಲಕೃಷ್ಣ)**

(೧) ರಕ್ಷೆಯಿಟ್ಟರು ರಘುಪತಿಗೆ
ರಕ್ಷಿಪ ವಲ್ಲಭದೇವನಿಗೆ

ದಕ್ಷಶಿಕ್ಷಕ ಪ್ರಿಯ ಹರಿಗೆ
ಲಕ್ಷ್ಮೀನಾರಾಯಣ ದೊರೆಗೆ

ನವಕೀರೀಟದ ಸಿರಿಮುಡಿಗೆ
ಕಸ್ತೂರಿತಿಲಕ ಲಲಾಟಕ್ಕೆ

ಭೃಗ ಮಧ್ಯದಿ ರಾಜಿಪ ಪ್ರಭೆಗೆ
ರವಿ ಶಶಿ ಪೋಲುವ ನಯನಕ್ಕೆ

ಹರುಷಗಳ ಪೊಂಗುವ ಕರಣಕ್ಕೆ
ದರ್ಪಣದಂತ್ಹೊಳೆವೊ ಕಪೋಲಕ್ಕೆ

ಚಂಪಕ ಮೊಗ್ಗೆಯ ಉರುನಾಸಿಕಕೆ
ಸಂತಸ ಕಾಡಿಮ ಪಂಥಕ್ಕೆ

(೨) **ರಕ್ಷೆಯ ಹಾಡು: (ಉಷೆ)**

ರಕ್ಷೆಯನಿಟ್ಟಳೆ ಗೋಪಮ್ಮ
ಚಿತ್ತಶುದ್ಧಿಯಲಿ ಕೃಷ್ಣನಿಗೆ

ಇಂದಿರೆ ರಮಣ ಗೋವಿಂದ ಮಾಧವಗೆ
ಸಂಜೇಲಿ ಕಾಪುರಕ್ಷೆಗಳ ಕಟ್ಟುವೆನು
ಆನಂದದಿಂದಲೆ ತಾಳದೀವಿಗೆಯಿರಿಸಿ
ಅಂಗಾಲಿಗಿಡುವೆ ಆದಿತ್ಯನ ರಕ್ಷೆ
ಹೊಟ್ಟೆ ಕೈಗೆ ಇಡುವೆ ಮುಕುಂದನ ರಕ್ಷೆ
ಕಣಕಾಲಿಗಿಡುವೆ ಕಾಳಿಂಗ ರಕ್ಷೆ
ಬೆನ್ನಿಗೆ ಮಂದರಗಿರಿಯ ಪರ್ವತ ರಕ್ಷೆ
ಕೇಳಿವ ಕಿವಿಗೆ ವಾಯುದೇವರ ರಕ್ಷೆ
ಕಣ್ಣು ಹುಬ್ಬಿಗೆ ಕಾಮದೇವನ ರಕ್ಷೆ
ವರ್ಣ ಮುಕುಟಕೆ ಚಂದ್ರಸೂರ್ಯರ ರಕ್ಷೆ
ಆ ರಕ್ಷೆ ಈ ರಕ್ಷೆ ಗೋಪಿ ದೇವಿಯ ರಕ್ಷೆ
ನಾನಿಡುವೆ ವೆಂಕಟೇಶನ ರಕ್ಷೆ

ಕಪ್ಪೆ ಅರಭಟ್ಟನ ಶಾಸನದ 'ಕೆರೆಯಂ ಕಟ್ಟಿಸು....' ಎನ್ನುವ ಸಾಲುಗಳನ್ನು ನೆನಪಿಸುವ ಕೀರ್ತನೆಯೊಂದು ಹೀಗಿದೆ: ಇದು ಆಶೀರ್ವಾದದ ಹಾಡು (ಸರಸ್ವತಿ ಶಾಸ್ತ್ರಿ)

ಮಹಾರಾಜನೆ ನೀ ಸುಖಿಯಾಗ್ಯೆ ಬಹುಸುಖಿಯಾಗ್ಯೆ
ಮಹಿಪರಿಂ ವಂದಿತನೆ ನಿನ್ನ ನಡತೆಯಿಂ
ಅಕ್ಕತಂಗಿಯರಿಗೆ ಅಕ್ಕರುಳ್ಳವನಾಗಿ
ತಪ್ಪದೆ ತೌರು ನೀ ನಡಸಯ್ಯ
ಕೆರೆ ಬಾವಿ ಗುಡಿ ಗೋಪುರಂಗಳ ಕಟ್ಟಿ
ಅನ್ನ ಛತ್ರವ ನೀ ಇಡಿಸಯ್ಯ

**ಆಶೀರ್ವಾದದ ಹಾಡು (೨) – ಶಾರದಾ ಶಂ.ಸ್ವಾಮಿ:**

ಗೋಪಾಲನೆ ಶ್ರೀಪತಿ ನೀನಾಗು
ಆಯುಷ್ಯವಂತನಾಗು ಅತಿಬಲವಂತನಾಗು
ಆಯು ಅತೀಯರಿಗೆ ಒಡೆಯ ನೀನಾಗು
ರಾಯರ ಪಾಲಿಸು ರಕ್ಕಸರ ಸೋಲಿಸು
ದ್ವಾರಕೆಗೆ ನೀನು ಒಡೆಯ ನೀನಾಗು
ಮಾರನೂ ನೀನಾಗು ಮದನನೂ ನೀನಾಗು
ಮಾತುಳನ ಸಂಹರಿಸು ತಾತಗೆ ಪಟ್ಟಕಟ್ಟು

**ಮದುವೆ ಹಾಡುಗಳು**

(ಬೆಂಗಳೂರಿನ ವನಜಾ ಚಂದ್ರಶೇಖರ್ ಅವರಿಂದ ಸಂಗ್ರಹಿಸಲಾಗಿದೆ)

**ಗಣಪತಿ ಪ್ರಾರ್ಥನೆ :** ಶಾರದಾ ಶಂ.ಸ್ವಾಮಿ, ಪ್ರಭಾ ದಿನಮಣಿ

೧.ಕೃಪವಿಲ್ಲವ್ಯಾಕೊ ಎನ್ನ ಮೇಲೆ ಗಣೇಶ ಮೂರುತಿ
ಅಪರಾಧವೆಲ್ಲ ಕ್ಷಮಿಸಿ ಸಲಹೊ ಪಾರ್ಥಸಾರಥಿ :ಪ:

ಸರ್ವಸಿದ್ಧಿ ವಿನಾಯಕನಾ ಸ್ತುತಿಸಿ ಪೊಗಳುವೆ
ಪರಿಪರಿಯ ವಿಧದಿ ನಿನ್ನಾ ಪೂಜೆ ಮಾಡುವೆ :ಕೃ:

ವಿದ್ಯೆಗಳಿಗೆ ಒಡೆಯನೆಂದು ಸುರರು ಸ್ತುತಿಪರು
ವಾದ್ಯರವಗಳಿಂದ ಒಲಿದು ಕಾಯೊ ಗಣಪತಿ :ಕೃ:

ಕುಂಡಲಿಗೆಯು ಮೋದಕ ನೆಲಗಡಲೆ
ಖಂಡ್ರಿಸಿದಾ ಕಬ್ಬು ಕಡಲೆ ರಾಶಿಗಳು :ಪ:

೨.ತಂಡ ತಂಡದ ಭಕ್ಷಭೋಜ್ಯ ನೈವೇದ್ಯವಾ
ಉಂಡುಕುಳ್ಳಿರುವವು ದಂಡಗಣೇಶಗೆ
ಹೂವಿನಾರತಿಯಾ...ಬೆಳಗಿರೆ...

ಧರೆಯೊಳು ಶ್ರೀಗುರುಪುರದ ಮಧ್ಯದಲಿ
ಚರಣಸನ್ನಿಧಿಯಲಿ ವಾಮಭಾಗದಲಿ
ಸ್ಥಿರವಾಗಿ ನಿನ್ನ ನಂಬಿದ ಭಕುತರಿಗೆ
ವರಗಳ ಕೊಡುವ ನಿರ್ವಿಘ್ನ ಗಣೇಶಗೆ
ಮುತ್ತಿನಾರತಿಯಾ ಬೆಳಗೀರೆ...

**ಹಸೆಗೆ ಕರೆವ ಹಾಡು**

ಮನೋರಮಾ ಪದ್ಮನಾಭ, ಭ್ರಮರಾಂಬ, ಪ್ರಭಾ ದಿನಮಣಿ

೧)ಬಾರೆ ನೀ ಬಲು ಬೇಗನೆ ಹಸೆಗೆ :ಪ:
ನೀ ಶಾರದಾ ದೇವಿ :ಅ.ಪ:

ವಾಣಿ ಕರದೊಳು ವೀಣೆ ನುಡಿಸುತೆ ಜಾಣೆ ಸುರಮುನಿವರವಂದ್ಯ ಪ್ರಿಯಳೆ
ಕಾಣಿಕೆಗಳನೊಪ್ಪಿಸುವೆನು ವಾಣಿ ಗೀರ್ವಾಣಿ ಫಣಿವೇಣಿ ಕಲ್ಯಾಣಿ :ಬಾ:

ವಾರಿಜಾಸನ ಪ್ರೇಮಪತ್ನಿಯೆ ಸಾರಸಾಕ್ಷಿಯೆ ಸಾರಿ ಬೇಡುವೆ
ಬಾರೆ ಬಾರೆ ನೀ ಬೇಗದಿಂದಲೆ ಭಾಗ್ಯದಾನೀವಾಸು ಭಾಗ್ಯದಲಕ್ಷ್ಮಿಯೆ :ಬಾ:

ಮುತ್ತಿನಾರತಿ ಎತ್ತಿ ಪಾಡುವೆ ಚಿತ್ತಜಾಲನ ಪತ್ನಿ ಪ್ರಿಯಳೆ ಮತ್ತೆಗಾಮಿನಿ ಇತ್ತ ಬಾರೆಲೆ
ಮುತ್ತುಗಳ್ಕೆತ್ತಿದ ರತ್ನದ ಹಸೆಗೆ :ಬಾ:

೨) ಬಡವನೊಬ್ಬನ ಮೃದು ನುಡಿಗೆ ಮನಕರಗಿ
ಪೊಡವಿಯ ಸಿರಿಯನು ಕೊಡಲಿಲ್ಲವೇನೊ ಕೃಷ್ಣಾ
ಬಾರೋ ಮಧುಸೂದನ ಮುರಹರ ಬಾರಾ ಮಧುಸೂದನ(ಅ.ಪ)
ಶೌರಿ ನೀ ಸಾರಿ ಮೈದೋರಿ ಹರಿ ಶೌರಿ :ಬಾ:

ಕರಿಯೊಂದು ಕೂಗಲು ತ್ವರೆಯಿಂದ ತೆರಳಿದೆ
ಪೊರೆದಾವ ನೀನೆಂದು ಮರೆಯಾಗಿರುವರೆನೋ :ಬಾ:

ಪ್ರೇಮ ಭಕ್ತರ ಯೋಗಕ್ಷೇಮ ಭಾರವನುಳ್ಳ
ರಾಮಾಶ್ರೀಚಂಪಕಧಾಮ ಕಾಪಾಡಲೆನ್ನ :ಬಾ:

೩)ಹಸೆಗೀಗ ಬಾರೊ  ಬೇಗನೆ ದಶರಥ ಸುತ ರಾಮನೆ
ಮಾತೆಯ ವಚನವ ಕೇಳುತಲಿ ಸೀತಾಸಮೇತಾಗಿ ತೆರಳಿದನೆ
ಪ್ರೀತಿಯಿಂದನುಜನ ಕೂಡಿ ಪ್ರಖ್ಯಾತೆತ್ತಿದ ಶ್ರೀರಾಮನೆ ಃಹ:
ಮಾರೀಚ ಮಾಯಾವ ತೋರುತಲಿ
ವೀರದಶಕಂಠನು ಚೋರನಾಗಿ ನಾರೀಯನೊಯ್ಯಲು
ಪೋಗಿ ಬನದಿ ಪ್ರಖ್ಯಾತೆತ್ತಿದ ಶ್ರೀರಾಮನೆ :ಹ:

ಪಕ್ಷಿಯವಾಕ್ಯವ ಕೇಳುತಲಿ ಆ ಕ್ಷಣ ಶ್ರೀರಾಮ ತೆರಳಿದನೆ
ಕಿಕ್ಷಿಂಧ ಸೇರುತ್ತಾ ಸುಗ್ರೀವ ಸ್ನೇಹದಿಂದ ವಾಲಿಯ ಕೊಂದಾತನೆ :ಹ:

ರಾಕ್ಷಸವಂಶವ ನಾಶಗೈದು ರಾವಣನನುಜನ ಸಂಹರಿಸಿ
ಪ್ರೀತಿಯಿಂದನುಜನ ಕೂಡಿ ಬನದಿ ಪ್ರಖ್ಯಾತ ಸೀತಾರಾಮನೆ :ಹ:

ಪಂಕಜದಳನೇತ್ರ ಪಾಲಿಪುದು ಕಿಂಕರಜವಚನವ ಲಾಲಿಪುದು
ಶಂಕರಮಿತ್ರನೆ ಸಂಕಟಪರಿಹರಿಸೊ ವೆಂಕಟವಿಠ್ಠಲನೆ :ಹ:

**ಎಣ್ಣೆ ಶಾಸ್ತ್ರ: ಅನ್ನಪೂರ್ಣ ಸುಬ್ರಹ್ಮಣ್ಯ, ಶಾರದಾ ಶಂ.ಸ್ವಾಮಿ, ಭ್ರಮರಾಂಬ**

೧)ಒತ್ತಿದರೆಣ್ಣೆಯ ಚಿತ್ತಜಪಿತನಿಗೆ
ಮುತ್ತಿನಕ್ಷತೆಗಳ ನೆತ್ತಿಯೊಳಗಿಡುತ :ಒ:

ಪಲ್ಲವ ಫಣಿಯರು ಎಲ್ಲರು ಸೇರುತತ
ಸಲ್ಲಲಿತಾಂಗಗೆ ನಲ್ಲೆನನಿಡುತ :ಒ:

ಮರುಗ ಮಲ್ಲಿಗೆ ಜಾಜಿ ಸುರಗಿ ಸೇವಂತಿಗೆ
ಪರಿಮಳದೆಣ್ಣೆಯ ಹರುಷದೊಳಿಡುತ :ಒ:

ಆಯುಷ್ಯವಂತನಾಗು ಆರೋಗ್ಯವಂತನಾಗು
ಯಶೋವಂತನಾಗೆಂದು ನಾರಿಯರ್ಹರಸುತ :ಒ:

೨)ತಾಮರಸಾಕ್ಷಿಗೆ ಭಾಮೆಯರು ನಿಮಭ್ಯಂಗವನು :ಅ.ಪ:
ಕಾಮಿಸಿಗೈದರು ಬಾಲೆಯರೆಲ್ಲರು ಹೇಳುತ ಹಾಡನು
ನಿಲದ ಕಟ್ಟೆಯೊಳ್ ವೀಳ್ಯವನೆ ಕೊಟ್ಟು :ತಾ:

ಮಲ್ಲಿಗೆ ಮಾದತಿ ಸಂಪಿಗೆ ತೈಲವು
ನಲ್ಲೆಯರೆಲ್ಲರೂ ಪನ್ನಿರು ಚೆಲ್ಲುತಾ :ತಾ:

೩)ಮರಕತ ಪೀಠವನಿರಿಸುತಲಿ ಮುದದಿ
ತರುಣಿ ಜಾನಕಿಯ ಕುಳ್ಳಿರಿಸುತ ಮಣೆ ಮೇಲೆ
ಎಣ್ಣೆ ಶಾಸ್ತ್ರವ ಮಾಡಿದರರಸಿಯರು ಪನ್ನಗವೇಣಿಗೆ ತಾವು: ಎ:

ಮಂಗಳಗಾನವನಂಗನೆಯರು ಪಾಡೆ
ಮುಂಗೈಯಲಿ ವರಭೃಂಗಾಮಲಕದ :ಎಣ್ಣೆ:
ಅರಿಶಿನ ಕುಟ್ಟಿದ್ದು

೪)ಸುವ್ವಿರಾಮಚಂದ್ರ ಸುವ್ವಿರಾಮಭದ್ರ ಸುವ್ವಿ
ಸುವ್ವಿರಾಮಾಭಿರಾಮ ಸುವ್ವಲಾಲಿ :ಪ:

ಜಾನಕಿವಿವಾಹವೆಂದು ಮಾನಿನಿಯರು ಮುದದಿ ನೆರೆದು
ಸಾನುರಾಗದಿಂದ ಮಧುರಗಾನಪಾಡುತ :ಸು:

ಅರಿಶಿನದ ಬೇರು ತಂದು ಸರಸಿಜಾಕ್ಷಿಯರು ತಾವು
ಸರಸದಿಂದ ಪಾಡಿನಲಿದು ಕುಟ್ಟುತ್ತಿದ್ದರು; ಸು:

ಹವಳದೊನಕೆಯನ್ನೆ ಪಿಡಿದು ಕುವಲಯದಳಲೋಚನೆಯರು
ನವನವವಿದದಿಂ ಪಾಡಿ ರಘುರಾಮನನುತಿಸುತ;ಸು:

೫)ಗೋದಿಕಲ್ಲಲಿಕ್ಕಿದರು ಬೇಗ
ಗೋಧೂಳಿ ಲಗ್ನದಲಿ ಮಾಧವನ ಮದುವೆಯೆಂದು
ಲಗ್ನಗಳಿಗೆ ಸಾಧಿಸಲು ಸಂಭ್ರಮದಿ :ಗೋ:

ಗೋಮಾಯದಿಂದ ಗಣಪನ ರಚಿಸಿ
ಗೊನೆಬಾಳುಹಣ್ಣು ತರಿಸಿ ಗೋದಿ ಅಕ್ಕಿ ಪಡಿಯನಿರಿಸಿ :ಗೋ:

ಅಂಗನೆಯರು ಕೂಡಿ ಮಂಗಳಾಷ್ಟಕವ ಪಾಡಿ
ರಂಗುರಂಗಿನ ಕಲ್ಲಿನಿರಿಸಿ ಪದ್ಮಾವತಿ ಮದುವೆಗೆಂದು :ಗೋ;

ಮುತ್ತಿನಂಥ ಗೋಧಿ ತಂದು ಹತ್ತು ಜನರು ಸುತ್ತನಿಂದು
ಮತ್ತೆ ಮಗಳ ಮದುವೆಗೆಂದು ಸ್ತುತಿಸಿ ಕಲ್ಲನಂದು :ಗೋ:

೬)ಧರೆಯೋಳ್ ಆನಂದದಿ ಬೆಳದಿದ್ದ
ಒಳ್ಳೆಯ ಅರಿಶಿಣವನ್ನೇ ಒಣಗಿಸಿ ತಂದು
ಒರಳೊಳಗೆ ಹಾಕಿ ಪವಳನಿಕೆಯ ಪಿಡಿದು
ಹರದಿಯರು ಪಾಡಿ ಕುಟ್ಟಿದರರಿಶಿಣವ ಸುವ್ವಾಲೆ ಸುವ್ವಾಲೆ

ಸಂಕಲಿಕೆ ಬಟ್ಟನಿಡುವೋರು ಹೊನ್ನ
ಮರದಂಚಿಯ ತಂದು ಕೊಡುವೊರು
ಯಂತ್ರವಾಹನನ ಬಾಷಿಕಕೆ ಸೂಸುವರೆ
ಮಂತ್ರಾಕ್ಷತೆಗೆ ಕುಟ್ಟಿದರರಿಶಿಣವ ಸುವ್ವಾಲೆ ಸುವ್ವಾಲೆ
ಸುವ್ವಿ ಎಂದು ಕುಟ್ಟಿದರು ನಾರಿಯರು ಸುವ್ವಾಲೆ ಸುವ್ವಾಲೆ

ಪಟ್ಟೆಯಸೀರೆಯನೆರಿಯೋರು
ಇಟ್ಟಬಟ್ಟ ಮುತ್ತಿನಸರದ ಕೊರಳೋರು
ಮುತ್ತಿನಾಸತ್ತಿಗೆಯ ನೆರಳಲ್ಲಿ ಬರುವೊರಿಗೆ
ಮಿತ್ರೆಯರುಪಾಡಿ ಕುಟ್ಟಿದರರಿಶಿಣವ
ಸುವ್ವಾಲೆ ಸುವ್ವಾಲೆ
ಸುವ್ವಿ ಎಂದು ಕುಟ್ಟಿದರು ನಾರಿಯರು ಸುವ್ವಾಲೆ ಸುವ್ವಾಲೆ

**ವರಪೂಜೆ ಶಾಸ್ತ್ರ**

ಪ್ರಭಾ ದಿನಮಣಿ
೧)ವರನಪೂಜೆ ಮಾಡಿದನು ಹಿಮವಂತನು
ತರುಣಿ ಮೇನಕೆಯೊಡನೆ :ಪ:
ಹರನ ಶಂಕರನ ಶಶಿಧರನ ಸುರವರನ

ಸುರನರಪೂಜಿತನಾ ಶಂಕರನ :ವ:

ರನ್ನದ ಹರಿವಾಣವನ್ನು ತಂದಿರಿಸುತ
ಸನ್ನುತಾಂಗನ ಪಾದವ ಚಿನ್ನದ ಗಿಂಡಿಯ
ಪನ್ನೀರಿನಿಂದಲಿ ಚೆನ್ನಾಗಿ ತೊಳೆಯುತಲಿ
ನಲಿಯುತಲಿ :ವ:

ನೂತನ ಸುರಪಾರಿಜಾತ ಮಾಲೆಯನು
ಸಂಪ್ರೀತಿಯಿಂದರ್ಪಿಸುತ
ಪೀತಾಂಬರರತ್ನ ವಾತಭಾರಣೊಪ
ಇತಾಢ್ಯಲಂಕಾರದಿ ಸಡಗರದಿ :ವ:

ಸುರಲೋಕ ಚಂದನಾಗರುಘನ ಸಾರದಿ
ಪರಿಮಳಮೃಗ ಮುದದಿ
ಮರುಗಮಲ್ಲಿಗೆಪಾದರಿಜಾಜಿ ಸಂಪಿಗೆ
ಸುರಗಿಕೇತಕಿ ಸುಮದಿ ಸಮ್ಮೋದದಿ :ವ:

ವರಧೂಪದೀಪವ ವಿರಚಿಸಿ ನೈವೇದ್ಯ
ಕಿರಿಸಿಬಲಾದಿಗಳ
ಪರಿಪರಿ ಭಕ್ಷವ ತರಿಸಿ ತಾಂಬೂಲವ
ನೆರನಿವೇದನವ ಮಾಡಿ ಸಂತಸವುಡಿ :ವ:

ಮಗಳ ಕೈಪಿಡಿಯುತ ಮಿಗೆ ಪಾಲಿಪುದು
ನಮ್ಮಗಳನೆನ್ನುತ ಬೇಡುತ
ಮುಗುಳೆ ಮುಗುಳೆ ಪಾದಯುಗಳಕ್ಕೆ ನಮಿಸುತ
ಮುಗುಳನಗೆಯು ನಗುತ ಕೊಂಡಾಡುತ :ವ:

ಹರನ ಶಂಕರನ ಶಶಿಧರನ ಸುರವರನ
ಸುರನರಪೂಜಿತನ ಶಂಕರನ :ವ:

**ಗೌರಿಪೂಜೆಯ ಹಾಡು**

ಶೈಲಜಾ ವೆಂಕಟೇಶ್, ಲಲಿತಾ ರಾಮಚಂದ್ರ, ಮನೋಹರಾ ಪದ್ಮನಾಭ

೧)ಸರಸಕ್ಷಿರುವರ ಲಕ್ಷ್ಮಿದೇವಿಗೆ
ಪಾದಪೂಜೆಯ ಮಾಡಿ ಧನ್ಯರಾದೆವು
ಧನ್ಯರಾದೆವು ನಾವು ಮಾನ್ಯರಾದೆವು
ಸದ್ಗುಣರು ಸಂಪನ್ನರಾದೆವು :ಧ:

ಮಂದಕುಂದರ ಸುಗಂಧ ಪುಷ್ಪ
ಚಂದಧೂಪಪತ್ರೆ ಅರ್ಘ್ಯದಿಂದ
ಚಂದದಾಪಾದ್ಯವು ಆಚಮನ
ಕುಂದಣಪೀಠಕೆ ಧೂಪದೀಪ :ಸ:

ಲಾಡುಸಂಡಿಗೆಚಿರೋಟಿ ಫೇಣಿ
ಹಪ್ಪಳಸಂಡಿಗಾಂಬೋಂಡ ಬೂಂದಿ
ತಂಡ ತಂಡ ಪಾಯಸ ಕ್ಷೀರ ತುಪ್ಪ
ಮಂಡಲ ಮಾಡಿ ನೈವೇದ್ಯಕ್ಕಿರಿಸಿ :ಸ:

ನಾರಿಕೇಳಂಜುರಚ್ಯುತ ಫಲವು
ಸಾರದಾಳಿಂಬೆ ದ್ರಾಕ್ಷಿ ಕದಳಿ ಖರ್ಜೂರ
ನೀರೆಬಾದಾಮಿ ತಾಂಬೂಲ ಧಾನ್ಯ
ಆರುತಿಬೆಳಗುವೆ ಭಕ್ತಿಯಿಂದ :ಸ:

೨)ಅಪ್ಪಣೆಯೆ ಅಂಬಾ ಮನೆಗೆ
ಆಜ್ಞೆಯೊಳೆಡೆಯ ಇಟ್ಟು ಕರವ ಮುಗಿದು ತೆರಳುವೆ

ಬಟ್ಟ ಮುಖದ ಭಾಮಕಿರನ್ನೆ ಭಾಗ್ಯಸಂಪನ್ನೆ
ದೃಷ್ಟಿಯಿಂದ ನೊಡು ನಮ್ಮನ್ನು
ಕಷ್ಟ ದುರಿತ ಬಂದ ನಮ್ಮ ಕಡೆಗಾಣಿಸಿ ಕರದೊಳಿಟ್ಟು
ಇಷ್ಟಾರ್ಥ ಫಲಗಳೀವೋ ಸೃಷ್ಟಿಗಧಿಕ ಶ್ರೀ ಚಾಮುಂಡಿ :ಅ:

ಸೃಷ್ಟಿಕರ್ತಳೇ ನಿನ್ನನು ಶೀಘ್ರದಲಿ ಪೂಜೆಯ ಮಾಡಿ
ಇಂದು ನಾನು ಬಿಟ್ಟು ಅಗಲಲಾರೆ
ನಿನ್ನ ಹೃದಯದೊಳಿಟ್ಟು ಸಲಹು ಶ್ರೀ ಮೂಕಾಂಬಾ :ಅ;

ಅತಿಶಯದಿಂದ ನಿಮ್ಮನು ಅಪೇಕ್ಷೆಯಿಂದ
ಸ್ತುತಿಸಿ ಸಲಹಿ ಹೊಗಳುತಿರುವೆನೆ
ಸತತ ಭಕ್ತಳೆಂದೆಣಿಸಿ ಸಂತಾಪವ ಪರಿಹರಿಸಿ
ಪತಿಗೆ ಪಾವನೆಯಾದಂತ ಪಾರ್ವತಿ ಶಂಕರಿ ಭವಾನಿ :ಅ:

೩)ಶ್ರೀಗೌರಿಗೆ ಆರುತಿಯನು ನಾರಿಯರು ಬೆಳಗುವೆವು
ಗಿರಿರಾಜನ ಪ್ರೇಮದ ಪುತ್ರಿಗೀಗ ಪರಶಿವನ ರಾಣಿಗೆ ಗಿರಜೆಗೆ:ಶ್ರೀ:

ಕಾಮಾಕ್ಷಿಯ ಕಾಮವೈರಿಸತಿಗೆ
ಕಾಮಕೋಟಿಪೀಠ ಶ್ರೀವಾಸಿಗೆ :ಶ್ರೀ:

**ಕನ್ಯಾದಾನ**

ಪ್ರಭಾದಿನಮಣಿ, ಶಾರದಾ ಶಂ.ಸ್ವಾಮಿ

೧)ಕನ್ಯಾದಾನವ ಮಾಡಿದ ಪರ್ವತರಾಜ

ಧನ್ಯ ತಾನೆಂದಾಡಿದ

ಕನ್ಯಾದಾನವ ಮಾಡಿ ಕನ್ಯೆ ಪಾರ್ವತಿಯನು

ಕಣ್ಣೊಳಗಿಟ್ಟು ನೀ ಸಲಹು ಎಂದೆನುತ :ಕ:

ಧರೆಯೊಳ್ ಪರ್ವತನ ಉದುರದಲ್ಲಿ

ವರಪುತ್ರಿ ಜನಿಸಿರಲು

ಹರನ ಕೋರಿಕೆ ತಪವಾಚರಿಸಿದ ತೆರದೊಳು

ಪರಮ ಸಂತೋಷದಿ ಒಲಿದು ಶಂಕರನಿಗೆ :ಕ:

ಫಾಲಾಕ್ಷನೆಂದೆನಿಪ ಪುರುಶನಿಗೆ ಕಾಲುಗಳನೆ ತೊಳೆದು

ಹಾಲುಸಕ್ಕರೆ ಮಧುಪರ್ಕಗಳನೆ ಮಾಡಿ

ಸಾಲಿಗ್ರಾಮವನಿತ್ತು ಸಂತಾನಸುತಳನ್ನು :ಕ:

ಕೈಲಾಸನೆಲೆಯವಾಸ ಶಂಕರನಿಗೆ ಒಲಿದು ಅಂಬಾ ಎನುತ

ಧರಣಿದಾನವು ಸಾಲಿಗ್ರಾಮಗೋದಾನವ ಪರಮಸಂತೋಷದಿ

ಒಲಿದು ಶಂಕರನಿಗೆ :ಕ:

ಲಕ್ಷಹೊನ್ನನೆ ತರಿಸಿ ತಟ್ಟೆಯೊಳಗ್ವರದಕ್ಷಿಣೆಗಳನಿರಿಸಿ

ರಕ್ಷಿಸು ಜಗವ ಎಂದೆನುತ ಸ್ತುತಿಯ ಮಾಡಿ

ಎತ್ತಿ ಧಾರೆಯನೆರೆದ ಪುತ್ರಿಪಾರ್ವತಿಯನು :ಕ:

೨)ಧಾರೆಯನೆರೆದರಂದು ಮೀನಾಕ್ಷಿಗೆ ಧಾರೆಯನೆರೆದರಂದು :ಪ:

ಕನ್ಯಾದಾನವ ಮಾಡಲುನೆಮವೆ ಎಂದು ಮುನ್ನ ಸರ್ವರ ಕೇಳಲು

ಸನುಮತದಲಿ ಸುಮೂಹರ್ತವೆನ್ನಲು ಭೇಗ

ಪನ್ನಗಾರಿಧ್ವಜನು ಬರಲು ಮಂಟಪಕಾಗ :ಪ:

ಮೆರೆಯೊಲಾಜಾಹೋಮವ ಮಾಡಿ ಮತ್ತೆ ಕರಕೆ ಕಂಕಣ ಧಾರವು

ವರವಧುವಿಗೆ ಕಟ್ಟಿ ಭರದೊಳರುಂಧತಿಯ ದರುಶನಗೈಸುತ ಕರೆದಸೆಮಣೆಯೊಳು :ಧಾರೆ:

ಕಡಲಾಶಯನನ ಎದುರೆ ಮೀನಾಕ್ಷಿ ಮೃಢನ ಸಹಿತ ಕುಳ್ಳಿರಲು

ಮಡದಿರಯರಕ್ಷತೆ ವೀಳ್ಯಗಳನೆ ಮಾಡಿ ಕಡುಚೆಲ್ವಿನಾರತಿಯ ಪಿಡಿಯೆ ಸಂಭ್ರಮೊಳು :ಧಾರೆ:

**ಮಾಲೆ ಬದಲಾಯಿಸಿದ್ದು**

ಭ್ರಮರಾಂಬ

೧)ಶಿವನೆ ನೀ ದಯೆತೋರೋ ಭವದೋದ್ಧರ ಹರನೆ
ನಯವಿನಯದಿ ಕಾಯೋ ಜಗದೋದ್ಧರ ಹರನೆ :ಪ:
ಅರಿಶಿನ ಹಚ್ಚುವೆ ಶಿವಶಂಕರ ಹರನೆ ವದನಾವ ತೋರೋ ಶಿವ ಶಂಭೋ ಶಂಕರನೆ
ಗಂಧಾವ ಹಚ್ಚುವೆ ವೃಷಭವಾಹನನೆ ಕಂಠಾವ ತೋರೋ ನೀಲಕಂಠೇಶ್ವರನೆ
ಅರಳು ಮಲ್ಲಿಗೆ ಜಾಜಿ ಸುರಗಿ ಸೇವಂತಿಗೆ ಸರಗಳ ಹಾಕುವೆ ಇಂದುಶೇಖರನೆ
ತಾಂಬೂಲವ ಕೊಳ್ಳೋ ತಾರಕೇಶ್ವರನೆ ಹರುಷದಿಂದಲಿ ಕಾಯೋ ಕರುಣಾ ಸಾಗರನೆ
:ಶಿವನೆ:

ಹಾರವನು ಹಾಕುವೆನು ಮಾರಜನಕ ಮೋಹನಾಂಗ ಸರಸದಿ ಹಾಕುವೆನು :ಪ:ಹಾರ:
ಮೋದದಿಂದ ನಾನು ಮೋದದಿಂದ ಸರಸಗಳನ್ನು ಸರಸದಿಂದ ಹಾಕುವೆ :ಹಾರ:
ಮಲ್ಲೆ ಜಾಜಿ ಸುರಗಿ ಮಲ್ಲೆಜಾಜಿ ಮಾಲೆಗಳನು ಮೋಹದಿಂದ ಹಾಕುವೆ :ಪ:

**ಉರುಟಣೆ ಉಯ್ಯಾಲೆ**

ವಸಂತಲಕ್ಷ್ಮೀ ಶ್ರೀಧರ/ಶ್ರೀಮತಿ ಭಾಗೀರತಮ್ಮ
೧)ಉರುಟಣೆಗೇಳು ಬೇಗನೆ ಉರಗನಾ ತುಳಿದಾತನೆ :ಪ:
ಕಾಳಿಯಮಡುವನ್ನು ಕಲಕಿದನೆ ಕಮಲದರೇಖೆಯ ಪಾದವನು
ಹಲ್ಲುಕವಿಲ್ಲದೆ ಅಹಲ್ಯೆಳ ಮಾಡಿದ ಹಳದಿಯ ಹಚ್ಚುವೆನು :ಉ:

ಸೂರ್ಯಚಂದ್ರಮನರ ಹೋಲಿಪ ನೊಸಲಿಗೆ ಹೀರುಕ ಮಂಗಳ ಪೂಸುವೆನು
ವಾರಜಾಕ್ಷನೆ ನಿಮ್ಮ ಬೇಡಿಬಂದವಳೀಗ ಕುಂಕುಮ ಹಚ್ಚುವೆನು :ಉರು:

ದಶರಥನಂದನ ಶ್ರೀರಾಮಚಂದ್ರನ ಕಂಠವತೋರೋ ನೀನು
ನಿನ್ನ ಕೋಮಲ ಕಂಠಕೆ ಸಂಪಿಗೆ ಹೂವಿನ ಗಂಧವ ಹಚ್ಚುವೆನು :ಉರು:

ಅರಳು ಮಲ್ಲಿಗೆ ಜಾಜಿ ಪರಿಪರಿ ಪುಷ್ಪದ ಸರಮಾಲೆಗಳನು ಕಟ್ಟಿಹೆನು
ಮಲ್ಲಿಗೆ ಹೂಮಾಲೆಯ ಈಗ ಕೊರಳಿಗೆ ಬೇಗ ಕೊರಳಿಗೆ ಹಾಕುವೆನು :ಉರು:

ಬೆಳ್ಳಿಯತಟ್ಟೇಲಿ ಬಿಳಿಯೆಲೆಕಣಹಳೆಅಡಕೆ ಮೆದುವಾದ ಮುತ್ತಿನ ಸುಣ್ಣವನು
ಪಂಕಜನೇತ್ರನೆ ಸರಸಿಜನಾಭನೆ ವೀಳ್ಯವಾ ಕೊಡುತಿಹೆನು :ಉರು:

೨)ಮಾನುನೀ ಮಣಿ ಬಾ ಉರುಟಣೆಗೆ ಶ್ರೀ :ಪ: :ಮಾನು:
ಆರ್‍ಯಯೆ ಸತಿವಾರ್‍ಯೆಯೆ ಶುಭಕಾರ್‍ಯಯೆ
ಬಾರೆ ಶೃಂಗಾರವನು ವಿರಚಿಪೆ ತೋರೆ ಹರಿವುದ್ಧಾರಿ ನಿನಗೆ:ಮಾನು:
ಕಾಮಿನಿ ಕರಿಗಾಮಿನಿ ಕರುಣಾಕರಿ
ಭಾಮಿನಿ ಸುಖಪೋಲವನೆ ಕೊಡು
ನೇಮದಿಂದಲಿ ಹರಿದ್ರವನು ಪೂಸುವೆ :ಮಾನು:

ಶೀಲೆಯೆ ನತಪಾಲೆಯೆ ಬಹುಲೀಲೆಯೆ
ಫಾಲತಿಲಕಕೆ ಕುಂಕುಮದ ಬಲುಮೇಲುತಿಲಕವ ತಿದ್ದಿ ರಚಿಸುವೆ :ಮಾನು:

ಇಂದಿರೆ ಮುಖ ಚಂದಿರೆ ಗುಣಮಂಧರೆ
ಸುಂದರಿ ತವ ಕಂಬು ಕಂಠಕೆ ಚಂದನವ ನಾನ್ ಲೇಪಿಸುವೆನ್:ಮಾನು:

ನಾರಿಯೆ ವಯ್ಯಾರಿಯೆ ಉಪುಕಾರಿಯೆ
ಬಾರಿ ಕಂಗಳ ತೋರೆ ನವ ಮಣಿ ಹಾರ ಕಾಡಿಗೆ ತಿದ್ದಿ ನೋಡುವೆ :ಮಾನು:

ರಾಣಿಯೆ ಫಣಿವೇಣಿಯೆ ಮೃದುವಾಣಿಯೆ
ನಾಣಿದೇತಕೆ ಕರವನೀಡೆಲೆ ಜಾಣೆ ವೀಳೆಯವನ್ನು ಕೊಡುವೆ :ಮಾನು:

**ಮನೆ ತುಂಬಿಸಿ ಕೊಳ್ಳುವ ಶಾಸ್ತ್ರ**

ಶೈಲಜಾ ವೆಂಕಟೇಶ್/ವಸಂತಪ್ರಭಾಕರ್

೧)ಬಾರಮ್ಮ ಬಾ ಮಗಳೆ ಭಾಗ್ಯದ ಚೆಲುನಿಧಿಯೆ ಬಾರೆಂದು ಕರೆಯುವೆವು
ಮುನ್ನಡಿಯನಿಕ್ಕುತ ಬಾರೆಂದು ಕರೆಯುವೆವು :ಪ:

ಕುಂಕುಮದ ಕಸ್ತೂತಿ ತಿಲಕವಿಟ್ಟು ಮಂಗಳದ ಮಾಲೆಗಳ ಕೊರಳೊಳಿಟ್ಟು
ಮಡಿಲಲ್ಲಿ ಉಡಿಯಕ್ಕಿ ತುಂಬಿ ಇಟ್ಟು ನಗುಮೊಗದ ಮದುಮಗನ ಅರಸಿ ನೀ ಬಾರಮ್ಮ :ಪ:

ನಮ್ಮವರು ನಿಮ್ಮವರು ಬಂಧುಬಾಂಧವರು ಸಂಭ್ರಮದಿ ಸರ್ವರು ಇಂದು ನೆರೆದಿಹರು
ಎರಡು ಮನೆ ಬೆಳಕನ್ನು ನೀ ಬೆಳಗಲೆಂದು ಭಜಿಸುವೆವು ಶ್ರೀಲಕ್ಷ್ಮಿವೆಂಕಟೇಶರನು :ಬಾರಮ್ಮ:

ನಿಮ್ಮ ಮನೆಯಂಗಳದಿ ಬೆಳೆದ ಮಲ್ಲಿಗೆ
ನಮ್ಮ ಮನೆಯೊಳಿಡಲು ತಂದ ನಿಮಗೆ ವಂದನೆ

ಹಾಲನೆರೆದು ಹಾಡ ಹಾಡಿ ಹರುಷದುಡಿಗೆ ಉಡಿಸಿ ನೀವು
ಸಾಕಿ ಬೆಳೆಸಿ ತಂದ ಈ ಬಳ್ಳಿಗೆ ಸ್ವಾಗತ ಸ್ವಾಗತ ನಮ್ಮ ಸ್ವಾಗತ ಸ್ವಾಗತ
ಸ್ವಾಗತ ನಮ್ಮ ಸ್ವಾಗತ ಸ್ವಾಗತ ಸ್ವಾಗತ ನಮ್ಮ ಸ್ವಾಗತ

ಹೊಸದು ನೆಲವು ಹೊಸದು ಜಲವು ಹೇಗೋ ಎನ್ನುವ ಮನದ ಚಿಂತೆ
ಬೇಡ ನಿಮಗೆ ನೀವು ತಂದ ಬಳ್ಳಿಗೆ ನಮ್ಮ ಮನೆಯ ದೇವರ ಕೃಪೆಯ ಆಸರೆ
ನಮ್ಮ ಮನೆಯ ಮಾಮರನ ನೆರಳಿನಾಸರೆ
ನಮ್ಮ ಮನೆಯ ಮಾಮರನ ತೋಳಿನಾಸರೆ
ಬಾಗಿಲಲ್ಲಿ ಹಸಿರು ತೋರಣ ನಿಮಗೆ ಶುಭವ ತೋರಿದೆ ಹೊಸಿಲ ಮೇಲಿನ ಹಸೆರಂಗೋಲಿ ನಿಮಗೆ ಸುಖವ ಬಯಸಿದೆ.

ಹಾದಿಯಲ್ಲಿ ಅರಿಶಿನಕುಂಕುಮ ಶುಭದ ಶಕುನವಾಗಿದೆ
ಮನೆಯ ಮುಂದಿನ ಮಂಗಳವಾದ್ಯ ಶುಭದ ರಾಗ ಹಾಡಿದೆ

ನೀವು ನಮಗೆ ನೀಡುತಿರುವ ಬಳ್ಳಿ ಚಿಗುರಿ ಬೆಳೆಯಲಿ
ಮನೆಯ ಸುತ್ತ ಮಲ್ಲಿಗೆ ಹೂವ ರಾಶಿ ರಾಶಿ ಸುರಿಯಲಿ
ಮಾಮರವ ಬಳಸಿ ಬೆಳವ ಮಲ್ಲಿಗೆ ಬಳ್ಳಿಯು
ನಿಮ್ಮ ಒಡಲಿಗೂ ನಮ್ಮ ಮಡಿಲಿಗೂ ಸುಗಂಧ ಹೂವ ಸೇತುವಾಗಿ ಧನ್ಯ ಭಾವ ತುಂಬಲಿ

ಮಹಿಳಾ ಕೀರ್ತನಕಾರರಾದ ಕಳಸದ ಸುಂದರಮ್ಮನವರ ಬಗ್ಗೆ ಹೆಚ್ಚಿನ ಮಾಹಿತಿ ಸಂಗ್ರಹಿಸಲು ಚಿಕ್ಕಮಗಳೂರು ಜಿಲ್ಲೆಯ ಕಳಸದ ಶ್ರೀ ಎಂ.ಎನ್.ಹರ್ಷ ಅವರನ್ನು ಕಾಣಲು ಹೋಗಿದ್ದೆ. ಸುಂದರಮ್ಮನವರ ಬಗ್ಗೆ ಊರಲ್ಲಿ ಮಾಹಿತಿ ದೊರೆಯಲಿಲ್ಲ. ಬಹುಶಃ ಈಗ ಕಳಸಾಪುರ ಎಂದೇ ಕರೆಯಲ್ಪಡುವ ಊರಿಗೆ ಹಿಂದೆ ಕಳಸ ಎನ್ನುತ್ತಿದ್ದರು. ಅದೇ ಇರಬಹುದು ಎಂದು ತಿಳಿದುಬಂದಿತು. ಆದರೆ ಅಲ್ಲಿಯೂ ಯಾವ ಮಾಹಿತಿಯೂ ದೊರೆಯಲಿಲ್ಲ. ಶ್ರೀ ಹರ್ಷ ಅವರ ತಾಯಿ ಶ್ರೀಮತಿ ಚಂಪಕ ತಮ್ಮ ನೆನಪಿನಲ್ಲಿದ್ದ ಒಂದಿಷ್ಟು ಸಂಪ್ರದಾಯದ ಗೀತೆಗಳನ್ನು ಕೊಟ್ಟರು. ಅಪರೂಪದ ಹಾಡುಗಳನ್ನು ಮಾತ್ರ ಇಲ್ಲಿ ದಾಖಲಿಸಿದೆ. ಶೃಂಗೇರಿ ಪ್ರಾಂತ್ಯದ ಹಾಡುಗಳಿವು.

**ವಧೂ-ವರರು ಹೂವಿನ ಚೆಂಡಾಡಿದ್ದು**

ಅತಿ ಸಂಭ್ರಮದಲಿ ಪಾಂಡವರೈವರು
ಹಿತದಿಂದಲಿ ಚಂಡಾಡಿದರು
ಮರುಗ ಮಲ್ಲಿಗೆ ಪಾದರಿಯು
ಸುರಗಿ ಸಂಪಿಗೆ ಕೇದಗೆಯು
ದೊರೆಯು ಧರ್ಮರಾಯರು
ಪರಹಿತದಲ್ಲಿ ಚಂಡಾಡಿದರು :೧:

ನವರತ್ನದ ಮಂಟಪದೊಳಗೆ
ದೊರೆ ಪಾರ್ಥನ ಸಾರಥಿಯಿರಲು
ಬಾರೆ ದ್ರೌಪದಿ ಎನ್ನೆದುರಿನಲಿ
ಆಡೋಣ ಚಂಡು ವಿನಯದಲಿ :೨:

ಇನ್ನೆಷ್ಟು ಪುಣ್ಯ ಮಾಡಿದೆನೆನುತ
ಐವರ ಕೂಡೆ ಚಂಡಾಡುತಲಿ
ಕುಂತಿ ದೇವಿಯ ಮುಖ ನೋಡುತಲಿ
ನರಸಿಂಹನ ಸ್ಮರಣೆ ಮಾಡುತಲಿ ದ್ರೌಪದಿ :೩:

**ಮದುವೆ ಮನೆಯಲ್ಲಿ ಬೀಗರನ್ನು ಜರಿಯುವ ಹಾಡು**

ಬಾಗಿಲ ಗಣಪನೆ ಹೋಳಿಗೆ ನಿನಗೀವೆ

ನಾರೀರ ಸೋಲಿಸಿ ನಮ್ಮನ್ನು ಗೆಲಿಸಯ್ಯ ಗಜವದನ
ನಾ ಬೇಡೀದ ವರಗಳ ಪಾಲಿಸಯ್ಯ ಗಜವದನ :ಪ:

ಸೊಂಡಿಲ ಗಣಪನೆ ಸಂಡಿಗೆ ನಿನಗೀವೆ
ರಂಬೇರ ಸೋಲಿಸಿ ನಮ್ಮನ್ನು ಗೆಲಿಸಯ್ಯ ಗಜವದನ :೧:

ಹೊಸ್ತಿಲ ಗಣಪನೆ ಚಕ್ಕುಲಿ ನಿನಗೀವೆ ಮಿತ್ರೇರ ಸೋಲಿಸಿ
ನಮ್ಮನ್ನು ಗೆಲಿಸಯ್ಯ ಗಜವದನ :೨:

ಅರಿಯದೆ ಬಂದೇವು ನಾವು ಅರೆ ಊಟವಾಯಿತು ನಮಗೆ
ಮನೆಗ್ಹೋಗೋಣವೆಂದರೆ ಮನೆ ದೂರಾಯ್ತು
ನಾರೀರು ಬರುವಾಗ ಬಾಗಿಲು ಸಾರಿಸಲಿಲ್ಲ
ಶ್ರೀಗಂಗೆ ತರಲಿಲ್ಲ ತಾ ಮಡಿ ಉಡಲಿಲ್ಲ :೩:

ಚಿಕ್ಕ ಹಲಸಿನಕಾಯಿ ಮುಳ್ಳು ತೆಗೆಯದೆ ಹೆಚ್ಚಿ
ಉಪ್ಹಾಕದೆ ಹುಳಿ ಹಾಕದೆ ಒಲೆ ಮೇಲಿಟ್ಟು ಇಳುಹಿದಿರಿ :೪:

**ಬೀಗರ ಹಾಡು**

ಸಿದ್ದಿವಿನಾಯಕಗೆ ಎರಗಿ ಕೈಮುಗಿದು ಮನದೊಳು
ಪ್ರಾರ್ಥನೆಯನೆ ಮಾಡಿ ಲಕ್ಷ ದೂರ್ವೆಯ ಕುಯಿದು ತಂದು
ಗಣಪತಿಗೆ ಅರ್ಪಿಸುವೆನು ನಿನಗೆ ಶುಭದಿಂದ :ಪ:

ಮದುವೆಗೆ ನೆರೆದಳು ಮಗಳು ಎಂದೆನುತ
ಕಾಲವು ಸ್ಥಿತಿಯು ಬಹುಕಷ್ಟವೆಂದೆನುತ
ಹೇಗೆ ಮಾಡುವುದು ಮದುವೇಯ
ಮದುವೇಯ ಮಾಡಬೇಕೆನುತಲಿ
ರಮಣಿ ಹೇಳಿದಳೆ ರಮಣಾಗೆ:

ತರಕಾರಿಯನೇ ತರಲೇಬೇಡಿ ತರತರ ವಸ್ತು ತರಲೇಬೇಡಿ
ಹರುವೆಯ ಸೊಪ್ಪು ಒದಗಿಸಿದರೆ ಸಾಕೆಂದು ರಮಣಿ ಹೇಳಿದಾಳೆ ರಮಣಾಗೆ

ಸೇರುಬೆಲ್ಲ ತಂದರೆ ಸಾಕು ಪಾವು ಕಡಲೆ ಕೊಂಡರೆ ಸಾಕು
ನಾ ಹಬ್ಬ ಉಳಿಸಿ ಬಳಸುವೆನೆಂದು ರಮಣಿ ಹೇಳಿದಾಳೆ ರಮಣಾಗೆ

ಎಂಟಾಣೆ ಜವಳಿ ತಂದರೆ ಸಾಕು ಆರಾಣೆ ರೊಕ್ಕ ಇದ್ದರೆ ಸಾಕು
ಎಂಟೆಲೆ ಒಳಗೆ ಮದುವೇಯ ಮಾಡಬೇಕೆನುತಲೆ ರಮಣಿ ಹೇಳಿದಾಳೆ ರಮಣಾಗೆ

ಎಂದ ಮಾತನೆ ಕೇಳಿ ಶೃಂಗೇರಿಗೆ ಹೋಗಿ

ಚಂದದಿ ಮಳಿಗೆಯ ಬಾಗಿಲು ತೆಗೆಸಿ ಒಂದು ಅರ್ಧ ಆಣೆಗೆ ಸಕಲಾತಿ
ಸಕಲಾತಿ ಸಾಮಾನುಗಳ ತಂದು ತುಂಬಿದರು ಮನೆಯಲ್ಲಿ
ಹೋಳಿಗೆ ಕುಕ್ಕೆಯ ಕೈಯಲ್ಲಿ ಹಿಡಿದು ಬಾಗಿಲ ದಾಟಿ ನೋಡಿದಳವಳು
ಹೋಳಿಗೆ ಒಂಭತ್ತು ಇದನ್ಹ್ಯಾಗೆ ಇದನ್ಹ್ಯಾಗೆ ಬಡಿಸುವುದೆನುತಲೆ
ತಾಯಿ ಹೇಳಿದಳು ಮಗಳಿಗೆ

ಐದು ಮಕ್ಕಳಿಗೆ ಒಂದೊಂದು ಬಡಿಸು
ಮದುಮಗನಾ ತಂಗೀಗೆ ಅರ್ಧಾವ ಬಡಿಸು
ಉಳಿದ ಪಂಕ್ತಿಯಲಿ ಸುಳಿದಾಡಿ ಸುಳಿದಾಡಿ ಬಾರೆನುತ
ತಾಯಿ ಹೇಳಿದಳೆ ಕಿವಿಯಲ್ಲಿ

ಬಂಧು ಬಾಂಧವರಿಗೆ ಬಾಯುಪಚಾರ
ಸಂಗಡ ಬಂದ್ಹೋರಿಗೆ ವೀಳೆದೆಲೆ ಪಟ್ಟಿ
ಬೀಗಿತ್ತಿಗೊಂದು ಖಣ ಕೊಟ್ಟು ಖಣ ಕೊಟ್ಟರೆ ಸಾಕೆಂದು
ತಾಯಿ ಹೇಳಿದಳೆ ಮಗಳಿಗೆ

ಚೈತ್ರ ವೈಶಾಖದಿ ಮಳೆ ಬಂದಂತೆ ಗಾಳಿ ಮಳೆಯು
ತುಪರಿಸಿದಂತೆ ಅಭಿಗಾರವ ಮಾಡಿ ನಡೆದಾರು

**ಬಯಕೆಯ ಹಾಡು**

ಕರಿವದನನೆ ನಿನ್ನ ಚರಣಪಲ್ಲವಿಗಳಿಂದ
ಹರದಿ ತನುಜೆಗರ್ಭ ಕರುಣಿಸು ಮತೀಯೆ :ಪ:

ರಂಗಾನ ರಾಣಿಯೆ ಮಂಜುಳ ವಾಣಿಯೆ
ಅಂಗಾನೆ ಗರ್ಭದ ಅಪೇಕ್ಷೆಗಳು

ಪ್ರಥಮಾ ತಿಂಗಳಲ್ಲಿ ಅತಿ ಬಳಲುತ್ತಾ ನಾರಿ
ಮುಖವು ಕುಂದಣ ಬಾಡಿಬಳುಕುತಲಿ

ಘೃತಕ್ಷೀರ ಪರಮಾನ್ನ ಹಿತವಾಗಿಹುದು ತನ್ನ
ಸುತನ ಬಯಕೆ ಕಾಟ ಬಯಸಿದಳು

ಎರಡನೇ ತಿಂಗಳಲ್ಲಿ ಎಳೆಹುಣಸೆ ನೆಲ್ಲಿ
ಹುಳಿಯಾ ಮಾವಿನಕಾಯಿ ಬಯಸಿದಳು
ಎಳೆಯಾ ನೀರಿನ ಕಾಯಿ ಸವಿವಾದುದು ತನ್ನ
ಕೆನೆಮೊಸರವಲಕ್ಕಿ ಬಯಸಿದಳು

ಮೂರನೆ ತಿಂಗಳಲ್ಲಿ ನಾರಿಗೆ ನಿಜವೆಂದು ತೋರಿಬರಲು
ತನ್ನ ತೌರಿನಲಿ ವಾರೀಗೆ ಗೆಳತಿಯರ ಕೂಡಾಡಿದಳು
ಪಾರಿಜಾತ ಮಲ್ಲಿಗೆ ಮುಡಿಗೆ ಮುಡಿಸಿದರು

ನಾಲ್ಕನೇ ತಿಂಗಳಲ್ಲಿ ಪಾಕದೊಳದ್ದಿದ ಜಿಲೇಬಿ ಚಿರೋಟಿಗಳು
ಬಾಕ್ರುಂದ್ಯ ಬೈಂದ್ಯಕೀರು ಶೋಪನ್ನೇಗೈವರು
ಸಾಸು ಶ್ರೀಕರಣೆ ಸಿಕ್ಕಿನುಂಡೆ ಬಯಸಿದ್ದಳು

# ಅಧ್ಯಾಯ-ಹನ್ನೊಂದು

## ಉಪಸಂಹಾರ

ಸಂಪ್ರದಾಯಗಳ ಅನುಸರಣೆ ಮತ್ತು ಹರಿದಾಸರ ಕೀರ್ತನೆಗಳನ್ನು ಹಾಡುವುದರ ಮೂಲಕ ಮಹಿಳೆಯರು ಇಂದಿಗೂ ದಾಸಸಾಹಿತ್ಯವನ್ನು ಪೋಷಿಸುತ್ತಿದ್ದಾರೆ. ಪೂಜೆ ಪುನಸ್ಕಾರಗಳ ಸಮಯದಲ್ಲಿ ಸಾಮಾನ್ಯ ಮಹಿಳೆಯರು ಹಾಡುವ ಎಷ್ಟೋ ಹಾಡುಗಳು ಹರಿದಾಸರ ಕೀರ್ತನೆಗಳೇ ಆಗಿವೆ. ಕೆಲವು ಸಲ ಅವು ಪಾಠಾಂತರ, ರೂಪಾಂತರ ಮುಂತಾದ ಮಾರ್ಪಾಟುಗಳಿಗೆ ಒಳಗಾಗಿ ಬಳಕೆಯಲ್ಲಿರಬಹುದು. ಅದರಲ್ಲೂ ಮಕ್ಕಳ ಜೋಲಿ ತೂಗುವಾಗ, ತಟ್ಟಿ ಮಲಗಿಸುವಾಗ ಹಾಡಲಾಗುವ ಮಾತೃಭಾವ ಪ್ರೇರಿತವಾದ ಭಕ್ತಿರಸ ಪೂರ್ಣವಾದ ಹಾಡುಗಳ ಸೊಗಸು ಕನ್ನಡನಾಡಿನ ಜನಮಾನಸಕ್ಕೆ ಬಹಳ ಆಪ್ತವಾದುದು. ತನ್ನ ಕಂದನನ್ನು ಭಗವಂತನ ಅವತಾರವೆಂಬಂತೆ ಭಾವಿಸಿ, ಭಗವಂತನ ಅವತಾರಗಳೆಂದು ಪರಿಭಾವಿಸಲ್ಪಟ್ಟಿರುವ ಕೃಷ್ಣ, ರಾಮರಂತಹ ಪೌರಾಣಿಕ ಪಾತ್ರಗಳ ಬಾಲಲೀಲೆಗಳನ್ನು ತನ್ನ ಮಗುವಿನ ಆಟಗಳಲ್ಲಿ ಕಾಣುತ್ತಾ, ಅದನ್ನು ಹಾಡುತ್ತಾ ತನ್ಮಯಗೊಳ್ಳುವ ಮಹಿಳೆಯರು ಸ್ವಯಂ ಯಶೋದಾ ಭಾವದಲ್ಲಿ ಮುಳುಗೇಳುವ ಆ ಸನ್ನಿವೇಶಗಳ ಸೊಬಗು ಅತ್ಯಂತ ಆಪ್ತವಾದುದು. ಇಂತಹ ಕೀರ್ತನೆಗಳನ್ನು ರಚಿಸಿ ಭಾವ ಸಂಪತ್ತಿನ ಸಮೃದ್ಧಿಗೆ ಕಾರಣರಾದ ಕೀರ್ತನಕಾರರಲ್ಲಿ ಮಹಿಳಾ ಕೀರ್ತನಕಾರರು ಸಾಕಷ್ಟು ಮಂದಿ ಇದ್ದರೆಂಬುದು ಈ ಅಧ್ಯಯನದ ಮಾಹಿತಿಯು ಪ್ರಸ್ತುತಪಡಿಸುತ್ತಿದೆ. ಈಗಲೂ ಕೀರ್ತನ ರಚನೆಯಲ್ಲಿ ತೊಡಗಿರುವ ಸ್ತ್ರೀಯರು ಪರಂಪರೆಯನ್ನು ಮುಂದುವರೆಸಿಕೊಂಡು ಬರುತ್ತಿದ್ದಾರೆ. ಆದರೆ ಇವರೆಲ್ಲರೂ ಅಜ್ಞಾತರಾಗಿಯೇ ಉಳಿಯುತ್ತಾರೆ. ಅದಕ್ಕಿರುವ ಕಾರಣಗಳು ಹಲವಾರು. ತಮ್ಮ ರಚನೆಗಳನ್ನು ಮಹತ್ತರ ಸಾಹಿತ್ಯ ಸೃಷ್ಟಿ ಎಂದು ಭಾವಿಸಿ ಅದನ್ನು ತಮ್ಮ ಸ್ವಂತ ರಚನೆಯೆಂದು ಬಿಂಬಿಸುವ ದೃಷ್ಟಿಕೋನದಿಂದ ಕೀರ್ತನೆ ರಚಿಸಲು ಇವರು ತೊಡಗುವುದಿಲ್ಲ. ತಮ್ಮ ಮನಸ್ಸಿನಲ್ಲಿ ಭಗವಂತನ ಬಗ್ಗೆ ಇರುವ ಭಕ್ತಿ ಹಾಗೂ ಪ್ರೇಮವನ್ನು ವ್ಯಕ್ತಪಡಿಸಲು, ತಮ್ಮ ಖಾಸಗಿ ಪೂಜೆಯ ಸಮಯದಲ್ಲಿ ಅಥವಾ ಚಿಕ್ಕ ಆಪ್ತ ಕೂಟಗಳಲ್ಲಿ ಹಾಡಲು ಕೀರ್ತನೆ ರಚಿಸಿದವರ ಸಂಖ್ಯೆಯೇ ಹೆಚ್ಚಾಗಿರುವುದು ಕಂಡುಬರುತ್ತದೆ. ಒಂದು ಹಾಡು ಚೆನ್ನಾಗಿದೆಯೆಂದು ಶ್ರೋತೃಗಳಿಗೆ ಅನ್ನಿಸಿದರೆ ಅದನ್ನು ಕಂಠಪಾಠದ ಮೂಲಕವೋ, ಕೈಬರಹದಲ್ಲಿ ಪ್ರತಿ ಮಾಡಿಕೊಳ್ಳುವ ಮುಖಾಂತರವೋ ಬಳಕೆಗೆ ತಂದುಕೊಳ್ಳುತ್ತಾರೆ. ಹಾಗೆ ಅದು ಜನಪ್ರಿಯವಾಗಿ ಜನರ ಬಾಯಲ್ಲಿ ದಾಖಲಾಗುತ್ತದೆ. ಆದರೆ ಬಾಯಿಂದ ಬಾಯಿಗೆ ಅದು ದಾಟುವಾಗ ಅದನ್ನು ರಚಿಸಿದವರು ಯಾರೆಂಬುದು ಅಜ್ಞಾತವಾಗಿಯೇ

ಉಳಿಯುತ್ತದೆ. ಅಂತಹ ಕೆಲವಾದರೂ ಕೀರ್ತನೆಗಳಿಗೆ ವ್ಯಕ್ತಿ ವಿಶಿಷ್ಟವಾದ ಒಂದು ಅಂಕಿತ ಇರಬಹುದಾದರೂ ಅದರ ಮೂಲಕ ಆಯಾ ಮಹಿಳಾ ಕೀರ್ತನಕಾರ್ತಿಯನ್ನು ಗುರುತಿಸುವಷ್ಟು ಪ್ರಾಜ್ಞತೆ ಅವುಗಳನ್ನು ಬಳಸುವವರಿಗೆ ಇರುತ್ತದೆಂದು ನಿರೀಕ್ಷಿಸುವುದು ಕಷ್ಟ. ಹರಿದಾಸರಾಗಿ ತುಂಬಾ ಖ್ಯಾತಿ ಪಡೆದ ಕನಕದಾಸರು, ಪುರಂದರ ದಾಸರ ಕೀರ್ತನೆಗಳನ್ನು ನಿತ್ಯ ಬಳಕೆಯಲ್ಲಿಟ್ಟುಕೊಂಡಿರುವ ಎಷ್ಟೋ ಜನಕ್ಕೆ ಅವುಗಳ ಕರ್ತೃಗಳ ಗುರುತು ಇರುವುದಿಲ್ಲ. ಆದರೆ ಅಂತಹ ಕೀರ್ತನೆಕಾರರ ರಚನೆಗಳನ್ನು ಗುರುತಿಸಲು ನಮಗೆ ಬೇರೆ ಆಕರಗಳ ಮಾಹಿತಿ ಲಭ್ಯವಾಗುತ್ತದೆ. ಆದರೆ ಅದನ್ನೂ ಪೂರ್ಣ ನಿಖರವೆಂದು ಪರಿಗಣಿಸಲು ಆಗುತ್ತಿಲ್ಲ. ಬೇರೆ ಬೇರೆ ಆಧಾರ ಮೂಲಗಳಿಂದ ಸಂಗ್ರಹಿಸಿದ ಮಾಹಿತಿಯಿಂದ ವಿದ್ವಾಂಸರು ಬಹಳ ಕಷ್ಟಪಟ್ಟು ಕೆಲವು ಕೀರ್ತನೆಗಳ ರಚನಾಕಾರರನ್ನು ಗುರುತಿಸಿದ್ದಾರೆ. ಇಷ್ಟಾದ ಮೇಲೂ ಇವರ ಕೀರ್ತನೆ ಅವರ ಹೆಸರಿಗೆ, ಅವರ ಕೀರ್ತನೆ ಇವರ ಹೆಸರಿಗೆ ವರ್ಗಾವಣೆಯಾಗಿದೆಯೆಂಬ ತಕರಾರುಗಳು ಆಗಾಗ ಹುಟ್ಟಿಕೊಳ್ಳುವುದನ್ನು ನಾವು ನೋಡಿದ್ದೇವೆ. ಪ್ರಖ್ಯಾತ ಹರಿದಾಸರಾದ ಕನಕ, ಪುರಂದರರ ಬಗ್ಗೆಯೇ ಇಂತಹ ಸ್ಥಿತಿ ಇರುವಾಗ ಖ್ಯಾತರಲ್ಲದ ಮಹಿಳಾ ಕೀರ್ತನಕಾರರ ರಚನೆಗಳ ಪರಿಸ್ಥಿತಿ ಏನಾಗಿರಬೇಡ. ಇವರ ಕೆಲವು ರಚನೆಗಳಾದರೂ ಬೇರೆಯವರ ಅಂಕಿತ ಧರಿಸಿ ಜನರ ನಾಲಿಗೆಯಿಂದ ನಾಲಿಗೆಗೆ ದಾಟಿರಲಾರವೇ. ಇದು ಉದ್ದೇಶಪೂರ್ವಕವಾದ ಚರ್ಯೆ ಅಲ್ಲದಿರಬಹುದು. ಆದರೆ ಪ್ರತ್ಯೇಕ ಅಂಕಿತ ನಾಮವೇ ಕಣ್ಮರೆಯಾದ ಮೇಲೆ ಪ್ರತ್ಯೇಕ ಕೀರ್ತನಕಾರರ ವ್ಯಕ್ತಿ ಮಾಹಿತಿಯನ್ನು ಹುಡುಕುವ ಅಥವಾ ಸಂಗ್ರಹಿಸುವ ಪ್ರಮೇಯವೇ ಹುಟ್ಟದೆ ಕೂಡ ಮಹಿಳಾ ಕೀರ್ತನಕಾರರ ಬಗ್ಗೆ ಅವಜ್ಞೆ ಉಂಟಾಗಿರುವುದನ್ನು ನಾವು ಊಹಿಸಿಕೊಳ್ಳಬಹುದಾಗಿದೆ. ಕೀರ್ತನೆ ಉಳಿದುಕೊಳ್ಳುತ್ತದೆ. ಕೀರ್ತನೆಕಾರರು ತೆರೆ ಮರೆಗೆ ಸರಿಯುತ್ತಾರೆ. ಇದು ತೋಂಡಿ ಸಂಪ್ರದಾಯದ ಒಂದು ಲಕ್ಷಣ. ಜನಪದ ಸಾಹಿತ್ಯದ ಒಂದು ಭಾಗವಾಗಿ ಬಹುಶಃ ಶಿಷ್ಟ ಮಧ್ಯಮ ವರ್ಗದ ಬಳಕೆಯಲ್ಲಿ ಈ ಕೀರ್ತನೆಗಳು ಉಳಿದುಕೊಂಡು ಸಾಗುತ್ತವೆ. ಹಾಗೆ ಅವು ಸಾರ್ಥಕಗೊಂಡಿವೆ. ಈ ಕೊರತೆಯನ್ನು ನೀಗಿಸಲು ಒಂದು ಪ್ರಯತ್ನವನ್ನು ಈ ಅಧ್ಯಯನದಲ್ಲಿ ಮಾಡಲಾಗಿದೆ.

'ನಾಗಶರ್ಮ' ಅಂಕಿತದ ಕೋಲಾರದ ಪದ್ಮಾಬಾಯಿ ಬರೆದಿರುವ 'ವ್ರತಕೋಶ ಕೈಪಿಡಿ' ಹಾಗು ಏಳು ಕೀರ್ತನ ಸಂಕಲನಗಳು ಅಪ್ರಕಟಿತವಾಗಿಯೇ ಉಳಿದಿವೆ. ೪೦೦ ಕೀರ್ತನೆಗಳನ್ನು ಬರೆದ ಸುಧಾ ದೊಡ್ಡಿಬಾಯಿಯವರು, ಶಾಂತಾಬಾಯಿ ಮಸ್ಕಿ, 'ಕೊಪ್ಪರ ನರಸಿಂಹ' ಅಂಕಿತದಲ್ಲಿ ೧೫೦ ಪದ್ಯ ರಚಿಸಿದ ಲಕ್ಷ್ಮೀಬಾಯಿ ಬಡಶೇಷಿ, 'ರುಕ್ಮಿಣಿಕೃಷ್ಣ' ಅಂಕಿತದ ರುಕ್ಮಿಣಿಬಾಯಿ ರೊಟ್ಟಿಯವರು ಹಲವು ಕೀರ್ತನೆಗಳನ್ನು ರಚಿಸಿರುವ ಬಗ್ಗೆ ಡಾ.ಜಯಲಕ್ಷ್ಮಿ ಮಂಗಳಮೂರ್ತಿಯವರು ತಮ್ಮ 'ಆಧುನಿಕ ದಾಸಸಾಹಿತ್ಯ' ಕೃತಿಯಲ್ಲಿ ಬೆಳಕು ಚೆಲ್ಲಿದ್ದಾರೆ.

ನಂಜನಗೂಡಿನ 'ಹಾಡಿನ ರಂಗಮ್ಮ'ನ ಬಗ್ಗೆ ಎಂ.ಆರ್.ಲಕ್ಷ್ಮೀದೇವಿಯವರು (ಅಜ್ಞಾತ ಕವಯಿತ್ರಿಯರು-ಪು:೩೭) ಗಮನಸೆಳೆದಿದ್ದಾರೆ. ಕುಲಶೇಖರಿಯವರು ಬರೆದಿರುವ 'ಈ ಶತಮಾನದ

ಕನ್ನಡ ಕವಯಿತ್ರಿಯರು' ಕೃತಿಯು ಹೊಸದುರ್ಗದ ಸುಂದರಮ್ಮ, ಉಡುಪಿ ಜಿಲ್ಲೆಯ ಕಾರ್ಕಳ ತಾಲ್ಲೂಕಿನ 'ನೆಲ್ಲಿಕಾರು ಜೈನ ಮಹಿಳೆ' ಕಾವ್ಯನಾಮದ ಹರಿದಾಸಿ, ಕವಿ ದೊಡ್ಡರಂಗೇಗೌಡರ ಪತ್ನಿ ಪ್ರೊ. ರಾಜೇಶ್ವರಿ, ಮುಸ್ಲಿಂ ಮಹಿಳೆಯಾದ ಬುಡೇನಮ್ಮ ರಚಿಸಿದ 'ಶ್ರೀ ಸಾಯಿ ನುಡಿಸಿದ ಕೀರ್ತನೆಗಳು', ಮಮತ್ತಾಜ ಸತ್ತೀಕರ್ ಬರೆದಿರುವ 'ಶಿವಸ್ತೋತ್ರ ಮಾಲಿಕೆ', 'ಗೀತಾ ಕುಸುಮ', 'ಸಾಯಿಬಾಬಾ ಭಜನೆಗಳು' ಕೃತಿಗಳ ಬಗ್ಗೆ ಗಮನ ಸೆಳೆದಿದ್ದಾರೆ. ಬೆಳಗೆರೆ ಜಾನಕಮ್ಮನವರು ಖ್ಯಾತ ಕೀರ್ತನಕಾರರು. ಇವರ ನಂತರ ಈ ಮಟ್ಟದ ಕೃಷಿ ಮಾಡಿದವರು ಕಂಡುಬಂದಿಲ್ಲ.

ಕೀರ್ತನೆಗಳು ಶಾಸ್ತ್ರೀಯವಾದ ಮತ್ತು ಸಂಪ್ರದಾಯಬದ್ಧವಾದ ರಚನೆ. ಹಾಗಾಗಿ ಇಂದಿನ ತಲೆಮಾರಿನಲ್ಲಿ ಇವು ಅಪರೂಪವಾಗಿವೆ. ಚಿತ್ರನಟಿ ದಿ.ಪುಂಡರೀಬಾಯಿಯವರು ತಮ್ಮ ಆರಾಧ್ಯದೈವ ಪಂಢರಾಪುರದ ವಿಠಲನನ್ನು ಕುರಿತು ಹಲವು ಅಭಂಗಗಳನ್ನು ರಚಿಸಿದ್ದಾರೆ. ಈ ಬಗ್ಗೆ ಅಂತರ್ಜಾಲದಲ್ಲಿ ಮಾಹಿತಿಯಿದೆ. ಕೋಲಾರ ತಾಲ್ಲೂಕಿನ ತಿಮ್ಮಸಂದ್ರ ಗ್ರಾಮದ ಶ್ರೀಮತಿ ಕಮಲಮ್ಮ ರಾಜುರವರು ೭೫ ಕೀರ್ತನೆಗಳನ್ನೊಳಗೊಂಡ 'ಶ್ರೀ ಭಗವತ್ ಸ್ತೋತ್ರರತ್ನಗಳು' ಪುಸ್ತಕ ಪ್ರಕಟಿಸಿದ್ದಾರೆ. ಬಿಜಾಪುರದ ಮಣೂರು ಗ್ರಾಮದ ಶ್ರೀಮತಿ ಅನೂರಾದ ಅರವಿಂದಕಟ್ಟಿಯವರು 'ಶ್ರೀಪಾದ ಸೌರಭ' ಎನ್ನುವ ಶ್ರೀಪಾದರಾಜರ ಕುರಿತು ಸುಪ್ರಭಾತ ರಚಿಸಿದ್ದಾರೆ. ಇವರ ಹಲವು ಕೀರ್ತನೆಗಳು ಅಪ್ರಕಟಿತವಾಗಿ ಉಳಿದಿವೆ. ಇಂತಹ ಕೆಲವು ಕೀರ್ತನಕಾರ್ತಿಯರು ಪರಂಪರೆಯನ್ನು ಮುಂದುವರಿಸುತ್ತಿದ್ದಾರೆ. ಹಳೆಯ ಸಂಪ್ರದಾಯದ ಹಾಡುಗಳನ್ನು ಮೌಖಿಕವಾಗಿ ಮತ್ತು ದಾಖಲೆಯಲ್ಲಿ ಉಳಿಸುವ ಕೆಲಸವನ್ನೂ ಅಜ್ಞಾತ ಕೀರ್ತನಕಾರ್ತಿಯರು, ಗಾಯಕಿಯರು ಮುಂದುವರೆಸಿದ್ದಾರೆ. ಇಂತಹವರಲ್ಲಿ ಹೆಸರಿಸಬಹುದಾದ ಮಹಿಳೆ 'ಸಂಪ್ರದಾಯದ ಹಾಡುಗಳ ಸಾಮ್ರಾಜ್ಞಿ' ವಾಗೀಶ್ವರಿಶಾಸ್ತ್ರಿ.

ದಾಸಸಾಹಿತ್ಯ ಕಂಠಸ್ಥವಾಗದಿದ್ದರೆ, ಗ್ರಂಥಸ್ಥವಾಗದಿದ್ದರೆ ಈ ಪರಂಪರೆಯು ಉಳಿಯುವುದಿಲ್ಲ. ಮಹಿಳೆಯರು ಹೊಸ ಫ್ಯಾಶನ್ನುಗಳಿಗೆ, ಸಿನೆಮಾ ಹಾಡುಗಳಿಗೆ, ಟಿ.ವಿ. ಧಾರಾವಾಹಿಗಳಿಗೆ ಒಲಿಯುತ್ತಿದ್ದಾರೆ. ಬದಲಾದ ಜೀವನ ಶೈಲಿ, ದುಡಿಮೆಯ ಅನಿವಾರ್ಯಗಳು ಇದರೊಂದಿಗೆ ಸೇರಿವೆ. ಅವಿಭಕ್ತ ಕುಟುಂಬದಲ್ಲಿ ಅಜ್ಜಿಯರು ಮೂಲೆಗುಂಪಾಗುತ್ತಿದ್ದಾರೆ. ಹಾಗಾಗಿ ಕೀರ್ತನೆಗಳು, ಸಂಪ್ರದಾಯದ ಹಾಡುಗಳು ಮರೆಯಾಗುತ್ತಿವೆ. 'ದೇವರ ನಾಮಗಳು' ಎನ್ನುವ ಹೆಸರಿನಲ್ಲಿ ಕೀರ್ತನೆಗಳು ಉಳಿದು ಬರುತ್ತಿವೆಯಾದರೂ ಅಜ್ಞಾತ ಕೀರ್ತನೆಗಳನ್ನು, ಕೀರ್ತನಕಾರರನ್ನು ಗುರುತಿಸುವ ಕೆಲಸ ಜರೂರಾಗಿ ಆಗಬೇಕಿದೆ. ಮಹಿಳಾಕೀರ್ತನಕಾರರ ಬದುಕು ಬರಹ ಕುರಿತಾದ ವಿಷಯಗಳನ್ನು ಆಯ್ದು, ಶಾಲಾಕಾಲೇಜುಗಳ ಪಠ್ಯಗಳಲ್ಲಿ ಸೇರಿಸಬೇಕಿದೆ. ಪ್ರಸ್ತುತ ಏಳನೆಯ ತರಗತಿಯ ಕನ್ನಡ ಪಠ್ಯಪುಸ್ತಕದಲ್ಲಿ ಹೆಳವನಕಟ್ಟೆ ಗಿರಿಯಮ್ಮನವರ ಹೆಸರು ಕಾಣಿಸಿದೆ. ಪದವಿಯಲ್ಲಿ ಕನ್ನಡಸಾಹಿತ್ಯವನ್ನು ಪ್ರಧಾನವಾಗಿ ಅಧ್ಯಯನ ಮಾಡುವವರಿಗೆ ಮಹಿಳಾಕೀರ್ತನಕಾರರ ಕುರಿತಾದ ಪರಿಚಯ ಮಾಡಿಕೊಡಬೇಕಿದೆ. ಮುಂದಿನ ತಲೆಮಾರಿಗೆ

ಇದನ್ನು ಒಯ್ಯುವ ಜವಾಬ್ದಾರಿ ನಮ್ಮ ಹೆಗಲ ಮೇಲಿದೆ. ಕನ್ನಡನಾಡಿನ ಮನೆ-ಮನಗಳಲ್ಲಿ ಬೆಳಕಿಗೆ ಬಾರದೆ ಉಳಿದಿರುವ ಕೀರ್ತನೆಗಳನ್ನು ಸಂಗ್ರಹಿಸಬೇಕಿದೆ. ಕಾಲ ಕಾಲಕ್ಕೆ ಸಮಗ್ರ ಸಂಪುಟಗಳು ಸಿದ್ಧವಾಗಬೇಕಿದೆ. ಪುನರ್‌ಮುದ್ರಣ ಕಾಣಬೇಕಿದೆ. ಇದು ಕಂಪ್ಯೂಟರ್ ಯುಗ. ಅಂತರ್ಜಾಲದಲ್ಲಿ ಎಲ್ಲ ಕೀರ್ತನೆಗಳು ಥಟ್ಟನೆ ದೊರಕುವಂತಾಗಬೇಕು. ಅಕಾರಾದಿ ಪಟ್ಟಿ ಬೇಕು. ಇದರಿಂದ ತುಲನಾತ್ಮಕ, ಆಳ ಮತ್ತು ಖಚಿತ ಅಧ್ಯಯನ ಸಾಧ್ಯವಾಗುತ್ತದೆ.

ಗೋಡೆಯೊಂದಿದ್ದರೆ ಚಿತ್ತಾರವನ್ನು ಯಾರಾದರೂ, ಎಂದಾದರೂ ಬಿಡಿಸುತ್ತಾರೆ.

## ಆಕರಗಳು


೧. ಅಂಬಾಬಾಯಿಯವರ ಕೀರ್ತನೆಗಳು, ಸಮಗ್ರ ದಾಸ ಸಾಹಿತ್ಯ, ಸಂ.೧೮, ಭಾಗ.೩, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು.

೨. ಅಭಿರುಚಿ, ಲೇ.ಸ.ರಘುನಾಥ, ಸಿವಿಜಿ ಇಂಡಿಯ ಪ್ರಕಾಶನ, ಬೆಂಗಳೂರು.

೩. ಅಜ್ಞಾತ ಕವಯಿತ್ರಿಯರು, ಕರ್ನಾಟಕ ಲೇಖಕರಿಯರ ಸಂಘ, ಬೆಂಗಳೂರು.

೪. ಅಭಿಜ್ಞಾನ ಶಾಕುಂತಳ, ಅನುತಎಸ್.ವಿ.ಪರಮೇಶ್ವರ ಭಟ್ಟ, ಕನ್ನಡ ಕಾಳಿದಾಸ ಮಹಾ ಸಂಪುಟ, ಪುಟ.೫೩೦ ೩೧.

೫. ಈ ಶತಮಾನದ ಕನ್ನಡ ಕವಯಿತ್ರಿಯರು, ಲೇ.ಕುಲಶೇಖರಿ, ಚಿನ್ಮಯಿ ಪ್ರಕಾಶನ, ಬೆಂಗಳೂರು.

೬. ಏಳನೆಯ ತರಗತಿ ಕನ್ನಡ ಪಠ್ಯಪುಸ್ತಕ.

೭. ಕನ್ನಡ ಜೈಮಿನಿ ಭಾರತ, ಸಂ.ದೇವುಡು ನರಸಿಂಹಶಾಸ್ತ್ರಿ, ಪ್ರಕಾಶಕರು ಮೈಸೂರು ಸಂಸ್ಥಾನದ ಸಾಹಿತ್ಯ ಮತ್ತು ಸಂಸ್ಕೃತಿ ಅಭಿವೃದ್ಧಿ ಇಲಾಖೆ, ಬೆಂಗಳೂರು.

೮. ಕನ್ನಡ ರತ್ನಕೋಶ, ಕ.ಸಾ.ಪ, ಬೆಂಗಳೂರು.

೯. ಕರ್ನಾಟಕ ಭಕ್ತ ವಿಜಯ, ಬೇಲೂರು ಕೇಶವದಾಸರು.

೧೦. ಕನ್ನಡ ಛಂದಸ್ಸು, ಕುವೆಂಪು

೧೧. ಕನ್ನಡದಲ್ಲಿ ಭಾವಗೀತೆ, ಡಾ.ಪ್ರಭುಶಂಕರ

೧೨. ಕನ್ನಡ ಛಂದಸ್ಸು, ಡಾ.ಟಿ.ವಿ.ವೆಂಕಟಾಚಲಶಾಸ್ತ್ರಿ.

೧೩. ಕನಕದಾಸ, ಲೇ.ನಟರಾಜ ಬೂದಾಳು.

೧೪. ಕನ್ನಡ ಸಾಹಿತ್ಯ ಚರಿತ್ರೆ, ಲೇ.ಎಚ್.ನಂಜೇಗೌಡ.

೧೫. ಕರ್ನಾಟಕ ವಿದ್ಯಾವೈಭವ, ಶ್ರೀಮಾನಾ ಜಿ.ಬಿ.ಸಂಕರರಾಯರ ಅಭಿನಂದನಾ ಗ್ರಂಥ, ಸಂ.ಆದ್ಯ ರಾಮಾಚಾರ್ಯ.

೧೬. ಕನ್ನಡ ಕನ್ನಡ ಸುವರ್ಣ ಕೋಶ, ಪ್ರೊ.ಟಿ.ಕೇಶವ ಭಟ್ಟ, ವಾಸನ್ ಬುಕ್ ಡಿಪೊ.

೧೭. ಕನ್ನಡ ಸಾಹಿತ್ಯ ಚರಿತ್ರೆ, ಲೇ.ರಂ.ಶ್ರೀಮುಗಳಿ, ಉಷಾ ಸಾಹಿತ್ಯ ಮಾಲೆ, ಮೈಸೂರು.

೧೮. ಕನ್ನಡ ಜೈಮಿನಿ ಭಾರತ, ಸಂ.ದೇವುಡು ನರಸಿಂಹಶಾಸ್ತ್ರಿ, ಪು.೨೦೪, ನುಡಿ.೩೪

೧೯. ಕರ್ನಾಟಕದ ಕವಯಿತ್ರಿಯರು, ಡಾ.ಸರೋಜಿನಿ ಮಹಿಷಿ.

೨೦. ಕೀರ್ತನ ಸಾಹಿತ್ಯ, ಸಂ.ಎಚ್.ಎಸ್.ವೆಂಕಟೇಶಮೂರ್ತಿ, ಎ.ಶ್ರೀಪಾದ

೨೧. ಕೀರ್ತನಕಾರರು, ಲೇ.ಎಚ್.ಎಸ್.ವೆಂಕಟೇಶಮೂರ್ತಿ, ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾನಿಲಯ, ಬೆಂಗಳೂರು.

೨೨. ಗಲಗಲಿ ಅವ್ವನವರ ಕೀರ್ತನೆಗಳು, ಸಮಗ್ರ ದಾಸ ಸಾಹಿತ್ಯ, ಸಂ.೭, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು.

೨೩. ಗಲಗಲಿ ಅವ್ವನವರು, ಲೇ.ಹಣಮಂತ ತಾಸಗಾಂವಕರ, ಪ್ರ.ಕ.ಸಾ.ಪ., ಬೆಂಗಳೂರು.

೨೪. ಗೀತಾಪ್ರವಚನ, ಸ್ವಾಮಿ ವಿವೇಕಾನಂದ, ಶ್ರೀರಾಮಕೃಷ್ಣಾಶ್ರಮ, ಮೈಸೂರು.

೨೫. ಜನಪ್ರಿಯ ಭಾಗವತ, ಶ್ರೀನಿವಾಸ ಉಡುಪ, ಗೀತಾ ಬುಕ್ ಹೌಸ್, ಮೈಸೂರು.

೨೬. ಜನಪದ ಗೀತೆಗಳಲ್ಲಿ ಮಹಾಭಾರತ, ಕ.ರಾ.ಕೃಷ್ಣಸ್ವಾಮಿ, ಜನಪದ ಸಾಹಿತ್ಯ ಅಕಾಡೆಮಿ, ಮೈಸೂರು.

೨೭. ಜೊನ್ನಲ ರಾಶಿ, ಸಂ.ರಘುನಾಥ, ಲೇಖನ ಸಂಕಲನ

೨೮. ತಂದೆ ಮುದ್ದುಮೋಹನ ದರ್ಶನ, ಲೇ.ಜಯಸಿಂಹ, ಪ್ರ.ಪರಿಮಳ ಪ್ರಕಾಶನ, ಬೆಂಗಳೂರು.೫೦

೨೯. ತಂಬೂರಿ ಮೀಟಿದವ, ಡಾ.ಎಚ್.ಎನ್.ಮುರಳೀಧರ, ಪ್ರ.ಅಂಕಿತ ಪುಸ್ತಕ, ಬೆಂಗಳೂರು.

೩೦. ದಾಸ ಸಾಹಿತ್ಯ, ಲೇ.ಎನ್.ಕೆ.ಕುಲಕರ್ಣಿ, ಪು.೩, ಕನ್ನಡ ಕವಿ ಕಾವ್ಯ ಪರಂಪರೆ, ಐಬಿಎಚ್ ಪ್ರಕಾಶನ, ಬೆಂಗಳೂರು.

೩೧. ದಾಸ ಸಾಹಿತ್ಯದಲ್ಲಿ ಜಾಪದೀಯ ಅಂಶಗಳು, ಸಾಧನೆ, ಲೇ.ಎಂ.ವಿ.ನಾವಡ, ಸಂಪುಟ.೩, ಸಂ.೪, ಪುಟ.೧೩೦.

೩೨. ದಾಸ ಬೋಧ, ಲೇ.ಸಮರ್ಥ ರಾಮದಾಸರು.

೩೩. ದಾಸ ಸಾಹಿತ್ಯ, ವಿ.ಸೀ. ಮತ್ತು ಪ್ರೊ.ವೆಂಕಟಸುಬ್ಬಯ್ಯ ಜಿ.

೩೪. ದೇವರ್ಷಿ ನಾರದರ ಭಕ್ತಿಸೂತ್ರಗಳು, ಸ್ವಾಮಿ ಹರ್ಷಾನಂದ, ರಾಮಕೃಷ್ಣಾಶ್ರಮ, ಮೈಸೂರು.

೩೫. ನಾರದ ಭಕ್ತಿ ಸೂತ್ರ, ಸೋಮನಾಥಾನಂದ, ಪ್ರ.ರಾಮಕೃಷ್ಣಾಶ್ರಮ, ಮೈಸೂರು.

೩೬. ನಿಡಗುರಕಿ ಜೀವೂಬಾಯಿಯವರ ಕೀರ್ತನೆಗಳು, ಸಂ.೧೮, ಭಾಗ.೨, ಸಮಗ್ರ ದಾಸ ಸಾಹಿತ್ಯ, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು.

೩೭. ನಂಜನಗೂಡು ತಿರುಮಲಾಂಬ ಮತ್ತು ಇತರ ಕೀರ್ತನಕಾರರು, ಸಮಗ್ರ ದಾಸ ಸಾಹಿತ್ಯ, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು.

೩೮. ಪ್ರಾಚೀನ ಕನ್ನಡ ಸಾಹಿತ್ಯ ರೂಪಗಳು, ರಂ.ಶ್ರೀ.ಮುಗಳಿ.

೩೯. ಪುರಂದರದಾಸರ ಉಗಾಭೋಗಗಳು ಮತ್ತು ಸುಳಾದಿಗಳು, ಸಂ.೪, ಸಮಗ್ರ ದಾಸ ಸಾಹಿತ್ಯ, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು.

೪೦. ಪುರಂದರದಾಸರ ಕೀರ್ತನೆಗಳು, ಸಂಪುಟ.೩, ಭಾಗ.೧, ಸಮಗ್ರ ದಾಸ ಸಾಹಿತ್ಯ, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು.

೪೧. ಪುರಾಣನಾಮ ಚೂಡಾಮಣಿ, ಬೆನಗಲ್ ರಾಮರಾವ್, ಪಾನ್ಯಂ ಸುಂದರಶಾಸ್ತ್ರಿ, ಪ್ರಸಾರಾಂಗ, ಮೈಸೂರು.

೪೨. ಪುರಾಣ ನಾಮ ಚೂಡಾಮಣಿ, ಬೆನಗಲ್ ರಾಮರಾವ್, ಪಾಣ್ಯಂ ಸುಂದರಶಾಸ್ತ್ರಿ.

೪೩. ಭಗವದ್ಭಕ್ತಿ ರಸಾಯನಂ, ಅನು.ಪ್ರೊ.ಎಂ.ಎ.ಹೆಗಡೆ, ಪುಟ.೩, ಉದಯ ಪ್ರಕಾಶನ, ಬೆಂಗಳೂರು.

೪೪. ಬಾಗಲುಕೋಟೆ ಜಿಲ್ಲೆಯ ಹರಿದಾಸ ಸಾಹಿತ್ಯ, ಹಣಮಂತ ತಾಸಗಾಂಕರ.

೪೫. ಬೊಗಸೆ ಮಹಿಳೆ ಸುತ್ತಮುತ್ತ, ಡಾ.ಕಮಲಾ ಹಂಪನಾ.

೪೬. ಮಹಿಳಾ ಸಂಕಥನ, ಡಾ.ಗಾಯತ್ರಿ ನಾವಡ, ಪುಸ್ತಕ ಪ್ರಾಧಿಕಾರ.

೪೭. ಮಹಿಳಾ ಚಳುವಳಿ ಸಾಮಾಜಿಕ ಮತ್ತು ಸಾಂಸ್ಕೃತಿಕ ಹಿನ್ನಲೆ, ಡಾ.ಹಾಲತಿ ಸೋಮಶೇಖರ್, ವಿಸ್ಮಯ ಪ್ರಕಾಶನ, ಮೈಸೂರು.

೪೮. ಮಂಕುತಿಮ್ಮನ ಕಗ್ಗ, ಡಿ.ವಿ.ಜಿ., ಕಾವ್ಯಾಲಯ ಪ್ರಕಾಶನ, ಮೈಸೂರು.

೪೯. ಮುದ್ದುಮೋಹನವಿಠಲದಾಸರು ಹಾಗೂ ಇತರರ ಕೀರ್ತನೆಗಳು, ಸಂ.೧೫, ಸಮಗ್ರ ದಾಸ ಸಾಹಿತ್ಯ, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು.

೫೦. ವಚನ ಸಾಹಿತ್ಯ ಸಂಗ್ರಹ, ಸಂ.ಸಂ.ಶಿ.ಭೂಸನೂರು ಮಠ, ಪ್ರ.ಮೈಸೂರು ಸರ್ಕಾರ, ವಿದ್ಯಾಭ್ಯಾಸ ಇಲಾಖೆ.

೫೧. ಶ್ರಾವಣ ಮಾಸದ ಹಾಡುಗಳು ಮತ್ತು ಸಂಪ್ರದಾಯದ ಹಾಡುಗಳು, ಪ್ರಕಾಶಕರು, ಕೆ.ಜಿ.ಸತ್ಯನಾರಾಯಣರಾವ್, ಬೆಂಗಳೂರು.

೫೨. ಶ್ರೀವಾದಿರಾಜರ ಕೀರ್ತನೆಗಳು, ಸಮಗ್ರ ದಾಸ ಸಾಹಿತ್ಯ ಸಂಪುಟ ೩, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು.

೫೩. ಶ್ರೀಮದ್ಭಗವದ್ಗೀತೆ, ಗೀತಾ ಪ್ರೆಸ್, ಗೋರಖಪುರ, ಶ್ಲೋಕ ೧೮ ೫೫

೫೪. ಶ್ರೀಪಾದರಾಜರು ಜೀವನ ಮತ್ತು ಕೃತಿಗಳು, ಡಾ.ಟಿ.ಎನ್.ನಾಗರತ್ನ, ಕವಿ.ವಿ., ಹಂಪಿ.

೫೫. ಶ್ರೀಪಾದರಾಜ ಸತ್ಯನಿಧಿ ತೀರ್ಥರು, ಆದ್ಯ ರಾಮಾಚಾರ್ಯ.

೫೬. ಶ್ರೀಕೃಷ್ಣಲೀಲಾ, ಅನು.ಶ್ರೀಮತಿ ಪ್ರಭಾ ಎನ್.ವಾಸನ್ ಬುಕ್ ಡಿಪೋ.

೫೭. ಶ್ರೀಮದ್ವಾಲ್ಮೀಕಿರಾಮಾಯಣ, ಭಾರತ ದರ್ಶನ ಪ್ರಕಾಶನ, ಬೆಂಗಳೂರು.

೫೮. ಸಟೀಕಾ ವ್ರತರತ್ನಂ, ಪ್ರ.ಟಿ.ಎನ್.ಕೃಷ್ಣಯ್ಯಶೆಟ್ಟಿ ಅಂಡ್ ಸನ್ಸ್, ಲೇ.ವೇದಮೂರ್ತಿ ಲಕ್ಷ್ಮೀನಾರಾಯಣಶಾಸ್ತ್ರಿ.

೫೯. ಸಂಪ್ರದಾಯಗಳು, ಎನ್.ನರಸಿಂಹಮೂರ್ತಿ, ಮಂಗಳ ಪ್ರಕಾಶನ, ಬೆಂಗಳೂರು.

